# ದಕ್ಷಿಣ ಕರ್ನಾಟಕದಲ್ಲಿ ಕೆರೆಕಟ್ಟೆಗಳ ನಿರ್ಮಾಣ ಮತ್ತು ನಿರ್ವಹಣೆ

(ಆರಂಭದಿಂದ ವಿಜಯನಗರದ ಅಂತ್ಯದವರೆಗೆ)

## ಮೈಸೂರು ವಿಶ್ವವಿದ್ಯಾನಿಲಯಕ್ಕೆ

ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಪ್ರೌಢಪ್ರಬಂಧ


ಸಂಶೋಧಕರು

**ಮಂಜುಳ ಸಿ.ಎನ್.**

ಮಾರ್ಗದರ್ಶಕರು

**ಡಾ.ಜಿ.ಕರಿಯಪ್ಪ** ಎಂ.ಎ. ಪಿಎಚ್.ಡಿ

ಸಹ ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಮಾನಸಗಂಗೋತ್ರಿ, ಮೈಸೂರು–570006



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಮಾನಸಗಂಗೋತ್ರಿ, ಮೈಸೂರು–570006

ಸೆಪ್ಟಂಬರ್ 2013-14

# ಘೋಷಣಾ ಪತ್ರ

ಶ್ರೀಮತಿ **ಸಿ.ಎನ್.ಮಂಜುಳ** ಎಂಬ ಸಂಶೋಧನಾ ವಿದ್ಯಾರ್ಥಿನಿಯಾದ ನಾನು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಲ್ಲಿ, ಸಹ ಪ್ರಾಧ್ಯಾಪಕರಾಗಿರುವ **ಡಾ.ಜಿ.ಕರಿಯಪ್ಪ** ಅವರ ಮಾರ್ಗದರ್ಶನದಲ್ಲಿ ಪಿಎಚ್.ಡಿ ಪದವಿಗಾಗಿ ಸಂಶೋಧನಾ ಕಾರ್ಯವನ್ನು ಕೈಗೊಂಡು ಸಾದರಪಡಿಸಿರುವ **ದಕ್ಷಿಣ ಕರ್ನಾಟಕದಲ್ಲಿ ಕೆರೆ ಕಟ್ಟೆಗಳ ನಿರ್ಮಾಣ ಮತ್ತು ನಿರ್ವಹಣೆ** ಎಂಬ ಪ್ರೌಢಪ್ರಬಂಧವು ಮಾರ್ಗದರ್ಶಕರ ಮೇಲ್ವಿಚಾರಣೆಯಲ್ಲಿ ನನ್ನಿಂದ ರಚಿತವಾದ ಸ್ವಯಂ ಕೃತಿಯಾಗಿದೆ. ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ, ಯಾವುದೇ ಪದವಿ ಅಥವಾ ಡಿಪ್ಲೊಮಾಗಾಗಿ ಸಲ್ಲಿಸಿರುವುದಿಲ್ಲವೆಂದು ಹಾಗೂ ಪ್ರಕಟವಾಗಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

**ಸ್ಥಳ** :
ದಿನಾಂಕ **:**

**(ಸಿ.ಎನ್.ಮಂಜುಳ)**
ಸಂಶೋಧನಾ ವಿದ್ಯಾರ್ಥಿನಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ,
ಮೈಸೂರು ವಿಶ್ವವಿದ್ಯಾನಿಲಯ,
ಮಾನಸಗಂಗೋತ್ರಿ, ಮೈಸೂರು – 570006

# ಪ್ರಮಾಣ ಪತ್ರ

ಶ್ರೀಮತಿ **ಸಿ.ಎನ್.ಮಂಜುಳ** ಎಂಬ ಸಂಶೋಧನಾ ವಿದ್ಯಾರ್ಥಿನಿಯಾದ ನಾನು **ಡಾ.ಜಿ.ಕರಿಯಪ್ಪ,** ಸಹ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ, ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು, ಇವರ ಮಾರ್ಗದರ್ಶನದಲ್ಲಿ ಸಂಶೋಧನೆ ಕೈಗೊಂಡ ಫಲವಾಗಿ ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ ಪದವಿಗಾಗಿ ಪ್ರೌಢಪ್ರಬಂಧವನ್ನು ಪೂರ್ಣಗೊಳಿಸಿರುತ್ತೇನೆಂದು ಪ್ರಮಾಣೀಕರಿಸುತ್ತೇನೆ. ನಾನು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಷಯದಲ್ಲಿ ಪಿಎಚ್.ಡಿ ಪದವಿ ಪ್ರಾಪ್ತಿಗಾಗಿ ಕೋರಿ ಈ ಪ್ರೌಢಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ.

ನಾನು ಈ ಪ್ರೌಢಪ್ರಬಂಧವನ್ನು ಇಡಿಯಾಗಿಯಾಗಲೀ ಅಥವಾ ಬಿಡಿಯಾಗಿಯಾಗಲೀ, ಯಾವುದೇ ಪದವಿ ಅಥವಾ ಡಿಪ್ಲೊಮಾ ಪದವಿಗಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**(ಸಿ.ಎನ್.ಮಂಜುಳ)**
ಸಂಶೋಧನಾ ವಿದ್ಯಾರ್ಥಿನಿ
ಸಹಿ ಮಾಡಿದ ದಿನಾಂಕ :

**(ಜಿ.ಕರಿಯಪ್ಪ)**
ಮಾರ್ಗದರ್ಶಕರು/ಸಹ ಪ್ರಾಧ್ಯಾಪಕರು
ಸಹಿ ಮಾಡಿದ ದಿನಾಂಕ:

ಮೇಲು ಸಹಿ

**(ಜಿ.ಕರಿಯಪ್ಪ)**
ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು

# ಪ್ರಮಾಣ ಪತ್ರ

ಶ್ರೀಮತಿ **ಸಿ.ಎನ್.ಮಂಜುಳ** ಎಂಬ ಸಂಶೋಧನಾ ವಿದ್ಯಾರ್ಥಿನಿಯು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು, ಇವರು ನಮ್ಮ ವಿಭಾಗದಲ್ಲಿ ಅರೆಕಾಲಿಕ ಸಂಶೋಧನಾ ವಿದ್ಯಾರ್ಥಿನಿಯಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಪಿಎಚ್.ಡಿ ಪದವಿಗಾಗಿ ಸಂಶೋಧನಾ ಕಾರ್ಯ ಕೈಗೊಂಡು ಸಾದರಪಡಿಸಿರುವ **ದಕ್ಷಿಣ ಕರ್ನಾಟಕದಲ್ಲಿ ಕೆರೆ ಕಟ್ಟೆಗಳ ನಿರ್ಮಾಣ ಮತ್ತು ನಿರ್ವಹಣೆ** ಎಂಬ ಪ್ರೌಢಪ್ರಬಂಧವು ನನ್ನ ಮಾರ್ಗದರ್ಶನದಲ್ಲಿ ಶ್ರೀಮತಿ **ಸಿ.ಎನ್.ಮಂಜುಳ** ಅವರ ಸ್ವಯಂರಚಿತ ಕೃತಿಯಾಗಿದೆ ಎಂದು ದೃಢೀಕರಿಸುತ್ತೇನೆ. ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಯಾವುದೇ ಪದವಿ ಅಥವಾ ಡಿಪ್ಲೊಮಾಗಾಗಿ ಸಲ್ಲಿಸಿಲ್ಲ ಹಾಗೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸ್ಥಳ : ಮೈಸೂರು**
ದಿನಾಂಕ :

**(ಜಿ.ಕರಿಯಪ್ಪ)**
ಮಾರ್ಗದರ್ಶಕರು
ಸಹ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ,
ಮೈಸೂರು ವಿಶ್ವವಿದ್ಯಾನಿಲಯ,
ಮಾನಸಗಂಗೋತ್ರಿ, ಮೈಸೂರು – 570006

# ಕೃತ್ಯಜ್ಞತೆಗಳು

ನನ್ನ ಈ ಸಂಶೋಧನೆಯು ಮಹತ್ವದ ಕಾರ್ಯವಾದುದ್ದಾಗಿದೆ. ಈ ಕಾರ್ಯದಲ್ಲಿ ವಿದ್ಯಾರ್ಥಿನಿಯಾದ ನಾನೇ ಪ್ರಮುಖ ಕಾರ್ಯನಿರ್ವಾಹಕಳಾದರೂ ನನಗೆ ನನ್ನ ಇಲಾಖೆಯ ಮಾರ್ಗದರ್ಶಕರ ಅಧ್ಯಯನ ವಿಭಾಗದ ಮತ್ತು ನನ್ನ ಬಂಧುಮಿತ್ರರಾದ ಹಲವರ ಸಹಕಾರ ಸಹಾಯ ಅವಶ್ಯಕತೆ ಬಿದ್ದಾಗಲೆಲ್ಲಾ ಈ ಮೇಲೆ ಹೇಳಿದ ಯಾರಾದರೊಬ್ಬರು ನನ್ನ ಬೆನ್ನಿಗೆ ಬೆಂಬಲವಾಗಿ ನಿಲ್ಲದಿದ್ದರೆ ಈ ಕಾರ್ಯ ಇಂದು ಈ ಸ್ವರೂಪವನ್ನು ಪಡೆದು ವಿಶ್ವವಿದ್ಯಾನಿಲಯದ ಪದವಿಗೆ ಸಲ್ಲಿಕೆಯಾಗುತ್ತಿರಲಿಲ್ಲ. ಹಾಗಾಗಿ ನನ್ನ ಈ ಸಂಶೋಧನಾ ಕಾರ್ಯದಲ್ಲಿ ನೇರವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಮಹಾನೀಯರನ್ನು ಸ್ಮರಿಸಿ ಅವರಿಗೆ ಕೃತಜ್ಞತೆ ಸಲ್ಲಿಸಲು ಈ ಅವಕಾಶವನ್ನು ಬಳಸಿಕೊಳ್ಳುತ್ತೇನೆ. ಇದು ನನ್ನ ಆದ್ಯ ಕರ್ತವ್ಯವು ಮತ್ತು ಜವಾಬ್ದಾರಿಯೂ ಆಗಿರುತ್ತದೆ.

ಪ್ರಸ್ತುತ ನನ್ನ ಸಂಶೋಧನಾ ಪ್ರಬಂಧವಾದ **ದಕ್ಷಿಣ ಕರ್ನಾಟಕದಲ್ಲಿ ಕೆರೆ ಕಟ್ಟೆಗಳ ನಿರ್ಮಾಣ ಮತ್ತು ನಿರ್ವಹಣೆ** ಎಂಬ ಶೀರ್ಷಿಕೆಯಡಿ ಸಂಶೋಧನೆ ಮಾಡಲು ಪ್ರೇರೇಪಿತಳಾಗಿ ಅಗತ್ಯ ಮಾಹಿತಿಗಳನ್ನು ಸಂಗ್ರಹಿಸಿ ಈ ಕಾರ್ಯವನ್ನು ನೇರವೇರುವಂತೆ ನನ್ನನ್ನೂ ಆಶೀರ್ವಾದಿಸಿದ ನನ್ನ ಮಾತಾ ಪಿತೃಗಳಾದ **ಶ್ರೀಮತಿ ನಾಗಾಲಾಂಬಿಕಾ** ಮತ್ತು **ಶ್ರೀ. ಸಿ. ನಂಜಯ್ಯರವರಿಗೆ** ನನ್ನ ಸಾಷ್ಟಾಂಗ ಪ್ರಣಾಮಗಳು. ನನ್ನನ್ನು ತಮ್ಮ ಮನೆತುಂಬಿಸಿಕೊಂಡು ನನಗೆ ಗೃಹಸ್ಥೆಯ ಗೃಹಕೃತ್ಯವನ್ನು ಮತ್ತು ಶ್ರೀಮತಿಯ ಸ್ಥಾನಮಾನವನಿತ್ತಾ ಶ್ರೀ ಎಸ್.ನಿಂಗರಾಜು ರವರಿಗೆ ನನ್ನ ಮನಃಪೂರ್ವಕವಾದ ಅಭಿವಂದನೆಗಳು.

ನನ್ನನ್ನು ನನ್ನ ಸುದೀರ್ಘ ಅಧ್ಯಯನದ ಉದ್ದಕ್ಕೂ ನಾನು ಅಧ್ಯಯನಕ್ಕೆ ಅಂಟಿಕೊಂಡಿರುವಂತೆ ಮತ್ತು ನಿರಂತರವಾಗಿ ನನ್ನ ಸಂಶೋಧನೆಯನ್ನು ಪೂರ್ಣಗೊಳಿಸಲು ಪ್ರೇರೇಪಿಸಿ ಸ್ಫೂರ್ತಿನೀಡಿ ಮಾರ್ಗದರ್ಶನ ನೀಡಿ ಇಲ್ಲಿಯವರೆಗೆ ಕರೆದುತಂದ ಗುರು, ಮಾರ್ಗದರ್ಶಕರಾದ **ಡಾ. ಜಿ. ಕರಿಯಪ್ಪ** ಅವರಿಗೆ ನಾನು ಆಭಾರಿಯಾಗಿದ್ದೇನೆ.

ಹಾಗೆಯೇ ನನ್ನ ಸಂಶೋಧನಾ ನೋಂದಣಿ ಕಾಲದಲ್ಲಿ ಮತ್ತು ಅದನ್ನು ಸಲ್ಲಿಸುವ ಹೊತ್ತಿನಲ್ಲಿ ವಿಭಾಗದ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸುತ್ತಿರುವ **ಡಾ. ಎಂ. ಪಿ. ಮಹದೇವಯ್ಯ** ರವರ ಅಪಾರವಾದ ಪ್ರೋತ್ಸಾಹ ಮತ್ತು ಸಹಕಾರವನ್ನು ನೀಡಿರುವುದನ್ನು ಅತ್ಯಂತ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನನ್ನ ಸಂಶೋಧನೆಯ ಕಾಲದ ಉದ್ದಕ್ಕೂ ನನಗೆ ಪ್ರೋತ್ಸಾಹ ಮತ್ತು ಪ್ರೇರೇಣೆಯನ್ನು ನೀಡಿದ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ **ಡಾ. ಕೆ. ಪ್ರಭು**ರವರಿಗೆ ಮತ್ತು ವಿಭಾಗದ ಕಛೇರಿಯ ನಿರ್ವಾಹಕರಾದ ಶ್ರೀಮತಿ ಟಿ. ವಿ. ಉಷಾಗಣೇಶ್‌ರವರಿಗೂ ಹಾಗೂ ಕಛೇರಿಯ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಕಪನಯ್ಯ ಮತ್ತು ಶ್ರೀ ಶಿವರಾಜು ರವರಿಗೆ ನನ್ನ ಕೃತಜ್ಞತೆಗಳು.

ನಾನು ಕಾರ್ಯನಿರ್ವಹಿಸುತ್ತಿರುವ ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆಯ ಇಲಾಖೆಯ ನಿರ್ದೇಶಕರಾದ ಡಾ. ಆರ್. ಗೋಪಾಲ್‌ರವರು, ಉಪನಿರ್ದೇಶಕರುಗಳಾದ ಶ್ರೀ ಎಚ್. ಟಿ. ತಳವಾರ್, ಶ್ರೀ ಟಿ. ಎಸ್. ಗಂಗಾಧರ್, ಸಹಾಯಕ ನಿರ್ದೇಶಕರಾದ ಶ್ರೀ ಕಮಲಬಾಯಿ ಇತರ ಎಲ್ಲಾ ನನ್ನ ಹಿರಿಯ ಸಹೋದ್ಯೋಗಿಗಳಿಗೆ ಅವರ ಸಹಕಾರಕ್ಕೆ ಮತ್ತು ಪ್ರೋತ್ಸಾಹಕ್ಕೆ ಚಿರಋಣಿಯಾಗಿರುತ್ತೇನೆ.

ಹಾಸನ ವಸ್ತು ಸಂಗ್ರಹಾಲಯದ ಕ್ಯೂರೇಟರ್ ನನ್ನ ಸಹೋದ್ಯೋಗಿಯಾದ ಶ್ರೀಮತಿ ಕಾವ್ಯಶ್ರೀ ನನ್ನೊಂದಿಗೆ ಕ್ಷೇತ್ರಕಾರ್ಯದಲ್ಲಿ ಸಹವರ್ತಿಯಾಗಿ ಕಾರ್ಯನಿರ್ವಹಿಸಿರುತ್ತಾರೆ. ಅವರ ಸಹಕಾರವನ್ನು ಮತ್ತು ಪ್ರೋತ್ಸಾಹವನ್ನು ಆದರದಿಂದ ಅಭಿಮಾನದಿಂದ ಸ್ಮರಿಸುತ್ತೇನೆ.

ಕರ್ನಾಟಕದ ಮುಕ್ತ ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ವಿಭಾಗದಲ್ಲಿ ಸಹಾಯಕ ಪ್ರಾಧ್ಯಾಪಕರಾಗಿರುವ ಡಾ.ಶೆಲ್ವಪಿಳ್ಳೆ ಅಯ್ಯಂಗಾರ್ ರವರು ನನಗೆ ಸಂಶೋಧನಾ ಕಾರ್ಯದಲ್ಲಿ ಸಾಕಷ್ಟು ಸಲಹೆಯನ್ನು ನೀಡಿ ನನ್ನ ಪ್ರಬಂಧವು ರೂಪುಗೊಳ್ಳಲು ಅನುವುಮಾಡಿರುತ್ತಾರೆ ಇವರಿಗೂ ಮತ್ತು ನನ್ನ ಮಿತ್ರರಾದ ಉಪನ್ಯಾಸಕರಾದ ಡಾ.ಸಿ.ಸುರೇಶ್‌ರವರಿಗೂ ನನ್ನ ಕೃತಜ್ಞತೆಗಳು.

ವಿಭಾಗದಲ್ಲಿ ಸಂಶೋಧನೆ ನಡೆಸುತ್ತಿರುವ ಎಲ್ಲಾ ಕಿರಿಯ ಸಂಶೋಧಕರುಗಳು ಹಾಗೂ ಹಿರಿಯ ಸಂಶೋಧಕರಾದ ಡಾ.ಕಾಳಸ್ವಾಮಿ ನೀಡಿದ ಎಲ್ಲಾ ಪ್ರೋತ್ಸಾಹಕ್ಕೆ ಮತ್ತು ಸಹಕಾರಕ್ಕೆ ನಾನು ಋಣಿಯಾಗಿರುತ್ತೇನೆ.

ನನ್ನ ಕುಟುಂಬದ ಮಿತ್ರರಾದ ಬಿ.ರಾಚಯ್ಯ, ಡಾ.ರವಿಕುಮಾರ್ ಮತ್ತು ಶ್ರೀಮತಿ ಮಾಲತಿ, ಕುಮಾರಿ ಎಚ್.ಎಸ್.ವೀಣಾ, ಕುಮಾರಿ ನಳಿನಾ, ಶ್ರೀಮತಿ ರೂಪಾ, ಕುಮಾರಿ ಪ್ರಿಯಾಂಕ ಇವರುಗಳ ಸಹಕಾರವನ್ನು ಸ್ಮರಿಸುತ್ತೇನೆ.

ನನ್ನ ತಮ್ಮಂದಿರಾದ ಕುಮಾರ ಶ್ರೀಕಂಠಮೂರ್ತಿ ಮತ್ತು ಕುಮಾರ ನಂಜಪ್ಪ ಹಾಗೂ ತಂಗಿ ಶ್ರೀಮತಿ ಗೀತಾ ನನ್ನೊಂದಿಗೆ ಸಹಕರಿಸಿ ನನ್ನ ಈ ಪ್ರಯತ್ನ ಸಹಕಾರವಾಗುವಂತೆ ಕೈ ಜೋಡಿಸಿದ್ದಾರೆ. ಇವರ ಸಹಕಾರಕ್ಕೆ ನಾನು ಋಣಿಯಾಗಿರುತ್ತೇನೆ. ನನ್ನ ಅಧ್ಯಯನದ ಕಾಲದಲ್ಲಿ ನನ್ನ ಮಕ್ಕಳು ನನ್ನ ಅಗಲಿಕೆಯನ್ನು ಅನುಭವಿಸಿ ತಮ್ಮ ದಿನನಿತ್ಯದ ಎಲ್ಲಾ ಕರ್ತವ್ಯಗಳನ್ನು ತಾವೇ ನಿರ್ವಹಿಸಿಕೊಂಡು ನನ್ನ ಜವಾಬ್ದಾರಿಯನ್ನು ನಿರ್ವಹಿಸಿದ ಕುಮಾರಿಯರಾದ ಕಾವೇರಿ ಮತ್ತು ಬಿಂದುಶ್ರೀಯ ವಯಸ್ಸಿಗೆ ಮೀರಿದ ವರ್ತನೆಗೆ ನನ್ನ ಸ್ಮರಣಿಕೆಗಳು.

ನನ್ನ ಸಂಶೋಧನೆಯ ಫಲಶೃತಿಯಾದ ಪ್ರೌಢಪ್ರಬಂಧವನ್ನು ಬೆರಳಚ್ಚು ಮಾಡಿದ ಶ್ರೀ ರಂಗಸ್ವಾಮಿ ಎನ್ ಮತ್ತು ಗಾಳಿಪಟ ಎಂಟರ್‌ಪ್ರೈಸಸ್‌ನ ಮಾಲೀಕರು ಹಾಗೂ ಇತರ ಎಲ್ಲಾ ಸಿಬ್ಬಂಧಿಗಳ ಸಹಕಾರವನ್ನು ಆತ್ಮೀಯವಾಗಿ ನೆನೆಯುತ್ತೇನೆ.

ನನ್ನ ಸಂಶೋಧನೆಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದ ಮಿತ್ರರು, ಇಲಾಖೆಯ ಅಧಿಕಾರಿ ವರ್ಗದವರು, ಸಂಶೋಧಕರುಗಳು ಮತ್ತು ಕ್ಷೇತ್ರ ಕಾರ್ಯದಲ್ಲಿ ಸಹಕರಿಸಿದ ಎಲ್ಲಾ ಗ್ರಾಮಸ್ಥರು, ಗ್ರಂಥಾಲಯದ ಗ್ರಂಥಪಾಲಕರುಗಳಿಗೆ ಆತ್ಮೀಯವಾದ ಹಾಗೂ ಹೃತ್ಪೂರ್ವಕವಾದ ವಂದನೆಗಳು.

ಮೈಸೂರು<br>ದಿನಾಂಕ :

ಶ್ರೀಮತಿ ಸಿ.ಎನ್.ಮಂಜುಳ<br>ಸಂಶೋದನಾ ವಿದ್ಯಾರ್ಥಿನಿ

# ಪರಿವಿಡಿ

## ಅಧ್ಯಾಯ – 1

# ದಕ್ಷಿಣ ಕರ್ನಾಟಕದಲ್ಲಿ ಕೆರೆಕಟ್ಟೆಗಳ ನಿರ್ಮಾಣ ಮತ್ತು ನಿರ್ವಹಣೆ : ಪೀಠಿಕೆ

ಭಾರತದ ಇತರ ಭಾಗಗಳಲ್ಲಿರುವಂತೆ ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ 70ಕ್ಕೂ ಹೆಚ್ಚು ಜನರು ನಿತ್ಯ ಜೀವನದಲ್ಲಿ ವ್ಯವಸಾಯವನ್ನು ತಮ್ಮ ಮೂಲ ಕಸುಬನ್ನಾಗಿ ಅವಲಂಬಿಸಿದ್ದಾರೆ. ರಾಜ್ಯದ ಆರ್ಥಿಕಾಭಿವೃದ್ಧಿಯಲ್ಲಿ ನೀರಾವರಿ ಸೌಲಭ್ಯಗಳನ್ನೊದಗಿಸುವುದು ಅತ್ಯಂತ ಪ್ರಮುಖ ಕಾರ್ಯವಾಗಿದ್ದು, ಬಹುಪಾಲು ಭಾಗ ಬೆಟ್ಟಗುಡ್ಡ, ಮೈದಾನ ಮತ್ತು ಅರೆಮೈದಾನ ಪ್ರದೇಶಗಳನ್ನು ಒಳಗೊಂಡಿದೆ. ಇಲ್ಲಿ ವ್ಯವಸಾಯ ಕಾರ್ಯಗಳಿಗೆ ಅನುಕೂಲವಾಗುವಂತೆ ಮಳೆನೀರನ್ನು ಶೇಖಸರಿಸುವ ಅನೇಕ ಕೆರೆಗಳಿವೆ. ಹೀಗೆ ದಕ್ಷಿಣ ಕರ್ನಾಟಕದಲ್ಲಿ 25,880 ಹಳ್ಳಿಗಳನ್ನು 221 ಪಟ್ಟಣಗಳನ್ನು ಹೊಂದಿರುವ ಈ ರಾಜ್ಯದಲ್ಲಿ ಸುಮಾರು 37,328 ದೊಡ್ಡ ಕೆರೆಗಳಿವೆ ಎಂದು ಹೇಳಲಾಗಿದೆ.[1] ಈ ಕೆರೆಗಳ ನಿರ್ಮಾಣ ಕಾರ್ಯವು ಪ್ರಾಚೀನಕಾಲದಿಂದಲೂ ಮುಂದುವರೆದುಕೊಂಡು ಬಂದಿರುವ ಒಂದು ಪರಂಪರೆಯ ಆಸ್ತಿಯಾಗಿ ಅಧಿಕಾರಿಗಳು, ಪಾಳೆಯಗಾರರು ಸಾಮಾನ್ಯ ಜನರಿಗೆ ಮತ್ತು ತಮಗೆ ಉಪಯೋಗವಾಗುವ ಕೆರೆಗಳನ್ನು ನಿರ್ಮಿಸುವುದು ಮತ್ತು ಇತರ ಕೆಲಸಗಳನ್ನು ಕೈಗೊಳ್ಳುವುದು ಪುಣ್ಯಕಾರ್ಯವೆಂದು ಪರಿಗಣಿಸಿದ್ದರು. ಇದನ್ನು ಮುಂದಿನ ಪೀಳಿಗೆಯವರು ಈ ಕೆರೆಗಳಂದ ಹೂಳು ತೆಗೆಸುವುದು ಮತ್ತು ದುರಸ್ತಿ ಕೆಲಸಗಳನ್ನು ಮಾಡಿಸುವುದು ಮತ್ತು ಕೆರೆಯನ್ನು ಉತ್ತಮ ರೀತಿಯಲ್ಲಿ ಕಾಪಾಡಿಕೊಂಡು ಬರುವುದು ಬಹಳ ಪ್ರಮುಖ ಕೆಲಸವಾಗಿತ್ತೆಂದು ನಂಬಿದ್ದರು[2]

ನೀರಾವರಿ ಸೌಲಭ್ಯ ದೊರೆಯುವ ಮುನ್ನ ಮಳೆಯಾಶ್ರಯದಲ್ಲಿ ಮಾತ್ರ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಆಗ ಎಲ್ಲೆಡೆ ಬೆದ್ದಲು ಭೂಮಿಗಳಲ್ಲಿ ಗೋಧಿ, ಜೋಳ, ರಾಗಿ ಹತ್ತಿ, ಹರಳು ಸಾಸುವೆ, ಸಜ್ಜೆ, ತರಕಾರಿ ಮುಂತಾದ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಅಂತಹ

ಸಂದರ್ಭದಲ್ಲಿ ಅಂದಿನ ಕಾಲದಲ್ಲಿ ಆಳ್ವಿಕೆಯನ್ನು ಮಾಡಿದ ರಾಜಮಹಾರಾಜರು ಕೆರೆಕಟ್ಟೆಗಳನ್ನು ಕಟ್ಟಿಸಿ ನೀರನ್ನು ಕೊಡಲು ಪ್ರಾರಂಭಿಸಿದ ಮೇಲೆ ಬಹುಭಾಗಗಳು ಕೃಷಿಗೆ ಸಂಬಂಧಿಸಿದ ಚಟುವಟಿಕೆಗಳು ಹೆಚ್ಚಿನ ರೀತಿಯಲ್ಲಿ ನಡೆಯಲು ಆರಂಭವಾಯಿತು. ಇದು ರಾಜ್ಯದ ಆರ್ಥಿಕ ಅಭಿವೃದ್ಧಿಗೆ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗೆ ಪೂರಕವಾಯಿತು.

ನೀರಾವರಿಯು ಬಹಳ ಪ್ರಮುಖವಾಗಿ ನದಿ, ಬಾವಿ, ಕೆರೆಗಳನ್ನು ಅವಲಂಬಿಸಿದ್ದಿತು. ಆ ಕಾಲದಲ್ಲಿ ಆಳ್ವಿಕೆ ಮಾಡಿದ ರಾಜರು, ಮಂತ್ರಿಗಳು, ಅಧಿಕಾರಿಗಳು ಮತ್ತು ಶ್ರೀಮಂತ ವರ್ಗದವರು ಕೆರೆ ಬಾವಿಗಳನ್ನು ಕಟ್ಟಿಸುವುದು ಶ್ರೇಯಸ್ಕರವೆಂದು ತಿಳಿದಿದ್ದರು. ಹೀಗಾಗಿ ಎಲ್ಲಾ ವರ್ಗದವರು ಕೆರೆಗಳನ್ನು ಕಟ್ಟಿಸುತ್ತಿದ್ದರು. ಅಲ್ಲದೇ ಕೆರೆ ಮತ್ತು ಬಾವಿಗಳನ್ನು ಯಾರೇ ನಾಶಪಡಿಸುವುದು ಅತ್ಯಂತ ಪಾಪಕರವೆಂದು ತಿಳಿದಿದ್ದರು. ಕೆರೆಗಳು ಪ್ರಾಚೀನ ಕರ್ನಾಟಕದ ನೀರಾವರಿ ಸಾಧನಗಳಾಗಿ ಪ್ರಮುಖ ಪಾತ್ರವಹಿಸಿವೆ. ತದನಂತರದ ಸಾಧನವೆಂದರೆ ಬಾವಿಗಳು. ದಕ್ಷಿಣ ಕರ್ನಾಟಕದಲ್ಲಿ ಅಂದರೆ ಇತಿಹಾಸ ಪೂರ್ವದ ಕಾಲದಲ್ಲಿಯೇ ನೀರಾವರಿಯ ಮೂಲವನ್ನು ಗುರುತಿಸಲಾಗಿದೆ. ಉದಾಹರಣೆಗೆ: ಪುಣೆಯ ಬಳಿಯಿರುವ ಇನಾಂಗಾಂವ್‌ನಲ್ಲಿ ಪ್ರಾಚೀನ ಕಾಲದಲ್ಲಿ ಜಲಾಶಯವೊಂದಕ್ಕೆ ಕಟ್ಟೆಯನ್ನು ಕಟ್ಟಲಾಗಿದ್ದು ಅದು ಸುಮಾರು 240ಮೀ ಉದ್ದ ಮತ್ತು 2.2ಮೀ ಅಗಲವಿತ್ತು ಎಂದು ಹೇಳಲಾಗಿದೆ. ಇದು ತಾಮ್ರಯುಗಕ್ಕೆ ಸೇರಿದುದಾಗಿದೆ.[3] ಪ್ರಾಚೀನ ಭಾರತವನ್ನಾಳಿದ ಮೌರ್ಯರ ಕಾಲದಲ್ಲಿ ಸೌರಾಷ್ಟ್ರದಲ್ಲಿ ಆಳಿದ ಶಕ ವಂಶದ ದೊರೆಯಾದ ರುದ್ರದಾಮನ್‌ನ ಕಾಲದಲ್ಲಿ ಸುದರ್ಶನ ಸರೋವರವನ್ನು ಕಟ್ಟಿಸಿದ್ದರ ಉಲ್ಲೇಖವಿದೆ.[4] ದಕ್ಷಿಣ ಕರ್ನಾಟಕದಲ್ಲಿ ಕದಂಬರ ದೊರೆಯಾದ ಮಯೂರವರ್ಮನು ಚಿತ್ರದುರ್ಗದ ಬಳಿಯ ಚಂದ್ರವಳ್ಳಿಯಲ್ಲಿ ಒಂದು ಕೆರೆಯನ್ನು ಕಟ್ಟಿಸಿದನೆಂಬುದಾಗಿ ಶಾಸನವೊಂದರಲ್ಲಿ ತಿಳಿಸಲಾಗಿದೆ.[5] ಇದೇ ಕಾಲಕ್ಕೆ ಸೇರಿದ ಕದಂಬ ದೊರೆಯಾದ ಕಾಕುಸ್ಥವರ್ಮನು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತಾಳಗುಂದದ ಪ್ರಣವೇಶ್ವರ ದೇವಾಲಯದ ಮುಂಭಾಗದಲ್ಲಿ ತಟಾಕವೊಂದನ್ನು ನಿರ್ಮಿಸಿರುವುದರ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ.[6] ಈ ಕೆರೆಯು ಶಾತವಾಹನರ ಕಾಲದಲ್ಲಿ ಇದ್ದಿತ್ತೆಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ಏಕೆಂದರೆ ಶಾತವಾಹನರು ಈ

ದೇವಾಲಯವನ್ನು ಪೂಜಿಸುತ್ತಿದ್ದರು. ಹಾಗಾಗಿ ಈ ಕೆರೆಯು ದಕ್ಷಿಣ ಕರ್ನಾಟಕದ ಇತಿಹಾಸದಲ್ಲಿ ಅತ್ಯಂತ ಪ್ರಾಚೀನ ಕೆರೆ ಎಂದು ಹೇಳಬಹುದಾಗಿದೆ. ನಂತರದ ಕಾಲದಲ್ಲಿ ದಕ್ಷಿಣ ಕರ್ನಾಟಕವನ್ನು ಆಳಿದ ಗಂಗರ ಶ್ರೀಪುರುಷನು ನಾಗಮಂಗಲದ ದೇವರಹಳ್ಳಿಯಲ್ಲಿ ಆರು ಕೆರೆಗಳ ಸರಹದ್ದು ಉಳ್ಳ ಪೊನ್ನಳ್ಳಿಯ ದಾನದ ಬಗ್ಗೆ ತಿಳಿಸುತ್ತದೆ.[7] ೮ನೇ ಶತಮಾನದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಒಂದೇ ಗ್ರಾಮದ ಸರಹದ್ದಿನಲ್ಲಿ ಇಷ್ಟೊಂದು ಕೆರೆಗಳು ಇದ್ದುದಕ್ಕೆ ಇದೇ ಮೊಟ್ಟಮೊದಲ ನಿದರ್ಶನವಾಗಿದೆ. ಗಂಗರ ದೊರೆ ರಾಚಮಲ್ಲನ ಕಾಲದ ಸಾಲಿಗ್ರಾಮದ ಶಾಸನದಲ್ಲಿ ಎಡತೊರೆಯ (ಕೃಷ್ಣರಾಜಸಾಗರ) ಸರಹದ್ದಿನಲ್ಲಿ ಸುಮಾರು ೫ ಕೆರೆಗಳನ್ನು ನಿರ್ಮಾಣ ಮಾಡಿರುವ ಬಗ್ಗೆ ಶಾಸನವೊಂದು ತಿಳಿಸುತ್ತದೆ.[8] ಕ್ರಿ.ಶ. ೯೫೫ರ ಶಾಸನದಲ್ಲಿ ದೇಸಿಕೆರೆ ಹಾಗೂ ಪೆರಿಯಕೆರೆ ಎಂಬ ಎರಡು ಕೆರೆಗಳ ನಿರ್ಮಾಣದ ಬಗ್ಗೆ ತಿಳಿಸುತ್ತದೆ. ತರುವಾಯ ಹೊಯ್ಸಳರ ಕಾಲದಲ್ಲಿ ಬೇಲೂರು ಮತ್ತು ಹಳೇಬೀಡಿನಲ್ಲಿರುವ(ದ್ವಾರಸಮುದ್ರ) ಕೆರೆಗಳನ್ನು ಗಮನಿಸಿದರೆ ಇವರ ಕಾಲದಲ್ಲಿ ನಿರ್ಮಾಣವಾದ ಪ್ರಮುಖ ಹರವುಗಳು ಎಂದು ಹೇಳಬಹುದು. ಈ ಎರಡು ಸ್ಥಳಗಳು ಹೊಯ್ಸಳರ ರಾಜಧಾನಿಗಳಾಗಿದ್ದು ಇಲ್ಲಿಗೆ ನೀರು ಒದಗಿಸಲು ಹಾಗೂ ಅದರ ಸುತ್ತಲ ಭೂಮಿಯು ಹೊಯ್ಸಳರ ರಾಜಧಾನಿಯಾಗಿದ್ದು ಇಲ್ಲಿಗೆ ನೀರು ಒದಗಿಸಲು ಹಾಗೂ ಅದರ ಸುತ್ತಲ ಭೂಮಿಯ ಸಾಗುವಳಿಗೆ ನೀರು ಪೂರೈಸಲು ಯಗಚಿ ನದಿಯ ಮೂಲಕ ಈ ಕೆರೆಗಳಿಗೆ ನೀರನ್ನು ಹರಿಸಲಾಗುತ್ತಿತ್ತು ಎಂದು ಹೇಳಲಾಗಿದೆ.[9] ಇದೇ ರೀತಿಯಲ್ಲಿ ಹೊಯ್ಸಳರ ದೊರೆ ವಿಷ್ಣುವರ್ಧನನು ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ಕೆರೆಸಂತೆ ಎಂಬ ಗ್ರಾಮದಲ್ಲಿ ವಿಷ್ಣುಸಮುದ್ರ ಎಂಬ ವಿಶಾಲವಾದ ಕೆರೆಯನ್ನು ಕಟ್ಟಿಸಿದನೆಂದು ತಿಳಿಸಲಾಗಿದೆ.[10] ಇದೇ ಜಿಲ್ಲೆಯ ಕಡೂರು ತಾಲ್ಲೂಕಿನ ಬ್ರಹ್ಮಸಮುದ್ರ ಎಂಬ ಗ್ರಾಮದಲ್ಲಿ ಬ್ರಹ್ಮಸಮುದ್ರ ಎಂಬ ಕೆರೆಯನ್ನು ಕಟ್ಟಿಸಿದ.[11] ಈ ಗ್ರಾಮಕ್ಕೆ ಈ ಹೆಸರು ಬರಲು ಆ ಕೆರೆಯಿಂದಲೇ ಎನ್ನುವುದು ಸ್ಪಷ್ಟ ನಿದರ್ಶನವಾಗಿದೆ. ಈ ರೀತಿಯಲ್ಲಿ ನಮಗೆ ಹಲವಾರು ರಾಜ ವಂಶಸ್ಥರು ಕೆರೆಗಳನ್ನು ನಿರ್ಮಿಸಲು ಕಾರಣರಾಗಿದ್ದಾರೆ. ಇದಕ್ಕೆ ಪೂರಕವಾಗಿ ಹೇಳಬೇಕೆಂದರೆ ಉತ್ತರ ಭಾರತದಲ್ಲಿ ಕೆರೆಗಳು ಕಡಿಮೆ. ಏಕೆಂದರೆ ಆ ಭಾಗದಲ್ಲಿ ಮಳೆಗಾಲದಲ್ಲಿ ಅತಿ ಹೆಚ್ಚು ಮಳೆಯಾಗುತ್ತದೆ. ಬೇಸಿಗೆ ಕಾಲದಲ್ಲಿ ಮಂಜು ಕರಗಿ

ಹರಿಯುತ್ತದೆ. ಹಾಗಾಗಿ ಉತ್ತರ ಭಾರತದಲ್ಲಿ ಕೆರೆಗಳ ನಿರ್ಮಾಣ ಅನಿವಾರ್ಯವಾಗಿರಲಿಲ್ಲ. ದಕ್ಷಿಣ ಭಾರತದಲ್ಲಿ ಹವಾಮಾನ ಏರುಪೇರಾಗಿರುವುದರಿಂದ ಕೇವಲ ಮಳೆಗಾಲದಲ್ಲಿ ಮಾತ್ರ ಮಳೆಯಾಗುತ್ತಿದ್ದು ಬೇಸಿಗೆ ಕಾಲದಲ್ಲಿ ಮಳೆಯಿಲ್ಲದೆ ನದಿಗಳು ಒಣಗಿರುತ್ತದೆ. ಹಾಗಾಗಿ ಈ ಭಾಗದಲ್ಲಿ ಕೆರೆಗಳ ನಿರ್ಮಾಣ ಅನಿವಾರ್ಯವಾಗಿದೆ. ಇದಕ್ಕೆ ಕಾರಣ ಈ ಭಾಗದ ಭೌಗೋಳಿಕತೆ, ಹವಾಮಾನ, ವಾಯುಗುಣ, ನದಿಗಳ ವ್ಯವಸ್ಥೆ, ಅರಣ್ಯ ಪ್ರದೇಶಗಳು ಮುಂತಾದವು.

ಪ್ರಸ್ತುತ ಅಧ್ಯಯನವು ದಕ್ಷಿಣ ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದ ವಿಜಯನಗರ ಸಾಮ್ರಾಜ್ಯದ ಅಂತ್ಯದವರೆಗೆ ನಿರ್ಮಾಣಗೊಂಡ ಕೆರೆಕಟ್ಟೆಗಳು ಅವುಗಳ ನಿರ್ಮಾಣ ಪ್ರಕ್ರಿಯೆ ನಿರ್ವಹಣೆಯನ್ನು ಕುರಿತಾದ ಅಧ್ಯಯನವಾಗಿದೆ. ಕೆರೆಕಟ್ಟೆಗಳು ಪ್ರಾಚೀನ ನೀರಾವರಿ ವ್ಯವಸ್ಥೆಯ ಬಹುಮುಖ್ಯ ಅಂಗವಾಗಿ ರೂಪುಗೊಂಡಿದೆ. ಮಾನವನು ಉದಯಿಸಿದ ಪ್ರಾರಂಭದ ದಿನಗಳಲ್ಲಿ ಪ್ರಾಕೃತಿಕವಾಗಿ ಲಭ್ಯವಿದ್ದ ನಿರಂತರ ನೀರಿನ ಆಸರೆಗಳ ಸಮೀಪದಲ್ಲಿ ಬದುಕುತ್ತಿದ್ದನು. ಆದರೆ ನೂತನ ಶಿಲಾಯುಗದ ಕಾಲದಲ್ಲಿ ಉಂಟಾದ ಕೆಲವು ತಾಂತ್ರಿಕ ಬೆಳವಣಿಗೆಗಳು ಮಾನವನಿಗೆ ಹಿಂದಿಗಿಂತಲೂ ಹೆಚ್ಚಿನ ಓಡಾಟದ ಸೌಕರ್ಯವನ್ನು ಒದಗಿಸಿದ್ದರಿಂದ ಶಾಶ್ವತ ನೀರಿನ ಆಸರೆಗಳಗಿಂತ ದೂರದಲ್ಲಿ ವಾಸಮಾಡಲಾರಂಭಿಸಿದರು.

ಮಳೆಗಾಲದಲ್ಲಿ ಸ್ಥಳೀಯವಾದ ತೊರೆಗಳು ಹಳ್ಳಗಳು ಮಳೆಗಾಲದ ನದಿಗಳು ಹರಿಯುತ್ತಿದ್ದುದರಿಂದ ಅವುಗಳ ಆಸುಪಾಸಿನಲ್ಲಿ ತನ್ನ ನೆಲೆಯನ್ನು ಸ್ಥಾಪಿಸಿಕೊಂಡು ವಾಸಿಸಲಾರಂಭಿಸಿದನು. ಈ ಕಾಲಘಟ್ಟದಲ್ಲಿಯೇ ಮಾನವನು ವ್ಯವಸಾಯವನ್ನು ಕಲಿತುಕೊಂಡನಲ್ಲದೆ, ಇದುವರೆಗೆ ಆಹಾರಕ್ಕಾಗಿ ಅಲೆದಾಡುತ್ತಿದ್ದವನು ಒಂದೆಡೆ ನೆಲೆನಿಂತು ಜೀವಿಸಲು ಪ್ರಾರಂಭಿಸಿದರು.[12] ಇದು ವ್ಯವಸಾಯದ ತಂತ್ರಗಾರಿಕೆಯ ಮೇಲೆ ಪ್ರಭಾವ ಬೀರಿತ್ತು. ಮಳೆಗಾಲವಲ್ಲದೆ ಬೇಸಿಗೆಯ ಕಾಲದಲ್ಲಿ ನೀರಿನ ಅವಶ್ಯಕತೆಯನ್ನು ಪೂರೈಸಿಕೊಳ್ಳಲು, ತಾತ್ಕಾಲಿಕ ವಲಸೆಯಿಂದ ತಪ್ಪಿಸಿಕೊಳ್ಳಲು ಮುಂದಿನ ಯುಗದಲ್ಲಿ ಆಸರೆಗಳನ್ನು ಕಟ್ಟಿಕೊಂಡನು. ಅಂದರೆ ಬೃಹತ್ ಶಿಲಾಯುಗದ ಕಾಲಘಟ್ಟದಲ್ಲಿ ತುಂಬಿ ಹರಿಯುವ ಹಳ್ಳಗಳ ತೊರೆಗಳು, ಸಣ್ಣಪುಟ್ಟ ಮಳೆಗಾಲದ ನದಿಗಳಗೆ ಅಡ್ಡಲಾಗಿ ಮಣ್ಣಿನ

ಏರಿಯನ್ನು ನಿರ್ಮಿಸಿ ನೀರನ್ನು ಸಂಗ್ರಹಿಸಿ ಆ ನೀರಿನಿಂದ ತನ್ನ ಜೀವನಾವಶ್ಯಕತೆಗಳನ್ನು ಮತ್ತು ವ್ಯವಸಾಯದ ಬೇಡಿಕೆಗಳನ್ನು ಪೂರೈಸಿಕೊಳ್ಳುತ್ತಿದ್ದನು.[13] ದಕ್ಷಿಣ ಕರ್ನಾಟಕ ನನ್ನ ಅಧ್ಯಯನ ಕ್ಷೇತ್ರದ ವ್ಯಾಪ್ತಿಯಲ್ಲಿ ನಿರ್ಮಿಸಿಕೊಂಡಿರಬಹುದಾದ ಒಟ್ಟು ಕೆರೆಗಳ ಅಂದಾಜು ಸುಮಾರು ೫೦೦ಕ್ಕೂ ಹೆಚ್ಚಿದೆ.[14]

ಇದಾದನಂತರದ ಕಾಲದ ಇತಿಹಾಸ ಆರಂಭಕಾಲದಲ್ಲಿ ಕೆರೆಗಳ ನಿರ್ಮಾಣ ಮುಂದುವರಿಯಿತ್ತೆಂದು ಹೇಳಬಹುದು. ಕರ್ನಾಟಕ ಇತಿಹಾಸ ಕಾಲವು ಮೌರ್ಯ, ಶಾತವಾಹನ ಯುಗದಿಂದ ಪ್ರಾರಂಭವಾಗುತ್ತದೆ.[15] ದಕ್ಷಿಣ ಕರ್ನಾಟಕದ ಉತ್ತರ ಭಾಗದ ಜಿಲ್ಲೆಗಳಲ್ಲಿ ಶಾತವಾಹನ ಕುರುಹುಗಳು ಲಭ್ಯವಿರುವುದರಿಂದ ನಾವು ಶಾತವಾಹನ ಕಾಲಘಟ್ಟವನ್ನು ಗಣನೆಗೆ ತೆಗೆದುಕೊಳ್ಳ ಬೇಕಾಗುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದ ವ್ಯಾಪ್ತಿಯಲ್ಲಿ ಚಂದ್ರಗಿರಿ ಮತ್ತು ಬ್ರಹ್ಮಗಿರಿಯನ್ನು ಹೊರತುಪಡಿಸಿದರೆ ಶಾತವಾಹನ ಸಂಸ್ಕೃತಿಯ ಕುರುಹು ಇರುವ ನೆಲೆಗಳು ಉತ್ಖನನವಾಗದ ಕಾರಣ ಆ ಅಧ್ಯಯನ ಈ ಕ್ಷೇತ್ರಗಳಿಗೆ ಸೀಮಿತವಾಗಿದೆ. ದಕ್ಷಿಣ ಕರ್ನಾಟಕದಲ್ಲಿ ರಾಜಘಟ್ಟ, ತಲಕಾಡು, ಮುತ್ತಲವಾಡಿ, ಹೆಮ್ಮಿಗೆ ಮುಂತಾದ ಸ್ಥಳಗಳಲ್ಲಿ ಇತಿಹಾಸ ಆರಂಭ ಯುಗದ ನೆಲೆಗಳು ದೊರೆತ್ತಿದ್ದರು ಅವನ್ನು ಶಾತವಾಹನರ ಸಂಸ್ಕೃತಿ ಎಂದು ಗುರುತಿಸಿಲ್ಲ. ಅದಕ್ಕೆ ಬದಲಾಗಿ ಈ ಪ್ರದೇಶದಲ್ಲಿ ದೊರೆತಿರುವ ಬೃಹತ್ ಶಿಲಾಯುಗದ ನಂತರದ ಸಂಸ್ಕೃತಿಯನ್ನು ಇತಿಹಾಸ ಆರಂಭಕಾಲದ ನೆಲೆಗಳೆಂದೇ ಗುರುತಿಸಿದ್ದಾರೆ. ಆದರೂ  ಬೆರಳೆಣಿಕೆಯ ಉತ್ಖನನಗಳು ನಡೆದಿರುವ ಹಿನ್ನೆಲೆಯಲ್ಲಿ ಮತ್ತು ಕ್ಷೇತ್ರ ಕಾರ್ಯದ ವರದಿಗಳು  ಸಂಪೂರ್ಣವಾಗಿ, ಪ್ರಕಟವಾಗದ ಹಿನ್ನೆಲೆಯಲ್ಲಿ  ಈ ಕಾಲಘಟ್ಟದಲ್ಲಿ ನಡೆದಿರಬಹುದಾದ ಕೆರೆ ನಿರ್ಮಾಣದ ಮಾಹಿತಿಯೂ ಲಭ್ಯವಿಲ್ಲ. ಈ ಕಾಲಘಟ್ಟದ ನಂತರ ನಿರ್ಮಾಣವಾಗಿರುವ ಎಲ್ಲಾ ಕೆರೆಗಳ ಮಾಹಿತಿಗಳು ಲಭ್ಯವಿಲ್ಲ. ಹಾಗಾಗಿ ದಕ್ಷಿಣ ಕರ್ನಾಟಕ ಪ್ರದೇಶಗಳಲ್ಲಿ ಮತ್ತು ಇತಿಹಾಸ ಕಾಲಘಟ್ಟದಲ್ಲಿ ನಡೆದಿರಬಹುದಾದ ಕೆರೆಗಳ ನಿರ್ಮಾಣವನ್ನು ಅಧ್ಯಯನ ಮಾಡುವ ಉದ್ದೇಶದಿಂದಾಗಿ ಪ್ರಸ್ತುತ ಅಧ್ಯಯನ ವಿಷಯವನ್ನು **ದಕ್ಷಿಣ ಕರ್ನಾಟಕದಲ್ಲಿ ಕೆರೆ ಕಟ್ಟೆಗಳ ನಿರ್ಮಾಣ ಮತ್ತು**

**ನಿರ್ವಹಣೆ** (ಆರಂಭದಿಂದ ವಿಜಯನಗರದ ಸಾಮ್ರಾಜ್ಯದ ಅಂತ್ಯದವರೆಗೆ) ಎಂಬ ವಿಷಯವನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

## ಅಧ್ಯಯನದ ವ್ಯಾಪ್ತಿ

ಯಾವುದೇ ಒಂದು ಅಧ್ಯಯನದ ವ್ಯಾಪ್ತಿಯನ್ನು ಖಚಿತಪಡಿಸುವಾಗ ಆ ಕಾಲಘಟ್ಟದ ಅಥವಾ ಭೌಗೋಳಿಕ ಪ್ರದೇಶವೊಂದರ ಎಲ್ಲೆಯನ್ನು ಅಧ್ಯಯನದ ಕ್ಷೇತ್ರವನ್ನಾಗಿ ಆಯ್ಕೆಮಾಡಿಕೊಳ್ಳುತ್ತೇವೆ. ಪ್ರಸ್ತುತ ಅಧ್ಯಯನವು ದಕ್ಷಿಣ ಕರ್ನಾಟಕದಲ್ಲಿ ಕೆರೆಕಟ್ಟೆಗಳ ನಿರ್ಮಾಣ ಮತ್ತು ನಿರ್ವಹಣೆ ವಿಷಯವನ್ನು ದಕ್ಷಿಣದ ಬಯಲು ಸೀಮೆಗೆ ಸೀಮಿತಗೊಳಿಸಲಾಗಿದೆ. ಭೌಗೋಳಿಕವಾಗಿ ಕರ್ನಾಟಕವನ್ನು ಅದರ ಮೇಲ್ಮೈ ಲಕ್ಷಣದ ಆಧಾರದ ಮೇಲೆ ಪಶ್ಚಿಮದ ಕಡಲ ತೀರ ಅಂದರೆ ಕೊಂಕಣ ತೀರ ಪ್ರದೇಶದ ದಕ್ಷಿಣ ಭಾಗವನ್ನು ಆವರಿಸಿರುವ ಉತ್ತರ ಕನ್ನಡ ಜಿಲ್ಲೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಯನ್ನು ಒಳಗೊಂಡ ಭೂ ಪ್ರದೇಶವನ್ನು ಕರಾವಳಿ ತೀರವೆಂದು ಗುರುತಿಸಲಾಗುತ್ತಿದೆ. ಈ ಎಲ್ಲಾ ಭೌಗೋಳಿಕ ಅಧ್ಯಯನಗಳಲ್ಲಿ ಈ ವಿಧಾನವನ್ನು ಕಾಣಬಹುದಾಗಿದೆ.

ಕಡಲ ತೀರಕ್ಕೆ ಸೇರಿದಂತೆ ದಕ್ಷಿಣೋತ್ತರವಾಗಿ ಹಬ್ಬಿರುವ ಎತ್ತರದ ಗಿರಿ ಪರ್ವತ ಶ್ರೇಣಿಯನ್ನು ಬೆಟ್ಟಗಳ ಪ್ರದೇಶವೆಂದು ಗುರುತಿಸಲಾಗಿದೆ. ಇದನ್ನು ಪಶ್ಚಿಮ ಘಟ್ಟಗಳೆಂದು ಕರೆಯಲಾಗುತ್ತದೆ. ಕರ್ನಾಟಕದ ಕರಾವಳಿ ತೀರದ ಜಿಲ್ಲೆಗಳಾದ ಉತ್ತರ ಕರ್ನಾಟಕದ ಪೂರ್ವಭಾಗ, ದಕ್ಷಿಣ ಕರ್ನಾಟಕದ ಪೂರ್ವಭಾಗ ಮತ್ತು ಉಡುಪಿ ಜಿಲ್ಲೆಯ ಪೂರ್ವ ಭಾಗವನ್ನು ಮತ್ತು ಕೊಡಗು ಜಿಲ್ಲೆ ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಭಾಗ ಶಿವಮೊಗ್ಗ ಜಿಲ್ಲೆಯ ಪಶ್ಚಿಮಭಾಗಗಳು ಬೆಟ್ಟ ಪ್ರದೇಶದಿಂದ ಆವೃತ್ತವಾಗಿದೆ.[16] ಈ ಜಿಲ್ಲೆಯ ಮಲೆನಾಡಿನ ಬೆಟ್ಟಗಳ ಅಂಚಿನ ಪೂರ್ವದ ಭಾಗಗಳನ್ನು ಅರೆಮಲೆನಾಡು ಎಂದು ಕರೆಯಲಾಗುತ್ತದೆ. ಮುಂದುವರಿದು ಮೈಸೂರು ಚಾಮರಾಜನಗರ, ಮಂಡ್ಯ, ರಾಮನಗರ, ಬೆಂಗಳೂರು, ಬೆಂಗಳೂರು ಗ್ರಾಮಾಂತರ, (ರಾಮನಗರ) ಕೋಲಾರ, ತುಮಕೂರು, ಹಾಸನ, ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಯ ಬಯಲು ಪ್ರದೇಶ, ಚಿತ್ರದುರ್ಗ ಜಿಲ್ಲೆಗಳನ್ನು ದಕ್ಷಿಣದ ಬಯಲು ಸೀಮೆ ಎಂದು ಗುರುತಿಸುತ್ತಾರೆ. ಪಶ್ಚಿಮ ಘಟ್ಟಗಳನ್ನು ಹೊರತು ಪಡಿಸಿದರೆ

ಪಶ್ಚಿಮ ಘಟ್ಟದ ನಂತರದ ಪೂರ್ವ ಮೈದಾನವನ್ನು ಕರ್ನಾಟಕದ ಮಟ್ಟಿಗೆ ಬಯಲು ಪ್ರದೇಶವೆಂದು ಪ್ರಧಾನವಾಗಿ ಗುರುತಿಸಿ ಅದನ್ನು ಅಧ್ಯಯನದ ಉದ್ದೇಶಕ್ಕಾಗಿ ಉತ್ತರದ ಮತ್ತು ದಕ್ಷಿಣದ ಬಯಲು ಪ್ರದೇಶವೆಂದು ಎರಡು ಉಪವಿಭಾಗಳಾಗಿ ಅಧ್ಯಯನ ಮಾಡಿರುವುದನ್ನು ಎರಡನೇ ಅಧ್ಯಯನದಲ್ಲಿ ಗುರುತಿಸಲಾಗಿದೆ.[17]

ಈ ಹಿನ್ನೆಲೆಯಲ್ಲಿ ನೋಡಿದಾಗ ದಕ್ಷಿಣಕನ್ನಡ ಜಿಲ್ಲೆಯನ್ನು ಹೇಗೆ ಗುರುತಿಸುವುದು ಎಂಬ ಜಿಜ್ಞಾಸೆ ಉಂಟಾಗುತ್ತದೆ. ಇತಿಹಾಸ ಆರಂಭಕಾಲದಿಂದ 1800ರವರೆಗೆ ಸಾಮ್ರಾಜ್ಯಗಳ ಎಲ್ಲೆಗಳನ್ನು ಆಯಾರಾಜರ ಕಾಲದ ಅಥವಾ ಸಾಮ್ರಾಜ್ಯದ ಔನತ್ಯಕಾಲದ ಎಲ್ಲೆಗಳನ್ನು ಗುರುತಿಸಿ ಅಧ್ಯಯನ ಮಾಡಲಾಗುತ್ತದೆ. ಈ ಪ್ರದೇಶಗಳನ್ನು ಆಯಾ ಅರಸು ಮನೆತನದ ಹೆಸರಿನಿಂದ ಕರೆಯುವುದು ಚಾಲ್ತಿಯಲ್ಲಿತ್ತು. ಇತಿಹಾಸ ಪ್ರಾರಂಭದ ಯುಗದಲ್ಲಿ ದಕ್ಷಿಣ ತಮಿಳುನಾಡಿನಲ್ಲಿ ಚೋಳ, ಚೇರ ಮತ್ತು ಪಾಂಡ್ಯ ಮಂಡಲಗಳೆಂದು ಗುರುತಿಸಲಾಗುತ್ತಿದ್ದದ್ದನ್ನು ಸಂಗಮ್ ಸಾಹಿತ್ಯ ಖಚಿತಪಡಿಸುತ್ತದೆ. ಕರ್ನಾಟಕದ ಮಟ್ಟಿಗೆ ಪ್ರಾರಂಭದ ದಿನಗಳಲ್ಲಿ ಸಣ್ಣ ಸಣ್ಣ ನಾಡುಗಳ ಆಡಳಿತ ವಿಭಾಗಗಳಾಗಿ ಬಳಕೆಯಲ್ಲಿದ್ದವು. ಕೆಲವು ಅದರಲ್ಲೂ ಪ್ರಮುಖವಾಗಿ ದಕ್ಷಿಣ ಕರ್ನಾಟಕ ಪ್ರದೇಶದ ಮೇಲೆ ಸುಧೀರ್ಘ ಕಾಲದವರೆಗೆ ಪ್ರಭುತ್ವ ಹೊಂದಿದ್ದ ಗಂಗರ ಆಳ್ವಿಕೆಯ ಪ್ರದೇಶವನ್ನು ಗಂಗವಾಡಿಯೆಂದು ಕರೆಯಲಾಗುತ್ತಿತ್ತೆಂದು ತಿಳಿದು ಬರುತ್ತದೆ. B.L. Rice ರವರು ಗಂಗವಾಡಿ ಪ್ರದೇಶವನ್ನು ಗುರುತಿಸಿದ್ದಾರೆ.[18] ಅದೂ ಸಹ ನಾವು ಈ ಮೇಲೆ ಹೇಳಿದ ಜಿಲ್ಲೆಗಳ ವ್ಯಾಪ್ತಿಯಲ್ಲಿಯೇ ಕಾರ್ಯ ನಿರ್ವಹಿಸುತ್ತಿದ್ದುದು ಖಚಿತವಾಗುತ್ತದೆ. ಈ ತದನಂತರ ಗಂಗರು ಚೋಳರಿಗೆ ಶರಣಾದ ಹಿನ್ನೆಲೆಯಲ್ಲಿ ಗಂಗವಾಡಿಯ ಬಹುತೇಕ ಪ್ರದೇಶಗಳು ಚೋಳರ ಆಡಳಿತಕ್ಕೆ ಒಳಪಟ್ಟವು. ಗಂಗವಾಡಿ ಪ್ರದೇಶವನ್ನು ಮುಡಿಗುಂಡಚೋಳನಾಡಿನ ಪ್ರದೇಶವಾಗಿ ಪರಿವರ್ತಿಸಿ ತಲಕಾಡಿನಲ್ಲಿ ಅದರ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜಪುರವೆಂದು ಪುನರ್ ನಾಮಕರಣ ಮಾಡಿಕೊಂಡು, ಅದು ಆ ರಾಜಪಾಲನ ಆಳ್ವಿಕೆಯಲ್ಲಿ ಈ ಪ್ರದೇಶವನ್ನು ಆಳ್ವಿಕೆಗೆ ಒಳಪಡಿಸಿದರು.[19] ಕ್ರಿ.ಶ 1109ರಿಂದ 1117ರ ನಡುವೆ ಹೊಯ್ಸಳ ವಿಷ್ಣುವರ್ಧನನು ಚೋಳರ ಗಂಗವಾಡಿಯ ಆಕ್ರಮಣವನ್ನು ಹಂತ ಹಂತವಾಗಿ

ತೆರವುಗೊಳಿಸಿ ಇಡೀ ಗಂಗವಾಡಿ ಪ್ರದೇಶವನ್ನು ಕ್ರಿ.ಶ.1117ರ ಹೊತ್ತಿಗೆ ಸಂಪೂರ್ಣವಾಗಿ ಚೋಳರ ಆದಿಪತ್ಯದಿಂದ ಮುಕ್ತಗೊಳಿಸಿದನು.[20]

ಈ ಹಂತದಲ್ಲಿಯು ಕೂಡ ಪಶ್ಚಿಮದ ಕಡಲತೀರ ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿರಲಿಲ್ಲ. ಅಲ್ಲದೆ ಕೊಡಗು ಪ್ರದೇಶ ಮಾತ್ರ ಕೊಂಗಾಳ್ವರು ಮತ್ತು ಚೆಂಗಾಳ್ವರ ಆಳ್ವಿಕೆಗೆ ಒಳಪಟ್ಟಿತು. ಚೋಳರ ಧಮನದ ನಂತರ ಹೊಯ್ಸಳರ ವಿಷ್ಣುವರ್ಧನನು ಕೊಂಗಾಳ್ವರು ಮತ್ತು ಚೆಂಗಾಳ್ವರನ್ನು ಸೋಲಿಸಿ ತನ್ನ ಅಧೀನಕ್ಕೆ ತಂದುಕೊಂಡನಾದರೂ ಈ ಪ್ರದೇಶಗಳು ದಕ್ಷಿಣದ ಬಯಲು ಸೀಮೆಯೊಂದಿಗೆ ಆಡಳಿತಾತ್ಮಕವಾಗಲಿ, ಭೌಗೋಳಿಕವಾಗಿಯಾಗಲಿ, ಹೆಚ್ಚಿನ ಸಂಪರ್ಕವನ್ನು ಸಾಧಿಸಿರಲಿಲ್ಲ. ಹೊಯ್ಸಳರ ಪತನಾನಂತರ ಗಂಗವಾಡಿಯ ಪ್ರದೇಶವನ್ನು ಹೊಯ್ಸಳನಾಡೆಂದು ಗುರುತಿಸಿರುವುದು ತಿಳಿದು ಬರುತ್ತದೆ.[21] ಈ ಹಿನ್ನೆಲೆಯಲ್ಲಿ ಗಮನಿಸಿದಾಗ ನನ್ನ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಭೌಗೋಳಿಕ ಎಲ್ಲೆಯನ್ನು ಗುರುತಿಸುವಾಗ ಅವಿಭಜಿತ ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳು ದಕ್ಷಿಣ ಕರ್ನಾಟಕದ ಎಲ್ಲೆಗಳಲ್ಲಿ ಗುರುತಿಸಲ್ಪಡುವುದಿಲ್ಲ. ಟಿಪ್ಪುವಿನ ಮರಣದ ತರುವಾಯ ರಾಜ್ಯ ಪುನರ್ ವಿಂಗಡಣೆಯ ಸಮಯದಲ್ಲಿ ಕೊಡಗು ಪ್ರತ್ಯೇಕ ಆಡಳಿತವಾಗಿ ಮದರಾಸು, ಪ್ರಾಂತ್ಯದ ಕಮೀಷನರ್ ಆಳ್ವಿಕೆಗೆ ಒಳಪಟ್ಟಿತು. ಹಾಗೆಯೇ ಅವಿಭಾಜಿತ ದಕ್ಷಿಣ ಕನ್ನಡ ಪ್ರಾಂತ್ಯದ ಭಾಗವಾಯಿತು. ಉಳಿದ ಜಿಲ್ಲೆಗಳಾದ ಶಿವಮೊಗ್ಗ, ಅಂದಿನ ಕಡೂರು ಇಂದಿನ ಚಿಕ್ಕಮಗಳೂರು, ಚಿತ್ರದುರ್ಗ ತುಮಕೂರು ಕೋಲಾರ, ಹಾಸನ, ಅಂದಿನ ಬೆಂಗಳೂರು– ಇಂದಿನ ಬೆಂಗಳೂರು ನಗರ ಮತ್ತು ಗ್ರಾಮಾಂತರ, ಅಂದಿನ ಮೈಸೂರು, ಇಂದಿನ ಮಂಡ್ಯ, ಮೈಸೂರು, ಚಾಮರಾಜನಗರ ಜಿಲ್ಲೆಗಳು, ಮೈಸೂರು ಸಂಸ್ಥಾನದ ಭಾಗವಾಗಿ ಗುರುತಿಸಲ್ಪಟ್ಟವು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿಯು ಕೊಡಗು ಮಂಗಳೂರು ರಾಜ್ಯದ ಭಾಗವಾಗಿತ್ತು. ಇಂದಿನ ಉಡುಪಿ ಜಿಲ್ಲೆ ಬಾರಕೂರು ರಾಜ್ಯದ ಆಳ್ವಿಕೆಗೆ ಒಳಪಟ್ಟಿತು. ದಕ್ಷಿಣದ ಬಯಲು ಸೀಮೆ ತೆರಕಣಾಂಬಿ, ಮುಳಬಾಗಿಲು, ಚನ್ನಪಟ್ಟಣ, ಚಿತ್ರದುರ್ಗ ಮುಂತಾದ ರಾಜ್ಯಗಳ ಆಳ್ವಿಕೆ ಒಳಪಟ್ಟಿತ್ತು.

ಈಗಾಗಿ ದಕ್ಷಿಣ ಕರ್ನಾಟಕವೆಂದರೆ ದಕ್ಷಿಣ ಕರ್ನಾಟಕದ ಕರಾವಳಿ ಬೆಟ್ಟ ಪ್ರದೇಶವನ್ನು ಹೊರತುಪಡಿಸಿ, ಕಾವೇರಿ ಪೆನ್ನಾರ್ ಜಲಾನಯನ ಪ್ರದೇಶದ ಈ ಕೆಳಕಂಡ ಜಿಲ್ಲೆಗಳೆಂದು ಗುರುತಿಸ ಬೇಕಾಗುತ್ತದೆ. ಅವುಗಳೆಂದರೆ ಚಾಮರಾಜನಗರ ಜಿಲ್ಲೆ, ಮೈಸೂರು, ಮಂಡ್ಯ, ಹಾಸನ ಚಿಕ್ಕಮಗಳೂರು, ಶಿವಮೊಗ್ಗ, ಚಿತ್ರದುರ್ಗ, ತುಮಕೂರು, ಬೆಂಗಳೂರು ನಗರ ಮತ್ತು ಗ್ರಾಮಾಂತರ ಹಾಗೂ ಕೋಲಾರ ಜಿಲ್ಲೆಗಳು. ಈ ವ್ಯಾಪ್ತಿಯಲ್ಲಿ ಬರುವ ಕೆರೆಗಳ ನಿರ್ಮಾಣ ನಿರ್ವಹಣೆ ಕುರಿತು ಪ್ರಸ್ತುತ ಪ್ರೌಢಪ್ರಬಂಧದಲ್ಲಿ ಚರ್ಚಿಸಲಾಗಿದೆ.

ಈ ಭೌಗೋಳಿಕ ಪ್ರದೇಶದ ರಾಜಕೀಯ ಚರಿತ್ರೆ ಪ್ರಾರಂಭವಾಗುವುದು ಮೌರ್ಯ-ಶಾತವಾಹನರ ಕಾಲದಿಂದ, ಚಿತ್ರದುರ್ಗ ಜಿಲ್ಲೆಯಲ್ಲಿ ದೊರೆತಿರುವ ಅಶೋಕನ ಶಾಸನಗಳು ತಿಳಿಸುವಂತೆ ದಕ್ಷಿಣ ಕರ್ನಾಟಕ ಭಾಗಗಳು ಮೌರ್ಯ ಸಾಮ್ರಾಜ್ಯದ ಭಾಗವಾಗಿತ್ತೆಂದು ತಿಳಿದು ಬರುತ್ತದೆ. ಕರ್ನಾಟಕದ ಮೌಖಿಕ ಪರಂಪರೆ ಮತ್ತು ಧಾರ್ಮಿಕ ಇತಿಹಾಸವನ್ನು ಆಧರಿಸಿ ಹೇಳುವುದಾದರೆ ಅಶೋಕನ ತಾತ ಚಂದ್ರಗುಪ್ತ ಮೌರ್ಯನು ತನ್ನ ಆಳ್ವಿಕೆಯ ಕೊನೆಯ ಘಟ್ಟದಲ್ಲಿ ಜೈನ ಧರ್ಮವನ್ನು ಸ್ವೀಕರಿಸಿ ತನ್ನ ಗುರು ಭದ್ರಬಾಹುವಿನೊಂದಿಗೆ ಜೈನರ ಪುಣ್ಯಕ್ಷೇತ್ರ ಶ್ರವಣಬೆಳಗೊಳಕ್ಕೆ ವಸಲೆ ಬಂದು ಅಲ್ಲಿ ಸಲ್ಲೇಖನ ವ್ರತವನ್ನು ಕೈಗೊಂಡು ನಿತ್ಯಾತ್ಮನಾದನೆಂದು ತಿಳಿದುಬರುತ್ತದೆ. ಜೈನ ಪರಂಪರೆಯನ್ನು ಆಧರಿಸಿ ವಿದ್ವಾಂಸರು ಕರ್ನಾಟಕಕ್ಕೆ ಜೈನ ಧರ್ಮವು ಕ್ರಿ.ಪೂ. 2ನೇಶತಮಾನದಲ್ಲಿಯೇ ಪ್ರವೇಶ ಮಾಡಿತ್ತೆಂಬ ವಿಷಯವನ್ನು ಬಹುತೇಕ ಸಾರ್ವತ್ರಿಕವಾಗಿ ಒಪ್ಪಿಕೊಳ್ಳುತ್ತಾರೆ. ಚಂದ್ರಗುಪ್ತಮೌರ್ಯ ಮತ್ತು ಭದ್ರಬಾಹುವಿನ ಆಗಮನವನ್ನು ಖಚಿತಪಡಿಸುವ ಬೇರೆ ಯಾವುದೇ ಶಾಸನಗಳು ದೊರೆಯದ ಹಿನ್ನೆಲೆಯಲ್ಲಿ ಕೆಲವು ವಿದ್ವಾಂಸರು ಹಿಂದೆ ಸರಿಯುತ್ತಾರೆ. ಆದರೆ ಅಶೋಕನ ಶಾಸನಗಳು ದೊರೆತಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯವು ಮೌರ್ಯ ಸಾಮ್ರಾಜ್ಯದ ಪ್ರಭಾವಕ್ಕೆ ಒಳಗಾಗಿದ್ದುದನ್ನು ಒಪ್ಪಿಕೊಳ್ಳಲೇ ಬೇಕಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ ದಕ್ಷಿಣ ಕರ್ನಾಟಕದ ಐತಿಹಾಸಿಕ ಬೆಳವಣಿಗೆಯು ಮೌರ್ಯರಿಂದಲೇ ಪ್ರಾರಂಭವಾಯಿತೆಂದರೆ ಅತಿಶಯೋಕ್ತಿಯಲ್ಲ.[22]

ದಕ್ಷಿಣ ಕನ್ನಡದ ರಾಜಘಟ್ಟದಲ್ಲಿ ದೊರೆತಿರುವ ಬೌದ್ಧ ಸ್ತೂಪಗಳು ತಲಕಾಡಿನ ಉತ್ಖನನದಲ್ಲಿ ದೊರೆತಿರುವ ಗಂಗ ಪೂರ್ವದ ಸಾಂಸ್ಕೃತಿಕ ಸ್ಥರಗಳು ಈ ಕಾಲಕ್ಕಾಗಲೆ ಈ ಪ್ರದೇಶ ನಗರೀಕರಣವಾಗಿತ್ತೆಂಬ ವಿಷಯವನ್ನು ಖಚಿತಪಡಿಸುತ್ತವೆ. ಇದನ್ನು ಗಮನದಲ್ಲಿಟ್ಟುಕೊಂಡು, ಮೌರ್ಯ ಶಾತವಾಹನ ಯುಗದ ನಂತರ ಈ ಭಾಗ ಗಂಗರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು. ದಕ್ಷಿಣ ಕರ್ನಾಟಕದ ಭಾಗಗಳಲ್ಲಿ ಶಾತವಾಹನರ ಯುಗದ ನಂತರ ಈ ಭಾಗವು ಗಂಗರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು. ದಕ್ಷಿಣ ಕರ್ನಾಟಕದ ಭಾಗಗಳಲ್ಲಿ ಶಾತವಾಹನರ ಶಾಸನಗಳು ದೊರೆಯದ ಹಿನ್ನೆಲೆಯಲ್ಲಿ ಶಾತವಾಹನರ ಪ್ರಭುತ್ವ ಈ ಪ್ರದೇಶದ ಮೇಲೆ ಉಂಟಾಗಿತ್ತೆ ಇಲ್ಲವೆ ಎಂಬುದನ್ನು ಖಚಿತಪಡಿಸಲು ಸಾಧ್ಯವಿಲ್ಲವಾದರೂ, ಬ್ರಹ್ಮಗಿರಿ, ಚಂದ್ರವಳ್ಳಿ ಇತ್ಯಾದಿ ಸ್ಥಳಗಳಲ್ಲಿ ಶಾತವಾಹನರ ಸಂಸ್ಕೃತಿ ಕಂಡು ಬಂದಿರುವುದನ್ನು ಗಮನದಲ್ಲಿಟ್ಟುಕೊಂಡು ದಕ್ಷಿಣ ಕರ್ನಾಟಕದ ಈ ಪ್ರದೇಶವು ಶಾತವಾಹನರ ಪ್ರಭಾವಕ್ಕೆ ಒಳಗಾಗಿತ್ತೆಂದು ಖಚಿತವಾಗಿ ಹೇಳಬಹುದು.[23]

ಆದರೂ ಇದಕ್ಕಿಂತ ಹೆಚ್ಚಿನ ವಿವರಗಳನ್ನು ದಾಖಲಿಸಲು ಸಾಧ್ಯವಿಲ್ಲ. ದಕ್ಷಿಣ ಭಾರತದ ಮೇಲೆ ಕ್ರಿ.ಶ.4ನೇ ಶತಮಾನದಲ್ಲಿ ಸಮುದ್ರಗುಪ್ತನು ನಡೆಸಿದ ಸೈನಿಕ ಕಾರ್ಯಾಚರಣೆಗಳು ಪಲ್ಲವರನ್ನು ಶಕ್ತಿಹೀನರನ್ನಾಗಿ ಮಾಡುವುದರ ಜೊತೆಗೆ ಕರ್ನಾಟಕದ ಎರಡು ರಾಜಮನೆತನಗಳ ಉದಯಕ್ಕೆ ರಂಗಮಂಟಪವನ್ನು ಸಿದ್ಧಪಡಿಸಿದವು. ಗಂಗರು ಪ್ರಾಯಶಃ ಪಲ್ಲವರ ಅಜ್ಞಾನವರ್ತಿಗಳಾಗಿದ್ದು ಸಮುದ್ರ ಗುಪ್ತನ ಧಾಳಿಯ ನಂತರ ಪೆರೂರು ಮತ್ತು ಕೋಲಾರದಲ್ಲಿ ಮುಂದುವರಿದು ತಲಕಾಡು ಮತ್ತು ಮನ್ನೆಗಳಲ್ಲಿ ರಾಜಧಾನಿಗಳನ್ನು ಸ್ಥಾಪಿಸಿಕೊಂಡು ಕರ್ನಾಟಕದ ದಕ್ಷಿಣ ಭಾಗದ ಬಹುತೇಕ ಪ್ರದೇಶದ ಮೇಲೆ ಪ್ರಭುತ್ವವನ್ನು ಸಾಧಿಸಿ ತಮ್ಮ ಆಳ್ವಿಕೆಯನ್ನು ಮುಂದುವರಿಸಿದರು ಎಂದು ಹೇಳಬಹುದಾಗಿದೆ.[24]

ತಾಳಗುಂದ ಸ್ತಂಭ ಶಾಸನವನ್ನು ಆಧರಿಸಿ ಹೇಳುವುದಾದರೆ ಇದೇ ಕಾಲಘಟ್ಟದಲ್ಲಿ ಕದಂಬರು ಪಲ್ಲವರ ವಿರುದ್ಧ ತಿರುಗಿ ಬಿದ್ದು ದಕ್ಷಿಣದ ಹೆಗ್ಗಡದೇವನಕೋಟೆವರೆಗೆ ತನ್ನ ಪ್ರಭುತ್ವವನ್ನು ಸಾಧಿಸಿಕೊಂಡರು. ಇವರು ಪಲ್ಲವರ ವಿರೋಧಿಗಳೆಂಬುದು ಗಮನಾರ್ಹ

ಅಂಶವಾಗಿದೆ, ಉದಾ: ಶಿವಮೊಗ್ಗ, ಚಿಕ್ಕಮಗಳೂರು, ಪ್ರಾಯಶಃ ಕೊಡಗು ಮತ್ತು ಹೆಗ್ಗಡದೇವನಕೋಟೆ ಕದಂಬರ ವಶದಲ್ಲಿತ್ತೆಂದು ಹೇಳಬಹುದು.[25] ಉತ್ತರ ಕರ್ನಾಟಕದಲ್ಲಿ ಚಾಲುಕ್ಯ ಮನೆತನ ಅಸ್ತಿತ್ವಕ್ಕೆ ಬರುವ ಮುನ್ನ ದಕ್ಷಿಣ ಕರ್ನಾಟಕದಲ್ಲಿ ಅಸ್ತಿತ್ವ ಸಾಧಿಸಿದ್ದ ಗಂಗರು ಮತ್ತು ಕದಂಬರು ಸ್ವಾತಂತ್ರರಾಗಿ ಆಳ್ವಿಕೆ ನಡೆಸಿದರು. ಇಮ್ಮಡಿ ಪುಲಕೇಶಿಯ ದಕ್ಷಿಣದ ದಂಡೆಯಾತ್ರೆಗಳು ಇವರಿಬ್ಬರನ್ನು ಚಾಲುಕ್ಯರ ಸಾಮಂತರಾಗಿ ಪರಿವರ್ತಿಸಿದವು. ತದನಂತರ ಗಂಗರು ಚಾಲುಕ್ಯರ ಪತನ ನಂತರ ಚಾಲುಕ್ಯರು ಪಕ್ಷಪಾತಿಗಳೆಂದು ಗುರುತಿಸಿಕೊಂಡು ಚಾಲುಕ್ಯರ ಪತನದವರೆಗೆ ಚಾಲುಕ್ಯರ ಪರವಾಗಿ ಪಲ್ಲವರ ವಿರೋಧಿಗಳಾಗಿ ಮಾರ್ಪಾಟಾಗಿ ಎರಡು ಸಾಮ್ರಾಜ್ಯಗಳ ಮಧ್ಯದಲ್ಲಿ ತಡೆ ರಾಜ್ಯವಾಗಿ ಕಾರ್ಯ ನಿರ್ವಹಿಸಿ ಚಾಲುಕ್ಯರ ನಂತರ ಪಲ್ಲವರ ಪರವಾಗಿ ರಾಷ್ಟ್ರಕೂಟರ ವಿರೋಧಿಗಳಾದರು. ಆನಂತರ ಚೋಳರ ಆಕ್ರಮಣಕ್ಕೆ ಒಳಪಟ್ಟು ತಮ್ಮ ರಾಜಕೀಯ ಅಸ್ತಿತ್ವವನ್ನು ಕಳೆದುಕೊಂಡರಾದರು ಈ ಮನೆತನದ ನಾಯಕರುಗಳು ಹೊಯ್ಸಳ ಮತ್ತು ಇತರ ಸಾಮ್ರಾಜ್ಯಗಳಲ್ಲಿ ದಂಡನಾಯಕರಾಗಿ, ಆಡಳಿತಗಾರರಾಗಿ ಹಲವು ಹುದ್ದೆಗಳನ್ನು ಅಲಂಕರಿಸಿ ತಮ್ಮ ಪಾರಂಪರ್ಯವನ್ನು ಮೆರೆದರು. ಗಂಗರ ಸಂಸ್ಕೃತಿಯು ಚೋಳರ ಆಕ್ರಮಣದೊಂದಿಗೆ ದಕ್ಷಿಣ ಕರ್ನಾಟಕವನ್ನು ತಮಿಳು ಸಂಸ್ಕೃತಿಗೆ ತೆರೆದು ಬಿಟ್ಟಿತು.[26]

ಚೋಳರು ಈ ಪ್ರದೇಶವನ್ನು ಆಕ್ರಮಣ ಮಾಡುವವರೆಗೆ ಈ ಪ್ರದೇಶವು ನಿರಂತರ ಸಂಘರ್ಷದ ಸೈನಿಕ ಕಾರ್ಯಚರಣೆಯ ಭಾಗವಾಗಿ ಮಾರ್ಪಟ್ಟಿದ್ದಿತು. ಶಾಂತಿ, ಸುವ್ಯವಸ್ಥೆತೆಯ ಮರಳುಗಾಡಿನ ಮರೀಚಿಕೆಯಾಗಿದ್ದಿತು. ಸುಭದ್ರ ಸರ್ಕಾರ ಕನ್ನಡಿಯ ಗಂಟಾಗಿದ್ದಿತು. ಈ ಹಿನ್ನೆಲೆಯಲ್ಲಿ ಚೋಳರ ಆಗಮನದ ಶಾಸನಗಳನ್ನು ಗಮನಿಸಿದಾಗ ಅಲ್ಲಲ್ಲಿ ದೇವಾದಾಯ, ಬ್ರಹ್ಮಾದಾಯದ ಶಾಸನಗಳು ಕಂಡು ಬರುತ್ತದೆ. ಆದರೂ ಮಹತ್ವದ ಸಾಂಸ್ಕೃತಿಕ ಪರಿಸರ ನಿರ್ಮಾಣವಾದ ಬಗ್ಗೆ ವಿವರಗಳು ಲಭ್ಯವಿಲ್ಲ. ಇಲ್ಲಿನ ಶಿಕ್ಷಣದ ಪರಂಪರೆ ಪ್ರಾರಂಭವಾಗುವುದು ಚೋಳರ ಚತುರ್ವೇಧಿ ಮಂಗಲಗಳ ಸ್ಥಾಪನೆಯಿಂದ ಎನ್ನಬಹುದು.[27]

ಇದಕ್ಕೆ ಪೂರ್ವದಲ್ಲಿ ಜೈನ ಕ್ಷೇತ್ರಗಳು, ಶೈವ ಕ್ಷೇತ್ರಗಳು ಅಸ್ತಿತ್ವದಲ್ಲಿದ್ದರೂ. ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ನೀಡಿದ ಕೊಡುಗೆಯಂತೂ ಅತ್ಯಲ್ಪವೆಂದೇ ಭಾವಿಸಬೇಕಾಗುತ್ತದೆ. ಮೈಸೂರಿನ ಸಮೀಪದ ಕಳಸ್ತವಾಡಿಯ ಚೋಳ ಶಾಸನವು ಈ ಪ್ರದೇಶದ ಕೆರೆಯೊಂದು ಸುಮಾರು 200 ವರ್ಷಗಳ ಹಿಂದೆ ಹಾಳಾಗಿಹೋಗಿದ್ದುದನ್ನು ದಾಖಲಿಸಿ ಅದನ್ನು ಪುನಃ ಜೀರ್ಣೋದ್ಧಾರ ಮಾಡಿ ಆ ಕೆರೆಯ ಕೆಳಗಿನ ಭೂಮಿಯನ್ನು ದಾನಮಾಡಿದ ವಿವರವನ್ನು ದಾಖಲಿಸುತ್ತದೆ.[28] ಈ ವಿಷಯವನ್ನು ಗಮನಿಸಿದಾಗ ಇದೇ ಪರಿಸ್ಥಿತಿ ಇಡೀ ದಕ್ಷಿಣ ಕರ್ನಾಟಕದ ಪರಿಸ್ಥಿತಿಯಾಗಿತ್ತೆಂದು ಖಚಿತಪಡಿಸಬಹುದು. ಕಾರಣ ನೊಳಂಬವಾಡಿಯ ನೊಳಂಬರು, ಬಾಣರು, ಪಲ್ಲವರು ಪ್ರಾರಂಭದ ದಿನಗಳಲ್ಲಿ ಗಂಗರ ವಿರೋಧಿಗಳಾಗಿದ್ದರು. ಚಾಲುಕ್ಯರ ಧಮನದ ನಂತರ ರಾಷ್ಟ್ರಕೂಟರ ಕಾಲದಲ್ಲಿ ಅವರ ವಿರೋಧಿಗಳಾಗಿ ಗಂಗ ಅರಸರುಗಳ ಸೆರೆಮನೆ ಸೇರಿದ್ದರಿಂದ ನಾಮಮಾತ್ರ ಸರ್ಕಾರ ಮುಂದುವರಿಯಿತೇ ಹೊರತು ಹೆಚ್ಚಿನ ಅಭಿವೃದ್ಧಿ ಕಾರ್ಯಗಳು ಜರುಗಲಿಲ್ಲ. ರಾಷ್ಟ್ರಕೂಟರು ಕೂಡ ತಮಿಳುನಾಡಿನ ಯುದ್ಧಗಳಿಗೆ ಸೈನಿಕರ ಕರಭಾರವನ್ನು ಹೊರುವ ಶಾಪಗ್ರಸ್ತ ಪ್ರದೇಶವಾಗಿ ಮಾರ್ಪಟ್ಟಿತ್ತು. ತದನಂತರ ಚೋಳರು ಪ್ರಬಲರಾಗಿ ತಮ್ಮ ಪ್ರಭುತ್ವವನ್ನು ಗಂಗವಾಡಿಯ ಮೇಲೆ ಸ್ಥಾಪಿಸಿದ ನಂತರವಷ್ಟೆ ಈ ಪ್ರದೇಶದಲ್ಲಿ ಶೈವ, ವೈಷ್ಣವ, ಜೈನಧರ್ಮದ ಕೇಂದ್ರಗಳು, ಸಾಂಸ್ಕೃತಿಕ, ಧಾರ್ಮಿಕ, ಆರ್ಥಿಕ ಕಾರ್ಯಚಟುವಟಿಕೆಗಳ ಜೊತೆಗೆ ವ್ಯವಸಾಯವನ್ನು ಬಲಪಡಿಸುವ ಸಲುವಾಗಿ ಕೆರೆಕಟ್ಟೆಗಳ ನಿರ್ಮಾಣ ಮತ್ತು ನಿರ್ವಹಣೆಗೆ ಉತ್ತೇಜನ ದೊರೆಯಿತ್ತೆಂದು ಖಚಿತವಾಗಿ ಹೇಳಬಹುದು. ಚೋಳರ ಕಾಲದಲ್ಲಿ ಮಂಡ್ಯ, ಮೈಸೂರು, ತುಮಕೂರು, ಕೋಲಾರ ಇತ್ಯಾದಿ ಜಿಲ್ಲೆಗಳಲ್ಲಿ ಚತುರ್ವೇದಿ ಮಂಗಲಗಳು ರಚನೆಯಾಗಿ ತಮಿಳು ಬ್ರಾಹ್ಮಣ ಸಮುದಾಯ ಈ ಪ್ರದೇಶದಲ್ಲಿ ಬಂದು ನೆಲಸಿತ್ತಲ್ಲದ, ಶ್ರೀ ವೈಷ್ಣವ ಪಂಥದ ಹಲವಾರು ಮನೆತನಗಳು ಈ ಪ್ರದೇಶದಲ್ಲಿ ನೆಲೆಸಿ ಸಂಸ್ಕೃತಿ ಸಾಹಿತ್ಯದ ವೇದಾಧ್ಯಯನವನ್ನು ಮುಂದುವರಿಸಿಕೊಂಡು ಹೋದುದ್ದನ್ನು ಕಾಣಬಹುದಾಗಿದೆ.[29] ಹಾಗಾಗಿ ಚೋಳರು ಹಾಕಿಕೊಟ್ಟ ಆರ್ಥಿಕಾಭಿವೃದ್ಧಿಯ ಕಾರ್ಯಗಳನ್ನು ಹೊಯ್ಸಳರು[30] ಆನಂತರ ವಿಜಯನಗರದ ಅರಸರುಗಳು[31] ಮುಂದುವರಿಸಿ ಕೊಂಡು ಬಂದವರೆಂದು ಶಾಸನಾಧಾರಗಳು ಖಚಿತಪಡಿಸುತ್ತವೆ.

## ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಕರ್ನಾಟಕದ ಕೆರೆ ನೀರಾವರಿಯ ಬಗೆಗೆ ಈವರೆಗೆ ಸಮಗ್ರವಾದ ಮತ್ತು ತಳಸ್ಪರ್ಶಿಯಾದ ಅಧ್ಯಯನ ರೂಪುಗೊಂಡಿಲ್ಲವೆಂಬುದು ಗಮನಾರ್ಹ. ಕರ್ನಾಟಕದ ಕೆರೆಗಳ ಬಗೆಗೆ ಪ್ರಕಟವಾಗಿರುವ ಕೃತಿಗಳಲ್ಲಿ 'ಜಿ.ಎಸ್.ದೀಕ್ಷಿತ್'ರವರು 1993ರಲ್ಲಿ ಪ್ರಕಟವಾದ ಟ್ಯಾಂಕ್ ಇರಿಗೇಷನ್ ಇನ್ ಕರ್ನಾಟಕ ಏ ಹಿಸ್ಟಾರಿಕಲ್ ಸರ್ವೆ ಎಂಬ ಗ್ರಂಥ ಪ್ರಥಮ ಪ್ರಯತ್ನವೆಂದು ಹೇಳಬಹುದು.[32] ಈ ಗ್ರಂಥವನ್ನು ಆಂಗ್ಲ ಭಾಷೆಯಲ್ಲಿ 'ಜಿ.ಎಸ್.ದೀಕ್ಷಿತ್', 'ಜಿ.ಆರ್.ಕುಪ್ಪೇಸ್ವಾಮಿ' ಮತ್ತು 'ಎಸ್.ಕೆ. ಮೋಹನ್' ಕಲೆ ಹಾಕಿ ರಚಿಸಿದ ಈ ಕೃತಿಯನ್ನು ಆನಂತರದ ದಿನಗಳಲ್ಲಿ ಕನ್ನಡ ವಿಶ್ವವಿದ್ಯಾನಿಲಯ ಹಂಪಿಯು ಕನ್ನಡಕ್ಕೆ ಭಾಷಾಂತರಿಸಿ 2000ರಲ್ಲಿ ಪ್ರಕಟಿಸಿತು.[33] ಇದಾದ ನಂತರ ಹಂಪಿ ವಿಶ್ವವಿದ್ಯಾನಿಲಯದಿಂದ ಲೇಖನಗಳ ಸಂಗ್ರಹ ಕೃತಿಯಾಗಿ ರಾಜರಾಮಹೆಗ್ಗಡೆಯವರ[34] ಸಂಪಾದಕತ್ವದಲ್ಲಿ 2002ರಲ್ಲಿ ಪ್ರಕಟಿಸಿದ್ದಾರೆ. ಇದೇ ವಿಶ್ವವಿದ್ಯಾನಿಲಯದಿಂದ ಹೊರತಂದಿರುವ ಹಂಪಿ ಪರಿಸರದ ಕೆರೆಗಳು ಕೃತಿ ಕ್ರಿ.ಶ. 2001ರಲ್ಲಿ ಪ್ರಕಟಗೊಂಡಿದೆ ಅದನ್ನು ಡಾ.ಸಿ.ಎಸ್.ವಾಸದೇವನ್ ರಚಿಸಿದ್ದಾರೆ.[35] ಈ ಕೃತಿಯನ್ನು ಹಂಪಿಯ ಕನ್ನಡ ವಿಶ್ವವಿದ್ಯಾನಿಲಯ ಪ್ರಕಟಿಸಿದೆ.

ಡಾ.ಸಿ.ಟಿ.ಎಂ.ಕೊಟ್ರಯ್ಯರವರ ಆಂಗ್ಲಭಾಷೆಯಲ್ಲಿ Irrigation System and Vijayanagara Empire ಎಂಬ ಕೃತಿಯನ್ನು ರಾಜ್ಯ ಪುರಾತತ್ವ ಇಲಾಖೆ ವತಿಯಿಂದ ಪ್ರಕಟಿಸಿದ್ದಾರೆ.[36] ಈ ಗ್ರಂಥಗಳಲ್ಲದೆ ಹಲವಾರು ಪ್ರೌಢ ಪ್ರಬಂಧಗಳನ್ನು ಬೇರೆ ಬೇರೆ ವಿಶ್ವವಿದ್ಯಾನಿಲಯದಲ್ಲಿ ಸಲ್ಲಿಸಲ್ಪಟ್ಟಿದೆ. ಆದರೆ ಅವುಗಳಲ್ಲಿ ಕೂಡ ಬಹುತೇಕವಾದವು ಇನ್ನೂ ಪ್ರಕಟಗೊಂಡಿಲ್ಲ. ಈ ದಿಸೆಯಲ್ಲಿ ಹೆಸರಿಸಬಹುದಾದ ಒಂದೆರಡು ಬೃಹತ್ ಕೃತಿಗಳೆಂದರೆ ಕೆ.ಸಿ.ವಿಜಯಲಕ್ಷ್ಮಿರವರು ರಚಿಸಿದ Irrigation in princely Mysore 1881 to 1947 unpublished thesis. ¨AU¼ÆgÀ «±«zÁ¤®AiÀ, ¨AU¼ÆgÀ.

ಡಾ.ಟಿ.ವಿ. ನಾಗರಾಜುರವರು[37] ತಮ್ಮ ಪ್ರೌಢಪ್ರಬಂಧವನ್ನು ಸೀಮೀತ ಭೌಗೋಳಿಕ ಪ್ರದೇಶಕ್ಕೆ ಸೀಮಿತಕಾಲ ಘಟ್ಟದಲ್ಲಿ ಕಾರ್ಯನಿರ್ವಹಿಸಿದ್ದಾರೆ. ವಿಜಯಲಕ್ಷ್ಮಿರವರ ಕೃತಿಯು, ಮೈಸೂರು ಸಂಸ್ಥಾನದ ಆಡಳಿತದ ಪುನರ್ ಸಂಸ್ಥಾಪನೆಯ ನಂತರದ ದಿನಗಳ ಕೆರೆಕಟ್ಟೆಗಳು ಮತ್ತು ನೀರಾವರಿ ಸೌಕರ್ಯಗಳ ಬೆಳವಣಿಗೆ ಮತ್ತು ಸ್ಥಿತಿಗತಿಗಳನ್ನು ಅರಿಯುವ ಪ್ರಯತ್ನವಾಗಿದೆ. ಟಿ.ವಿ.ನಾಗರಾಜ್‌ರವರು ಮೈಸೂರು ಸಂಸ್ಥಾನದಲ್ಲಿ ನೀರಾವರಿ ಎಂಬ ಶೀರ್ಷಿಕೆ ನೀಡಿದ್ದರೂ ಇಡಿ ಅಧ್ಯಯನವು ಕೋಲಾರ ಜಿಲ್ಲೆಗೆ ಮಾತ್ರ ಸೀಮಿತವಾಗಿದ್ದು ಕ್ರಿ.ಶ.1800 ರಿಂದ ಪ್ರಾರಂಭವಾಗಿ 1956ರವರೆಗೆ ಜಿಲ್ಲೆಯ ಕೆರೆಗಳ ಮತ್ತು ಇತರೆ ಮೂಲದ ನೀರಾವರಿ ಸೌಕರ್ಯಗಳನ್ನು ಕುರಿತು ಚರ್ಚಿಸುತ್ತದೆ. ಈ ಎಲ್ಲಾ ಕೃತಿಗಳಲ್ಲದೆ ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆಯು ಪ್ರಕಟಿಸುತ್ತಿರುವ ವಿಜಯನಗರ ಅಧ್ಯಯನ ಮಾಲಿಕೆಯ ಸಂಪುಟಗಳಲ್ಲಿ ಮತ್ತು ಕರ್ನಾಟಕದ ಜಿಲ್ಲೆಗಳ ಇತಿಹಾಸ ಮತ್ತು ಪುರಾತತ್ವ ಗ್ರಂಥಗಳ ಮಾಲಿಕೆಯಲ್ಲಿ ಕೆಲ ವಿದ್ವಾಂಸರಾದ ಟಿ.ವಿ.ನಾಗರಾಜು,[38] ಹರಿಹರ ಶ್ರೀನಿವಾಸರಾವ್,[39] ಪಿ.ವಿ.ಕೃಷ್ಣಮೂರ್ತಿ[40] ಮುಂತಾದವರು ಜಿಲ್ಲೆಗಳ ನೀರಾವರಿ ವ್ಯವಸ್ಥೆಗಳ ಬಗೆಗೆ ಲೇಖನಗಳನ್ನು ರಚಿಸಿದ್ದಾರೆ. ಇದಲ್ಲದೆ ಹರಿಹರ ಶ್ರೀನಿವಾಸರಾವ್ ಕನ್ನಡ ಸಾಹಿತ್ಯ ಪರಿಷತ್ತು ಆಶ್ರಯದಲ್ಲಿ ಕ್ರಿ.ಶ.2010ರಲ್ಲಿ ಚಾವುಂಡರಾಯನ ಲೋಕೋಪಕಾರ ಕೃತಿಯಲ್ಲಿ ಕಂಡುಬರುವ ಜಲ, ವಿಜ್ಞಾನದ ಹರವನ್ನು ವಿಷದವಾಗಿ ಅಧ್ಯಯನ ಮಾಡಿ ಪ್ರಕಟಿಸಿರುತ್ತಾರೆ.[41]

ಈ ಕೃತಿಗಳಲ್ಲಿ ನೀರಾವರಿಗೆ ಸಂಬಂಧಪಟ್ಟ ಎಲ್ಲಾ ವಿವರಗಳು ಸ್ಥೂಲವಾಗಿ ಅಭಿವ್ಯಕ್ತಗೊಂಡಿದೆಯೇ ಹೊರತು ಸಮಗ್ರವಾಗಿ ಕೆರೆಗಳ ಸಮಗ್ರ ಇತಿಹಾಸವನ್ನು ನಮ್ಮ ಮುಂದೆ ನೀಡುವುದಿಲ್ಲ. ಈ ವಿಷಯದ ಸಂಶೋಧನೆ ಇನ್ನೂ ಗುಣಾತ್ಮಕವಾಗಿ ರೂಪುಗೊಂಡಿಲ್ಲವೆಂದು ಹೇಳಬಹುದು. ಯಾವುದೇ ಒಂದು ಪ್ರದೇಶದ ನೀರಾವರಿ ವ್ಯವಸ್ಥೆ ಆಡಳಿತ, ಸಾಂಸ್ಕೃತಿಕ ಪರಿಸರಗಳನ್ನು ಅವಲಂಬಿಸಿ ರೂಪುಗೊಳ್ಳುತ್ತದೆ ಎಂಬುದು ಇವರೆಗಿನ ಎಲ್ಲಾ ಅಧ್ಯಯನಕಾರರು ಮೊಟ್ಟಮೊದಲನೆಯ ಬಾರಿಗೆ ಕರ್ನಾಟಕದ ಅದರಲ್ಲೂ ದಕ್ಷಿಣ ಕರ್ನಾಟಕದ ಕೆರೆಗಳ ಸಮೀಕ್ಷೆಯ ಬಗೆಗೆ ಮಾಹಿತಿ ದೊರೆಯುವುದು ಕರ್ನಲ್

ಮೆಕೆಂಜಿಯ ಸಮೀಕ್ಷೆಯಿಂದ,[42] ಇದಾದ ನಂತರ ಬ್ರಿಟಿಷ್ ಸರ್ಕಾರ ಮೈಸೂರು ಸಂಸ್ಥಾನದ ಸಂಪತ್ತು ಮತ್ತು ಆದಾಯವನ್ನು ಲೆಕ್ಕ ಹಾಕುವ ಸಲುವಾಗಿ ನಡೆದ ಸಮೀಕ್ಷೆಗಳ ಸಂಸ್ಥಾನದ ಕೆರೆಗಳ ಬಗೆಗೆ ಮತ್ತು ಇತರ ನೀರಾವರಿ ವ್ಯವಸ್ಥೆಯ ಬಗೆಗೆ ವಿವರಗಳು ದಾಖಲಾಗುತ್ತದೆ. ಮೆಕಂಜಿಯ 'ಮೆಮಾಯರ್ಸ್ ಆಫ್ ಮೈಸೂರು' ಕೃತಿಯಲ್ಲಿ ನಮೂದಿತವಾಗಿರುವಂತೆ ದಕ್ಷಿಣ ಕರ್ನಾಟಕದ ಈ ಪ್ರದೇಶದಲ್ಲಿ 14,803 ಕೆರೆಗಳ ಮತ್ತು 8,862 ಕುಂಟೆಗಳು ಇದ್ದವೆಂದು ಹಾಗೂ ಕೋಲಾರ ಜಿಲ್ಲೆಯೊಂದರಲ್ಲಿ 5,024 ಕೆರೆಗಳು 1,499 ಕುಂಟೆಗಳಿದ್ದವೆಂದು ದಾಖಲಾಗಿದೆ.[43] ಇದಕ್ಕೆ ಪೂರ್ವದ ಯಾವ ಸಮೀಕ್ಷೆಗಳು ಲಭ್ಯವಿಲ್ಲ. ಇದಾದ ನಂತರ ಕ್ರಿ.ಶ.1864ರಲ್ಲಿ ಮೈಸೂರು ಸಂಸ್ಥಾನದ ನೀರಾವರಿ ವ್ಯವಸ್ಥೆಯ ಬಗೆಗಿನ ವ್ಯವಸ್ಥೆಯು ಬ್ರಿಟಿಷ್ ದಾಖಲೆಯಲ್ಲಿ ಕಾಣಬಹುದು. ಈ ದಾಖಲೆಯನ್ನು ರಚಿಸಿ ಸರ್ಕಾರಕ್ಕೆ ಸಲ್ಲಿಸಿದ ವ್ಯಕ್ತಿ ಸಂಸ್ಥಾನ ಮುಖ್ಯ ಇಂಜಿನಿಯರ್ ಆಗಿದ್ದ ಕರ್ನಲ್ ಗ್ರೀಮ್ ಈತನ ಸರ್ವೇಕ್ಷಣೆಯಂತೆ ಮೈಸೂರು ಸಂಸ್ಥಾನದಲ್ಲಿ 20 ಸಾವಿರಕ್ಕೂ ಹೆಚ್ಚು ಕೆರೆಗಳಿದ್ದವೆಂದು ದಾಖಲಿಸಿದ್ದಾನೆ.[44]

1853-54 ರ ಅವಧಿಯಲ್ಲಿ ಸ್ಯಾಂಕೆಯು ಸಿದ್ದಪಡಿಸಿದ ವರದಿಯಲ್ಲಿ ಸಂಸ್ಥಾನವು 4,106 ದೊಡ್ಡ ಪ್ರಮಾಣದ ಕೆರೆಗಳು 13,737 ಸಣ್ಣ ಪ್ರಮಾಣದ ಕೆರೆಗಳು ಹಾಗೂ 1,609 ಪಾಳುಬಿದ್ದ ಕೆರೆಗಳಿದ್ದವೆಂದು ಉಲ್ಲೇಖಿಸುತ್ತಾನೆ.[45] 1871ರಲ್ಲಿ ಸಂಸ್ಥಾನದ ನೀರಾವರಿಯ ಇಂಜಿನಿಯರ್‌ರಾಗಿದ್ದ ಮೇಜರ್ ಜಾನ್ಸನ್ ವರದಿಯಲ್ಲಿ ಮೈಸೂರು ಸಂಸ್ಥಾನದಲ್ಲಿ 36,266 ಕೆರೆಗಳಿದ್ದವೆಂದು ಅವುಗಳಲ್ಲಿ 9,865 ಕೆರೆಗಳು ದುಸ್ಥಿತಿಯಲ್ಲಿದ್ದು ಆದಾಯವನ್ನು ತರುತ್ತಿಲ್ಲವೆಂದು ಉಳಿದ 24,401 ಕೆರೆಗಳು ಸುಸ್ಥಿತಿಯಲ್ಲಿದ್ದು ಉತ್ತಮ ಆದಾಯವನ್ನು ತರುತ್ತಿದ್ದವೆಂದು ದಾಖಲಿಸುತ್ತಾನೆ.[46] ಬಿ.ಎಲ್.ರೈಸ್ ಪ್ರಕಟಿಸಿದ 1897ರ ಮೈಸೂರು ಗೆಜೆಟಿಯರ್‌ನಲ್ಲಿ 38,080 ಕೆರೆಗಳು ಕರ್ನಾಟಕದಲ್ಲಿದ್ದವೆಂದು ದಾಖಲಿಸುತ್ತಾರೆ.[47] ಇನ್ನೊಂದು ಅಂಕಿ ಅಂಶದ ಪ್ರಕಾರ ಸರಾಸರಿ 3 ಚದುರ ಮೈಲಿ ಪ್ರದೇಶಕ್ಕೆ ಒಂದು ಕೆರೆ ದಕ್ಷಿಣ ಕರ್ನಾಟಕದಲ್ಲಿ ಕಂಡುಬರುತ್ತಿತ್ತೆಂದು ತಿಳಿದುಬರುತ್ತದೆ.[48]

ಎರಡನೆಯ ಸಂಪುಟದಲ್ಲಿ ಬಿ.ಎಲ್.ರೈಸ್‌ರವರು[49] ದಕ್ಷಿಣ ಕರ್ನಾಟಕದ ಅದರಲ್ಲೂ ಮೈಸೂರು ಸಂಸ್ಥಾನವು ಹೊಂದಿದ್ದ ಜಿಲ್ಲೆಗಳು ಕೆರೆಗಳ ಬಗೆಗೆ ಸಾಕಷ್ಟು ವಿವರಗಳನ್ನು ಅಲ್ಲಲ್ಲಿ ಒದಗಿಸುತ್ತಾರೆ. ಈ ಅಂಕಿ ಅಂಶಗಳನ್ನು ಕ್ರೂಢಿಕರಿಸಿದಾಗ ಮೊದಲ ಸಂಪುಟದಲ್ಲಿ ತಿಳಿಸಿದ ಅಂಕಿ ಅಂಶಕ್ಕೆ ಎರಡನೇ ಸಂಪುಟದ ಜಿಲ್ಲಾವಾರು ಅಂಕಿ–ಅಂಶಗಳ ವ್ಯತ್ಯಾಸವು ಕಂಡುಬರುತ್ತದೆ.

ಬೆಂಗಳೂರು ಜಿಲ್ಲೆಯಲ್ಲಿ 1,324 ಕೆರೆಗಳಿದ್ದು ಅವುಗಳಲ್ಲಿ 400 ಕೆರೆಗಳು ಇನಾಂ ಕೆರೆಗಳಾಗಿದ್ದವೆಂದು ದಾಖಲಿಸುತ್ತಾರೆ. ಕೋಲಾರ ಜಿಲ್ಲೆಯಲ್ಲಿ 5,797 ಕೆರೆಗಳಿದ್ದವೆಂದು ತಿಳಿಸುತ್ತಾರೆ. ತುಮಕೂರು ಜಿಲ್ಲೆಯಲ್ಲಿ ಒಟ್ಟು 2,254 ಕೆರೆಗಳ, ಅವುಗಳಲ್ಲಿ 605 ಕೆರೆಗಳು ದೊಡ್ಡ ಪ್ರಮಾಣದ ಕೆರೆಗಳಾಗಿದ್ದವೆಂದು ವಿವರಿಸುತ್ತಾರೆ. ಹಾಸನ ಮತ್ತು ಮೈಸೂರು ಜಿಲ್ಲೆಯ ನೀರಾವರಿ ಚಿತ್ರಣವನ್ನು ನೀಡುವಾಗ ಇಲ್ಲಿನ ಪ್ರಾಚೀನ ಅಣೆಕಟ್ಟೆಗಳ ಬಗೆಗೆ ಮಾತ್ರ ವಿವರಿಸಿ ಪ್ರಾಚೀನ ಕೆರೆಗಳ ವಿವರಣೆಗಳನ್ನು ಕೈಬಿಟ್ಟಿದ್ದಾರೆ. ಕಡೂರು ಜಿಲ್ಲೆಯ ವಿಷಯದಲ್ಲಿಯೂ ಪುನಾರಾವರ್ತಿಸಿದ್ದಾರೆ.

ಶಿವಮೊಗ್ಗ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಕ್ರಮವಾಗಿ 8,611 ಮತ್ತು 872 ಕೆರೆಗಳಿದ್ದವೆಂದು ದಾಖಲಿಸಿದ್ದಾರೆ. ಈ ಅಂಕಿ ಅಂಶಗಳನ್ನು ಗಮನಿಸಿದಾಗ ಕೇವಲ 18,058 ಕೆರೆಗಳಿದ್ದವೆಂದು ತಿಳಿದು ಬರುತ್ತದೆ. ಆದರೂ 3 ಜಿಲ್ಲೆಗಳಲ್ಲಿ ಇದ್ದ ಕೆರೆಗಳ ಸಂಖ್ಯೆಯನ್ನು ನಮೂದಿಸಿದ ಕಾರಣ ಪ್ರಾಯಶಃ ಆ ಜಿಲ್ಲೆಗಳ ಉಳಿದ 20 ಸಾವಿರ ಕೆರೆಗಳನ್ನು ಹೊಂದಿದ್ದವೆಂದು ಭಾವಿಸಬೇಕಾಗುತ್ತದೆ.

ಹಯವದನರಾವ್‌ರವರು 1930ರಲ್ಲಿ[50] ಪ್ರಕಟಿಸಿದ ಮೈಸೂರು ಗೆಜೆಟಿಯರ್‌ನ 5ನೇ ಸಂಪುಟದಲ್ಲಿ ಜಿಲ್ಲಾವಾರು ಅಂಕಿ ಅಂಶಗಳ ವಿವರಣೆಯನ್ನು ನೀಡಿರುತ್ತಾರೆ. ಅವರು ನೀಡಿರುವ ಕೆರೆಗಳ ಅಂಕಿ ಅಂಶಗಳು ಕೆಳಗಿನಂತಿವೆ.[51]

| ಕ್ರ.ಸಂ | ಜಿಲ್ಲೆ | ದೊಡ್ಡಕೆರೆ | ಸಣ್ಣಕೆರೆ | ಒಟ್ಟು ಕೆರೆಗಳು |
|---|---|---|---|---|
| 01 | ಬೆಂಗಳೂರು | 284 | 858 | 1142 |

| | | | | |
|---|---|---|---|---|
| 02 | ಕೋಲಾರ | 568 | 3376 | 3944 |
| 03 | ತುಮಕೂರು | 404 | 1024 | 1428 |
| 04 | ಮೈಸೂರು | 191 | 1274 | 1465 |
| 05 | ಹಾಸನ | 240 | 5295 | 5535 |
| 06 | ಕಡೂರು | 126 | 2663 | 2789 |
| 07 | ಶಿವಮೊಗ್ಗ | 566 | 7231 | 7797 |
| 08 | ಚಿತ್ರದುರ್ಗ | 169 | 180 | 349 |
| 09 | ಒಟ್ಟು | 2548 | 21901 | 24449 |

ದಕ್ಷಿಣ ಕರ್ನಾಟಕದ ಇಂದಿನ ವಸ್ತು ಸ್ಥಿತಿಯನ್ನು ಕರ್ನಾಟಕದ ಗೆಜಿಟಿಯರ್ ಇಲಾಖೆಯು ಪ್ರಕಟಿಸಿರುವ ಕರ್ನಾಟಕ ಹ್ಯಾಂಡ್‌ಬುಕ್‌ನಲ್ಲಿ ಅಂಕಿ ಅಂಶಗಳು ಈ ಕೆಳಗಿನಂತಿವೆ.




ಭೂಪಟ–1, ಕರ್ನಾಟಕದ ಆಡಳಿತಾತ್ಮಕ ವಿಭಾಗಗಳ ಭೂಪಟ




ಭೂಪಟ–2, ಪ್ರಸ್ತುತ ಅಧ್ಯಯನದ ಭೌಗೋಳಿಕ ವ್ಯಾಪ್ತಿ

ಆದರೆ ಈ ಯಾವ ಅಂಕಿ ಅಂಶಗಳು ಪ್ರಾಚೀನ ಕಾಲದ ಕೆರೆಗಳ ಬಗ್ಗೆ ಸಮಗ್ರವಾದ ಮಾಹಿತಿಯನ್ನು ನೀಡುವುದಿಲ್ಲ ಈ ಎಲ್ಲಾ ಜಿಲ್ಲೆಗಳಲ್ಲಿ ಪ್ರಕಟವಾಗಿರುವ ಶಾಸನ ಸಂಪತ್ತನ್ನು ಹುಡುಕಿದಾಗಲು ಸಹ ಸಾಕಷ್ಟು ಸಂಖ್ಯೆಯಲ್ಲಿ ಶಾಸನಗಳು ಕೆರೆಯ ನಿರ್ಮಾತೃವನ್ನು ಉಲ್ಲೇಖಿಸುವುದಿಲ್ಲ. ಬದಲಾಗಿ ದಾನಕೊಡುವ ಸಂದರ್ಭದಲ್ಲಿ ಎಲ್ಲೆಗಳನ್ನು ಗುರುತಿಸುವ ಹಂತದಲ್ಲಿ ಅಥವಾ ದಾನದ ಪ್ರತಿಗ್ರಹಿಯು ಪಡೆದ ಭೂಮಿಯ ಎಲ್ಲೆಗಳನ್ನು ಗುರುತಿಸುವಾಗ ಕೆರೆಗಳ ಉಲ್ಲೇಖವನ್ನು ಕಾಣುತ್ತೇವೆ.

ಪ್ರಾಚೀನ ಕಾಲದಲ್ಲಿ ಅಗ್ರಹಾರಗಳ ನಿರ್ಮಾಣದ ಉದ್ದೇಶಗಳಂತೆ ಕೆರೆಯ ನಿರ್ಮಾಣದ ಉದ್ದೇಶಗಳು ಅವಲಂಬಿತವಾಗಿದ್ದವೆಂದು ಹೇಳಬಹುದು. ಕೆರೆಗಳ ನಿರ್ಮಾಣ ಅತ್ಯಂತ ಪ್ರಾಚೀನವಾದ ತಂತ್ರಗಾರಿಕೆ ಅಲ್ಲವಾದರು ಈ ನಿರ್ಮಾಣವನ್ನು ವ್ಯವಸಾಯ ಕಸುಬನ್ನು ಮೂಲ ವೃತ್ತಿಯನ್ನಾಗಿ ಹೊಂದಿದ್ದ ಬೃಹತ್ ಶಿಲಾಯುಗದ ಜನರು ಪ್ರಾರಂಭಿಸಿದರೆಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿಲ್ಲ. ಮಾನವ ಸಂಸ್ಕೃತಿಯ ಪ್ರಮುಖ ಹಂತದ ಬದಲಾವಣೆಗಳು ಕಂಡು ಬಂದದ್ದು ನೂತನ ಶಿಲಾಯುಗ ಕಾಲದಲ್ಲಿ ನೈಸರ್ಗಿಕವಾದ ಗುಹೆಗಳು ಕಲ್ಲಾಶ್ರಯಗಳು ಇತ್ಯಾದಿ ಪ್ರದೇಶಗಳಲ್ಲಿ. ಅವು ನೈಸರ್ಗಿಕ ವಿಕೋಪಗಳಿಂದ ರಕ್ಷಣೆ ಪಡೆದು ಆಹಾರವನ್ನು ಅರಸುತ್ತಾ ಆಹಾರ ಹುಡುಕಾಟವನ್ನೇ ಪ್ರಧಾನ ವೃತ್ತಿಯನ್ನಾಗಿ ಹೊಂದಿದ್ದ ಆದಿ ಶಿಲಾಯುಗದ ಮಾನವನು ಸುಧಾರಣೆಗೊಂಡು ಒಂದೆಡೆ ನಿಂತು ತನ್ನ ಜೀವನವನ್ನು ರೂಪಿಸಿಕೊಳ್ಳಲು ದಾಪುಗಾಲಿಟ್ಟಿದ್ದು ನೂತನ ಶಿಲಾಯುಗದಲ್ಲಿ ಪ್ರಾಣಿಗಳನ್ನು ಪಳಗಿಸಿ ಅವುಗಳನ್ನು ತನ್ನ ಉಪಯೋಗಕ್ಕೆ ಬಳಸಿಕೊಳ್ಳುವುದಲ್ಲದೆ ಮಡಿಕೆ ಮಾಡುವುದನ್ನು ಮತ್ತು ಅವುಗಳನ್ನು ತನ್ನ ವಿವಿಧ ಉಪಯೋಗಗಳಿಗೆ ಬಳಸಿಕೊಳ್ಳುವುದರೊಂದಿಗೆ ಬಿತ್ತನೆಯನ್ನು ಕಲಿತುಕೊಂಡನು. ನೂತನ ಶಿಲಾಯುಗದ ನೆಲೆಗಳು ಸಾಮಾನ್ಯವಾಗಿ ನಿರಂತರವಾಗಿ ನೀರಿನ ಸೌಲಭ್ಯವನ್ನು ಹೊಂದಿದ್ದ ಪ್ರದೇಶಗಳಲ್ಲಿದ್ದುದು ಗಮನಾರ್ಹ. ಆದರೆ ಬೃಹತ್ ಶಿಲಾಯುಗದ ನೆಲೆಗಳು ನೂತನ ಶಿಲಾಯುಗದ ನೆಲೆಗಳಿಗೆ ಹೋಲಿಸಿದಾಗ ನಿರಂತರ ನೀರಿನಾಸರೆಯಿಂದ ದೂರವಿರುವ ಪ್ರದೇಶಗಳಲ್ಲಿ ಕಂಡು ಬಂದಿರುವುದಲ್ಲದೆ ಮಳೆಗಾಲದಲ್ಲಿ ನೀರನ್ನು ಶೇಖರಿಸಿ ಅದನ್ನು ತನಗೆ

ಅವಶ್ಯಕತೆ ಇದ್ದಾಗ ಮತ್ತೆ ಬಳಸಿಕೊಳ್ಳುವ ತಂತ್ರಗಾರಿಕೆಯನ್ನು ಅಭಿವೃದ್ಧಿ ಪಡಿಸಿಕೊಂಡಿದ್ದನೆಂಬುದು ಬೃಹತ್ ಶಿಲಾಯುಗದ ಸಂಸ್ಕೃತಿಗಳ ಬಗ್ಗೆ ಅಧ್ಯಯನ ಮಾಡಿರುವ ವಿದ್ವಾಂಸರುಗಳ ಏಕಾಭಿಪ್ರಾಯವಾಗಿದೆ.

ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು ಅಂದರೆ ಗೋರಿಯ ನೆಲೆಗಳ ಅಂದರೆ ವ್ಯವಸಾಯಕ್ಕೆ ಹೆಚ್ಚು ಸೂಕ್ತವಲ್ಲದ ಬೆಟ್ಟದ ತಪ್ಪಲುಗಳಲ್ಲಿ ಸಾಮಾನ್ಯವಾಗಿ ಕಂಡುಬಂದಿದ್ದು ಈ ನೆಲೆಗಳ ಸಮೀಪದಲ್ಲಿ ಮೈದಾನ ಪ್ರದೇಶದಲ್ಲಿ ಜನವಸತಿಗೆ ಸಮೀಪದಲ್ಲಿ ವಸತಿ ಪ್ರದೇಶವಿತ್ತೆಂದು ದಾಖಲಿಸುತ್ತಾ ಈ ಎಲ್ಲಾ ಕಲ್ಲು ಗೋರಿಗಳ ನೆಲೆಗಳಲ್ಲಿ ನೀರನ್ನು ಹಿಡಿದಿಡುವ ಕೆರೆಯ ಮಾದರಿಯ ರಚನೆಗಳಿದ್ದವೆಂದು ತಿಳಿದುಬರುತ್ತವೆ.[52] ಈ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ದಕ್ಷಿಣ ಕರ್ನಾಟಕ ಜಿಲ್ಲೆಗಳಲ್ಲಿ ಕಂಡು ಬಂದಿರುವ ಈವರೆಗೆ ಪ್ರಕಟವಾಗಿರುವ ನೆಲೆಗಳನ್ನು ಆಧರಿಸಿ ಆ ಕಾಲದ ಒಟ್ಟು ನೆಲೆಗಳ ಅಂದಾಜನ್ನು ಈ ಕೆಳಗಿನಂತೆ ಪಟ್ಟಿಮಾಡಬಹುದು.[53]

| ಕೋಲಾರ | 196 |
|---|---|
| ಕೊಡಗು | 16 |
| ಚಾಮರಾಜನಗರ | 78 |
| ಚಿಕ್ಕಮಗಳೂರು | 09 |
| ಚಿತ್ರದುರ್ಗ | 29 |
| ತುಮಕೂರು | 65 |
| ದಕ್ಷಿಣ ಕನ್ನಡ | 07 |
| ಬೆಂಗಳೂರು ನಗರ | 15 |
| ಬೆಂಗಳೂರು ಗ್ರಾಮಾಂತರ | 59 |
| ಮಂಡ್ಯ | 08 |
| ಮೈಸೂರು | 41 |
| ಒಟ್ಟು | **523** |

ಈ ಮೇಲಿನ ಪಟ್ಟಿಯ ಅಂಕಿ ಅಂಶದಂತೆ ಬೃಹತ್ ಶಿಲಾಯುಗದ ಅಂತ್ಯಕಾಲಕ್ಕೆ ಮತ್ತು ಇತಿಹಾಸ ಕಾಲದ ಪ್ರಾರಂಭ ಘಟ್ಟದಲ್ಲಿ 523ಕ್ಕೂ ಹೆಚ್ಚು ಜನವಸತಿ

ಕೇಂದ್ರಗಳಾದ್ದವೆಂದು, ಈ ಜನವಸತಿ ಕೇಂದ್ರಗಳಲ್ಲಿ ನೀರನ್ನು ತಡೆದುಹಿಡಿದಿರುವ ಕೆರೆಯ ಮಾದರಿಯ ವ್ಯವಸ್ಥೆ ಚಾಲ್ತಿಯಲ್ಲಿತ್ತೆಂದು ಒಪ್ಪಿಕೊಂಡರು. ಇಂದು ನಮ್ಮ ಗಮನಕ್ಕೆ ಬಾರದ ಎಷ್ಟೋ ಬೃಹತ್ ಶಿಲಾಯುಗದ ನೆಲೆಗಳು ಅಲ್ಲಲ್ಲಿ ಬೆಳಕಿಗೆ ಬರುತ್ತಿದೆ. ಹಾಗಾಗಿ ಈ ಮೇಲಿನ ಸಂಖ್ಯೆಯನ್ನು ಖಚಿತವಾಗಿ ಒಪ್ಪಿಕೊಳ್ಳಲು ಸಾಧ್ಯವಿಲ್ಲದಿದ್ದರೂ ಅಂದಾಜಿಸಲು, ಕೆರೆಯ ನೀರಾವರಿಯ ಬಗೆಯ ಸ್ಥಿತಿಗತಿಗಳನ್ನು ಅರ್ಥೈಸಿಕೊಳ್ಳಲು ಬಳಸಿಕೊಳ್ಳಲು ತೊಂದರೆ ಇಲ್ಲ. ಬೃಹತ್ ಶಿಲಾಯುಗದ ಕಾಲದಲ್ಲಿ ನಿತ್ಯ ಜೀವನದಲ್ಲಿ ಅವರು ಬಳಸುತ್ತಿದ್ದ ದವಸ ದಾನ್ಯಗಳನ್ನು ಅಧ್ಯಯನ ಮಾಡಿ ಅವುಗಳನ್ನು ಬೆಳೆಯಲು ಬೇಕಾದ ತಂತ್ರಗಾರಿಕೆ ಮತ್ತು ವ್ಯವಸ್ಥೆಗಳನ್ನು ಗಮನದಲ್ಲಿಟ್ಟುಕೊಂಡು ಬೃಹತ್ ಶಿಲಾಯುಗದ ಕೆರೆಯ ನೀರಾವರಿ ಮತ್ತು ನಿರ್ಮಾಣದ ತಂತ್ರಜ್ಞಾನ ಸಾಕಷ್ಟು ಮುಂದುವರಿದಿತ್ತೆಂದು ತಿಳಿದು ಬರುತ್ತದೆ.

ಇದಾದ ನಂತರ ಯಾವ ಐತಿಹಾಸಿಕ ಕಾಲಘಟ್ಟದ ಕೆರೆಗಳ ನಿರ್ಮಾಣದ ಬಗೆಗೆ ಖಚಿತವಾದ ಯಾವುದೇ ಅಧ್ಯಯನಗಳ ಮೂಲಕ ನಿರೂಪಿಸಲು ಈವರೆಗೆ ಸಾಧ್ಯವಾಗಿಲ್ಲ. ಕಾರಣ ಇತಿಹಾಸ ಅಧ್ಯಯನಗಳಿಂದ ದೊರೆಯುವ ಆಕರ ಗ್ರಂಥಗಳ ಶಾಸನಗಳಲ್ಲಿ ಈ ಬಗೆಯ ಹೆಚ್ಚಿನ ಉಲ್ಲೇಖಗಳು ಕಂಡುಬರುವುದಿಲ್ಲ. ಎಷ್ಟೋ ಕೆರೆಗಳ ನಿಮಾತೃಗಳು ಅಜ್ಞಾತವಾಗಿಯೇ ಉಳಿದು ಹೋಗಿದ್ದಾರೆ. ಇನ್ನೂ ವಸತಿ ಕ್ಷೇತ್ರ ಒಂದಕ್ಕೆ ಕೆರೆಗಳನ್ನು ಗುರುತಿಸುತ್ತವೆಂದರೂ ಅಲ್ಲು ಕೂಡ ಸಂದಿಗ್ಧತೆ ಉಂಟಾಗುತ್ತದೆ. ತೊಂಡನೂರು, ನಾಗಮಂಗಲ, ಬಸರೂರು ಮೈಸೂರು, ದೂರಸಮುದ್ರ ತುರುವೆ ಕೆರೆ ಕುಣಿಗಲ್ ಒಂದಕ್ಕಿಂತ ಹೆಚ್ಚು ಕೆರೆಗಳಿರುವುದು ಕಂಡುಬರುತ್ತದೆ.

ತೊಂಡನೂರಿನಲ್ಲಿಯೇ ಯಾದವ ಸಮುದ್ರದ ಹೊರ ಹರಿವನ್ನು ಆಧರಿಸಿ ನಾಲ್ಕು ಇತರ ಕೆರೆಗಳನ್ನು ಕಾಣುತ್ತೇವೆ. ಪ್ರಾಚೀನ ಮತ್ತು ಮಧ್ಯಯುಗೀನ ಕರ್ನಾಟಕದಲ್ಲಿ ಕೆರೆಯ ನೀರು ದೈವ ಕಾರ್ಯದಿಂದ ಹಿಡಿದು ವ್ಯವಸಾಯದವರೆಗೂ ಬಳಕೆಯಾಗುತ್ತಿದ್ದರಿಂದ ಬೇರೆ ಬೇರೆ ವರ್ಗದವರಿಗೆ ಬೇರೆ ಬೇರೆ ಕೆರೆಗಳಿದ್ದುದು ಉತ್ಪ್ರೇಕ್ಷೆ ಅಲ್ಲ. ಜನ ವರ್ಗಕ್ಕೆ ಮೀಸಲಾದ ಕೆರೆಗಳಿದ್ದವು. ಇದನ್ನು ಗಮನಿಸಿ ಹೇಳುವುದಾದರೆ ಕೆರೆಗಳ ಸಂಖ್ಯೆ ಕೇವಲ ಜನವಸತಿ ಪ್ರದೇಶಗಳನ್ನು ಆಧಾರಿಸಿ ನಿರ್ಧರಿಸುವುದಕ್ಕೆ ಬದಲಾಗಿ ಸ್ಥಳೀಯ ಕ್ಷೇತ್ರಕಾರ್ಯ ಮತ್ತು

ಸರ್ವೇಕ್ಷಣೆಯ ಆಧಾರದ ಮೇಲೆ ನಿರ್ಧರಿಸುವುದು ಸೂಕ್ತವೆನಿಸುತ್ತದೆ. ಆಧುನಿಕ ಕಾಲಘಟ್ಟದ ನಾಗರೀಕರಣದ ಪ್ರಕ್ರಿಯೆಯಿಂದಾಗಿ ಹಲವಾರು ಪ್ರಾಚೀನ ಕೆರೆಗಳು ನಗರಗಳ ಉದಾಹರಣೆಗೆ: ಬೆಂಗಳೂರು ನಗರ, ಇತ್ತೀಚಿನ ದಿನಗಳಲ್ಲಿ ಈ ಸಂಸ್ಕೃತಿ ಜಿಲ್ಲಾ ಕೇಂದ್ರ ಮತ್ತು ತಾಲ್ಲೂಕು ಮಟ್ಟದಲ್ಲಿಯು ಹಬ್ಬುತ್ತಿರುವುದರಿಂದ ಬಹುತೇಕ ಪ್ರಾಚೀನ ಕೆರೆಗಳು ಕಣ್ಮರೆಯಾಗಿವೆ. ಆದರೂ ಶಾಸನಗಳಲ್ಲಿ ಲಭ್ಯವಿರುವ ಮತ್ತು ಗ್ರಂಥಗಳಲ್ಲಿ ಪ್ರಕಟವಾಗಿರುವ ವಿವರಗಳನ್ನು ಆಧರಿಸಿ ದಕ್ಷಿಣ ಕರ್ನಾಟಕದ ಕೆರೆ ನೀರಾವರಿ ಐತಿಹಾಸಿಕ ಬೆಳವಣಿಗೆಯನ್ನು ಅಧ್ಯಯನ ಮಾಡುವ ಮಹತ್ವದ ಕಾರ್ಯಕ್ಕೆ ಪ್ರಯತ್ನಿಸಲಾಗಿದೆ.

ಈ ಹಿನ್ನೆಲೆಯಲ್ಲಿ ದಕ್ಷಿಣ ಕರ್ನಾಟಕ ಜಿಲ್ಲೆಗಳಲ್ಲಿ ಬೃಹತ್ ಶಿಲಾಯುಗದ ಕಾಲದಿಂದ ನಡೆದ ಕೆರೆ ನಿರ್ಮಾಣ, ನಿರ್ವಹಣೆಯ ಕುರಿತಾದ ಅಧ್ಯಯನವನ್ನು ಪ್ರಸ್ತುತ ಪ್ರೌಢಪ್ರಬಂಧದ ವ್ಯಾಪ್ತಿಯನ್ನಾಗಿ ಭೌಗೋಳಿಕ ಕ್ಷೇತ್ರಕ್ಕೆ ಮತ್ತು ಕಾಲಘಟ್ಟದ ಮಿತಿಯೊಂದಿಗೆ ಆಯ್ಕೆಮಾಡಿಕೊಳ್ಳಲಾಗಿದೆ.

## ಅಧ್ಯಯನದ ಉದ್ದೇಶಗಳು

ಪ್ರಸ್ತುತ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಮತ್ತು ಅದರ ವ್ಯಾಪ್ತಿಯಲ್ಲಿ ಈ ಕೆಳಕಂಡ ಉದ್ದೇಶಗಳನ್ನು ಹೊಂದಿ ಅಧ್ಯಯನವನ್ನು ಮುಂದುವರಿಸಲಾಗಿದೆ.

1. ದಕ್ಷಿಣ ಕರ್ನಾಟಕದಲ್ಲಿ ಬೃಹತ್ ಶಿಲಾಯುಗದ ಸಂಸ್ಕೃತಿಯ ಕಾಲದಲ್ಲಿ ಕೆರೆಗಳ ನಿರ್ಮಾಣ ಪ್ರಾರಂಭವಾಯಿತ್ತೆಂದು ಪ್ರಾಗಿತಿಹಾಸದ ವಿದ್ವಾಂಸರ ಏಕಾಭಿಪ್ರಾಯವಾಗಿರುವ ಹಿನ್ನೆಲೆಯಲ್ಲಿ ಆ ಕಾಲಘಟ್ಟದಲ್ಲಿ ದಕ್ಷಿಣ ಕರ್ನಾಟಕದ ಭೌಗೋಳಿಕ ವ್ಯಾಪ್ತಿಯಲ್ಲಿ ಉಂಟಾದ ಕೆರೆ ನಿರ್ಮಾಣಗಳ ಸಮೀಕ್ಷೆಯನ್ನು ಮಾಡುವುದು.

2. ಇತಿಹಾಸ ಆರಂಭಕಾಲವಾದ ಅಂದರೆ ದಕ್ಷಿಣ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಮೌರ್ಯ, ಶಾತವಾಹನರ ಕಾಲದಲ್ಲಿ ಮತ್ತು ಪ್ರಾರಂಭದ ರಾಜಮನೆತನಗಳಾದ

ಕದಂಬರು, ಗಂಗರ ಕಾಲದಲ್ಲಿ ಉಂಟಾದ ಕೆರೆ ನಿರ್ಮಾಣ ನಿರ್ವಹಣೆಯ ಬಗೆಗೆ ಶಾಸನಾಧಾರಿತ ಅಧ್ಯಯನವನ್ನು ಮಾಡುವುದು.

3. ಕದಂಬರು ಮತ್ತು ಗಂಗರು, ಬಾದಾಮಿ ಚಾಲುಕ್ಯರು ಅಧಿಕಾರಕ್ಕೆ ಬಂದನಂತರ ಅವರ ಆಶ್ರಿತರಾಗಿ ಮಾರ್ಪಟ್ಟ ಕಾರಣ ಅಧ್ಯಯನದ ವ್ಯಾಪ್ತಿಯಲ್ಲಿ ಬಾದಾಮಿ ಚಾಲುಕ್ಯರ ಕಾಲಘಟ್ಟದಲ್ಲಿ ನಿರ್ಮಾಣಗೊಂಡ ಕೆರೆಗಳನ್ನು ಅಧ್ಯಯನ ಮಾಡುವುದು ಮತ್ತು ಸಮೀಕ್ಷಿಸುವ ಉದ್ದೇಶವುಳ್ಳದಾಗಿದೆ.

4. ಬಾದಾಮಿ ಚಾಲುಕ್ಯರ ಅಂತ್ಯದ ನಂತರ ದಕ್ಷಿಣ ಕರ್ನಾಟಕವು ಗಂಗ ರಾಷ್ಟ್ರಕೂಟರ ಸಂಘರ್ಷಕ್ಕೆ ಬಲಿಯಾಯಿತು. ಈ ಕಾಲಘಟ್ಟದ ಆ ಪ್ರದೇಶದ ಅಭಿವೃದ್ಧಿ ಕುಂಠಿತವಾಯಿತು. ಆದರೂ ಈ ಕಾಲಘಟ್ಟದಲ್ಲಿ ನಡೆದ ಕೆರೆ ನೀರಾವರಿ ಬೆಳವಣಿಗೆಯನ್ನು ಗುರುತಿಸುವ ಉದ್ದೇಶವನ್ನು ಹೊಂದಿದೆ. ಜಿ.ಎಸ್ ದೀಕ್ಷಿತ್ ಮತ್ತು ಇತರರು ರಚಿಸಿರುವ ಗ್ರಂಥದಲ್ಲಿ ಕಲ್ಯಾಣದ ಚಾಲುಕ್ಯರ ಮತ್ತು ಹೊಯ್ಸಳರ ಕಾಲವನ್ನು ಕರ್ನಾಟಕದ ಕೆರೆಗಳ ಸುವರ್ಣಯುಗವೆಂದು ದಾಖಲಿಸಿರುತ್ತದೆ. ಈ ಕಾಲಘಟ್ಟದಲ್ಲಿ ಇಡೀ ದಕ್ಷಿಣ ಕರ್ನಾಟಕದ ಯಾವುದೇ ವಿಪ್ಲವಗಳಿಲ್ಲದೆ ಶಾಂತಿ ಮತ್ತು ಸಂವೃದ್ಧಿಯ ಕಾಲವನ್ನು ಅನುಭವಿಸಿದ್ದರಿಂದ ಜನಗಳು ನಿಶ್ಚಿಂತೆಯಿಂದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಹಾಗಾಗಿ ಈ ಕಾಲಘಟ್ಟದಲ್ಲಿ ಬಹುಸಂಖ್ಯೆಯ ಗ್ರಾಮಗಳ ಅಗ್ರಹಾರಗಳು, ನಗರಗಳು ನೂತನವಾಗಿ ನಿರ್ಮಾಣಗೊಂಡವು. ಈ ಎಲ್ಲಾ ನಿರ್ಮಿತಿಗಳು ನೀರಿನ ಆಸರೆಯ ನಿರ್ಮಾಣದೊಂದಿಗೆ ಹೊಂದಿಕೊಂಡಿದ್ದವು. ಈ ಉದ್ದೇಶ ಸಫಲತೆಯನ್ನು ವಿಶ್ಲೇಷಿಸುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

5. ದಕ್ಷಿಣ ಭಾರತದ ಮೇಲೆ ಹೊಯ್ಸಳ ಯುಗದ ಅಂತ್ಯದಲ್ಲಿ ಆದ ಮುಸ್ಲಿಂ ದಾಳಿಯು ಇಲ್ಲಿನ ಆರ್ಥಿಕ ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆಯನ್ನು ಅಲುಗಾಡಿಸಿತು. ಹಲವಾರು ನಗರಗಳು ಗ್ರಾಮಗಳು, ಅಗ್ರಹಾರಗಳು, ಮುಸ್ಲಿಂ ಧಾಳಿಕೋರರಿಗೆ ವಶವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡವು. ಈ ಅವಸ್ಥೆಯನ್ನು ಸರಿಪಡಿಸುವ

ಜವಾಬ್ದಾರಿ ಹೊಯ್ಸಳರ ನಂತರ ಅಧಿಕಾರಕ್ಕೆ ಬಂದ ಕರ್ನಾಟಕ ಸಾಮ್ರಾಜ್ಯದ ಆಡಳಿತಗಾರನದಾಗಿತ್ತು. ಈ ಉದ್ದೇಶವನ್ನು ಕರ್ನಾಟಕ ಸಾಮ್ರಾಜ್ಯವನ್ನಾಳಿದ ಸಂಗಮ, ಸಾಳ್ವ, ತುಳುವ ಮತ್ತು ಅರವೀಡು ಮನೆತನದ ಅರಸರುಗಳು ನಿರ್ವಹಿಸಿದರು.

6. ಈ ನಿರ್ಮಾಣ ಮತ್ತು ನಿರ್ವಹಣೆಯಲ್ಲಿ ಸರ್ಕಾರದ ಪಾಲು ಜನ ಸಾಮಾನ್ಯರ ಪಾಲು ಇದ್ದಿತು. ಬರ್ಟನ್ ಸ್ಟೈನ್ ದಕ್ಷಿಣ ಕರ್ನಾಟಕದ ಆರ್ಥಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯ ಬಗೆಗೆ ಮಾತನಾಡುತ್ತಾ ವ್ಯವಸಾಯವನ್ನು ಮೂಲ ಕಸುಬನ್ನಾಗಿ ಹೊಂದಿದ ಕೃಷಿಕ ಗುಂಪುಗಳು  ಸಂಘಟನೆಗೊಂಡು ಫಲವತ್ತಾದ ಯೋಗ್ಯ ಭೂಮಿಯನ್ನು ಹುಡುಕಿ ಅಲ್ಲಿನ ಕಾಡನ್ನು ಕಡಿದು ನೀರಾವರಿ ವ್ಯವಸ್ಥೆಯನ್ನು ರೂಪಿಸಿಕೊಂಡು ಸ್ಥಿರವಾದ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯನ್ನು ಕಂಡುಕೊಂಡು ಬಂದರೆಂದು ವಿಶ್ಲೇಷಿಸಿದ್ದಾರೆ. ಈ ದಿಸೆಯಲ್ಲಿ ಪ್ರಸ್ತುತ ಅಧ್ಯಯನವು ವಿಭಿನ್ನವಾದ ಕಾಲಘಟ್ಟದ ಅರಸು ಮನೆತನಗಳ ಆಳ್ವಿಕೆಯ ಕಾಲದಲ್ಲಿ ವ್ಯವಸಾಯಕ್ಕೆ ತೊಡಗಿಸಿಕೊಂಡ ಆಡಳಿತೇತರ ವರ್ಗವನ್ನು ಗುರುತಿಸುವ ಉದ್ದೇಶವನ್ನು ಹೊಂದಿದೆ.

7. ಈ ಎಲ್ಲಾ ಮಾಹಿತಿಗಳನ್ನು ಕಲೆಹಾಕಿ ಅವುಗಳನ್ನು ವಿಶ್ಲೇಷಿಸಿ ಆ ಕಾಲಘಟ್ಟದ ಅವಧಿಯಲ್ಲಿ ನಡೆದ ಕೆರೆನಿರ್ಮಾಣದ ವಿಸ್ತೃತ ಚಿತ್ರಣವನ್ನು ನೀಡುವ ಮಹತ್ವದ ಉದ್ದೇಶವನ್ನು ತನ್ನದಾಗಿಸಿಕೊಂಡಿದೆ.

## ಅಧ್ಯಯನದ ವಿಧಾನಗಳು

ಪ್ರಸ್ತುತ ಅಧ್ಯಯನವು ಐತಿಹಾಸಿಕ ಆಕರಗಳನ್ನು ಆಧರಿಸಿರುವ ಹಿನ್ನೆಲೆಯಲ್ಲಿ ಪ್ರಾಕ್ತನ ಆಕರಗಳನ್ನು ಅಂದರೆ ಉತ್ಖನನ ವರದಿಗಳನ್ನು ಮತ್ತು ಸರ್ವೇಕ್ಷಣೆಯ ಸಮೀಕ್ಷಾ ವರದಿಗಳನ್ನು ಆಧರಿಸಿ ಪ್ರಾಗಿತಿಹಾಸ ಕಾಲದ ನಿರ್ಮಾಣ ಪ್ರಕ್ರಿಯೆಗೆ ಮಾಹಿತಿಯನ್ನು ಅನುಷಂಗಿಕ ಆಕರಗಳ ಬೆಳಕಿನಲ್ಲಿ ವಿಶ್ಲೇಷಿಸಿ ಸತ್ಯಕ್ಕೆ ಹತ್ತಿರವಾದ ಸಮೀಕ್ಷೆಯನ್ನು ಅಧ್ಯಯನದಲ್ಲಿ ಅಳವಡಿಸಲಾಗುವುದು.

ಇತಿಹಾಸ ಕಾಲಘಟ್ಟದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಉಂಟಾದ ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆಯು ಅಪಾರವಾದ ಶಾಸನಾಧ್ಯಯಗಳನ್ನು ಅವಲಂಭಿಸಿದೆ. ಅಲ್ಲದೆ ದಕ್ಷಿಣ ಕರ್ನಾಟಕ ಕೆರೆಗಳ ಬಗೆಗಿನ ಕುರಿತಾದ ಆಕರಗಳು ಬೆರಳಣಿಕೆಯಷ್ಟಿವೆ. ಹಾಗಾಗಿ ಆನುಷಂಗಿಕ ದಕ್ಷಿಣ ಕರ್ನಾಟಕ ಶಾಸನಗಳನ್ನು ಪ್ರಕಟಿಸಿದ ಬಿ.ಎಲ್.ರೈಸ್‌ರವರ ಆವೃತ್ತಿಗಳನ್ನು ಮತ್ತು ಇತ್ತೀಚಿಗೆ ಅವುಗಳನ್ನು ಪುನರ್ ಮುದ್ರಿಸುತ್ತಿರುವ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹೊಸ ಆವೃತ್ತಿಗಳನ್ನು ಸಮೀಕ್ಷಿಸಿ ಶಾಸನಗಳಲ್ಲಿ ಕಂಡುಬಂದ ಮಾಹಿತಿಯನ್ನು ಲಭ್ಯವಿರುವ ಆನುಷಂಗಿಕ ಆಕರಗಳನ್ನು ಪೂರಕವಾಗಿ ಬಳಸಿಕೊಂಡು ಇಡೀ ಪ್ರೌಢಪ್ರಬಂಧವನ್ನು ರಚಿಸುವ ಸಾಹಸ ಮಾಡಲಾಗಿದೆ. ಹಾಗಾಗಿ ಪ್ರಸ್ತುತ ಅಧ್ಯಯನವು ಮೂಲ ಭೂತವಾಗಿ ಶಾಸನಾಧ್ಯಯನ ಆಧಾರಿತವೆಂದು ಹೇಳಬಹುದು.

## ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನವು ಬಹಳ ವಿಶಾಲವಾದ, ಕಾಲಾವಧಿಯನ್ನು ತನ್ನ ವ್ಯಾಪ್ತಿಯಲ್ಲಿ ಅಳವಡಿಸಿಕೊಂಡು ಬಂದಿದೆ. ಈಗಾಗಲೇ ಮೇಲೆ ಹೇಳಿದಂತೆ ಕರ್ನಾಟಕದ ಕೆರೆಗಳ ಬಗ್ಗೆ ಕುರಿತು ನಡೆದಿರುವ ಸಂಶೋಧನೆಗಳ ಅಲ್ಪವೆಂದೇ ಹೇಳಬೇಕು. ಮೊಟ್ಟ ಮೊದಲ ಬಾರಿಗೆ ದಕ್ಷಿಣ ಕರ್ನಾಟಕದ ಕೆರೆಗಳನ್ನು ಕುರಿತು ಸಮೀಕ್ಷೆ ಪ್ರಾರಂಭವಾದುದೆ ಕ್ರಿ.ಶ. ೧೮೦೦ರ ನಂತರ. ಈ ನಂತರ ನಡೆದ ಸಮೀಕ್ಷೆಗಳ ಹಲವು ಬಗೆಯ ಗೊಂದಲಕ್ಕೆ ಕಾರಣವಾಗುವಂತ ಅಂಕಿ ಅಂಶಗಳನ್ನು ನಮ್ಮ ಮುಂದೆ ಇಡುತ್ತವೆ. ಬಿ.ಎಲ್. ರೈಸ್‌ರವರು ಮೈಸೂರು ಸಂಸ್ಥಾನದ ಬಗೆಗೆ ಮೊದಲು ಪ್ರಕಟಿಸಿದ ಮೈಸೂರು ಗೆಜಿಟಿಯರ್‌ನಲ್ಲಿ ೩೮,೦೮೦ ಸಾವಿರ ಕೆರೆಗಳಿದ್ದವೆಂದು ದಾಖಲಿಸಿದ್ದಾರೆ. ಈ ಅಂದಾಜಿನಂತೆ ಮೈಸೂರು ಸಂಸ್ಥಾನದ ಪ್ರತಿ ೩ ಚದುರ ಮೈಲಿ ವಿಸ್ತಾರದಲ್ಲಿ ಒಂದೊಂದು ಕೆರೆಗಳಿದ್ದವೆಂದು ವರದಿಯಾಗಿವೆ, ಆದರೆ ರೈಸ್‌ರವರು ತಮ್ಮ ಎರಡನೇ ಸಂಪುಟದ ಜಿಲ್ಲಾವಾರು ಮಾಹಿತಿಗಳು ಗೊಂದಲವನ್ನು ನಿರ್ಮಿಸುತ್ತವೆ. ಆದರೂ ಈ ಮೊದಲು ಹೇಳಿದ ಕಾಲದಲ್ಲಿ ಶಾಸನಗಳನ್ನು ಸಮೀಕ್ಷಿಸಿದಾಗ ಒಂದೊಂದು ಗ್ರಾಮಗಳಲ್ಲಿಯೂ ಒಂದಕ್ಕಿಂತ ಹೆಚ್ಚು ಕೆರೆಗಳಿದ್ದ ಮಾಹಿತಿ ದಾಖಲಾಗಿದೆ. ಮಂಡ್ಯ ಜಿಲ್ಲೆ, ಚಾಮರಾಜನಗರ ಜಿಲ್ಲೆ, ಬೆಂಗಳೂರು ಈ ಪ್ರದೇಶಗಳಲ್ಲಿ ಸಮೀಕ್ಷಿಸಿದಾಗ

ಪ್ರಾಚೀನ ನಗರ ಪ್ರದೇಶಗಳ ಒಂದಕ್ಕಿಂತ ಹೆಚ್ಚು ಕೆರೆಗಳನ್ನು ಹೊಂದಿರುವುದು ಖಚಿತವಾಗುತ್ತದೆ. ಈ ಮಾಹಿತಿಯನ್ನು ಆಧರಿಸಿ ಹಿಮ್ಮುಖವಾಗಿ ನಡೆದು ಕೆರೆಕಟ್ಟೆಗಳ ನಿರ್ಮಾಣ ದಕ್ಷಿಣ ಕರ್ನಾಟಕದಲ್ಲಿ ಪ್ರಾರಂಭವಾದ ಬೃಹತ್ ಶಿಲಾಯುಗ ಕಾಲದಿಂದ ತಾಳಿಕೋಟೆ ಯುದ್ಧದವರೆಗೆ ದಕ್ಷಿಣ ಕರ್ನಾಟಕದಲ್ಲಿ ಉಂಟಾದ ಕೆರೆಯ ನಿರ್ಮಾಣ ಅವುಗಳ ನಿರ್ವಹಣೆ, ನಿರ್ಮಾಣ ಮತ್ತು ನಿರ್ವಹಣೆಯಲ್ಲಿ ತೊಡಗಿಸಿಕೊಂಡ ಅರಸು ಮನೆತನಗಳು, ಸಂಸ್ಥೆಗಳು, ವ್ಯಕ್ತಿಗಳು, ಸಮೂಹ ಮತ್ತು ನಿರ್ವಹಣೆಯ ನಿಯಮ, ನಿರ್ಮಾಣದ ಉದ್ದೇಶ ತಂತ್ರಜ್ಞಾನ ಮುಂತಾದ ಸಮುಗ್ರ ಶೈಕ್ಷಣಿಕ ಹಾಗೂ ತಾಂತ್ರಿಕ ವಿಷಯಗಳ ಮಹತ್ವವನ್ನು ಚರ್ಚಿಸುವ, ವಿಶ್ಲೇಷಿಸುವ ಮಹತ್ವವಾದ ಅಧ್ಯಯನ ಇದಾಗಿದೆ ಎಂದು ಭಾವಿಸಬಹುದು.

## ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನ ವಿಷಯವು ಭೌಗೋಳಿಕ ವ್ಯಾಪ್ತಿ ಮತ್ತು ಕಾಲವ್ಯಾಪ್ತಿ ಎರಡನ್ನು ಹೊಂದಿದ್ದು ಮಹತ್ವಾಕಾಂಕ್ಷೆಯ ಉದ್ದೇಶಗಳನ್ನು ಅಡಕಮಾಡಿಕೊಂಡು ವಿಸ್ತಾರವಾದ ಸ್ವರೂಪವನ್ನು ತನ್ನದಾಗಿಸಿಕೊಂಡಿದೆ. ಅಧ್ಯಯನದ ಶೀರ್ಷಿಕೆಯು ಹೇಳುವಂತೆ “ದಕ್ಷಿಣ ಕರ್ನಾಟಕದಲ್ಲಿ ಕೆರೆಕಟ್ಟೆಗಳ ನಿರ್ಮಾಣ ಮತ್ತು ನಿರ್ವಹಣೆ” (ಆರಂಭದಿಂದ ವಿಜಯನಗರ ಸಾಮ್ರಾಜ್ಯದ ಅಂತ್ಯದವರೆಗೆ) ಅಪಾರವಾದ ಭೌಗೋಳಿಕ ಪರಿಸರದಲ್ಲಿ ನಡೆದಿರಬಹುದಾದ ಕೆರೆ ನಿರ್ಮಾಣ ಮತ್ತು ನಿರ್ವಹಣೆಯ ದಾಖಲೀಕರಣ ಇದಾಗಿದೆ. ಪ್ರಾಯಶಃ ಜಿ.ಎಸ್.ದೀಕ್ಷಿತರ ಗ್ರಂಥವನ್ನು ಹೊರತು ಪಡಿಸಿದರೆ ಇಷ್ಟು ವಿಶಾಲ ವ್ಯಾಪ್ತಿಯನ್ನು ಅಡಕಮಾಡಿಕೊಂಡು ಅಧ್ಯಯನಕ್ಕೆ ತೊಡಗಿರುವ ಪ್ರಯತ್ನದಲ್ಲಿ ಇದೇ ಮೊದಲನೆಯದೆನ್ನಬಹುದು. ಹಾಗಾಗಿ ಈ ಅಧ್ಯಯನವು ದಕ್ಷಿಣ ಕರ್ನಾಟಕದ ೩೦೦೦ ವರ್ಷಗಳ ಐತಿಹಾಸಿಕ ಬೆಳವಣಿಗೆಯ ಕಾಲಘಟ್ಟದ ಮಿತಿಯಲ್ಲಿ ಪಕ್ಷಿನೋಟದ ಸದೃಶ್ಯವಾದ ಅಧ್ಯಯನವನ್ನು ಈ ಅಧ್ಯಯನದ ಅಂತ್ಯದಲ್ಲಿ ನೀಡಿರುವ ವಿಷಯದಲ್ಲಿನ ಕ್ರಮಣಿಕೆಯ ಕ್ರಮವನ್ನು ಅನುಸರಿಸಿದೆ.

ಈ ಅಧ್ಯಯನವನ್ನು 9 ಅಧ್ಯಾಯಗಳಾಗಿ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ. ಮೊದಲನೇ ಅಧ್ಯಾಯವು, ಅಧ್ಯಯನದ ಉದ್ದೇಶವನ್ನೊಳಗೊಂಡು ಇಡಿ ಅಧ್ಯಾಯ ಪೀಠಿಕೆಯಾಗಿರುವುದರಿಂದ ಶೀರ್ಷಿಕೆಯನ್ನು "ದಕ್ಷಿಣ ಕರ್ನಾಟಕದಲ್ಲಿ ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆ – ಪೀಠಿಕೆ" ಎಂದು ಹೆಸರಿಸಿ ಆ ಅಧ್ಯಾಯದಲ್ಲಿ ವಿಷಯದ ಅಥವಾ ಅಧ್ಯಯನದ ವ್ಯಾಪ್ತಿ, ಅಧ್ಯಯನದ ಉದ್ದೇಶಗಳು, ಅಧ್ಯಯನದ ವಿಧಾನ, ಅಧ್ಯಯನದ ಮಹತ್ವ ಮತ್ತು ಸ್ವರೂಪವನ್ನೊಳಗೊಂಡಿದೆ.

ಎರಡನೇ ಅಧ್ಯಾಯನವನ್ನು ದಕ್ಷಿಣ ಕರ್ನಾಟಕದ ಪ್ರಾಕೃತಿಕ ಲಕ್ಷಣ ಎಂದು ಹೆಸರಿಸಿ ಆ ಅಧ್ಯಾಯದಲ್ಲೂ ಕರ್ನಾಟಕದ ಗಡಿಗಳ ವಿಸ್ತೀರ್ಣ, ಪ್ರಾಕೃತಿಕ ಲಕ್ಷಣಗಳು, ನದಿಗಳು, ವಾಯುಗುಣ, ಮಳೆಯ ಹಂಚಿಕೆ, ಮಣ್ಣುಗಳು ಮುಂತಾದ ಭೌಗೋಳಿಕ ಲಕ್ಷಣಗಳನ್ನು ಆಧರಿಸಿದ ವಿಷಯವನ್ನೊಳಗೊಂಡಿದೆ.

ಮೂರನೇ ಅಧ್ಯಾಯವನ್ನು ದಕ್ಷಿಣ ಕರ್ನಾಟಕದ ಸಂಕ್ಷಿಪ್ತ ಪ್ರಾಗೈತಿಹಾಸ ಮತ್ತು ಇತಿಹಾಸವೆಂದು ಕರೆಯಲಾಗಿದೆ. ಈ ಅಧ್ಯಾಯ ಪ್ರಾರಂಭ ಪುಟಗಳ ಪ್ರಾಗಿತಿಹಾಸವು ಸ್ಥೂಲವಾಗಿ ಹೇಳಿ ನಂತರ ಕದಂಬರು, ಗಂಗರು, ರಾಷ್ಟ್ರಕೂಟರು, ಹೊಯ್ಸಳರು ಮತ್ತು ವಿಜಯನಗನರ ಸಾಮ್ರಾಜ್ಯದ ಇತಿಹಾಸವನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಬಾದಾಮಿ ಚಾಲುಕ್ಯರ ಕಾಲದಲ್ಲಿ ಗಂಗರೇ ದಕ್ಷಿಣ ಕರ್ನಾಟಕದ ಬಹುಭಾಗವನ್ನು ಸ್ವತಂತ್ರರೆನ್ನುವಷ್ಟರ ಮಟ್ಟಿಗೆ ಆಳ್ವಿಕೆ ನಡೆಸಿದ್ದರಿಂದ ಚಾಳುಕ್ಯ ಶಾಸನಗಳು ಇಲ್ಲವೇ ಇಲ್ಲವೆನ್ನುಷ್ಟರಮಟ್ಟಿಗೆ ದೊರಕಿರುವುದರಿಂದ ಅವರ ರಾಜಕೀಯ ಇತಿಹಾಸವನ್ನು ಗುರುತಿಸಿಲ್ಲ. ಚೋಳರ ಆಳ್ವಿಕೆ ಕೇವಲ 100 ವರ್ಷಗಳ ಅವಧಿಯದ್ದಾಗಿದ್ದು, ಇಡೀ ಮನೆತನದ ಇತಿಹಾಸವಲ್ಲದ ಕಾರಣ ಆ ಕಾಲ ಘಟ್ಟದ ಇತಿಹಾಸವನ್ನು ದಾಖಲಿಸಿಲ್ಲ. ಉಳಿದಂತೆ ಇತರ ಮನೆತನೆಗಳ ರಾಜಕೀಯ ಇತಿಹಾಸವನ್ನು ರಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕೆರೆಗಳ ನಿರ್ವಹಣೆ ಪ್ರಾಗೈತಿಹಾಸಿಕ ಕಾಲದಿಂದ ವಿಜಯನಗರದ ಅಂತ್ಯದವರೆಗೆ ಈ ಅಧ್ಯಾಯದಲ್ಲಿ ದಕ್ಷಿಣ ಕರ್ನಾಟಕವನ್ನು ಆಳಿದ ರಾಜಮನೆತನಗಳ ಪ್ರಾಗೈತಿಹಾಸಿಕ ಕಾಲದಲ್ಲಿ ನಡೆದ ಕೆರೆ ನಿರ್ಮಾಣದ ಚಟುವಟಿಕೆಗಳನ್ನು

ಪ್ರಾಕ್ತನ ಆಕರಗಳು ಮತ್ತು ಆನುಷಂಗಿಕ ಆಕರಗಳನ್ನು ಆಧರಿಸಿ ಈ ಕೆಳಗಿನ ಶೀರ್ಷಿಕೆಯನ್ನು ರೂಪಿಸಿಲಾಗಿದೆ.

1. ಪ್ರಾಗಿತಿಹಾಸ ಯುಗ
2. ಇತಿಹಾಸ ಆರಂಭ ಕಾಲ
3. ಕದಂಬರು
4. ಗಂಗರು
5. ಬಾದಾಮಿ ಚಾಳುಕ್ಯರು
6. ರಾಷ್ಟ್ರಕೂಟರು
7. ಚೋಳರು
8. ಕಲ್ಯಾಣಿ ಚಾಳುಕ್ಯರು, ಹೊಯ್ಸಳರು
9. ವಿಜಯನಗರ ಸಾಮ್ರಾಜ್ಯ

ಐದನೇ ಅಧ್ಯಾಯದಲ್ಲಿ ಕೆರೆ ನಿರ್ಮಾಣ ಅವಶ್ಯಕತೆ, ಅಂಗಗಳು, ಉದ್ದೇಶಗಳು ಮತ್ತು ನಿರ್ಮಾತೃಗಳನ್ನು ಕುರಿತದ್ದಾಗಿದೆ. ಶೀರ್ಷಿಕೆಯು ಹೇಳುವಂತೆ ಈ ಅಧ್ಯಯನದ ಪ್ರದೇಶದಲ್ಲಿ ಕೆರೆ ನಿರ್ಮಾಣದ ಅವಶ್ಯಕತೆ, ಕೆರೆಯ ಅಂಗಗಳು, ನಿರ್ಮಾಣದ ಉದ್ದೇಶಗಳು, ನಿರ್ಮಾತೃಗಳ ಬಗೆಗೆ ಸಮಗ್ರ ಪಕ್ಷಿನೋಟವನ್ನು ನೋಡಲಾಗಿದೆ.

ಆರನೇ ಅಧ್ಯಾಯದಲ್ಲಿ ಈ ಅಧ್ಯಯನದ ಶಿರ್ಷಕೆ, ಕೆರೆಯ ನಿರ್ಮಾಣ, ನಂಬಿಕೆಗಳು, ಹಣಕಾಸು, ಉದ್ದೇಶ ಇತ್ಯಾದಿ ನಿರ್ಮಾಣ ಪ್ರಕ್ರಿಯೆಯ ಭಾವನಾತ್ಮಕ ಮತ್ತು ಇತರ ಸಂಬಂಧಗಳನ್ನು ಕುರಿತು ಚರ್ಚಿಸುತ್ತದೆ.

ಏಳನೇ ಅಧ್ಯಾಯದಲ್ಲಿ ಕೆರೆಗಳ ನಿರ್ವಹಣೆ ಕುರಿತು ಸಂಪೂರ್ಣವಾಗಿ ಈ ಅಧ್ಯಯನದಲ್ಲಿ ನಿರ್ವಹಣೆಗೆ ಕುರಿತಾದ ವಿವರಣೆಗಳನ್ನು ಮತ್ತು ಅದಕ್ಕಿರುವ ಶಾಸನಾಧಾರಗಳನ್ನು ನೀತಿ – ನಿಯಮಗಳನ್ನು ನಿರ್ವಹಣೆಯ ಹಂತಗಳನ್ನು ಮೇಲ್ವಿಚಾರಕ

ವರ್ಗ, ಇತರ ವಿವರಗಳನ್ನು ನೀಡುತ್ತದೆ. ಈ ಅಧ್ಯಾಯವು ಕೂಡ ಸಮಗ್ರ ಪಕ್ಷಿನೋಟ ಮಾದರಿಯಲ್ಲೇ ರಚಿತವಾಗಿದೆ.

ಅಧ್ಯಾಯ ಎಂಟರಲ್ಲಿ ಕೆರೆಯ ನಿರ್ಮಾಣ ನಿರ್ವಹಣೆಯ ಆರ್ಥಿಕ ಸಂಗತಿಗಳಿಗೆ ಮೀಸಲಾಗಿದೆ. ಇಲ್ಲಿ ಕೆರೆಯ ಆದಾಯ ಖರ್ಚು, ವೆಚ್ಚಗಳು, ಕಂದಾಯ ಮುಂತಾದ ವಿವರಗಳನ್ನು ಅಡಕಮಾಡಲಾಗಿದೆ.

ಅಧ್ಯಾಯ ಒಂಭತ್ತರಲ್ಲಿ ಅಧ್ಯಯನಕ್ಕೆ ಸೀಮಿತವಾದ ನಾಲ್ಕನೇ ಅಧ್ಯಾಯದಿಂದ ಎಂಟನೇ ಅಧ್ಯಾಯದವರೆಗೆ ಅಧ್ಯಯನ ಕಾಲದಲ್ಲಿ ಕಂಡುಕೊಂಡ ಮತ್ತು ಗುರುತಿಸಿದ ವಿಶೇಷ ವಿವರಗಳನ್ನು ಸಮಾರೋಪದ ಮಾದರಿಯಲ್ಲಿ ಚರ್ಚಿಸಲಾಗಿದೆ. ಇದಾದ ನಂತರ ಅಧ್ಯಯನಕ್ಕೆ ಬಳಸಿದ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳ ವಿವರವಾದ ಪಟ್ಟಿಯನ್ನು ಕೆಲವು ಪ್ರಮುಖ ಛಾಯಾಚಿತ್ರಗಳನ್ನು ನೀಡಲಾಗಿದೆ.

## ಪರಾಮರ್ಶನಗಳು


1. ಕೃಷ್ಣರಾವ್ ಎಂ.ವಿ ಮತ್ತು ಕೇಶವಭಟ್ಟ – ಕರ್ನಾಟಕದ ಪರಂಪರೆ, ಬೆಂಗಳೂರು, ಸಂ–01, 1970, ಪು.ಸಂ.49.
2. ಅದೇ
3. ಧವಳೀಕರ ಎಂ.ಕೆ, – ಸೆಟಲ್‌ಮೆಂಟ್ ಆರ್ಕಿಯಾಲಜಿ ಆಫ್ ಇನಾಂಗಾಂ – ಪುರಾತತ್ವ ನಂ.8. ನವದೆಹಲಿ, 1978, ಪು.ಸಂ.47.
4. ಮಿರಾಶಿ ವಿ.ವಿ, – ದಿ ಹಿಸ್ಟರಿ ಅಂಡ್ ಇನ್ಸ್‌ಕ್ರೀಪ್ಸನ್ಸ್ ಆಫ್ ದಿ ಶಾತವಾಹನಸ್ ಅಂಡ್ ವೆಸ್ಟರ್ನ್ ಕ್ಷತ್ರಪಾಸ್, ಮಹಾರಾಷ್ಟ್ರ ಅಂಡ್ ಸ್ಟೇಟ್ ಬೋರ್ಡ್ ಫಾರ್ ಲಿಟರೇಚರ್, ಕಲ್ಚರ್, ಬಾಂಬೆ, 1981, ಪು.ಸಂ.121.
5. ಎಂ.ಎ.ಆರ್ 1929, ಪು.ಸಂ.11.
6. ಎಪಿಗ್ರಾಫಿಯಾ ಕರ್ನಾಟಿಕ ವಾಲ್ಯೂಮ್–07, ಶಿಕಾರಿಪುರ, 176.
7. ದೀಕ್ಷಿತ್ ಜಿ.ಎಸ್. ಮತ್ತು ಇತರರು – ಕರ್ನಾಟಕದಲ್ಲಿ ಕೆರೆಯ ನೀರಾವರಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000, ಪು.ಸಂ.30–31.
8. ಎಂ.ಎ.ಆರ್ 1942, ಪು.ಸಂ.208–231.
9. ಬಿ.ಎಲ್.ರೈಸ್, ಮೈಸೂರು ಗೆಜೆಟಿಯರ್, ಸಂಪುಟ–2, ಲಂಡನ್, 1897, ಪು.ಸಂ.738.
10. ಚಿಕ್ಕಮಗಳೂರು ಜಿಲ್ಲಾ ಗೆಜೆಟಿಯರ್, ಪು.ಸಂ.33–35.
11. ಅದೇ ಪು.ಸಂ.45.
12. MLK Murthy*: Pre-And Protohistoric Andhara Pradesh Up to – 500 BC.* Dravidian University of Kuppum. 2003, Pg.No.88-106.
13. ಡಾ.ಬಿ.ಕೆ.ಗುರುರಾಜರಾವ್ – The Megalithic Culture in South India-, Prasharanga, University of Mysore, Mysore, 1972, P-No. 297.

14. ಈ ಬಗೆಗಿನ ವಿವರಗಳನ್ನು ದಕ್ಷಿಣ ಕರ್ನಾಟಕದಲ್ಲಿ ಇವರಿಗೆ ಪ್ರಕಟವಾಗಿರುವ ಬೃಹತ್ ಶಿಲಾಯುಗದ ಗೋರಿ ಮತ್ತು ವಾಸದ ನಿವಾಸದ ಸಂಖ್ಯೆಯನ್ನು ಆಧರಿಸಿ ನಿರ್ಧರಿಸಲಾಗಿದೆ. ಈ ಅಂಕಿ ಅಂಶಗಳು ಡಾ.ಕೆ.ಬಿ.ಶಿವತಾರಕ್ ರಚಿಸಿರುವ *ಕರ್ನಾಟಕದ ಪುರಾತತ್ವ ನೆಲೆಗಳು* ಕೃತಿಯ ಜಿಲ್ಲಾವಾರು ಅಂಕಿ ಅಂಶಗಳ ಕೋಷ್ಠಕಗಳನ್ನು ಆಧರಿಸಿ ಅಂದಾಜಿಸಲಾಗಿದೆ. ವಿವರಗಳಿಗೆ ಉಲ್ಲೇಖಿತ ಗ್ರಂಥವನ್ನು ಪರಾಮರ್ಶಿಸುವುದು.
15. ವಿ.ವಿ.ಮಿರಾಶಿ –ಪೂರ್ವೋಕ್ತ, ಭಾಗ–2,3, ಬಿ. ನಂ 51 ಪುಟ 121 ರಿಂದ.
16. ಪಿ.ಮಲ್ಲಪ್ಪ – ಕರ್ನಾಟಕದ ಭೂಗೋಳ, 1998, ಮೈಸೂರು, ಪು.ಸಂ.22–42.
17. ಅದೇ...
18. B.L. Rice – 1909.*Mysore and Coorg from the Inscriptions,* London, , Pg.No.29.
19. ಅದೇ...ಪುಟ. 82–94
20. ಅದೇ...ಪುಟ.94 ff
21. ಡಾ.ಪಿ.ಬಿ.ದೇಸಾಯಿ – *ಹಿಸ್ಟರಿ ಆಫ್ ಕರ್ನಾಟಕ,* ಧಾರವಾಡ, 1970, ಪು.ಸಂ.316–431.
22. ವಿ.ವಿ.ಮಿರಾಶಿ –ಪೂರ್ವೋಕ್ತ, ಪುಟ. 121 ff
23. ಹಯವದನರಾವ್ – *ಮೈಸೂರು ಗೆಜೆಟಿಯರ್,* ವ್ಯಾಲ್ಯೂಮ್–02, ಭಾಗ–2, 1929, ಪು.ಸಂ.490 ರಿಂದ ಆನಂತರ.
24. ಡಾ.ಬಿ.ಷೇಕ್ ಅಲಿ – *ಹಿಸ್ಟರಿ ಆಫ್ ದಿ ವೆಸ್ಟರ್ನ್ ಗಂಗಾಸ್,* ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1976, ಪು.ಸಂ.40–62.
25. ಆರ್.ಆರ್.ದಿವಾಕರ – *ಕರ್ನಾಟಕ ಥ್ರೂ ದಿ ಏಜಸ್,* ಬೆಂಗಳೂರು, 1968, ಪು.ಸಂ.111–115.
26. ಡಾ.ಬಿ.ಷೇಕ್ ಅಲಿ – ಪೂರ್ವೋಕ್ತ, ಪೀಠಿಕೆ

27. ಡಾ.ಲ.ನ.ಸ್ವಾಮಿ – ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಕಂಡಂತೆ ಪ್ರಾಚೀನ ಶಿಕ್ಷಣ, *ಮಂಡ್ಯ ಜಿಲ್ಲೆ ಇತಿಹಾಸ ಮತ್ತು ಪುರಾತತ್ವ,* ಸಂ.ಡಾ.ಆರ್.ಗೋಪಾಲ್, ಮೈಸೂರು, 2008, ಪು.ಸಂ.54–65.

28. ಅದೇ...ಪುಟ.

29. ಡಾ.ಬಿ.ಆರ್.ಗೋಪಾಲ್ – *ಕರ್ನಾಟಕದಲ್ಲಿ ರಾಮಾನುಜರು,* ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

30. ಡಾ.ಲ.ನ.ಸ್ವಾಮಿ – ಮೈಸೂರು ಜಿಲ್ಲೆಯ ಶಿಕ್ಷಣ ಕೇಂದ್ರಗಳ ರಚನೆಯ ಉದ್ದೇಶ ಮತ್ತು ಮಹತ್ವ, ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಸಂ.ಡಾ.ಆರ್.ಗೋಪಾಲ್, ಮೈಸೂರು, 2010, ಪು.ಸಂ.197–209

31. ಸಿ.ಟಿ.ಎಂ. ಕೊಟ್ರಯ್ಯ – *ಇರಿಗೇಷನ್ ಸಿಸ್ಟಮ್ ಅಂಡರ್ ವಿಜಯನಗರ ಎಂಪೈರ್*, ಮೈಸೂರು, 1995, ಪು.ಸಂ.27–32.

32. ಜಿ.ಎಸ್. ದೀಕ್ಷೀತ್ ಮತ್ತು ಇತರರು – *ಟ್ಯಾಂಕ್ ಇರಿಗೇಷನ್ ಇನ್ ಕರ್ನಾಟಕ*, ಬೆಂಗಳೂರು, 1993.

33. ಜಿ.ಎಸ್.ದೀಕ್ಷೀತ್ ಮತ್ತು ಇತರರು – *ಕರ್ನಾಟಕದಲ್ಲಿ ಕೆರೆಯ ನೀರಾವರಿ,* ಕರ್ನಾಟಕ ವಿಶ್ವವಿದ್ಯಾನಿಲಯ, ಹಂಪಿ, 2000.

34. ರಾಜರಾಮ್ ಹೆಗಡೆ – ಸಂ. *ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ*, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

35. ಸಿ.ಎಸ್.ವಾಸುದೇವನ್ – *ಹಂಪಿ ಪರಿಸರದ ಕೆರೆಗಳು*, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2001.

36. ಸಿ.ಟಿ.ಎಂ ಕೊಟ್ರಯ್ಯ – ಪೂರ್ವೋಕ್ತ.

*37.* ಟಿ.ವಿ.ನಾಗರಾಜು – *ಮೈಸೂರು ಸಂಸ್ಥಾನದಲ್ಲಿ ನೀರಾವರಿ ಕೋಲಾರ ಜಿಲ್ಲೆಯ ಒಂದು ಅಧ್ಯಯನ (800 ರಿಂದ 1956),* ಬೆಂಗಳೂರು, 2008.

38. ಈ ಲೇಖಕರ ಹಲವು ಬಿಡಿ ಲೇಖನಗಳು ವಿಜಯನಗರ ಅಧ್ಯಯನ ಮಾಲಿಕೆಯಲ್ಲಿ ಮತ್ತು ಕರ್ನಾಟಕ ಜಿಲ್ಲೆಗಳ ಇತಿಹಾಸ ಮತ್ತು ಪುರಾತತ್ವ ಮಾಲಿಕೆಯಲ್ಲಿ ಪ್ರಕಟವಾಗಿವೆ. ಅವುಗಳನ್ನು ಪರಿಶೀಲಿಸುವುದು ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆಯು ಈ ಮಾಲಿಕೆಗಲನ್ನು ಪ್ರಕಟಿಸಿದ್ದು ವಿವರಗಳಿಗೆ ಆ ಗ್ರಂಥಗಳನ್ನು ಸಮೀಕ್ಷಿಸಬಹುದು.
39. ಈ ಲೇಖಕರ ಹಲವು ಬಿಡಿ ಲೇಖನಗಳು ವಿಜಯನಗರ ಅಧ್ಯಯನ ಮಾಲಿಕೆಯಲ್ಲಿ ಮತ್ತು ಕರ್ನಾಟಕ ಜಿಲ್ಲೆಗಳ ಇತಿಹಾಸ ಮತ್ತು ಪುರಾತತ್ವ ಮಾಲಿಕೆಯಲ್ಲಿ ಪ್ರಕಟವಾಗಿವೆ. ಅವುಗಳನ್ನು ಪರಿಶೀಲಿಸುವುದು ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆಯು ಈ ಮಾಲಿಕೆಗಲನ್ನು ಪ್ರಕಟಿಸಿದ್ದು ವಿವರಗಳಿಗೆ ಆ ಗ್ರಂಥಗಳನ್ನು ಸಮೀಕ್ಷಿಸಬಹುದು.
40. ಈ ಲೇಖಕರ ಹಲವು ಬಿಡಿ ಲೇಖನಗಳು ವಿಜಯನಗರ ಅಧ್ಯಯನ ಮಾಲಿಕೆಯಲ್ಲಿ ಮತ್ತು ಕರ್ನಾಟಕ ಜಿಲ್ಲೆಗಳ ಇತಿಹಾಸ ಮತ್ತು ಪುರಾತತ್ವ ಮಾಲಿಕೆಯಲ್ಲಿ ಪ್ರಕಟವಾಗಿವೆ. ಅವುಗಳನ್ನು ಪರಿಶೀಲಿಸುವುದು ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆಯು ಈ ಮಾಲಿಕೆಗಲನ್ನು ಪ್ರಕಟಿಸಿದ್ದು ವಿವರಗಳಿಗೆ ಆ ಗ್ರಂಥಗಳನ್ನು ಸಮೀಕ್ಷಿಸಬಹುದು.
41. ಡಾ.ಹರಿಹರ ಶ್ರೀನಿವಾಸರಾವ್ – *ಚಾವುಂಡರಾಯನ ಲೋಕೋಪಕಾರದಲ್ಲಿ ಜಲವಿಜ್ಞಾನ, ತಂತ್ರಜ್ಞಾನ,* ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2010.
42. ಹಯವಧನರಾವ್ – *ಮೈಸೂರು, ಗೆಜೆಟಿಯರ್,* ವಾಲ್ಯೂಮ್–3, ಎಕಾನಮಿಕ್, ಬೆಂಗಳೂರು, 2011, ಪು.ಸಂ.156–174.
43. ಅದೇ...ಪುಟ.
44. ಅದೇ...ಪುಟ.
45. ಅದೇ...ಪುಟ.
46. ಅದೇ...ಪುಟ.

47. ಬಿ.ಎಲ್.ರೈಸ್ – *ಮೈಸೂರು ಗೆಜೆಟಿಯರ್,* ಲಂಡನ್, 1897, ವಾಲ್ಯೂಮ್-01, ಪು.ಸಂ.7.
48. ಅದೇ...ಪುಟ.
49. ಅದೇ ವಾಲ್ಯೂಮ್-02, ಆಯಾಜಿಲ್ಲೆಗಳ ಅಂಕಿಅಂಶಗಳ ಪಟ್ಟಿ.
50. ಹಯವಧನರಾವ್ – *ಮೈಸೂರು ಗೆಜೆಟಿಯರ್,* ಸಂ-05, 1930, ಈ ಸಂಪುಟದ ಜಿಲ್ಲಾವಾರು ಅಂಕಿ ಅಂಶಗಳ ಪಟ್ಟಿಗಳನ್ನು ಸಮೀಕ್ಷಲಾಗಿದೆ.
51. ಅದೇ
52. ಡಾ.ಬಿ.ಕೆ.ಗುರುರಾಜರಾವ್ ಪೂರ್ವೋಕ್ತ, 1972.
53. ಡಾ.ಕೆ.ಬಿ.ಶಿವತಾರಕ್ – ಕರ್ನಾಟಕದ ಪುರಾತತ್ವ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಇಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಜಿಲ್ಲೆಗಳ ಅಂಕಿ ಅಂಶಗಳನ್ನು ಆಧಾರಿಸಿ, ರಚಿಸಲಾಗಿದೆ.

# ಅಧ್ಯಾಯ – 2

# ದಕ್ಷಿಣ ಕರ್ನಾಟಕದ ಪ್ರಾಕೃತಿಕ ಲಕ್ಷಣಗಳು

ಭಾರತದ ದಖ್ಖನ್ ಪ್ರಸ್ಥಭೂಮಿಯ ಪಶ್ಚಿಮದಂಚಿನಲ್ಲಿರುವ ಕರ್ನಾಟಕ ತನ್ನ ಪ್ರಾಕೃತಿಕ ಸಂಪತ್ತಿನಿಂದಾಗಿ ದೇಶದಲ್ಲಿಯೇ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಇದು ಜನರ ಜೀವನದಲ್ಲಿ ಅಭಿವ್ಯಕ್ತಿ ಹೊಂದಿರುವುದು ಮಾತ್ರವಲ್ಲ ಕರ್ನಾಟಕದ ಐತಿಹಾಸಿಕ ವಿಕಾಸದ ಮೇಲೂ ತನ್ನ ಪ್ರಭಾವವನ್ನು ಬೀರಿದೆ. ಅದರ ವಿಶೇಷತೆ, ಭೌಗೋಳಿಕ ಸನ್ನಿವೇಶ, ನೈಸರ್ಗಿಕ ಸಂಪತ್ತು ವೈವಿಧ್ಯತೆಯಿಂದ ಕೂಡಿದ್ದು, ಆದರೆ ಅದರ ಭೂ ಸ್ವರೂಪಗಳು, ಸಸ್ಯವರ್ಗ (ಅರಣ್ಯಗಳು), ಪ್ರಾಣಿಸಂಕುಲ, ಮಣ್ಣು, ಖನಿಜಸಂಪತ್ತು ಮುಂತಾದವುಗಳೊಂದಿಗೆ, ಜಲಸಂಪತ್ತು ಮತ್ತು ಸಾರಿಗೆ ಸಂಪರ್ಕ ಮಾಧ್ಯಮಗಳಂತಹ ಉತ್ತಮ ಮೂಲಭೂತ ಸೌಕರ್ಯಗಳುಳ್ಳ ಭೌಗೋಳಿಕ ಲಕ್ಷಣಗಳನ್ನೊಳಗೊಂಡಿದೆ.

ಪ್ರಕೃತಿಯ ಸೌಂದರ್ಯಗಳ ಬೀಡಾದ ಕರ್ನಾಟಕವು ಪ್ರೇಕ್ಷಣೀಯ ಸ್ಥಳಗಳು ಮತ್ತು ಕೈಗಾರಿಕಾ ಸಾಮರ್ಥ್ಯಕ್ಕೂ ಹೆಸರಾಗಿದೆ. ಪಶ್ಚಿಮದಲ್ಲಿ ಎತ್ತರವಾದ ಶಿಖರಗಳು ಮತ್ತು ಹುಲುಸಾಗಿರುವ ಸಸ್ಯಗಳಿಂದ ಕೂಡಿರುವ ಪಶ್ಚಿಮಘಟ್ಟಗಳು ಕಂಗೊಳಿಸುತ್ತಿದ್ದರೆ, ಪ್ರಸ್ಥಭೂಮಿಯು ಅದರ ಕಪ್ಪುಮಣ್ಣು ಮತ್ತು ನದಿ ಹಾಗೂ ಕೆರೆ ನೀರಾವರಿಯ ಅನಕೂಲತೆಯಿಂದಾಗಿ ಫಲವತ್ತಾಗಿದೆ. ಪಶ್ಚಿಮಘಟ್ಟಗಳ ದಿಕ್ಕಿನಲ್ಲಿ ಪಟ್ಟೆಯಂತಿರುವ ಸಮುದ್ರ ತೀರ ಪ್ರದೇಶವು ಅಲ್ಲಿನ ಹಿನ್ನೀರಿನ ತೀರಗಳು, ಭತ್ತದ ಗದ್ದೆ ಹಾಗೂ ತೋಟಗಳಿಗೆ ಪ್ರಸಿದ್ಧವಾಗಿದೆ. ಇತಿಹಾಸ ಕಾಲದಿಂದಲೂ ಶ್ರೀಗಂಧದ ಮರ, ಗಂಧದ ಎಣ್ಣೆ, ತೇಗದ ಮರ, ಸಾಂಬಾರ ಪದಾರ್ಥಗಳು ಮತ್ತು ಚಿನ್ನದ ಉತ್ಪಾದನೆಗೆ ಕರ್ನಾಟಕವು ಹೆಸರುವಾಸಿಯಾಗಿದೆ. ದೇಶದಲ್ಲೇ ಪ್ರಥಮ ಬಾರಿಗೆ ಜಲವಿದ್ಯುತ್‌ಛಕ್ತಿಯನ್ನು (ಕಾವೇರಿಯ ಶಿವನ ಸಮುದ್ರದಲ್ಲಿ) ಉತ್ಪಾದನೆ ಮಾಡಿದ ಕೀರ್ತಿಯು ಕರ್ನಾಟಕಕ್ಕೆ ಸಲ್ಲುತ್ತದೆ. ಜೊತೆಗೆ ರೇಷ್ಮೆ ಕೃಷಿಯಲ್ಲಂತೂ ಈ ರಾಜ್ಯವು ವಿಶ್ವವಿಖ್ಯಾತಿಯನ್ನು ಪಡೆದಿದೆ ಎನ್ನಬಹುದು.

## ಗಡಿಗಳು (ಮೇರೆಗಳು)

ಭೂ ಮೇರೆ ಮತ್ತು ಜಲ ಮೇರೆಗಳೆರಡನ್ನು ಹೊಂದಿರುವ ಕರ್ನಾಟಕವು ಭಾರತದ ದಖ್ಖನ್ ಪ್ರಸ್ಥಭೂಮಿಯ ಪಶ್ಚಿಮದ ಮಧ್ಯ ಭಾಗದಲ್ಲಿ ನೆಲೆಗೊಂಡಿದೆ. ಇದು ಉತ್ತರ ಅಕ್ಷಾಂಶ 11° 31' 18° 45' ಹಾಗೂ ಪೂರ್ವ ರೇಖಾಂಶ 74° 12' ರಿಂದ 78° 40'ರವರೆಗೆ ಹಬ್ಬಿದೆ. ಭಾರತದ 28 ರಾಜ್ಯಗಳಲ್ಲೊಂದಾದದ ಕರ್ನಾಟಕ ಉತ್ತರದಿಂದ ದಕ್ಷಿಣಕ್ಕೆ ಸುಮಾರು 750 ಕಿ.ಮೀ ವಿಸ್ತರಿಸಿದೆ. ಈ ರಾಜ್ಯದ ಉತ್ತರಕ್ಕೆ ಮಹಾರಾಷ್ಟ್ರ, ಪೂರ್ವಕ್ಕೆ ಆಂಧ್ರಪ್ರದೇಶ, ದಕ್ಷಿಣಕ್ಕೆ ಮತ್ತು ಆಗ್ನೇಯಕ್ಕೆ ತಮಿಳುನಾಡು, ನೈರುತ್ಯಕ್ಕೆ ಕೇರಳ ಹಾಗೂ ಪಶ್ಚಿಮಕ್ಕೆ ಅರಬ್ಬೀ ಸಮುದ್ರಗಳು ಗಡಿಯಾಗಿವೆ. ಅಂದರೆ ಕರ್ನಾಟಕವು ಮೂರು ಕಡೆ ಭೂಮಿ ಮತ್ತು ಒಂದು ಕಡೆ ಜಲ ಭಾಗಗಳಂದ ಅವರಿಸಲ್ಪಟ್ಟಿದೆ.[1]




ಭೂಪಟ – 3 ಕರ್ನಾಟಕದ ಎಲ್ಲೆಗಳು ಮತ್ತು ಆಡಳಿತದ ವಿಭಾಗಗಳು

## ವಿಸ್ತೀರ್ಣ ಮತ್ತು ಜನಸಂಖ್ಯೆ

ಕರ್ನಾಟಕ ರಾಜ್ಯವು ಒಟ್ಟು 1,91,791 ಚದರ ಕಿ.ಮೀ ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದ್ದು, ಇದು ದೇಶದ ಒಟ್ಟು ವಿಸ್ತೀರ್ಣದ (32,87,263 ಚ.ಕಿ.ಮೀ) ಶೇ. 5.84 ಆಗಿದ್ದು, ಭಾರತದ ಎಂಟನೇ (8ನೇ) ವಿಶಾಲವಾದ ರಾಜ್ಯವಾಗಿದ್ದು ವಿಸ್ತೀರ್ಣದಲ್ಲಿ ಕರ್ನಾಟಕ ರಾಜ್ಯವು ಹಂಗೇರಿ, ಜೆಕೋಸ್ಲಾವೇಕಿಯಾ ಅಥವಾ ಬೆಲ್ಜಿಯಂಗಳಿಗಿಂತಲೂ ದೊಡ್ಡದು.[2] ಜನಸಂಖ್ಯೆಯಲ್ಲಿ 8ನೇ ಸ್ಥಾನದಲ್ಲಿದೆ. 2001 ರ ಜನಗಣತಿಯ ಪ್ರಕಾರ ಕರ್ನಾಟಕ ಒಟ್ಟು ಜನಸಂಖ್ಯೆ 5,27,33,958 ಗಳಾಗಿರುತ್ತದೆ.

## ಪ್ರಾಕೃತಿಕ ಲಕ್ಷಣಗಳು

ಕರ್ನಾಟಕ ರಾಜ್ಯವು ವೈವಿಧ್ಯಮಯವಾದ ಮೇಲ್ಮೈ ಲಕ್ಷಣದ ಆವಿಷ್ಕರಣಗಳನ್ನು ಹೊಂದಿರುವುದು ಕರಾವಳಿ ಪ್ರದೇಶ, ಏರು ತಗ್ಗುಗಳಿಂದ ಕೂಡಿದ ಮಲೆನಾಡಿನ ಪಶ್ಚಿಮಘಟ್ಟಗಳು ಹಾಗೂ ಸಮತಟ್ಟಾದ ಬಯಲು ಸೀಮೆಗಳಿಂದ ಕೂಡಿದ ಭೂಸ್ವರೂಪಗಳಾವೆ.[3] ಕರ್ನಾಟಕದಲ್ಲಿ ವಿವಿಧ ಎತ್ತರಗಳ ಅಡಿಯಲ್ಲಿ ಹಂಚಿಕೆಯಾಗಿರುವ ಭೂಪ್ರದೇಶದ ವಿಸ್ತೀರ್ಣ ಶೇಕಡಾ ಈ ಕೆಳಕಂಡ ರೀತಿಯಲ್ಲಿದೆ. 150 ಮೀಟರಿಗಿಂತ ಕಡಿಮೆ 5.16, 150 ರಿಂದ 300 ಮೀಟರ್ ಗಳವರೆಗೆ 43.51, 600 ರಿಂದ 15.50 ಮೀಟರ್‌ಗಳವರೆಗೆ 48.81 ಮತ್ತು 1350 ಮೀಟರ್‌ಗಿಂತ ಹೆಚ್ಚಾಗಿದೆ.  ಬಾಬಾಬುಡನ್‌ಗಿರಿ ಶ್ರೇಣಿಯಲ್ಲಿರುವ ಮುಳ್ಳಯ್ಯನಗಿರಿಯು (1943 ಮೀಟರ್) ಅತಿ ಎತ್ತರವಾದದ್ದು. ಸಾಕಷ್ಟು ಆಳವುಳ್ಳ ಕಣಿವೆ ಕಂದರುಗಳು, ಒರಟು ಮೇಲ್ಮೈಯುಳ್ಳ ಶಿಲಾಸ್ತರಗಳು ಮುಂತಾದ ಭೂಸ್ವರೂಪಗಳು ರಾಜ್ಯದಲ್ಲಿ ಕಂಡುಬರುತ್ತವೆ.[4] ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನಲ್ಲಿರುವ ಭೀಮೇಶ್ವರ ಕಣಿವೆ ಕರ್ನಾಟಕದಲ್ಲಿ ಅತಿ ಕೆಳಮಟ್ಟದ (85 ಮೀ) ತಗ್ಗು ಪ್ರದೇಶವಾಗಿದೆ. ಕರ್ನಾಟಕವು ಭಾರತದ ದಖ್ಖನ್ ಪ್ರಸ್ಥಭೂಮಿಯ ಭಾಗವಾಗಿದ್ದು, ಅದರಲ್ಲಿ ಪ್ರಸ್ಥಭೂಮಿಯ ಗುಣಲಕ್ಷಣಗಳನ್ನು ಕಾಣಬಹುದು.[5] ಎತ್ತರ, ಮೇಲ್ಮೈ ಲಕ್ಷಣ, ವಾಯುಗುಣ ಹಾಗೂ ಸಸ್ಯವರ್ಗಗಳ ಹಂಚಿಕೆಗಳನ್ನಾಧರಿಸಿ ಕರ್ನಾಟಕವನ್ನು ಕರಾವಳಿ ಪ್ರದೇಶ, ಮಲೆನಾಡು ಪ್ರದೇಶ ಮತ್ತು ಮೈದಾನ ಪ್ರದೇಶಗಳೆಂದೂ ಪ್ರಮುಖ ಪ್ರಾಕೃತಿಕ ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ.[6]




ಭೂಪಟ – 4 ಕರ್ನಾಟಕದ ಭೌಗೋಳಿಕ ಲಕ್ಷಣಗಳು

## ಕರಾವಳಿ ಪ್ರದೇಶ

ರಾಜ್ಯದ ಪುನರ್ವಿಂಗಡಣೆಯ ಫಲವಾಗಿ ಕರ್ನಾಟಕ ರಾಜ್ಯಕ್ಕೆ ಸಮುದ್ರ ತೀರವು ಲಭ್ಯವಾಯಿತು. ಪೂರ್ವದಲ್ಲಿ ಕರ್ನಾಟಕ ಪ್ರಸ್ಥಭೂಮಿಯ ಪಶ್ಚಿಮ ಘಟ್ಟಗಳ ಅಂಚು (ಎಲ್ಲೆ) ಮತ್ತು ಪಶ್ಚಿಮದಲ್ಲಿ ಅರಬ್ಬೀ ಸಮುದ್ರದ ನಡುವೆ ಹರಡಿರುವ ಕರ್ನಾಟಕದ ಕರಾವಳಿ ಪ್ರದೇಶವು ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಯನ್ನು ಒಳಗೊಂಡಿದ್ದು, ದಕ್ಷಿಣೋತ್ತರವಾಗಿ ಸುಮಾರು 400 ಕಿ.ಮೀ ಉದ್ದವನ್ನು ಹೊಂದಿದೆ.[7] ಅದು ಉತ್ತರದಲ್ಲಿ ಕೊಂಕಣ (ಗೋವಾ) ಕರಾವಳಿಯಿಂದ ದಕ್ಷಿಣದಲ್ಲಿ ಮಲಬಾರ್ (ಕೇರಳ) ಕರಾವಳಿಯವರೆಗೆ ವ್ಯಾಪಿಸಿದೆ. ಇದು 250 ರಿಂದ 350 ಮಿಲಿಯನ್‌ಗಳಷ್ಟು ವರ್ಷಗಳ ಹಿಂದೆ ಕಾರ್ಬೋನಿಫರಸ್ ಯುಗದಲ್ಲಿ ಭೂಸ್ಥಾನಪಲ್ಲಟ ಅಥವಾ ಶಿಲಾಸ್ಥರ ಭಂಗಗಳ ಕಾರ್ಯಾಚರಣೆಯಿಂದ ಸಮುದ್ರದಲ್ಲಿ ಭೂಭಾಗವು ಮೇಲೆತ್ತಲ್ಪಟ್ಟಿದ್ದರ ಪರಿಣಾಮವಾಗಿ ರಚನೆಯಾಗಿದೆಯೆಂದು ಭೂವಿಜ್ಞಾನಿಗಳೂ ಅಭಿಪ್ರಾಯಪಟ್ಟಿದ್ದಾರೆ. ಕರ್ನಾಟಕ ಕರಾವಳಿ ಪ್ರದೇಶವು ಹೆಚ್ಚು ಕಡಿದಾಗಿದ್ದು ಮೇಲೆ ಹೋದಂತೆ ಕಿರಿದಾಗುತ್ತದೆ. ಏಕೆಂದರೆ ಇದಕ್ಕೆ ಪಶ್ಚಿಮ ಘಟ್ಟಗಳ ಸಹ್ಯಾದ್ರಿ ಸರಣಿಯು ಸಮುದ್ರಕ್ಕೆ ಸಮೀಪವಾಗಿರುವುದು ಪ್ರಮುಖ ಕಾರಣವಾಗಿದೆ. ಸಮುದ್ರ ಮಟ್ಟದಿಂದ 200 ಮೀಟರ್‌ಗಳಷ್ಟು ಎತ್ತರವಾಗಿದೆ. ಉತ್ತರ ಕನ್ನಡ ಜಿಲ್ಲೆಗೆ ಸೇರಿದ ಕರಾವಳಿ ತೀರ ಬಹುಪಾಲು ಕಿರಿದಾಗಿದ್ದು, ಕಾರಾವಾರ, ಹೊನ್ನಾವರ, ಭಟ್ಕಳ ಮುಂತಾದವುಗಳ ಕಡೆ ಸಹ್ಯಾದ್ರಿಯ ಅಂಚು ಸಮುದ್ರದೊಳಗೆ ಚಾಚಿರುವುದು ಕಂಡುಬರುತ್ತದೆ. ಇದರ ಅಗಲವು 13-32 ಕಿ.ಮೀನಷ್ಟಿದೆ. ದಕ್ಷಿಣ ಕಡೆಗೆ ಹೋದಂತೆ ಸ್ವಲ್ಪಮಟ್ಟಿಗೆ ಅಗಲವು ಹೆಚ್ಚಾಗುವುದು. ಅಂದರೆ 50 ರಿಂದ 60 ಕಿ.ಮೀ. ಗಳಷ್ಟು ಅಗಲವಾಗಿರುತ್ತದೆ.[8]

ಈ ಕರಾವಳಿಯ ಮೂಲಕ ಹರಿಯುವ ನದಿಗಳು ಅಲ್ಲಲ್ಲಿ ಕೊರಕಲುಗಳನ್ನು ಸೃಷ್ಟಿಸುತ್ತವೆ. ಅವು ಮೈದಾನವನ್ನು ಬೇರ್ಪಡಿಸುತ್ತದೆ. ಕರಾವಳಿಯ ಉದ್ದಕ್ಕೂ ಮನೋಹರವಾದ ಪ್ರಕೃತಿಯ ಸೌಂದರ್ಯ ಮತ್ತು ಬಂದರುಗಳಿರುವುದು ಒಂದು ವೈಶಿಷ್ಟವಾಗಿರುತ್ತದೆ. ಮಂಗಳೂರು, ಭಟ್ಕಳ, ಮಲ್ಪೆ, ಕಾರವಾರ, ಕುಮಟಾ, ಹೊನ್ನಾವರ ಇತ್ಯಾದಿ ಉದ್ದಕ್ಕೂ ಹಳ್ಳಿಗಳಿವೆ. ಅಲ್ಲಿ ಮೀನುಗಾರಿಕೆಯು ಪ್ರಮುಖ ವೃತ್ತಿಯಾಗಿರುತ್ತದೆ.

ಜೊತೆಗೆ ಕೃಷಿಯೂ ಸಹ ಮುಖ್ಯ ಕಸುಬಾಗಿರುತ್ತದೆ. ಇಲ್ಲಿ ಅಡಿಕೆ, ತೆಂಗು, ಗೋಡಂಬಿ, ಭತ್ತ ಮುಂತಾದ ವಾಣಿಜ್ಯ ಬೆಳೆಗಳನ್ನು ಬೆಳೆಯುವರು.[9]

## ಮಲೆನಾಡು

ಮಲೆನಾಡು ಅತ್ಯಂತ ವಿಭಿನ್ನವಾದ ಪಶ್ಚಿಮ ಘಟ್ಟಗಳ ಪ್ರದೇಶ. ಇದು ಗುಡ್ಡಗಾಡು ಪ್ರದೇಶವಾಗಿದ್ದರೂ ಕರ್ನಾಟಕದ ಸಂಪದ್ಭರಿತ ಪ್ರಾಕೃತಿಕ ವಿಭಾಗಗಳಾಗಿವೆ. ಮಲೆನಾಡು ಅಥವಾ ಸಹ್ಯಾದ್ರಿ ಪ್ರದೇಶವು ಪೂರ್ವಕ್ಕೆ ಮೈದಾನ ಅಥವಾ ಬಯಲುನಾಡು ಹಾಗೂ ಪಶ್ಚಿಮದ ಕರಾವಳಿ ಪ್ರದೇಶಗಳ ಮಧ್ಯಭಾಗದಲ್ಲಿ ವಾಯುವ್ಯದಿಂದ ಆಗ್ನೇಯಕ್ಕೆ ಸಮನಾಂತರವಾಗಿ ಹಬ್ಬಿವೆ. ಭಾರತದ ಪಶ್ಚಿಮ ಕರಾವಳಿಯ ಉದ್ದಕ್ಕೂ ಹಬ್ಬಿರುವ ಕರ್ನಾಟಕದಲ್ಲಿ ಹಂಚಿಕೆಯಾಗಿರುವ ಸಹ್ಯಾದ್ರಿ ಶ್ರೇಣಿಗೆ 'ಮಧ್ಯಸಹ್ಯಾದ್ರಿ' ಎಂದು ಕರೆಯುವರು. ಹಾಗೂ ಇಲ್ಲಿ ಅತ್ಯಧಿಕ ಮಳೆ ಮತ್ತು ದಟ್ಟವಾದ ಸಸ್ಯವರ್ಗಗಳಿರುವುದನ್ನು ಕಾಣಬಹುದಾಗಿದೆ.[10]

ಮಲೆನಾಡು ಪ್ರದೇಶ ಕರಾವಳಿಗೆ ಹೊಂದಿಕೊಂಡಂತೆ ಉತ್ತರದಲ್ಲಿ ಕಾರವಾರದಿಂದ ಪ್ರಾರಂಭಗೊಂಡು ದಕ್ಷಿಣದಲ್ಲಿ ಕೊಳ್ಳೇಗಾಲದವರೆಗೂ 650 ಕಿ.ಮೀ.ಗಳಷ್ಟು ಉದ್ದವಾಗಿದೆ. ಇದು ಸರಾಸರಿ 50 ರಿಂದ 75 ಕಿ.ಮೀ.ಗಳಷ್ಟು ಅಗಲವಾಗಿದೆ. ಕರಾವಳಿಯಿಂದ ಒಮ್ಮೇಲೆ ಗೋಡೆಯಂತೆ ಎದ್ದು ನಿಂತ ಸಹ್ಯಾದ್ರಿ ಬೆಟ್ಟಗಳು ಸಮುದ್ರ ಮಟ್ಟದಿಂದ ಸರಾಸರಿ 900 ಮೀ. ಗಳಷ್ಟು ಎತ್ತರವಾಗಿದೆ. ಕೆಲವು ಭಾಗಗಳಲ್ಲಿ 1500 ಮೀಟರ್‌ಗಳಿಗೂ ಹೆಚ್ಚು ಎತ್ತರವಿರುವ ಕೆಲವು ಗಿರಿಶಿಖರಗಳು ಇವೆ. ಪಶ್ಚಿಮ ಘಟ್ಟಗಳಿಗೆ ಅಡ್ಡವಾಗಿ ಪಶ್ಚಿಮದಿಂದ ಪೂರ್ವಕ್ಕೆ ಅಡ್ಡಗೆರೆಗಳನ್ನು ಎಳೆದರೆ ಕಾಣುವ ಪ್ರಕೃತಿ ದೃಶ್ಯಾವಳಿ ಎಂದರೆ (Cross Section) ವಿವಿಧ ಎತ್ತರಗಳಲ್ಲಿರುವ ಚಿಕ್ಕ ಮತ್ತು ತಗ್ಗು ಪ್ರಸ್ಥಭೂಮಿಗಳು ಪೂರ್ವದ ಕಡೆಗೆ ಸಾಗಿದಂತೆ ಕಿರಿದಾಗಿ ಎತ್ತರಕ್ಕೆ ಹೋದಂತೆ ಹೆಚ್ಚಳ ಕಂಡುಬರುವುದು. ನಂತರ ನವಿರಾದ ಪೂರ್ವ ಮತ್ತು ಪೂರ್ವ – ಉತ್ತರ – ಪಶ್ಚಿಮದ ಕಡೆಗೆ ಇಳಿಜಾರಾಗಿರುವ ಪ್ರಸ್ಥಭೂಮಿಯು ಕಂಡುಬರುತ್ತದೆ.[11]

ಕರ್ನಾಟಕದ ಎತ್ತರದ ಶಿಖರಗಳಲ್ಲಿ ಮುಳ್ಳಯ್ಯನಗಿರಿ (1943 ಮೀ)., ಬಾಬಬುಡನ್‌ಗಿರಿ (ಚಂದ್ರದ್ರೋಣ ಪರ್ವತ 1912 ಮೀ) ಮತ್ತು ಕುದುರೆಮುಖ (1912 ಮೀ), ಕಲಹತ್ತಿಗಿರಿ (1893 ಮೀ), ದೇವೀರಮ್ಮನಗುಡ್ಡ (1817 ಮೀ), ರುದ್ರಗಿರಿ (1715 ಮೀ), ಹೆಬ್ಬಿಬೆಟ್ಟ (1349 ಮೀ) ಮೊದಲಾದ ಶಿಖರಗಳು ಚಿಕ್ಕಮಗಳೂರು ಜಿಲ್ಲೆಯಲ್ಲಿ ಬರುವ ಬಾಬಾಬುಡನ್ ಬೆಟ್ಟಗಳ ಸಾಲುಗಳಂತಿವೆ. ಪಶ್ಚಿಮ ಘಟ್ಟಗಳ ಪಶ್ಚಿಮ ಭಾಗದಲ್ಲಿ ಇನ್ನೂ ಅನೇಕ ಶಿಖರಗಳು ಕಾಣಬರುತ್ತವೆ. ಅವುಗಳಲ್ಲಿ ಬಲ್ಲಾಳರಾಯನದುರ್ಗ (1520 ಮೀ), ಮೆರ್ತಿಗುಡ್ಡ (1677 ಮೀ), ವರಾಹ ಪರ್ವತ (1471 ಮೀ), ದೇವರಬೆಟ್ಟ (1294 ಮೀ) ಸುಬ್ರಹ್ಮಣ್ಯ ಅಥವಾ ಪುಷ್ಪಗಿರಿ (1731 ಮೀ), ಜೇನುಕಲ್ಲುಗುಡ್ಡ (1402 ಮೀ), ಮೂರು ಕಣ್ಣುಗುಡ್ಡ (1312 ಮೀ), ಕೊಡಚಾದ್ರಿ (1357 ಮೀ) ಮುಂತಾದವುಗಳನ್ನು ಕಾಣಬಹುದು.[12]

ಸಹ್ಯಾದ್ರಿ ಘಟ್ಟಗಳ ಎತ್ತರವು ಉತ್ತರದಲ್ಲಿ ಅಷ್ಟೇನೂ ಹೆಚ್ಚಾಗಿಲ್ಲದಿದ್ದರೂ ದಕ್ಷಿಣಕ್ಕೆ ಬಂದಂತೆ ಹೆಚ್ಚಾಗುವುದು. ಈ ಪಶ್ಚಿಮಘಟ್ಟಗಳ ಭಾಗವು ಕಡಿದಾದ ಇಳಿಜಾರಿನಿಂದಲೂ ಮತ್ತು ಪೂರ್ವ ಭಾಗವು ಬಳಿದಾದ ಇಳಿಜಾರಿನಿಂದ ಕೂಡಿದ್ದು, ಪೂರ್ವದ ಮೈದಾನದಲ್ಲಿ ಕ್ರಮೇಣ ವಿಲೀನಗೊಳ್ಳುವುದು. ಇವು ಅವಿಚ್ಛನ್ನವಾಗಿ ಹಬ್ಬಿದ್ದು, ಕೆಲವೇ ಭಾಗಗಳಲ್ಲಿ ಮಾತ್ರ ಸಂಚಾರಕ್ಕೆ ಕಣಿವೆ ಮಾರ್ಗಗಳಿವೆ. ಉದಾ: ಚಿಕ್ಕಮಗಳೂರು – ಮಂಗಳೂರುಗಳ ನಡುವಣ ಚಾರ್ಮುಡಿ ಘಾಟಿ, ಶಿವಮೊಗ್ಗ–ಉಡುಪಿಗಳ ನಡುವಣ ಆಗೊಂಬೆ ಘಾಟ್, ಉತ್ತರ ಕನ್ನಡ ಜಿಲ್ಲೆಯಲ್ಲಿ ಕೊಲ್ಲೂರು ಘಾಟ್ ಇತ್ಯಾದಿಗಳು ಕಂಡುಬರುತ್ತದೆ.[13]

ಸಹ್ಯಾದ್ರಿ ಬೆಟ್ಟಗಳು ಸುಮಾರು 250 ಮಿಲಿಯನ್ ವರ್ಷಗಳ ಹಿಂದೆ ಕಾರ್ಬೋನಿಫರಸ್ ಯುಗದಲ್ಲಿ ಸಂಭವಿಸಿದ ಭೂಸ್ಥಾನಪಲ್ಲಟ ಹಾಗೂ ಶಿಲಾಸ್ತರ ಭಂಗಗಳ ಪರಿಣಾಮದಿಂದ ಉಂಟಾಗಿದೆಯೆಂದು ಭೂ ವಿಜ್ಞಾನಿಗಳು ಅಭಿಪ್ರಾಯ ಪಟ್ಟಿರುತ್ತಾರೆ. ನಿರಂತರವಾದ ನಗ್ನೀಕರಣದ ಕರ್ತೃಗಳ ಕಾರ್ಯಾಚರಣೆಗೊಳಪಟ್ಟು ಮಾರ್ಪಾಡು ಹೊಂದಿ ಈಗಿನ ಪರಿಸ್ಥಿತಿಯನ್ನು ತಳೆದಿದೆ. ಈ ಘಟ್ಟಗಳಲ್ಲಿ ಸಾಕಷ್ಟು ಮಳೆಯಾಗುವುದು. ಅದರಲ್ಲೂ ಪಶ್ಚಿಮ ಭಾಗದ ಗಾಳಿಗೆ ಅಭಿಮುಖವಾದ ಭಾಗಗಳಿಗೆ 2500ಮಿ.ಮೀ.ಗಳಿಗಿಂತಲೂ ಹೆಚ್ಚು

ವಾರ್ಷಿಕ ಮಳೆಯಾಗುವುದು. ಆದರೆ ಪೂರ್ವದ ಕಡೆಗೆ ಹೋದಂತೆಲ್ಲಾ ಮಳೆಯ ಪ್ರಮಾಣವು ಕಡಿಮೆಯಾಗುವುದು. ಈ ಘಟ್ಟಗಳ ಮೂಲಕ ಹರಿಯುವ ನದಿಗಳು ರಮ್ಯವಾದ ಜಲಪಾತ ಮತ್ತು ರಭಸವಾದ ಇಳಿತ (Rapids) ಗಳನ್ನುಂಟು ಮಾಡುತ್ತವೆ. ಉದಾಹರಣೆ : ಜೋಗ್‌ಜಲಪಾತ.[14]

## ನದಿಗಳು

ಕರ್ನಾಟಕ ರಾಜ್ಯದಲ್ಲಿ ಅನೇಕ ನದಿ ಜಾಲಗಳಿವೆ. ದೇಶದ ಮೇಲ್ಮೈ ಲಕ್ಷಣಗಳಲ್ಲಿ ಜಲಸಂಪನ್ಮೂಲ 17 ಲಕ್ಷ ಮಿ.ಘ.ಮೀ.ಗಳಲ್ಲಿ ಕರ್ನಾಟಕ ರಾಜ್ಯವು ಶೇ 6 ಭಾಗವನ್ನು ಹೊಂದಿದೆ. ಇದರಲ್ಲಿ ಸುಮಾರು ಶೇ. 40 ಭಾಗವು ಪೂರ್ವಾಭಿಮುಖ ನದಿಗಳಿಂದ ಹರಿಯುತ್ತದೆ. ರಾಜ್ಯದ ನದಿಯ ಜಾಲವು ಮೇಲ್ಮೈ ಲಕ್ಷಣ, ಮಳೆಯ ಹಂಚಿಕೆ ಹಾಗೂ ಜಲ ವಿಭಾಜಕಗಳನ್ನಾಧರಿಸಿರುವುದು ಕಂಡುಬರುತ್ತದೆ. ಪರಿಣಾಮವಾಗಿ ರಾಜ್ಯದ ಪಶ್ಚಿಮದ ಮಧ್ಯ ಭಾಗದಲ್ಲಿ ದಕ್ಷಿಣೋತ್ತರವಾಗಿ ಹಂಚಿಕೆಯಾಗಿರುವ ಪಶ್ಚಿಮ ಘಟ್ಟಗಳು ಹಾಗೂ ದಕ್ಷಿಣದ ಬೆಟ್ಟಗಳ ಸಾಲುಗಳಲ್ಲಿ ನದಿಗಳು ಉಗಮಿಸುತ್ತವೆ.[15]




ಭೂಪಟ – 5 ಕರ್ನಾಟಕದ ನದಿಗಳು

## ಕರ್ನಾಟಕದ ಪ್ರಮುಖ ನದಿಗಳು

| ಕ್ರ. | ನದಿಗಳು | ಉಗಮಸ್ಥಳ | ಸಂಗಮ ಸ್ಥಳ | ರಾಜ್ಯದಲ್ಲಿನ ಉದ್ದ | ರಾಜ್ಯದಲ್ಲಿನ ಜಲಾನಯನ ಪ್ರದೇಶ (ಚ.ಕಿ.ಮೀ.ನಲ್ಲಿ) |
|---|---|---|---|---|---|
| 1 | ತುಂಗಭದ್ರಾ | ಪ.ಘಟ್ಟ (ಗಂಗಾಮೂಳ) | ಬಂಗಾಳಕೊಲ್ಲಿ (ದಿವಿ ಬಳಿ) | 482 | 113030 |
| 2 | ಕಾವೇರಿ | ಪ.ಘಟ್ಟ (ತಲಕಾವೇರಿ) | | 320 | 36120 |
| 3 | ಅರ್ಕಾವತಿ | ನಂದಿಬೆಟ್ಟ | ಕಾವೇರಿ (ಬೆಂಗಳೂರು ಜಿಲ್ಲೆ) | 161 | 4351 |
| 4 | ಕಬಿನಿ | ಉತ್ತರ ವೈನಾಡು (ಕೇರಳ) | ಕಾವೇರಿ (ಟಿ.ನರಸೀಪುರ) | 230 | 7040 |
| 5 | ಶಿಂಷಾ | ತಿಪಟೂರು (ತುಮಕೂರು) | ಕಾವೇರಿ (ಮಂಡ್ಯ ಜಿಲ್ಲೆ ಮಳವಳ್ಳಿ) | 215 | 8470 |
| 6 | ಹೇಮಾವತಿ | ಪ.ಘಟ್ಟ (ಚಿಕ್ಕಮಗಳೂರು) | ಕಾವೇರಿ (ಮಾವಿನಕೆರೆ ಮಂಡ್ಯ) | 245 | 5419 |
| 7 | ಉತ್ತರ ಪಿನಾಕಿನಿ | ನಂದಿದುರ್ಗ (ಚೆನ್ನಕೇಶವಬೆಟ್ಟ) | ಬಂಗಾಳಕೊಲ್ಲಿ (ನೆಲ್ಲೂರು ಬಳಿ) | 61 | 6970 |
| 8 | ಕಾರಂಜ | ಮೇಡಕ್ ಜಿಲ್ಲೆ (ಆಂಧ್ರ ಪ್ರದೇಶ ಬೀರಹಳ್ಳಿ ಪಕ್ಕ ) | ಮಾಂಜರ (ನಾರದ ಸಂಗಮ) | 74 | 2839 |
| 9 | ದಕ್ಷಿಣ ಪಿನಾಕಿನಿ | ನಂದಿದುರ್ಗ ಬೆಟ್ಟ (ಹಾರ್ವಶೆಟ್ಟಿ ಗ್ರಾಮದ ಬಳಿ) | ಬಂಗಾಳಕೊಲ್ಲಿ (ಕಡ್ಲೂರು ಬಳಿ) | 79 | 3760 |
| 10 | ಪಾಲಾರ್ | ನಂದಿದುರ್ಗ ಬೆಟ್ಟ (ತಳಗವಾರ ಗ್ರಾಮದ ಬಳಿ, ಕೋಲಾರ) | ಬಂಗಾಳಕೊಲ್ಲಿ (ಚೆನ್ನೈ ಬಳಿ) | 93 | 2970 |
| 11 | ವೇದಾವತಿ | ಪ.ಘಟ್ಟ (ಬಾಬಾಬುಡನ್‌ಗಿರಿ) | ತುಂಗಭದ್ರ (ಶಿರಗುಪ್ಪಾ ಬಳಿ) | 293 | 23498 |

## ಜಲ ವಿಭಾಜಕ ರೇಖೆ (Water Shed)

ಜಲ ವಿಭಾಜಕ ರೇಖೆಯು ಪಶ್ಚಿಮ ಘಟ್ಟಗಳನ್ನು ಅನುಸರಿಸಿ ಉತ್ತರದಿಂದ ದಕ್ಷಿಣಕ್ಕೂ ಹಾಗೂ ಬಲ್ಲಾಳರಾಯನ ದುರ್ಗದಿಂದ ಪಶ್ಚಿಮ–ಪೂರ್ವಾಭಿಮುಖವಾಗಿ ಹಾದು ದೇವರಾಯನ ದುರ್ಗದವರೆಗೆ ತಲುಪಿದ ಮೇಲೆ ಅಲ್ಲಿಂದ ಒಂದು ರೇಖೆಯು ನಂದಿದುರ್ಗದ ಮೂಲಕ ದಕ್ಷಿಣಾಭಿಮುಖವಾಗಿ ಸಾಗಿ ಆನೇಕಲ್ಲಿನವರೆಗೂ, ಮತ್ತೊಂದು ಉತ್ತರದ ಕಡೆಗೆ ತಿರುಗಿ ಪಾವಗಡದವರೆಗೆ ಸಾಗುವುದು. ಬಲ್ಲಾಳರಾಯನದುರ್ಗದ ಉತ್ತರದ ಕಡೆಗೆ ಎಳೆಯಲ್ಪಡುವ ಜಲ ವಿಭಾಜಕ ರೇಖೆಯು ಬಾಬಾಬುಡನ್‌ಗಿರಿ ಸಾಲಿನ ಪಶ್ಚಿಮದಂಚಿನವರೆಗೂ ಹಾಯ್ದು ಪುನಃ ಆಗ್ನೇಯ ದಿಕ್ಕಿಗೆ ತಿರುಗಿ ಬೇಲೂರು ಹಳೇಬೀಡುಗಳ ಮಧ್ಯದಲ್ಲಿ ಹಾಸನ ನಂತರ ಈಶಾನ್ಯದ ಕಡೆಗೆ ತಿರುಗಿ ಹಾರ್ನಳ್ಳಿ ಮತ್ತು ಹಾಗಲವಾಡಿ ದಕ್ಷಿಣ ಬೆಟ್ಟಗಳನ್ನು ಬಳಸಿ ಕೊರಟಗೆರೆಯವರೆಗೂ ಮುಂದುವರೆಯುವುದು. ಮತ್ತೊಂದು ಶಾಖೆಯು ಉತ್ತರಕ್ಕೆ ಶಿವಮೊಗ್ಗ ಸಾಗರಗಳ ಮೂಲಕ ಕುದುರೆಲಾಳದಾಕಾರವಾಗಿ ಮುಂದುವರೆದು ಧಾರವಾಡ ಸಮೀಪ ಪಶ್ಚಿಮಕ್ಕೆ ತಿರುಗಿ ಗೋವಾ ಗಡಿಯವರೆಗೂ ಮುಂದುವರೆಯುವುದು.

ಜಲ ವಿಭಾಜಕ ರೇಖೆ ಮತ್ತು ಭೂ ಸ್ವರೂಪಗಳ ಇಳಿಜಾರನ್ನು ಅನುಸರಿಸಿ ಹರಿಯುವ ದಿಕ್ಕುಗಳನ್ನಾಧರಿಸಿ ಕರ್ನಾಟಕ ನದಿಗಳನ್ನು ಎರಡು ಪ್ರಮುಖ ಗುಂಪುಗಳಾಗಿ ವಿಂಗಡಿಸಬಹುದು.

1. ಪೂರ್ವಾಭಿಮುಖವಾಗಿ ಹರಿಯುವ ನದಿಗಳು
2. ಪಶ್ಚಿಮಾಭಿಮುಖವಾಗಿ ಹರಿಯುವ ನದಿಗಳು

ಕೃಷ್ಣಾ, ಕಾವೇರಿ, ಪೆನ್ನಾರ್ ಮತ್ತು ಪಾಲಾರ್ ಹಾಗೂ ಅವುಗಳ ಉಪನದಿಗಳು ಕರ್ನಾಟಕದಲ್ಲಿ ಪೂರ್ವಾಭಿಮುಖವಾಗಿ ಹರಿಯುವ ಪ್ರಮುಖ ನದಿಗಳಾಗಿವೆ. ಪೂರ್ವಕ್ಕೆ ಹರಿಯುವ ನದಿಗಳು ಪಶ್ಚಿಮಕ್ಕೆ ಹರಿಯುವ ನದಿಗಳಿಗಿಂತ ಉದ್ದವಾಗಿದ್ದು, ಅವುಗಳ ಪಾತ್ರ ವಿಶಾಲ ಮತ್ತು ತಿರುವುಗಳಿಂದ ಕೂಡಿರುತ್ತವೆ. ಇವು ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ ಪೂರ್ವ ಮತ್ತು ಆಗ್ನೇಯದ ಕಡೆಗೆ ಹರಿದು ಅಂತಿಮವಾಗಿ ಬಂಗಾಳ ಕೊಲ್ಲಿಯನ್ನು ಸೇರುತ್ತದೆ.

## ಕೃಷ್ಣಾನದಿ

ಕೃಷ್ಣಾನದಿ ಕಣಿವೆಯ ಪ್ರದೇಶದ ಶೇ. 43.74' ಭಾಗವು ರಾಜ್ಯದಲ್ಲಿದೆ. ಕೃಷ್ಣಾ ನದಿಯ ಒಟ್ಟು ಹರಿವಿನ (1400 ಕಿ.ಮೀ) 483 ಕಿ.ಮೀ ದೂರದ ಹರಿವಿನ ಪ್ರದೇಶವು ಮಾತ್ರ ರಾಜ್ಯದಲ್ಲಿದೆ. ತುಂಗ-ಭದ್ರಾ ನದಿಯ ನೀರಾವರಿ ಪ್ರದೇಶವು (66237 ಚದರ ಕಿ.ಮೀ) ಅತಿ ದೊಡ್ಡದಾಗಿದ್ದು ಮತ್ತು ಇದು ಕೃಷ್ಣಾನದಿಯ ಉಪನದಿಗಳಲ್ಲಿ ಪ್ರಮುಖವಾದದ್ದು, ಕೃಷ್ಣಾ ನದಿಯ ಇತರ ಪ್ರಮುಖ ಉಪನದಿಗಳೆಂದರೆ ಭೀಮಾ, ಕೊಯ್ನಾ, ಪಂಚಗಂಗಾ, ದೂಧಗಂಗಾ, ಹಿರಣ್ಯಕೇಶಿ, ಮಲಪ್ರಭಾ ಮತ್ತು ಘಟಪ್ರಭಾ, ಕೊಯ್ನಾ ಮತ್ತು ಪಂಚಗಂಗಾ ನದಿಗಳನ್ನು ಬಿಟ್ಟು ಉಳಿದವುಗಳೆಲ್ಲಾ ಕರ್ನಾಟಕ ರಾಜ್ಯದ ಮೂಲಕ ಹರಿಯುತ್ತವೆ.

ಕೃಷ್ಣಾನದಿಯು ಮಹಾರಾಷ್ಟ್ರದಲ್ಲಿ ಪಶ್ಚಿಮ ಘಟ್ಟಗಳ ನಡುವೆ ಮಹಾಬಲೇಶ್ವರದ ಸಮೀಪ ಸಮುದ್ರ ಮಟ್ಟಕ್ಕಿಂತ 1366.5 ಮೀ. ಎತ್ತರದಲ್ಲಿ ಉಗಮಗೊಂಡಿದೆ. ಇದು ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರಪ್ರದೇಶ ರಾಜ್ಯಗಳ ಮುಖಾಂತರ ಸುಮಾರು 1400 ಕಿ.ಮೀ ಉದ್ದ ಪಶ್ಚಿಮದಿಂದ ಪೂರ್ವಕ್ಕೆ ಹರಿದು ಬಂಗಾಳಕೊಲ್ಲಿಯನ್ನು ಸೇರುತ್ತದೆ. ಕೃಷ್ಣಾ ನದಿಗೆ 2,56,000 ಚದರ ಕಿ.ಮೀ. ವಿಸ್ತಾರವಾದ ಜಲಾನಯನ ಭೂಮಿ ಇದ್ದು, ತನ್ನ ಉಗಮ ಸ್ಥಾನದಿಂದ ಸುಮಾರು 299ಕಿ.ಮೀ ದೂರ ಕ್ರಮಿಸಿದ ನಂತರ ದೂಧ್‌ಗಂಗಾ ಉಪನದಿಯೊಡನೆ ಸಂಗಮವಾಗುವುದರೊಂದಿಗೆ ಕೃಷ್ಣಾ ನದಿಯು ಕರ್ನಾಟಕವನ್ನು ಪ್ರವೇಶಿಸುವುದು.[16]

## ತುಂಗ-ಭದ್ರಾ

ಪಶ್ಚಿಮ ಘಟ್ಟಗಳಲ್ಲಿ ಚಿಕ್ಕಮಗಳೂರು ಜಿಲ್ಲೆಗೆ ಸೇರಿದ 'ಗಂಗಾಮೂಲ' (ವರಾಹ ಪರ್ವತ) ಎಂಬಲ್ಲಿ 'ತುಂಗಾ' ಮತ್ತು 'ಭದ್ರಾ' ಎಂಬ ಎರಡು ಜಲಮೂಲಗಳು ಸುಮಾರು 1198 ಮೀ. ಎತ್ತರದಲ್ಲಿ ಉಗಮ ಹೊಂದುತ್ತವೆ. ಈ ಅವಳಿ ನದಿಗಳು ಶಿವಮೊಗ್ಗ ಜಿಲ್ಲೆಯ 'ಕೂಡ್ಲಿ' ಎಂಬಲ್ಲಿ ಸಮುದ್ರ ಮಟ್ಟದಿಂದ 610 ಮೀ ಎತ್ತರದಲ್ಲಿ ಸಂಗಮಗೊಂಡು ಮುಂದೆ 'ತುಂಗಭದ್ರ' ನದಿಯಾಗಿ ಹರಿಯುತ್ತದೆ. ಈ ನದಿಯು ಸುಮಾರು 640 ಕಿ.ಮೀ ದೂರ

ಈಶಾನ್ಯದ ಕಡೆಗೆ ಹರಿದು ಆಂಧ್ರಪ್ರದೇಶದ ಕರ್ನೂಲ್ ಸಮೀಪ 'ಆಲಂಪುರ' ಎಂಬಲ್ಲಿ ಕೃಷ್ಣಾ ನದಿಯನ್ನು ಸೇರುತ್ತದೆ. ಆದರೆ ಕರ್ನಾಟಕದಲ್ಲಿ ಉದ್ದ 293 ಕಿ.ಮೀ ಮಾತ್ರ. ಇದರ ಜಲಾನಯನ ಪ್ರದೇಶ ಸುಮಾರು 69,562 ಚ.ಕಿ.ಮೀ.ಗಳಾಗಿರುತ್ತದೆ. ಇದರಲ್ಲಿ 57,670 ಚ.ಕಿ.ಮೀ ಪ್ರದೇಶವು ಕರ್ನಾಟಕದಲ್ಲೂ, ಉಳಿದಿದ್ದು ಆಂಧ್ರಪ್ರದೇಶಕ್ಕೆ ಸೇರಿದೆ. ತುಂಗಭದ್ರಾ ನದಿಗೆ ಹಗರಿ ಅಥವಾ ವೇದಾವತಿ ಮತ್ತು ವರದಾ ಎಂಬ ನದಿಗಳು ಪ್ರಮುಖ ಉಪನದಿಗಳಾಗಿವೆ.[17]

## ಭೀಮಾ

ಭೀಮಾ ನದಿಯು ಪಶ್ಚಿಮ ಘಟ್ಟಗಳಲ್ಲಿ ಮಹಾರಾಷ್ಟ್ರದ ಭೀಮಾಶಂಕರ (945 ಮೀ) ಎಂಬಲ್ಲಿ ಹುಟ್ಟುತ್ತದೆ. ಇದು ಮಹಾರಾಷ್ಟ್ರ ಮತ್ತು ಕರ್ನಾಟಕ ರಾಜ್ಯಗಳಲ್ಲಿ ಆಗ್ನೇಯಾಭಿಮುಖವಾಗಿ ಹರಿದು ರಾಯಚೂರು ತಾಲ್ಲೂಕಿನ ಕೂಡಲು ಬಳಿ ಕೃಷ್ಣಾ ನದಿಯನ್ನು ಸೇರುತ್ತದೆ. ಸುಮಾರು 862 ಕಿ.ಮೀ ದೂರ ಪ್ರವಹಿಸುವ ಇದರ ಜಲಾನಯನ ಪ್ರದೇಶ 69,144 ಚ.ಕಿ.ಮೀಗಳು. ಇದರಲ್ಲಿ 18,315 ಚ.ಕಿ.ಮೀಗಳಷ್ಟು ಮಾತ್ರ ಕರ್ನಾಟಕದಲ್ಲಿದೆ. ಈ ನದಿಗೆ ಮುಳಾ, ಮುಟಾ, ಘೋಡ್, ನೀರಾ, ಮಾನ್ ಮತ್ತು ಸಿನಾಲ್ ಎಂಬ ಉಪ ನದಿಗಳು ಸೇರುತ್ತವೆ.[18]

## ಘಟಪ್ರಭಾ

ಘಟಪ್ರಭಾ ನದಿಯು ಮಹಾರಾಷ್ಟ್ರದ ಪಶ್ಚಿಮ ಘಟ್ಟಗಳಲ್ಲಿ ರತ್ನಗಿರಿ ಅಂಬೋಲ ಘಟ್ಟದ ಬಳಿ (888 ಮೀ) ಹುಟ್ಟುತ್ತದೆ. ಕರ್ನಾಟಕದ ಬೆಳಗಾವಿ ಜಿಲ್ಲೆಯನ್ನು ಪ್ರವೇಶಿಸಿ ರಾಜ್ಯದಲ್ಲಿ 216 ಕಿ.ಮೀ ದೂರ ಪೂರ್ವಕ್ಕೆ ಹರಿದು ಬಾಗಲಕೋಟೆಯ ಆಲಮಟ್ಟಿಯ ಸಮೀಪ (ಹೆಡಲೂರು ಬಳಿ) ಕೃಷ್ಣಾ ನದಿಯನ್ನು ಸೇರುತ್ತದೆ. ಈ ನದಿಯಾಗಿ ಗಿರಿಕಂದರಗಳ ನಡುವೆ ಹರಿದು, ಗೋಕಾಕ್ ಬಳಿ 62 ಮೀ, ಎತ್ತರದಿಂದ ಧುಮುಕಿ ಜಲಪಾತವನ್ನುಂಟು ಮಾಡಿದೆ. ಇದೇ ಗೋಕಾಕ್ ಫಾಲ್ಸ್ ಈ ನದಿಗೆ ಹಿಡ್ಕಲ್ ಜಲಾಶಯವನ್ನು ನಿರ್ಮಿಸಲಾಗಿದೆ. ಹಿರಣ್ಯಕೇಶಿ, ತಾಮ್ರಪರ್ಣಿ ಮತ್ತು ಮಾರ್ಕಂಡೇಯಗಳೂ ಘಟಪ್ರಭಾ ನದಿಯ ಪ್ರಮುಖ ಉಪನದಿಗಳಾಗಿವೆ.[19]

## ಮಲಪ್ರಭಾ

ಮಲಪ್ರಭಾ ನದಿಯು ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ 792 ಮೀ ಎತ್ತರದ ಪಶ್ಚಿಮ ಘಟ್ಟಗಳಿಗೆ ಸೇರಿದ ಜೋಹನ್ ಘಾಟದ ಪಕ್ಕದಲ್ಲಿ (ಕುಣಕುಂಬಿಯ ಬಳಿ) ಹುಟ್ಟುತ್ತದೆ. ಇದು ಪ್ರಾರಂಭದಲ್ಲಿ ಪೂರ್ವಾಭಿಮುಖವಾಗಿ ಬೈಲಹೊಂಗಲ, ಸವದತ್ತಿ ಮತ್ತು ರಾಮದುರ್ಗ ತಾಲ್ಲೂಕುಗಳ ಮೂಲಕ ಹರಿದು ನಂತರ ಈಶಾನ್ಯಾಭಿಮುಖವಾಗಿ ಬಾಗಲಕೋಟೆ ಜಿಲ್ಲೆಯನ್ನು ಒಳಗೊಂಡು ಕೂಡಲ ಎಂಬಲ್ಲಿ ಕೃಷ್ಣಾನದಿಯನ್ನು ಸೇರುತ್ತದೆ. ಈ ನದಿಯ ಉದ್ದ 304 ಕಿ.ಮೀ ಮತ್ತು ಜಲಾನಯನ ಪ್ರದೇಶದ ವಿಸ್ತೀರ್ಣವು 11504 ಚದರ ಕಿ.ಮೀ. ಇದರ ಎಲ್ಲಾ ಪ್ರದೇಶವು ಕರ್ನಾಟಕದಲ್ಲೇ ಇದ್ದು, ಇದಕ್ಕೆ ಮಲಪ್ರಭಾ ಅಣೆಕಟ್ಟೆಯನ್ನು (ನವಿಲು ತೀರ್ಥ) ನಿರ್ಮಿಸಲಾಗಿದೆ. ಈ ನದಿಗೆ ಬೆಣ್ಣೆಹಳ್ಳಿ, ಹಿರೇಹಳ್ಳ ಮತ್ತು ತಾಸ್ ನದಿಗಳೆಂಬ ಪ್ರಮುಖ ಉಪನದಿಗಳು ಸೇರುತ್ತವೆ.[20]

## ಡೋಣಿ

ಡೋಣಿ ನದಿಯು ಮಹಾರಾಷ್ಟ್ರದ ದತ್ತ ಆಟ್ಟಣದ ಬಳಿ ಹುಟ್ಟಿ ಬಿಜಾಪುರ ಜಿಲ್ಲೆಯನ್ನು ಪ್ರವೇಶಿಸಿ ಆಗ್ನೇಯ ದಿಕ್ಕಿನಲ್ಲಿ ಗುಲ್ಬರ್ಗ ಜಿಲ್ಲೆಯ ಜಮಾಲಪುರ ಗ್ರಾಮದ ಬಳಿ ಕೃಷ್ಣಾನದಿಯನ್ನು ಸೇರುತ್ತದೆ. ಕರ್ನಾಟಕದಲ್ಲಿ 176 ಕಿ.ಮೀ ಉದ್ದ ಹರಿಯುವ ಡೋಣಿ ನದಿಯ ಒಟ್ಟು ಜಲಾನಯನ ಪ್ರದೇಶ 1025 ಚ.ಕಿ.ಮೀ.[21] ಇದು ಜಲದುರ್ಗದ ಮೇಲ್ಭಾಗದಲ್ಲಿ 122 ಮೀ. ಎತ್ತರದಿಂದ ಧುಮುಕಿ ಛಾಯಾಭಗವತಿ ಎಂಬ ಜಲಪಾತವನ್ನುಂಟು ಮಾಡಿದೆ.

## ಕಾವೇರಿ ನದಿ

ಕಾವೇರಿ ನದಿ ವ್ಯವಸ್ಥೆಯು ಕರ್ನಾಟಕದ ನದಿ ವ್ಯವಸ್ಥೆಗಳಲ್ಲೇ ಅತ್ಯಂತ ಪ್ರಮುಖವಾದುದು. ಈ ನದಿಯ ಪವಿತ್ರತೆ, ವ್ಯಾಪಕತೆ, ರಮಣೀಯತೆ, ಕೃಷಿ ವಿದ್ಯುಚ್ಛಕ್ತಿ ತಯಾರಿಕೆ ಇನ್ನೂ ಮುಂತಾದ ಉಪಯೋಗಗಳ ಸಮಗ್ರ ದೃಷ್ಟಿಯಿಂದ 'ದಕ್ಷಿಣ ಗಂಗೆ' ಎಂದು ಕರೆಯಲ್ಪಟ್ಟಿದೆ. ಈ ನದಿಯ ಜಲಾನಯನ ಪ್ರದೇಶವು 81.150 ಚ.ಕಿ.ಮೀ.ಗಳು, ಇದರಲ್ಲಿ ಶೇ. 42.2 ಭಾಗದಷ್ಟು (36,130 ಚ.ಕಿ.ಮೀ) ಕರ್ನಾಟಕದಲ್ಲೂ ಮತ್ತು ಶೇ.

54.30 ಭಾಗದಷ್ಟು ತಮಿಳುನಾಡು ರಾಜ್ಯದಲ್ಲೂ ಹಂಚಿಕೆಯಾಗಿದೆ. ಉಳಿದ ಶೇ. 3.50 ಭಾಗವು ಮಾತ್ರ ಕೇರಳ ರಾಜ್ಯದಲ್ಲಿದೆ. ಕರ್ನಾಟಕದಲ್ಲಿ ಕಾವೇರಿ ನದಿಯ ಉಪನದಿಗಳಾದ ಹೇಮಾವತಿ, ಲಕ್ಷ್ಮಣತೀರ್ಥ, ಹಾರಂಗಿ, ಕಬಿನಿ, ಸುವರ್ಣಾವತಿ, ಲೋಕಪಾವನಿ, ಶಿಂಷಾ ಮತ್ತು ಅರ್ಕಾವತಿಗಳಾಗಿವೆ.

ಕಾವೇರಿ ನದಿಯು ಪಶ್ಚಿಮ ಘಟ್ಟದಲ್ಲಿ ಕೊಡಗು ಜಿಲ್ಲೆಗೆ ಸೇರಿದ ಬ್ರಹ್ಮಗಿರಿ ಬೆಟ್ಟದ 'ತಲಕಾವೇರಿ' ಎಂಬಲ್ಲಿ ಉಗಮಗೊಂಡು, ಕರ್ನಾಟಕ ಮತ್ತು ತಮಿಳುನಾಡುಗಳಲ್ಲಿ ಪೂರ್ವಾಭಿಮುಖವಾಗಿ ಹರಿದು 'ಕಾವೇರಿ ಪಟ್ಟನಮ್' ಎಂಬಲ್ಲಿ ಬಂಗಾಳಕೊಲ್ಲಿಯನ್ನು ಸೇರುತ್ತದೆ. ಈ ನದಿಯ ಉದ್ದ 805 ಕಿ.ಮೀ ಅದರಲ್ಲಿ ಕೇವಲ 320 ಕಿ.ಮೀ ಉದ್ದದ ಪಾತ್ರವು ಮಾತ್ರ ಕರ್ನಾಟಕದಲ್ಲಿದ್ದು, ಉಳಿದ ಭಾಗವು ತಮಿಳುನಾಡಿನಲ್ಲಿರುವುದು. ಕಾವೇರಿ ನದಿಯು ಕರ್ನಾಟಕದ ಕೊಡಗು, ಮೈಸೂರು, ಹಾಸನ, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಹರಿಯುತ್ತದೆ. ಇದರ ಮಾರ್ಗದುದ್ದಕ್ಕೂ ಅನೇಕ ಜಲಪಾತಗಳಿವೆ. ಚುಂಚನಕಟ್ಟೆ (20 ಮೀ), ಶಿವನಸಮುದ್ರ (100 ಮೀ) ಮತ್ತು ಹೊಗೇನಕಲ್ ಜಲಪಾತಗಳು ಪ್ರಮುಖವಾದವು.[22]

## ಹೇಮಾವತಿ

ಹೇಮಾವತಿಯು ಚಿಕ್ಕಮಗಳೂರು ಜಿಲ್ಲೆಯಲ್ಲಿ ಬರುವ ಪಶ್ಚಿಮ ಘಟ್ಟದಲ್ಲಿ ಸಮುದ್ರ ಮಟ್ಟದಿಂದ ಸುಮಾರು 1,219 ಮೀ. ಎತ್ತರದಲ್ಲಿ ಹುಟ್ಟುತ್ತದೆ. ಆಗ್ನೇಯ ದಿಕ್ಕಿಗೆ 245 ಕಿ.ಮೀ ದೂರ ಹರಿದು ಕೃಷ್ಣರಾಜನಗರ ಬಳಿ ಕಾವೇರಿ ನದಿಯನ್ನು ಸೇರುತ್ತದೆ. ಇದು ಸುಮಾರು 5410 ಚ.ಕಿ.ಮೀ ಜಲಾನಯನ ಪ್ರದೇಶವನ್ನು ಹೊಂದಿದೆ. ಯಗಚಿ ಎಂಬುದು ಹೇಮಾವತಿ ನದಿಗೆ ಸೇರುವ ಪ್ರಮುಖವಾದ ಉಪನದಿ.[23]

## ಹಾರಂಗಿ

ಈ ನದಿಯು ಕೊಡಗು ಜಿಲ್ಲೆಯ ಪುಷ್ಪಗಿರಿ ಬೆಟ್ಟದಲ್ಲಿ ಹುಟ್ಟಿ ಪೂರ್ವಾಭಿಮುಖವಾಗಿ ಹರಿದು 'ಕೂಡಿಗೆ'ಯ ಬಳಿ ಕಾವೇರಿ ನದಿಯನ್ನು ಸೇರುತ್ತದೆ.[24]

## ಕಪಿಲೆ (ಕಬಿನಿ)

ಕಪಿಲೆ ನದಿಯು ಉತ್ತರ ವೈನಾಡಿನಲ್ಲಿ (ಕೇರಳ) ಮಾನಂತವಾಡಿಪುಳಾ ಮತ್ತು ವಾನಮ್ರಪುಳಾ ಎಂಬ ಎರಡು ಜಲಮೂಲಗಳಿಂದ ಉಗಮವಾಗುತ್ತದೆ. ಈ ನದಿಯು ಒಟ್ಟು 32.0 ಕಿ.ಮೀ ದೂರ ಹರಿಯುತ್ತದೆ ಮತ್ತು ಅದರ ಒಟ್ಟು ಜಲಾನಯನ ಪ್ರದೇಶ 7,040 ಚದುರ ಕಿ.ಮೀ.ಗಳು ನುಗು ಮತ್ತು ಗುಂಡ್ಲು ಎಂಬ ಎರಡು ಉಪನದಿಗಳನ್ನೊಳಗೊಂಡು ಕಪಿಲೆಯು ತಿರುಮಕೂಡಲು ನರಸೀಪುರದಲ್ಲಿ ಕಾವೇರಿ ನದಿಯನ್ನು ಸೇರುತ್ತದೆ.[25]

### ಅರ್ಕಾವತಿ

ಅರ್ಕಾವತಿ ನದಿಯು ನಂದಿ ದುರ್ಗದಲ್ಲಿ ಉಗಮಗೊಂಡು 161 ಕಿ.ಮೀ. ದೂರ ಹರಿದು ಕಾವೇರಿ ನದಿಯನ್ನು ಸೇರುವುದು. ಶಿಂಷಾ ನದಿಯು ತಿಪಟೂರು ಬಳಿ ಉಗಮಗೊಂಡು 215 ಕಿ.ಮೀ ದೂರ ಹರಿದು ಕಾವೇರಿ ನದಿಯನ್ನು ಸೇರುತ್ತದೆ.[26]

### ಸುವರ್ಣಾವತಿ

ಸುವರ್ಣಾವತಿ ಅಥವಾ ಹೊನ್ನೆ ಹೊಳೆಯು ಚಾಮರಾಜನಗರ ಪುಣಜೂರು ಸಮೀಪ ಉಗಮಗೊಂಡು ಮೈಸೂರು ಜಿಲ್ಲೆಯ ದಕ್ಷಿಣದಲ್ಲಿ ಹರಿದು ತಲಕಾಡಿನ ಬಳಿ ಕಾವೇರಿಯನ್ನು ಸೇರುವುದು. ಚಿಕ್ಕಹೊಳೆ ಇದರ ಉಪನದಿಯಾಗಿದೆ.[27]

### ಲಕ್ಷ್ಮಣತೀರ್ಥ

ಲಕ್ಷ್ಮಣತೀರ್ಥ ಉಪನದಿಯು ಕೊಡಗಿನ ಪಶ್ಚಿಮ ಘಟ್ಟಗಳಲ್ಲಿ ಉಗಮಗೊಂಡು ಕೃಷ್ಣರಾಜಸಾಗರ ಅಣೆಕಟ್ಟಿಗೆ ಸ್ವಲ್ಪ ಮುಂಚೆ ಕಾವೇರಿ ನದಿಯನ್ನು ಸೇರುವುದು.[28]

## ಪೆನ್ನಾರ್ ಮತ್ತು ಪಾಲಾರ್ ನದಿಗಳು

ಉತ್ತರ ಪೆನ್ನಾರ್, ದಕ್ಷಿಣ ಪೆನ್ನಾರ್ ಮತ್ತು ಪಾಲಾರ್ ನದಿಗಳು ತುಮಕೂರು, ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಹರಿದು ಆಂಧ್ರಪ್ರದೇಶ ಮತ್ತು ತಮಿಳುನಾಡು ರಾಜ್ಯಗಳಲ್ಲಿ ಹರಿಯುವುದು. ಇವುಗಳ ಒಟ್ಟು ಜಲಾನಯನ ಪ್ರದೇಶ 13,670 ಚದರ ಕಿ.ಮೀ ಪೆನ್ನಾರ್ ನದಿಯನ್ನು 'ಪಿಕಾಕಿನಿ' ಎಂದು ಕರೆಯುವರು. ಉತ್ತರ ಪಿಕಾಕಿನಿ ನದಿಯು

ನಂದಿದುರ್ಗ ಸರಣಿಯಲ್ಲಿರುವ ಚನ್ನಕೇಶವ ಬೆಟ್ಟಗಳಲ್ಲಿ ಜನಿಸುವುದು. ಇದು ಕೋಲಾರ ಮತ್ತು ತುಮಕೂರು ಜಿಲ್ಲೆಗಳಲ್ಲಿ 48 ಕಿ.ಮೀ ದೂರ ಪ್ರವಹಿಸಿ ಆಂಧ್ರ ಪೆನುಗೊಂಡ ತಾಲ್ಲೂಕುಗಳಲ್ಲಿ 67 ಕಿ.ಮೀ ದೂರ ಹರಿದು ಮತ್ತು ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನಲ್ಲಿ 13 ಕಿ.ಮೀ ದೂರ ಹರಿದು ಆಂಧ್ರಪ್ರದೇಶ ಪ್ರವೇಶಿಸುತ್ತದೆ.[29] ಈ ನದಿಯ ಉದ್ದ 597 ಕಿ.ಮೀ ಅದರಲ್ಲಿ 61 ಕಿ.ಮೀ. ಕರ್ನಾಟದಲ್ಲಿರುವುದು ಜಯಮಂಗಲ, ಚಿತ್ರಾವತಿ ಮತ್ತು ಪಾಪಾಗ್ನಿ ಎಂಬುದು ಉತ್ತರ ಪಿನಾಕಿನಿ ನದಿಯ ಉಪನದಿಗಳು.

ದಕ್ಷಿಣ ಪಿಕಾಕಿನಿ ನದಿಯು ಕೋಲಾರ ಜಿಲ್ಲೆಯ ನಂದಿದುರ್ಗ ಬೆಟ್ಟದಲ್ಲಿ ಉಗಮ ಹೊಂದುತ್ತದೆ. ನಂತರ ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಸುಮಾರು 79 ಕಿ.ಮೀ. ದೂರದವರೆಗೆ ಹರಿದು ನಂತರ ತಮಿಳುನಾಡು ಹಾಗೂ ಪಾಂಡಿಚೆರಿಗಳಲ್ಲಿ ಹರಿದು ಬಂಗಾಳಕೊಲ್ಲಿಯನ್ನು ಸೇರುವುದು.

ಪಾಲಾರ್ ನದಿಯು ಕೋಲಾರ ಜಿಲ್ಲೆಯ 'ತಳಗವಾರ' ಗ್ರಾಮದ ಸಮೀಪ ಉಗಮ ಹೊಂದುತ್ತದೆ. ಕೋಲಾರ ಜಿಲ್ಲೆಯ ಆಗ್ನೇಯಕ್ಕೆ 93 ಕಿ.ಮೀ. ದೂರ ಹರಿದು, ಆಂಧ್ರಪ್ರದೇಶ ಮತ್ತು ತಮಿಳುನಾಡುಗಳಲ್ಲಿ ಪ್ರವಹಿಸಿ ಕೊನೆಗೆ ಚೆನ್ನೈ ಬಳಿ ಬಂಗಾಳ ಕೊಲ್ಲಿಯನ್ನು ಸೇರುವುದು.

## ಮಂಜರಾ

ಗೋದಾವರಿ ನದಿಯ ಜಲಾನಯನದ ಕೇವಲ ಸ್ವಲ್ಪ ಭಾಗಮಾತ್ರ ಕರ್ನಾಟಕ ರಾಜ್ಯದಲ್ಲಿದೆ. ಬೀದರ್ ಜಿಲ್ಲೆಯ ಉತ್ತರ ಮತ್ತು ಮಧ್ಯಭಾಗಕ್ಕೆ ಸುಮಾರು 4430 ಚ.ಕಿ.ಮೀ ಮಾತ್ರ ಇರುತ್ತದೆ. ಮಂಜರಾ ನದಿಯು ಗೋದಾವರಿಯ ಪ್ರಮುಖ ಉಪನದಿಯಾಗಿದೆ. ಈ ಉಪನದಿಯು ಮಹಾರಾಷ್ಟ್ರದ ಭೀಡ್ ಜಿಲ್ಲೆಯ ಭಾಲಘಟ್ ಶ್ರೇಣಿಯ ಪಕ್ಕದಲ್ಲಿ ಹುಟ್ಟಿ ಆ ರಾಜ್ಯದಲ್ಲಿ ಸ್ವಲ್ಪ ಹರಿದು ಬೀದರ್ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಕರ್ನಾಟಕವನ್ನು ಪ್ರವೇಶಿಸುವುದು. ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರಪ್ರದೇಶದ ಮೂಲಕ ಹರಿಯುವ ಈ ನದಿಯ ಒಟ್ಟು ಉದ್ದ 723 ಕಿ.ಮೀ. ಆದರೆ 155ಕಿ.ಮೀ.ಗಳಷ್ಟು ದೂರ ಮಾತ್ರ ಕರ್ನಾಟಕದಲ್ಲಿ ಹರಿಯುವುದು. ಕಾರಂಜಾ ನದಿಯು ಮಂಜರಾ ನದಿಯ

ಉಪನದಿಯಾಗಿದ್ದು, ಮೇಡಕ್ ಜಿಲ್ಲೆಯ ಬೀರಹಳ್ಳಿಯ ಪಕ್ಕದಲ್ಲಿ ಹುಟ್ಟಿ ಕರ್ನಾಟಕ ಮತ್ತು ಆಂಧ್ರಪ್ರದೇಶ ರಾಜ್ಯಗಳ ಗಡಿ ಪ್ರದೇಶದಲ್ಲಿ 16 ಕಿ.ಮೀ ಉದ್ದ ಹರಿಯುತ್ತದೆ. ಇದು ಬೀದರ್ ಜಿಲ್ಲೆಯಲ್ಲಿ ಹರಿದು ನಾರದ ಸಂಗಮದಲ್ಲಿ ಮಂಜರಾ ನದಿಯನ್ನು ಸೇರುತ್ತದೆ. ಇದರ ಉದ್ದ 74 ಕಿ.ಮೀ ಹಾಗೂ ಜಲಾನಯನ ಕ್ಷೇತ್ರ 2439 ಚ.ಕಿ.ಮೀ.

**ವಾಯುಗುಣ**

ಕರ್ನಾಟಕವು ಸಂಪೂರ್ಣವಾಗಿ ಉಷ್ಣವಲಯದಲ್ಲಿದೆ. ಹಾಗೂ ಮಾನ್ಸೂನ್ ಗಾಳಿಗಳು ಸಾಮಾನ್ಯವಾಗಿ ಕರ್ನಾಟಕದ ವಾಯುಗುಣವನ್ನು ಉಷ್ಣವಲಯದ ಮಾನ್ಸೂನ್ ವಾಯುಗುಣ ಎಂದು ಕರೆಯಲಾಗುತ್ತದೆ. ಶಾಖ ಮತ್ತು ತೇವಾಂಶವುಳ್ಳ ಬೇಸಿಗೆ ಮತ್ತು ತಂಪಾದ ಹಾಗೂ ಶುಷ್ಕ ಪರಿಸ್ಥಿತಿಯುಳ್ಳ ಚಳಿಗಾಲವು ಈ ವಾಯುಗುಣದ ಮುಖ್ಯ ಗುಣಲಕ್ಷಣಗಳು. ಆದರೆ ಕರ್ನಾಟಕದ ವಾಯುಗುಣವು ವೈವಿಧ್ಯಮಯವಾದುದು. ಅದಕ್ಕೆ ಅಕ್ಷಾಂಶ, ಸಮುದ್ರಮಟ್ಟದ ಎತ್ತರ, ಸಮುದ್ರ ಸಾಮೀಪ್ಯ, ಸ್ಥಳೀಯ ಮಾರುತಗಳು, ಸಸ್ಯವರ್ಗ, ಭೂ ಸ್ವರೂಪಗಳು (ಮೇಲ್ಮೈ ಲಕ್ಷಣ) ಮುಂತಾದವು ಕಾರಣವಾಗಿದೆ. ಕರಾವಳಿ ಪ್ರದೇಶ, ಮಲೆನಾಡು ಮತ್ತು ಪಶ್ಚಿಮ ಘಟ್ಟಗಳ ಸರಣಿಗಳಲ್ಲಿ ಅಧಿಕ ಮಳೆಯಾಗುವುದರಿಂದ ಆರ್ದ್ರತೆಯುಳ್ಳ ವಾಯುಗುಣವಿರುತ್ತದೆ. ಒಳನಾಡು ಮತ್ತು ಪೂರ್ವ ಭಾಗಗಳಲ್ಲಿ ಅತಿ ಉಷ್ಣಾಂಶ ಮತ್ತು ಅರೆ ಶುಷ್ಕದ ವಾತಾವರಣವಿರುತ್ತದೆ. ತೀರ ಪ್ರದೇಶವು ಸಮುದ್ರದ ಪ್ರಭಾವದಿಂದಾಗಿ ಬೇಸಿಗೆ ಮತ್ತು ಚಳಿಗಾಲದ ಉಷ್ಣಾಂಶ ಸಮತೋಲನ ಗೊಳ್ಳುತ್ತದೆ. ಸಮುದ್ರದ ಮಂದ ಮಾರುತಗಳು ಬೇಸಿಗೆಯಲ್ಲಿ ಜನರಿಗೆ ಉಪಶಮನವನ್ನುಂಟು ಮಾಡುತ್ತವೆ. ಆದರೆ ಒಳನಾಡಿಗೆ ಹೋದಂತೆಲ್ಲಾ ಸಮುದದ್ರ ಪ್ರಭಾವವು ಕುಗ್ಗುತ್ತಾ ಹೋಗುವುದು ಇದರ ಪರಿಣಾಮವಾಗಿ ಮಲೆನಾಡು ಮತ್ತು ಮೈದಾನ ಪ್ರದೇಶದ ಭಾಗಗಳು ಸಮುದ್ರದ ಪ್ರಭಾವದಿಂದ ಹೊರತಾಗಿದೆ.

ನೈರುತ್ಯ ಮಾನ್ಸೂನ್ ಮಾರುತಗಳು ಸಮುದ್ರದ ಕಡೆಯಿಂದ ಭೂ ಭಾಗದ ಕಡೆಗೆ ಬೀಸುವುದರಿಂದ ಮಳೆಯ ಹಂಚಿಕೆಯಲ್ಲಿ ವ್ಯತ್ಯಾಸವುಂಟಾಗುವುದು. ಪಶ್ಚಿಮದಿಂದ ಪೂರ್ವದ ಕಡೆಗೆ ಹೋದಂತೆ ಮಳೆಯ ಹಂಚಿಕೆ ಕಡಿಮೆಯಾಗುತ್ತದೆ. ಈ ಎಲ್ಲಾ

ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಕರ್ನಾಟಕದ ವಾಯುಗುಣವನ್ನು ಭಾರತದ ವಾಯುಗುಣದ ಋತುಗಳಂತೆಯೇ ನಾಲ್ಕು ಮುಖ್ಯ ಋತುಗಳನ್ನಾಗಿ ವಿಂಗಡಿಸಬಹುದು.[32]

1. ಚಳಿಗಾಲ (ಡಿಸೆಂಬರ್‌ಯಿಂದ ಫೆಬ್ರವರಿ)
2. ಬೇಸಿಗೆ ಕಾಲ (ಮಾರ್ಚ್‌ಯಿಂದ ಮೇ)
3. ಮುಂಗಾರು ಮಳೆಗಾಲ – (ಜೂನ್‌ನಿಂದ ಸೆಪ್ಟಂಬರ್)
4. ಹಿಂಗಾರು ಮಳೆಗಾಲ – (ಅಕ್ಟೋಬರ್‌ಯಿಂದ ನವೆಂಬರ್)

## 1. ಚಳಿಗಾಲ

ಕರ್ನಾಟಕದಲ್ಲಿ ಡಿಸೆಂಬರ್ ತಿಂಗಳನ ಮಧ್ಯಭಾಗದಿಂದ ಫೆಬ್ರವರಿ ತಿಂಗಳ ಕೊನೆಯವರೆಗೆ ಚಳಿಗಾಲವಿರುತ್ತದೆ. ಈ ಅವಧಿಯಲ್ಲಿ ಕರಾವಳಿ ಪ್ರದೇಶಗಳಲ್ಲಿ 270 ಸೆಲ್ಸಿಯಸ್‌ನಷ್ಟು ಉಷ್ಣಾಂಶವಿದ್ದು ಅದು ಮಲೆನಾಡು ಮತ್ತು ಮೈದಾನಗಳ ಕಡೆಗೆ ಹೋದಂತೆ ಕಡಿಮೆಯಾಗುವುದು. ಈ ಋತುವಿನಲ್ಲಿ ಉಷ್ಣಾಂಶದಲ್ಲಿ 12,70 ಸೆ.ನಿಂದ 270 ಸೆ.ವರೆಗೆ ವ್ಯತ್ಯಾಸವಿರುತ್ತದೆ. ಶೀತವಾದ ಗಾಳಿಯಿಂದ ಆಗಾಗ ಚಳಿಯಿರುತ್ತದೆ. ರಾಜ್ಯಾದಾದ್ಯಂತ ಜನವರಿ ತಿಂಗಳನಲ್ಲಿ ಕನಿಷ್ಠ ಉಷ್ಣಾಂಶ ಕಂಡು ಬರುತ್ತದೆ. ರಾಜ್ಯದ ಬಹುಭಾಗದಲ್ಲಿ 10ಸೆ.ಮೀ.ಗಿಂತಲೂ ಕಡಿಮೆ ಮಳೆ ಬೀಳುವುದು. ಬದಲಿಗೆ ಬೆಳೆಗಳನ್ನು ಕಟಾವು ಮಾಡಲು ಅನುಕೂಲವಾಗಿರುವುದು.

## 2. ಬೇಸಿಗೆಕಾಲ

ಮಾರ್ಚ್ ತಿಂಗಳನ ನಂತರ ರಾಜ್ಯಾದಾದ್ಯಂತ ಉಷ್ಣಾಂಶ ಗಣನೀಯವಾಗಿ ಏರುತ್ತಾ ಹೋಗಿ ಏಪ್ರಿಲ್–ಮೇ ತಿಂಗಳನಲ್ಲಿ ಅದು ಗರಿಷ್ಠ ಮಟ್ಟವನ್ನು ತಲುಪುವುದು. ಉಷ್ಣಾಂಶವು ಕರಾವಳಿ ಪ್ರದೇಶದಲ್ಲಿ 350 ಸೆ.ವರೆಗೆ ಏರಿದರೆ, ರಾಜ್ಯದ ಈಶಾನ್ಯದ ಕೆಳಭಾಗಗಳಲ್ಲಿ 430 ಸೆ.ವರೆಗೆ ಏರುವುದು. ರಾತ್ರಿಯ ವೇಳೆ ಹಗಲಿಗಿಂತ ತಂಪಾಗಿರುತ್ತದೆ. ಈ ಅವಧಿಯ ಪ್ರಾರಂಭದಲ್ಲಿ ವಾಯುಮಂಡಲದ ತೇವಾಂಶವು ಕಡಿಮೆಯಿದ್ದರೂ ಮೇ ತಿಂಗಳ ನಂತರ ಹೆಚ್ಚಾಗುತ್ತಾ ಹೋಗುವುದು. ಪರಿಣಾಮವಾಗಿ ಈ ವೇಳೆಯಲ್ಲಿ ಕೆಲವೊಮ್ಮೆ ಅಪರಾಹ್ನ 4 ಗಂಟೆಯ ನಂತರ ಗುಡುಗು ಸಿಡಿಲುಗಳಿಂದ ಕೂಡಿದ ಪರಿಸರಣ ಮಳೆಯು

ಬೀಳುವುದು. ಆಗಾಗ ಆಲಿಕಲ್ಲುಗಳು ಮಳೆಯ ಜೊತೆ ಸುರಿಯುವುದುಂಟು. ಕರಾವಳಿ ಮತ್ತು ದಕ್ಷಿಣದ ಜಿಲ್ಲೆಗಳಲ್ಲಿ ಉಷ್ಣಾಂಶ, ಉತ್ತರ ಕರ್ನಾಟಕದಲ್ಲಿ ಶಾಖ ಮತ್ತು ಶುಷ್ಕ ವಾತಾವರಣದ ಪರಿಸ್ಥಿತಿಯಿರುತ್ತದೆ.

## 3. ಮುಂಗಾರುಮಳೆ

ಜೂನ್ ತಿಂಗಳಿನಿಂದ ಸೆಪ್ಟಂಬರ್‌ವರೆಗಿನ ಮುಂಗಾರು ಮಳೆಗಾಲ ಕಾಲವನ್ನು "ನೈರುತ್ಯ ಮಾನ್ಸೂನ್ ಮಾರುತ"ಗಳ ಕಾಲವೆಂತಲೂ ಕರೆಯುವರು. ಈ ಅವಧಿಯಲ್ಲಿ ವಾಯುಮಂಡಲವು ಗರಿಷ್ಠ ಪ್ರಮಾಣದ ಆರ್ದ್ರತೆಯನ್ನು ಹೊಂದಿದ್ದು, ನೈರುತ್ಯ ಮಾನ್ಸೂನ್ ಗಾಳಿಗಳಿಂದಾಗಿ ಕರಾವಳಿ, ಪಶ್ಚಿಮ ಘಟ್ಟಗಳು, ಮಲೆನಾಡುಗಳಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಮಳೆ ಬೀಳುವುದು. ಆದರೆ ಪೂರ್ವದ ಕಡೆಗೆ ಹೋದಂತೆ ಮಳೆಯ ಮಾರುತಗಳು ದುರ್ಬಲಗೊಂಡು ಉತ್ತರ ಮೈದಾನದ ಭಾಗಗಳಿಗೆ ಮಳೆಯ ಹಂಚಿಕೆ ವಿರಳವಾಗುವುದು. ಪರಿಣಾಮವಾಗಿ ಅವು ಮಳೆಯ ನೆರಳಿನ ಪ್ರದೇಶಗಳಾಗಿವೆ. ಜುಲೈ ತಿಂಗಳಲ್ಲಿ ಅತ್ಯಂತ ಹೆಚ್ಚು ಮಳೆಯಾಗುತ್ತದೆ. ಈ ಅವಧಿಯಲ್ಲಿ ರಾಜ್ಯದ ಮುಕ್ಕಾಲು ಭಾಗವು ಮಳೆಯನ್ನು ಪಡೆಯುವುದು. ಅಧಿಕ ಮಳೆಯಿಂದಾಗಿ ದೈನಂದಿನ ಉಷ್ಣಾಂಶವು ಕಡಿಮೆಯಾದಂತೆ ವಾಯುವಿನ ತೇವಾಂಶವು ಹೆಚ್ಚಾಗುವುದು.

## 4. ಹಿಂಗಾರು ಮಳೆಗಾಲ (ಮಾನ್ಸೂನ್ ಮಾರುತಗಳ ನಿರ್ಗಮನ ಕಾಲ)

ಅಕ್ಟೋಬರ್ ತಿಂಗಳಿನಿಂದ ಡಿಸೆಂಬರ್ ಮಧ್ಯಭಾಗದವರೆಗಿನ ಹಿಂಗಾರು ಮಳೆಯನ್ನು "ಈಶಾನ್ಯ ಮಾನ್ಸೂನ್ ಮಾರುತಗಳ ಕಾಲ"ವೆಂತಲೂ ಕರೆಯುವರು. ಭಾರತದ ಉತ್ತರ ಭಾಗದಲ್ಲಿ ಅಧಿಕ ಒತ್ತಡ ಪಟ್ಟಿ ಉಂಟಾಗಿ ದಕ್ಷಿಣದ ಒತ್ತಡವು ಕಡಿಮೆಯಾಗುವುದು. ಇಂತಹ ತದ್ವಿರುದ್ಧವಾದ ಪರಿಸ್ಥಿತಿಯಲ್ಲಿ ನೈರುತ್ಯ ಮಾನ್ಸೂನ್ ಮಾರುತಗಳು ಹಿಂತಿರುಗುತ್ತವೆ. ಬಂಗಾಳ ಕೊಲ್ಲಿಯ ಮೇಲೆ ಬೀಸಿ ಬರುವ ಮಾರುತಗಳು ತೇವಾಂಶವನ್ನು ಪಡೆಯುವುದರಿಂದ ದೇಶದ ಪೂರ್ವ ಕರಾವಳಿಗೆ ಸ್ವಲ್ಪ ಮಳೆಯಾಗುವುದು. ಇದೇ ಮಾರುತಗಳು ಪಶ್ಚಿಮಕ್ಕೆ ಮುಂದುವರೆದು ಕರ್ನಾಟಕವನ್ನು ತಲುಪುವ ವೇಳೆಗೆ ಅಲ್ಪ ಸ್ವಲ್ಪ ಮಳೆಯಾಗುವುದು. ಕೆಲವೊಮ್ಮೆ ಆವರ್ತ ಮಾರುತ

ಪರಿಸ್ಥಿತಿಯು ಸಂಭವಿಸುತ್ತದೆ. ಒಟ್ಟಾರೆ ಈ ಅವಧಿಯ ವಾಯುಗುಣದ ಪರಿಸ್ಥಿತಿಯು ಅವ್ಯವಸ್ಥಿತವಾಗಿರುತ್ತದೆ.

**ಉಷ್ಣಾಂಶ**

ಕರಾವಳಿ ಪ್ರದೇಶ ಮತ್ತು ಎತ್ತರದ ಪ್ರಸ್ಥಭೂಮಿಗಳನ್ನು ಬಿಟ್ಟು ರಾಜ್ಯದ ಎಲ್ಲಾ ಕಡೆಯಲ್ಲಿಯೂ ರಾತ್ರಿ ಮತ್ತು ಹಗಲಿನ ಉಷ್ಣಾಂಶಗಳೆರಡೂ ಹೆಚ್ಚು ಕಡಿಮೆ ಒಂದೇ ಸಮನಾಗಿರುತ್ತದೆ.[33] ರಾಜ್ಯದ ನೈರುತ್ಯದ ಭಾಗ ಎತ್ತರ ಪ್ರದೇಶದಲ್ಲಿರುವುದರಿಂದ ಸಾಮಾನ್ಯವಾಗಿ ಉಷ್ಣಾಂಶವು ಕಡಿಮೆ ಇರುತ್ತದೆ. ಮತ್ತು ಹೆಚ್ಚು ಎತ್ತರ ಪ್ರದೇಶಗಳಲ್ಲಿ ಇನ್ನೂ ಕಡಿಮೆ ಉಷ್ಣಾಂಶವು ಕಂಡುಬರುತ್ತದೆ. ಏಪ್ರಿಲ್ ಮತ್ತು ಮೇ ತಿಂಗಳುಗಳು ಗರಿಷ್ಠ ಉಷ್ಣತೆಯಿಂದ ಕೂಡಿದ ತಿಂಗಳುಗಳು. ಅದರಂತೆ ಡಿಸೆಂಬರ್ ಮತ್ತು ಜನವರಿ ಅತೀ ಚಳಿ ಇರುವ ತಿಂಗಳುಗಳಾಗಿವೆ.

ಉಷ್ಣಾಂಶವು ಜನವರಿಯ ಆದಿ ಭಾಗದಲ್ಲಿ ಅತಿ ಕಡಿಮೆಯಾಗಿದ್ದು, ಕ್ರಮೇಣ ಏರುತ್ತಾ ಹೋಗಿ ಫೆಬ್ರವರಿಯ ಮಧ್ಯಭಾಗದಿಂದ ಅಥವಾ ಮಾರ್ಚಿಯ ಆರಂಭದಿಂದ ತೀವ್ರವಾಗಿ ಏರುತ್ತದೆ. ಅತಿ ಹೆಚ್ಚು ಉಷ್ಣಾಂಶವು ದಕ್ಷಿಣದ ಮೈದಾನದಲ್ಲಿ ಏಪ್ರಿಲ್ ತಿಂಗಳಲ್ಲಿದ್ದರೆ, ಉತ್ತರದ ಮೈದಾನ ಮತ್ತು ಕರಾವಳಿ ಪ್ರದೇಶದಲ್ಲಿ ದಿನದ ಸರಾಸರಿ ಗರಿಷ್ಠ ಉಷ್ಣಾಂಶವು 31° ಸೆ. ರಿಂದ 32° ಸೆ.ಗಳಷ್ಟಿರುತ್ತದೆ. ಉತ್ತರದ ಮೈದಾನದಲ್ಲಿ ಬೀದರ್ ಹೊರತಾಗಿ 30° ಸೆ.ಗಿಂತ ಸ್ವಲ್ಪ ಹೆಚ್ಚಾಗಿರುತ್ತದೆ. ಆದರೆ ಬೀದರ್‌ನಲ್ಲಿ ಈ ಉಷ್ಣಾಂಶವು 28° ಸೆ. ರಿಂದ 29° ಸೆ.ಗಳಷ್ಟಿರುತ್ತದೆ. ರಾಜ್ಯದ ಉಳಿದ ಭಾಗಗಳಲ್ಲಿ ದಿನದ ಸರಾಸರಿ ಗರಿಷ್ಠ ಉಷ್ಣಾಂಶವು ಜನವರಿಯಲ್ಲಿ 27° ಸೆ.ನಿಂದ 29° ಸೆ.ಗಳಷ್ಟಿರುತ್ತದೆ. ಘಟ್ಟ ಪ್ರದೇಶಗಳಲ್ಲಿ ಇದು 24° ಸೆ.ನಿಂದ 27°ಸೆ.ಗಳಷ್ಟಿರುತ್ತದೆ. ಏಪ್ರಿಲ್ ತಿಂಗಳಿನಲ್ಲಿ ದಿನದ ಸರಾಸರಿ ಗರಿಷ್ಠ ಉಷ್ಣಾಂಶವು ಕರಾವಳಿ ಪ್ರದೇಶದಲ್ಲಿ 32° ಸೆ.ಗಳಷ್ಟಿದ್ದು ಈಶಾನ್ಯದತ್ತ ಉತ್ತರದ ಮೈದಾನದ ಕಡೆಗೆ ಹೋದಂತೆ ಹೆಚ್ಚುತ್ತಾ ಹೋಗುತ್ತದೆ. ಗುಲ್ಬರ್ಗ ಮತ್ತು ರಾಯಚೂರು ಪ್ರದೇಶಗಳಲ್ಲಿ ಉಷ್ಣಾಂಶವು 39° ಸೆ. ತಲುಪುತ್ತದೆ. ಆದರೆ ಬೀದರ್ ಜಿಲ್ಲೆಯಲ್ಲಿ 37° ಸೆ ಗಳಷ್ಟಿರುತ್ತದೆ. ಉಳಿದ ಮೈದಾನದ ಪ್ರದೇಶದಲ್ಲಿ ಈ ಉಷ್ಣಾಂಶವು 33°

ಸೆ.ನಿಂದ 35° ಸೆ.ವರೆಗೆ ವ್ಯತ್ಯಾಸವಾಗುತ್ತದೆ. ಘಟ್ಟ ಮತ್ತು ಮಲೆನಾಡಿನಲ್ಲಿ ಇದು 28° ಸೆ.ನಿಂದ 32° ಸೆ.ಗಳಷ್ಟಿರುತ್ತದೆ.[34]

ರಾಜ್ಯದ ಬಹುಭಾಗಗಳ  ಅತಿ ಹೆಚ್ಚಿನ ಉಷ್ಣಾಂಶವಿರುವ ಮೇ ತಿಂಗಳಲ್ಲಿ ಗರಿಷ್ಠ ಉಷ್ಣಾಂಶವು ಗುಲ್ಬರ್ಗ ಮತ್ತು ರಾಯಚೂರು ಪ್ರದೇಶಗಳಲ್ಲಿ 430 ಸೆ. ತಲುಪುತ್ತದೆ. ರಾಜ್ಯದ ಯಾವುದೇ ಒಂದು ಕೇಂದ್ರದಲ್ಲಿ ದಾಖಲಾದ ಅತಿ ಹೆಚ್ಚಿನ ಉಷ್ಣಾಂಶವು ರಾಯಚೂರಿನಲ್ಲಿ 45.60 ಸೆ. 1928ರ ಮೇ 23 ರಂದು ದಾಖಲಿಸಲ್ಪಟ್ಟಿದ್ದು, ಬೀದರ್, ಗದಗ ಮತ್ತು ಬಳ್ಳಾರಿ ಪ್ರದೇಶಗಳಲ್ಲಿ ಈ ಉಷ್ಣಾಂಶವು 40° ಸೆ. ದಾಟುತ್ತದೆ. ಮೇ ತಿಂಗಳ ನಂತರ ಉಷ್ಣಾಂಶವು ಇಳಿಯುತ್ತದೆ. ಇದು ಕರಾವಳಿ ಪ್ರದೇಶದಲ್ಲಿ 28° ಸೆ. ಇದ್ದು, ಈಶಾನ್ಯದ ಕಡೆಗೆ ಹೆಚ್ಚುತ್ತಾ ಹೋಗಿ ರಾಯಚೂರು, ಗುಲ್ಬರ್ಗ ಪ್ರದೇಶದಲ್ಲಿ 32° ಸೆ. ತಲುಪುತ್ತದೆ. ಕರಾವಳಿ ಪ್ರದೇಶದಲ್ಲಿ ಮತ್ತು ಹಾಸನವರೆಗಿನ ಮಲೆನಾಡು ಪ್ರದೇಶದಲ್ಲಿ ಜುಲೈ ತಿಂಗಳ ಗರಿಷ್ಠ ಉಷ್ಣಾಂಶವು ಜನವರಿ ತಿಂಗಳ ಗರಿಷ್ಠ ಉಷ್ಣಾಂಶಕ್ಕಿಂತ ಕಡಿಮೆಯಾಗಿರುತ್ತದೆ.. ಏಕೆಂದರೆ ಜುಲೈ ತಿಂಗಳಲ್ಲಿ ಈ ಪ್ರದೇಶದ ಮೇಲೆ ಆಕಾಶದಲ್ಲಿ ಮೋಡ ಮುಚ್ಚಿದ್ದು, ಆಗಾಗ ಮೇಲೆ ಬೀಳುತ್ತದೆ. ಜನವರಿಯಲ್ಲಿ ಆಕಾಶ ಶುಭ್ರವಾಗಿದ್ದು ಹಗಲಿನಲ್ಲಿ ಸೂರ್ಯನ ಬಿಸಿಲು ಬೀಳುತ್ತದೆ. ಅಕ್ಟೋಬರ್ ಹೊತ್ತಿಗೆ ಗರಿಷ್ಠ ಉಷ್ಣಾಂಶವು ಕರಾವಳಿ ಮತ್ತು ಮಲೆನಾಡು ಪ್ರದೇಶಗಳಲ್ಲಿ ಹೆಚ್ಚಾದರೆ, ರಾಜ್ಯದ ಇತರ ಭಾಗಗಳಲ್ಲಿ ಇಳಿಮುಖವಾಗುತ್ತದೆ. ಅಕ್ಟೋಬರ್ ನಂತರ ಉಷ್ಣಾಂಶವು ರಾಜ್ಯಾದಾದ್ಯಂತ ಸಾವಕಾಶವಾಗಿ ಇಳಿದು, ಜನವರಿ ಆರಂಭದಲ್ಲಿ ಕನಿಷ್ಠ ಮಟ್ಟವನ್ನು ತಲುಪುತ್ತದೆ.[35]

ಜನವರಿಯಲ್ಲಿ ದಿನದ ಸರಾಸರಿ ಕನಿಷ್ಠ ಉಷ್ಣಾಂಶವು ಕರಾವಳಿಯಲ್ಲಿ ಸುಮಾರು 200 ಸೆ. ಗಳಷ್ಟಿರುತ್ತದೆ. ಈ ಉಷ್ಣಾಂಶವು ಈಶಾನ್ಯದ ಕಡೆಗೆ ಹೆಚ್ಚುತ್ತಾ  ರಾಯಚೂರು ಬಳ್ಳಾರಿ ಪ್ರದೇಶದಲ್ಲಿ 180 ಸೆ. ತಲುಪುತ್ತದೆ. ದಕ್ಷಿಣದ ಮೈದಾನದಲ್ಲಿ ಉಷ್ಣಾಂಶವು 110 ಸೆ.ರಿಂದ 130 ಸೆ.ಗಳಷ್ಟಿರುತ್ತದೆ. ಜನವರಿಯಿಂದ ಋತುಮಾನ ಬದಲಾದಂತೆ ದಿನದ ಸರಾಸರಿ ಕನಿಷ್ಠ ಉಷ್ಣಾಂಶವು ಏಪ್ರಿಲ್-ಮೇ ಅವಧಿಯಲ್ಲಿ ಬಳ್ಳಾರಿ – ರಾಯಚೂರು ಪ್ರದೇಶದಲ್ಲಿ 260 ಸೆ. ತಲುಪುತ್ತದೆ. ಅನಂತರ ಪುನಃ ಇಳಿಮುಖವಾಗುತ್ತದೆ. ಬೆಂಗಳೂರಿನ

ಸರಾಸರಿ ಉಷ್ಣಾಂಶವು ಜೂನ್-ಸೆಪ್ಟಂಬರ್ ಅವಧಿಯಲ್ಲಿ ಸಮನಾಗಿ (230 ಸೆ.) ಇರುವುದು ಗಮನಾರ್ಹ ಅಂಶವಾಗಿದೆ.[36]

## ಮಳೆಯ ಹಂಚಿಕೆ

ಕರ್ನಾಟಕದ ಮಳೆಯ ಹಂಚಿಕೆಯಲ್ಲಿ ವೈವಿಧ್ಯತೆ ಕಂಡುಬರುತ್ತದೆ. ಇದಕ್ಕೆ ನಿಯತಕಾಲಿಕವಾದ ಮಾನ್ಸೂನ್ ಮಾರುತಗಳು ಮೇಲ್ಮೈ ಲಕ್ಷಣ, ಪರ್ಯಾಯ ಪ್ರಸ್ಥಭೂಮಿಯನ್ನಾವರಿಸಿರುವ ಸಮುದ್ರ – ಸಾಗರಗಳು ಪ್ರಮುಖ ಕಾರಣಗಳಾಗಿವೆ. ಜೂನ್ ತಿಂಗಳಿಂದ ಅಕ್ಟೋಬರ್ ತಿಂಗಳವರೆಗೆ ಬೀಸುವ ನೈರುತ್ಯ ಮಾನ್ಸೂನ್ ಗಾಳಿಗಳಿಂದ ಕರ್ನಾಟಕದಲ್ಲಿ ಮುಕ್ಕಾಲು ಭಾಗ ಮಳೆ ಬೀಳುತ್ತದೆ. ಅಕ್ಟೋಬರ್‌ನಿಂದ ಮೇ ತಿಂಗಳುಗಳವರೆಗೆ ಬೀಸುವ ಈಶಾನ್ಯ ಮಾನ್ಸೂನ್ ಗಾಳಿಗಳಿಂದ ಕರ್ನಾಟಕದಲ್ಲಿ ಕಾಲುಭಾಗ ಮಳೆ ಬೀಳುತ್ತದೆ. ಇದೇ ಅವಧಿಯಲ್ಲಿ ಬರುವ ಚಳಿಗಾಲ ಹಾಗೂ ಬೇಸಿಗೆ ಕಾಲದಲ್ಲಿ ಸ್ವಲ್ಪವೇ ಮಳೆಯಾಗುತ್ತದೆ. ವಾರ್ಷಿಕ ಮಳೆಯು ಪಶ್ಚಿಮ ಘಟ್ಟಗಳಲ್ಲಿ ಅಧಿಕವಾಗಿರುತ್ತದೆ. ಅಲ್ಲಿಂದ ಪೂರ್ವದ ಕಡೆಗೆ ಹೋದಂತೆಲ್ಲಾ ಕಡಿಮೆಯಾಗುವುದು. ಅದರಲ್ಲೂ ಮಲೆನಾಡಿನಲ್ಲಿ ಮಳೆಯು ಹೆಚ್ಚು.[37]

**ಜಿಲ್ಲಾವಾರು ಮಳೆಯ ಹಂಚಿಕೆ – 2000**

| ಕ್ರ.ಸಂ | ಜಿಲ್ಲೆ ಮಳೆ | ಮಿಲಿ ಮೀಟರ್‌ಗಳಲ್ಲಿ | ವಾಸ್ತವಿಕ |
|---|---|---|---|
| 01 | ಬೆಂಗಳೂರು | 867 | 1032 |
| 02 | ಬೆಂಗಳೂರು ಗ್ರಾಮಾಂತರ | 187 | 1062 |
| 03 | ಚಿತ್ರದುರ್ಗ | 573 | 756 |
| 04 | ದಾವಣಗೆರೆ | 649 | 585 |
| 05 | ಕೋಲಾರ | 744 | 744 |
| 06 | ಶಿವಮೊಗ್ಗ | 1664 | 2014 |
| 07 | ಚಿಕ್ಕಮಗಳೂರು | 1925 | 2007 |
| 08 | ದಕ್ಷಿಣ ಕನ್ನಡ | 3975 | 3865 |

| | | | |
|---|---|---|---|
| 09 | ಉಡುಪಿ | 4119 | 4279 |
| 10 | ಹಾಸನ | 1031 | 1090 |
| 11 | ಕೊಡಗು | 2718 | 2466 |
| 12 | ಮಂಡ್ಯ | 700 | 894 |
| 13 | ಮೈಸೂರು | 782 | 939 |
| 14 | ಚಾಮರಾಜನಗರ | 751 | 928 |

ಪಶ್ಚಿಮ ಘಟ್ಟಗಳ ಪಶ್ಚಿಮ ಭಾಗಗಳು ಅಧಿಕ ಮಳೆಯನ್ನು ಪಡೆಯುವುದು. ಈ ಭಾಗಗಳಲ್ಲಿ ವರ್ಷಕ್ಕೆ ಸರಾಸರಿ 4000 ಮಿ.ಮೀಗಳಷ್ಟು ಮಳೆ ಬೀಳುವುದು. ಇದೇ ಪ್ರದೇಶದಲ್ಲಿರುವ 'ಆಗುಂಬೆ' ಪ್ರದೇಶಕ್ಕೆ ವರ್ಷದಲ್ಲಿ 5000 ರಿಂದ 4000 ಮಿ.ಮೀ.ಗಳಷ್ಟು ಮಳೆ ಬೀಳುವುದು. ವಾಸ್ತವವಾಗಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಆಗುಂಬೆಯಲ್ಲಿ 8276 ಮಿ.ಮೀ.ಗಳಷ್ಟು ಮಳೆ ಬೀಳುವುದು. ಇದು ಅತ್ಯಂತ ಹೆಚ್ಚು ಮಳೆ ಬೀಳುವ ಸ್ಥಳ. ಇದನ್ನು 'ಕರ್ನಾಟಕ ಚಿರಾಪುಂಜಿ' ಎಂದು ಕರೆಯುವರು ಮತ್ತು ಕೊಡಗು ಜಿಲ್ಲೆಯ ಭಾಗಮಂಡಲದಲ್ಲಿ 6030 ಮಿ.ಮೀ. ಮಳೆ ಬೀಳುವುದು. ಪೂರ್ವದ ಕಡೆಗೆ ಹೋದಂತೆ ಮಳೆಯ ಪ್ರಮಾಣವು ಕಡಿಮೆಯಾಗುತ್ತಾ ಮೈದಾನದ ಕೆಲವೆಡೆ ಕನಿಷ್ಠ ಮಳೆ ಬೀಳುವುದು.[38]

ನೈರುತ್ಯ ಮಾನ್ಸೂನ್ ಗಾಳಿಗಳು ಕರ್ನಾಟಕದ ಕರಾವಳಿಯನ್ನು ತಲುಪುವುದಕ್ಕೆ ಮುಂಚೆ ಅರಬ್ಬೀ ಸಮುದ್ರದ ಮೇಲೆ ಹಾಯ್ದು ಬರುವಾಗ ಸಾಕಷ್ಟು ತೇವಾಂಶವನ್ನು ಪಡೆದಿರುತ್ತವೆ. ಅಡ್ಡಗೋಡೆಯಂತೆ ಹಬ್ಬಿರುವ ಪಶ್ಚಿಮ ಘಟ್ಟಗಳನ್ನು ಏರಿದಂತೆ ತಂಪಾಗಿ ಘನೀಕರಣದಿಂದ ದಟ್ಟವಾದ ಮೋಡಗಳು ರೂಪುಗೊಂಡು, ಭಾರೀ ಮಳೆಯನ್ನು ಸುರಿಸುತ್ತವೆ. ಅಕಾಲಿಕವೂ ಆಗಿರುವ ಈ ಮಳೆಯ ಹಂಚಿಕೆಯಲ್ಲಿಯೂ ಪ್ರಾದೇಶಿಕ ವ್ಯತ್ಯಾಸವಿರುತ್ತದೆ.

ಈಶಾನ್ಯ ಮಾರುತಗಳ ಕಾಲದಲ್ಲಿ ಗಾಳಿಗಳು ಭೂ ಭಾಗದಿಂದ ಬೀಸುವುದರಿಂದ ಅವು ಸಾಮಾನ್ಯವಾಗಿ ಒಣಗಾಳಿಗಳಾಗಿರುತ್ತವೆ. ಆದ್ದರಿಂದ ಅವು ಅಷ್ಟೊಂದು ಮಳೆಯನ್ನು

ಸುರಿಸಲಾರವು. ಆದರೆ ಬಂಗಾಳಕೊಲ್ಲಿಯ ಮೇಲೆ ಹಾಯ್ದು ಬರುವಾಗ ತೇವಾಂಶವನ್ನು ಪಡೆದು ಭಾರತದ ಪೂರ್ವ ಕರಾವಳಿಗೆ ಸ್ವಲ್ಪ ಮಳೆಯನ್ನು ಸುರಿಸುವುವು. ಅವು ಕರ್ನಾಟಕವನ್ನು ತಲುಪುವ ವೇಳೆಗೆ ದುರ್ಬಲವಾಗುವುದರಿಂದ ಅಷ್ಟೊಂದು ಮಳೆಯನ್ನು ಸುರಿಸಲಾರವು. ಆದರೂ ರಾಜ್ಯದ ಬಯಲು ಪ್ರದೇಶದಲ್ಲಿ ಸ್ವಲ್ಪ ಮಳೆಯಾಗುತ್ತದೆ. ಇದನ್ನು 'ಹಿಂಗಾರು ಮಳೆ' ಎಂದು ಕರೆಯುವರು. ಮಳೆಯ ಪ್ರಮಾಣವು ಮೈದಾನದಲ್ಲಿ ಉತ್ತರದಿಂದ ದಕ್ಷಿಣಕ್ಕೂ ಹಾಗೂ ಕರಾವಳಿಯ ಕಡೆಗೆ ಕಡಿಮೆಯಾಗುವುದು.

ಚಳಿಗಾಲದಲ್ಲಿ ಅತ್ಯಲ್ಪ ಮಳೆಯಾಗುವುದು ಬೇಸಿಗೆಯ ಕೊನೆಯ ಭಾಗದಲ್ಲಿ ಅಂದರೆ ಮೇ ಮಾಹೆಯಲ್ಲಿ ಪರಿಸರಣ ರೀತಿಯ ಮಳೆ ಬೀಳುವುದು. ಈ ಎರಡು ಋತುವಿನಲ್ಲಿ ಬೀಳುವ ಮಳೆಯ ಹಂಚಿಕೆಯು ರಾಜ್ಯಕ್ಕೆ ಅಷ್ಟೊಂದು ಮಹತ್ವದ್ದಾಗಿರುವುದಿಲ್ಲ. ಆದರೆ ಮೇ ತಿಂಗಳಲ್ಲಿ ಬೀಳುವ ಮಳೆಯು ಕಾಫಿ ಬೇಸಾಯಗಾರರಿಗೆ ಬಹಳ ಮಹತ್ವವುಳ್ಳದ್ದಾಗಿರುತ್ತದೆ. ಏಕೆಂದರೆ ಈ ಮಳೆಯು ಕಾಫಿ ಗಿಡವು ಹೂವು ಬಿಡುವುದಕ್ಕೆ ಪೂರಕವಾಗಿರುತ್ತದೆ. ಆದ್ದರಿಂದ ಬೇಸಿಗೆಯಲ್ಲಾಗುವ ಈ ಮಳೆಯನ್ನು 'ಕಾಫಿಯ ಹೂಮಳೆ' ಎಂದು ಕರೆಯುವರು.

ಮಳೆಯ ಹಂಚಿಕೆಯನ್ನಾಧರಿಸಿ ಕರ್ನಾಟಕವನ್ನು ಮುಖ್ಯವಾಗಿ ಮೂರು ಪ್ರದೇಶಗಳನ್ನಾಗಿ ವಿಂಗಡಿಸಬಹುದು.

1. ಅಧಿಕ ಮಳೆ ಬೀಳುವ ಪ್ರದೇಶ
2. ಸಾಧಾರಣ ಮಳೆ ಬೀಳುವ ಪ್ರದೇಶ.
3. ಕಡಿಮೆ ಮಳೆ ಬೀಳುವ ಪ್ರದೇಶ.

### 1. ಅಧಿಕ ಮಳೆ ಬೀಳುವ ಪ್ರದೇಶ :

ಈ ಪ್ರದೇಶವು ವಾರ್ಷಿಕ ಸರಾಸರಿ 2000 ಮಿ.ಮೀ.ಗಳಷ್ಟು ಮಳೆ ಬೀಳುವ ಕರ್ನಾಟಕದ ಪಶ್ಚಿಮ ಘಟ್ಟಗಳ ರಾಜ್ಯಗಳು ಹಾಗೂ ಹೊಂದಿಕೊಂಡ ರಾಜ್ಯಗಳ ಕೆಲವು ಭಾಗಗಳಲ್ಲಿ ಕಂಡು ಬರುತ್ತದೆ. ಇದು ಉಡುಪಿ, ದಕ್ಷಿಣ ಕನ್ನಡ, ಉತ್ತರ ಕನ್ನಡ ಜಿಲ್ಲೆಯ

ಪಶ್ಚಿಮ ಭಾಗ, ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು, ಬೆಳಗಾವಿಯಲ್ಲಿ ಪಶ್ಚಿಮ ಭಾಗ ಹಾಗೂ ಧಾರವಾಡ ಮತ್ತು ಮೈಸೂರು ಜಿಲ್ಲೆಗಳ ಕೆಲವೇ ಭಾಗಗಳನ್ನೊಳಗೊಂಡಿದೆ. ಕೆಲವು ಭಾಗಗಳಲ್ಲಿ 7000 ಮೀ.ಮೀ. ಗಳಗಿಂತಲೂ ಹೆಚ್ಚು ಮಳೆಯಾಗಬಹುದು. ಆಗುಂಬೆಯು ಈ ಪ್ರದೇಶದಲ್ಲಿ ಬರುವುದು. ಈ ಪ್ರದೇಶವು ನೈರುತ್ಯ ಮಾನ್ಸೂನ್ ಮಾರುತಗಳ ಅಭಿಮುಖ ಭಾಗಗಳಾಗಿದ್ದು ಅತ್ಯಧಿಕ ಪ್ರಮಾಣದ ಆರೋಹಣ ಮಾದರಿ ಮಳೆಯನ್ನು ಪಡೆಯಬಹುದು. ಇಲ್ಲಿ ಬೀಳುವ ಮಳೆಯ ಹಂಚಿಕೆ ಮತ್ತು ಪ್ರಮಾಣಗಳೆರಡೂ ನಿಶ್ಚಿತವಾಗಿರುತ್ತದೆ.[39]

## 2. ಸಾಧಾರಣ ಮಳೆ ಬೀಳುವ ಪ್ರದೇಶ :

ಈ ಪ್ರದೇದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಪೂರ್ವ ಭಾಗ, ಮೈಸೂರು ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳ ಹೃದಯಭಾಗ, ಹಾಸನ, ಮಂಡ್ಯ, ಬೆಂಗಳೂರು ಮತ್ತು ಬೀದರ್ ಜಿಲ್ಲೆಗಳು, ತುಮಕೂರು ಜಿಲ್ಲೆಯ ದಕ್ಷಿಣ ಭಾಗ, ಕೋಲಾರ ಜಿಲ್ಲೆಯ ಪಶ್ಚಿಮ ಭಾಗ ಮತ್ತು ಗುಲ್ಬರ್ಗ ಜಿಲ್ಲೆಯ ಉತ್ತರ ಭಾಗ ಮುಂತಾದವು ಸೇರುತ್ತವೆ. ಈ ಪ್ರದೇಶದ ವಾರ್ಷಿಕ ಸರಾಸರಿ ಮಳೆ ೨೦೦ ಮೀ.ಮೀ.ಗಳಾಗಿರುತ್ತದೆ. ಆದರೆ ಪಶ್ಚಿಮದಿಂದ ಪೂರ್ವಕ್ಕೆ ಹೋದಂತೆಲ್ಲಾ ಮಳೆಯ ಪ್ರಮಾಣವು ಕಡಿಮೆಯಾಗುವುದು.




ಭೂಪಟ – 6 ಕರ್ನಾಟಕದ ಮೇಲ್ಮೈಲಕ್ಷಣದ ಇಳಿಜಾರನ್ನು ಸೂಚಿಸುವ ಭೂಪಟ

**ವಾರ್ಷಿಕ ಸರಾಸರಿ ಮಳೆ (ಮಿ.ಮೀ)**

4000 ಕ್ಕಿಂತ ಹೆಚ್ಚು

2000-4000

1000-2000

600-1000

600 ಕ್ಕಿಂತ ಕಡಿಮೆ

(ಕರ್ನಾಟಕ ಪ್ರಾದೇಶಿಕ ಮತ್ತು ಸ್ವರೂಪ ಭೂಪಟದ ಚಿತ್ರ ಬರಬೇಕು)

## 3. ಕಡಿಮೆ ಮಳೆ ಬೀಳುವ ಪ್ರದೇಶ :

ಈ ಪ್ರದೇಶವು ರಾಯಚೂರು, ಬಳ್ಳಾರಿ ಬಿಜಾಪುರ ಮತ್ತು ಚಿತ್ರದುರ್ಗ, ಗುಲ್ಬರ್ಗದ ದಕ್ಷಿಣ ಭಾಗ, ಬೆಳಗಾವಿಯ ಪೂರ್ವಭಾಗ, ಕೋಲಾರ ಜಿಲ್ಲೆ, ತುಮಕೂರು ಜಿಲ್ಲೆಯ ಉತ್ತರ ಭಾಗ, ಮೈಸೂರು ಜಿಲ್ಲೆಯ ದಕ್ಷಿಣ ಭಾಗ ಮುಂತಾದವುಗಳನ್ನು ಒಳಗೊಂಡಿದೆ. ಇಲ್ಲಿ ಬೀಳುವ ವಾರ್ಷಿಕ ಸರಾಸರಿ ಮಳೆ 600 ಮೀ.ಮೀ. ಮಾತ್ರ. ಕೆಲವು ಭಾಗಗಳಲ್ಲಿ ಸರಾಸರಿಗಿಂತಲೂ ಕನಿಷ್ಠ ಪ್ರಮಾಣದ ಮಳೆಯಾಗುವುದು. ಕೆಲವು ವೇಳೆ ಮಳೆ ಬೀಳುವುದೇ ಅನಿಶ್ಚಿತವಾಗಿರುತ್ತದೆ. ಪರಿಣಾಮವಾಗಿ ಈ ಪ್ರದೇಶಗಳು ಆಗಾಗ್ಗೆ ಬರಗಾಲಕ್ಕೆ ತುತ್ತಾಗುತ್ತದೆ.[40]

### ಬರಪೀಡಿತ ಪ್ರದೇಶಗಳು

ಕರ್ನಾಟಕದ ಉತ್ತರ ಹಾಗೂ ಪೂರ್ವದ ಜಿಲ್ಲೆಗಳಲ್ಲಿ ಸಾಮಾನ್ಯವಾಗಿ ಬರಗಳು ಸಂಭವಿಸುವುದು. ಈ ಪ್ರದೇಶಗಳಲ್ಲಿ ವಾರ್ಷಿಕ ಮಳೆ ಅಥವಾ ಮಳೆಗಾಲದ ಮಳೆ ಕಡಿಮೆಯಾಗಿದ್ದು, ಮಳೆಯು ತೀರಾ ಅನಿಶ್ಚಿತತೆಯಿಂದ ಕೂಡಿರುತ್ತದೆ. ಕರ್ನಾಟಕದಲ್ಲಿ ಅತಿವೃಷ್ಟಿಗಿಂತ ಅನಾವೃಷ್ಟಿ ಅಥವಾ ಬರಗಾಲ ಆಗಾಗ್ಗೆ ತಲೆದೋರುವುದೊಂದು ಗಂಭೀರವಾದ ಸಮಸ್ಯೆಯಾಗಿದೆ. ಇದಕ್ಕೆ ಮಾನ್ಸೂನ್ ಮಾದರಿಯ ಮಳೆಯ ಹಂಚಿಕೆಯು ಪ್ರಮುಖವಾದ ಕಾರಣವಾಗಿರುತ್ತದೆ. ಅದರಲ್ಲೂ ಈ ಪ್ರದೇಶಗಳು ಪಶ್ಚಿಮ ಘಟ್ಟಗಳ ಪೂರ್ವಕ್ಕಿದ್ದು ಮಳೆಯ ನೆರಳಿನ ಪ್ರದೇಶಗಳಾಗಿವೆ. ಇಂತಹ ಪರಿಸ್ಥಿತಿಯು ಆಗಾಗ್ಗೆ

ತಲೆದೋರುವುದಕ್ಕೆ ಸಸ್ಯವರ್ಗವು ನಾಶವಾಗುವುದು ಹಾಗೂ ವಾಯು ಮಾಲಿನ್ಯಗಳೂ ಪ್ರಮುಖವಾದ ಕಾರಣಗಳಾಗಿವೆ. ಎಪ್ಪತ್ತೈದು ವರ್ಷಗಳ ದೀರ್ಘಾವಧಿವರೆಗಿನ ರಾಜ್ಯದ ವಿವಿಧ ಜಿಲ್ಲೆಗಳ ಮಳೆಯ ಹಂಚಿಕೆಯನ್ನು ಅಭ್ಯಸಿಸಿದಾಗ ಪ್ರತಿ ವರ್ಷವೂ ಒಂದಲ್ಲ ಒಂದು ಜಿಲ್ಲೆಯಲ್ಲಿ ಬರವು ತಲೆದೋರಿರುವುದು ಕಂಡು ಬರುತ್ತದೆ. 1904, 1908, 1911, 1913, 1918, 1920, 1922, 1926, 1934, 1937, 1945, 1965, 1967, 1977, 1985, 1989, 1990, 2000 ಮುಂತಾದವು ಬರಪೀಡಿತ ವರ್ಷಗಳಾಗಿವೆ. ಸಾಮಾನ್ಯವಾಗಿ ದಕ್ಷಿಣದ ಜಿಲ್ಲೆಗಳಿಗಿಂತ ಉತ್ತರದ ಜಿಲ್ಲೆಗಳಲ್ಲಿ ಬರಗಾಲ ಸಂಭವಿಸುವುದು ಸರ್ವೇ ಸಾಮಾನ್ಯವಾಗಿದೆ. ಉದಾ: ಬೀದರ್, ರಾಯಚೂರು, ಗುಲ್ಬರ್ಗ, ತುಮಕೂರು, ಚಿತ್ರದುರ್ಗ ಮುಂತಾದವು. ಆದರೂ ಬೀದರ್ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಅತಿ ಹೆಚ್ಚುಸಲ ಬರಗಳು ಸಂಭವಿಸಿವೆ. ಅಂದರೆ 75 ವರ್ಷಗಳಲ್ಲಿ 30 ಸಲ ಬರಗಳು ಸಂಭವಿಸಿವೆ. ಇಷ್ಟೇ ಅಲ್ಲದೆ ಕೆಲವು ಜಿಲ್ಲೆಗಳ ಭಾಗಗಳಲ್ಲಿಯೂ ಆಗಾಗ್ಗೆ ಬರಗಳು ಸಂಭವಿಸುತ್ತವೆ. ಉದಾ: ಮೈಸೂರು, ಗುಂಡ್ಲುಪೇಟೆ, ಚಾಮರಾಜನಗರ, ಬೆಳಗಾವಿಯ ಅಥಣಿ, ರಾಯಭಾಗ, ರಾಮದುರ್ಗ, ಧಾರವಾಡದ ನರಗುಂದ, ನವಲಗುಂದ, ಚಿಕ್ಕಮಗಳೂರಿನ ಕಡೂರು, ತುಮಕೂರಿನ ಮಧುಗಿರಿ, ಪಾವಗಡ, ಬಂಗಾರಪೇಟೆ, ಗುಡಿಬಂಡೆ, ಬಾಗೇಪಲ್ಲಿ ಮುಂತಾದವು.[41]

## ಮಣ್ಣು (Soils)

ಕರ್ನಾಟಕದ ವಿವಿಧ ನೈಸರ್ಗಿಕ ಸಂಪನ್ಮೂಲಗಳಲ್ಲಿ ಮಣ್ಣು ಪ್ರಮುಖವಾದುದು. ಏಕೆಂದರೆ ಕರ್ನಾಟಕದ ಜನಸಂಖ್ಯೆಯಲ್ಲಿ ಹೆಚ್ಚಿನ ಭಾಗ ತಮ್ಮ ಜೀವನೋಪಾಯಕ್ಕೆ ಕೃಷಿಯನ್ನು ಅವಲಂಬಿಸಿರುವವರು. ಮಣ್ಣು ಫಲವತ್ತಾಗಿದ್ದರೆ ಉತ್ತಮ ಫಸಲು ಹಾಗೂ ವನಸ್ಪತಿಯನ್ನು ನಿರೀಕ್ಷಿಸಬಹುದು. ಕೆಲವು ಬಗೆಯ ಮಣ್ಣು ಉತ್ಕೃಷ್ಟವಾಗಿರುವುದಿಲ್ಲ. ಅಂತಹವುಗಳಲ್ಲಿ ಕೊರತೆಗಳನ್ನು ಗಮನಿಸಿ ರಸಗೊಬ್ಬರ ಅಥವಾ ನೈಸರ್ಗಿಕ ಗೊಬ್ಬರಗಳನ್ನು ಸೇರಿಸಿ ಫಲವತ್ತತೆಯನ್ನು ಹೆಚ್ಚಿಸಬಹುದಾಗಿದೆ. ಫಲವತ್ತಾದ ಮಣ್ಣು ಸಹ ನಿರಂತರವಾಗಿ

ಸಾಗುವಳಿಗಾಗಿ ಬಳಸುವುದರಿಂದ ತನ್ನ ಸಾರವನ್ನು ಕಳೆದುಕೊಳ್ಳುವುದು. ಅಂತಹ ಮಣ್ಣಿನ ಸಾರವನ್ನು ಸಂರಕ್ಷಿಸುವುದು ಅಗತ್ಯವಿದೆ.

ಕರ್ನಾಟಕ ರಾಜ್ಯದ ವಿವಿಧ ಭಾಗಗಳಲ್ಲಿರುವ ಮೂಲ ಶಿಲೆ ಮತ್ತು ವಾಯುಗುಣದ ಪರಿಸ್ಥಿತಿಗಳಿಗನುಸಾರವಾಗಿ ವಿವಿಧ ಬಗೆಯ ಮಣ್ಣು ಕಂಡುಬರುತ್ತದೆ. ಒಂದು ಪ್ರದೇಶದಲ್ಲಿ ಕಂಡು ಬರುವ ಮಣ್ಣನ್ನು ಸ್ಥೂಲವಾಗಿ ಸ್ಥಾಯೀ (ಅವಶಿಷ್ಟ) ಮಣ್ಣು ಮತ್ತು ಸ್ಥಳಾಂತರಿತ ಮಣ್ಣು ಎಂದು ಎರಡು ಬಗೆಯಾಗಿ ವಿಂಗಡಿಸಬಹುದು. ಅವಶಿಷ್ಟ ಮಣ್ಣು ಒಂದೇ ಬಗೆಯ ಶಿಲೆಗಳಿಂದ ತಯಾರಾಗಿರಬಹುದು ಅಥವಾ ಅನೇಕ ಬಗೆಯ ಶಿಲೆಗಳಿಂದ ತಯಾರಾಗಿರಬಹುದು. ಒಂದೇ ಬಗೆಯ ಶಿಲೆಗಳಿಂದ ತಯಾರಾದ ಅವಶಿಷ್ಟ ಮಣ್ಣಿನಲ್ಲಿ ಎಲ್ಲಾ ಬಗೆಯ ಮೂಲ ದ್ರವ್ಯಗಳಿಲ್ಲದಿರುವುದರಿಂದ ಅಷ್ಟೊಂದು ಫಲವತ್ತಾಗಿರುವುದಿಲ್ಲ. ಆದರೆ ಅನೇಕ ಬಗೆಯ ಶಿಲೆಗಳಿಂದಾದ ಅವಶಿಷ್ಟ ಮಣ್ಣಿನಲ್ಲಿ ಎಲ್ಲಾ ಬಗೆಯ ಮೂಲ ದ್ರವ್ಯಗಳಿರುವುದರಿಂದ ಆ ಮಣ್ಣು ಸಾಕಷ್ಟು ಫಲವತ್ತಾಗಿರುತ್ತದೆ. ರಾಜ್ಯದ ಮುಖ್ಯ ಮಣ್ಣುಗಳಾದ ಕೆಂಪು ಮತ್ತು ಕಪ್ಪು ಮಣ್ಣುಗಳು ಅಥವಾ ಸ್ಥಾಯೀ ಮಣ್ಣುಗಳಾಗಿವೆ.[42]

ಒಂದು ಸ್ಥಳದಲ್ಲಿನ ಅವಶಿಷ್ಟ ಮಣ್ಣು ಗಾಳಿ, ನದಿ, ಹಿಮನದಿ ಮೊದಲಾದ ನಗ್ನೀಕರಣದ ಕೃತ್ಯಗಳಿಂದ ಮತ್ತೊಂದು ಸ್ಥಳಕ್ಕೆ ಸ್ಥಳಾಂತರಿಸಲ್ಪಡುತ್ತದೆ. ಹೀಗೆ ಸ್ಥಳಾಂತರಿಸಲ್ಪಟ್ಟ ಮಣ್ಣಿಗೆ ಸ್ಥಳಾಂತರಿತ ಮಣ್ಣು ಎನ್ನುವರು. ಈ ಮಣ್ಣಿನಲ್ಲಿ ಸಾವಯವ ಪದಾರ್ಥಗಳು ಹೆಚ್ಚಾಗಿರುತ್ತವೆ. ಆದ್ದರಿಂದ ಸ್ಥಳಾಂತರಿತ ಮಣ್ಣು ಬಹಳ ಫಲವತ್ತಾಗಿರುತ್ತದೆ. ಕರ್ನಾಟಕದ ನದೀ ಕಣಿವೆಗಳಲ್ಲಿನ ಮೆಕ್ಕಲು ಮಣ್ಣು ಮತ್ತು ಕರಾವಳಿ ಮಣ್ಣು ಸ್ಥಳಾಂತರಿತ ಮಣ್ಣುಗಳಾಗಿವೆ. ಇವುಗಳಲ್ಲದೆ ಹೆಚ್ಚು ಮಳೆ ಬೀಳುವ ಪಶ್ಚಿಮ ಕರಾವಳಿ ಮತ್ತು ಘಟ್ಟದ ಮೇಲಿನ ಬೆಟ್ಟದ ಪ್ರದೇಶಗಳಲ್ಲಿ ಜಂಬಿಟ್ಟಿಗೆ ಮಣ್ಣು ಕಂಡು ಬರುತ್ತದೆ. ಒಟ್ಟಿನಲ್ಲಿ ರಾಜ್ಯದ ಮಣ್ಣುಗಳನ್ನು ಪ್ರಮುಖವಾಗಿ ನಾಲ್ಕು ಪ್ರಕಾರಗಳಾಗಿ ವಿಂಗಡಿಸಬಹುದು. ಅವುಗಳೆಂದರೆ 1) ಕೆಂಪು ಮಣ್ಣು, 2) ಕಪ್ಪುಮಣ್ಣು, 3) ಮೆಕ್ಕಲು ಮಣ್ಣು, 4) ಜಂಬಿಟ್ಟಿಗೆ ಮಣ್ಣು.

## 1. ಕೆಂಪುಮಣ್ಣು

ಈ ವಿವಿಧ ಮಣ್ಣು ಅಗ್ನಿಶಿಲೆಗಳು (ವಿಶೇಷವಾಗಿ ಗ್ರಾನೈಟ್, ನೀಸ್‌ಶಿಫ್ಟ್ ಮುಂತಾದ ಶಿಲೆಗಳು) ಶಿಥಿಲೀಕರಣಗೊಂಡು ದೊರೆಯುವ ವಸ್ತುಗಳಿಂದ ಉತ್ಪತ್ತಿಯಾಗುವುದು. ಮೂಲಶಿಲೆಗಳಲ್ಲಿ ಕಬ್ಬಿಣದ ಆಕ್ಸೈಡ್, ಟಿಟಾನಿಯಂ ಆಕ್ಸೈಡ್ ವಸ್ತುಗಳಿರುವುದರಿಂದ ಈ ಮಣ್ಣು ಕೆಂಪಾಗಿರುತ್ತದೆ. ಮಣ್ಣಿನ ಆಳ 90–150 ಸೆಂ.ಮೀ. ಈ ಮಣ್ಣು ಸೂಕ್ಷ್ಮ ಕಣ ರಚನೆ, ಸಾಂದ್ರತೆ ಮತ್ತು ಸುಲಭವಾಗಿ ಪುಡಿಪುಡಿಯಾಗುವ ಗುಣಗಳನ್ನು ಹೊಂದಿದೆ. ಈ ಮಣ್ಣು ಸುಣ್ಣ ಮತ್ತು ಇಂಗಾಲದ ಲವಣಗಳ ಕೊರತೆಯಿಂದ ಕೂಡಿದೆ. ಕೆಂಪು ಮಣ್ಣು ಅಷ್ಟೊಂದು ಫಲವತ್ತಲ್ಲ. ಏಕೆಂದರೆ ಇದಕ್ಕೆ ಸಸ್ಯ ಪೋಷಕಾಂಶ ಮತ್ತು ಸಾವಯವ ಪದಾರ್ಥಗಳ ಬೆಳೆಯುವ ಗುಣದ ಅಭಾವವೇ ಕಾರಣ. ಇದೇ ರೀತಿ ಕೆಂಪು ಮಣ್ಣಿನಲ್ಲಿ ತೇವ ಹಿಡಿದಿಟ್ಟುಕೊಳ್ಳುವ ಶಕ್ತಿಯೂ ಕಡಿಮೆ. ಮಸಾರಿ ಮಣ್ಣು, ಜೇಡಿ ಮತ್ತು ಮರಳು ಮಿಶ್ರಿತ ಕೆಂಪು ಮಣ್ಣುಗಳು ಈ ವರ್ಗಕ್ಕೆ ಸೇರಿದ ಮುಖ್ಯ ಮಣ್ಣುಗಳು. ಇವುಗಳಲ್ಲಿ ರಾಗಿ, ನೆಲಗಡಲೆ, ಬೇಳೆಕಾಳುಗಳು, ಜೋಳ, ಎಣ್ಣೆಕಾಳುಗಳು ಮುಂತಾದ ಬೆಳೆಗಳನ್ನು ಬೆಳೆಯಬಹುದು. ನೀರಾವರಿ ಸೌಲಭ್ಯವನ್ನು ಹೊಂದಿದ್ದರೆ ಕಬ್ಬು, ಭತ್ತ, ಹತ್ತಿ, ಹೊಗೆಸೊಪ್ಪು, ತೆಂಗು ಮೊದಲಾದ ಬೆಳೆಗಳನ್ನು ಬೆಳೆಯಬಹುದು. ಕರ್ನಾಟಕದಲ್ಲಿ ಕೆಂಪು ಮಣ್ಣು ವಿಶೇಷವಾಗಿ ದಕ್ಷಿಣ ಮತ್ತು ಪೂರ್ವ ಭಾಗಗಳಲ್ಲಿ ಹಂಚಿಕೆಯಾಗಿದೆ. ಅದರಲ್ಲೂ ತುಮಕೂರು, ಬೆಂಗಳೂರು, ಕೋಲಾರ, ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ಪ್ರಮುಖವಾಗಿ ಕಂಡುಬಂದರೆ ಚಿಕ್ಕಮಗಳೂರು, ಕೊಡಗು, ಹಾಸನ, ಬೆಳಗಾವಿ, ರಾಯಚೂರು, ಧಾರವಾಡ ಮತ್ತು ಬಳ್ಳಾರಿ ಜಿಲ್ಲೆಗಳ ಕೆಲವು ಭಾಗಗಳಲ್ಲೂ ಈ ಬಗೆಯ ಮಣ್ಣು ಕಂಡುಬರುತ್ತದೆ.[43]

## 2. ಕಪ್ಪುಮಣ್ಣು

ಈ ಪ್ರಕಾರದ ಮಣ್ಣು 'ಬಸಾಲ್ಟ್' (ಅಗ್ನಿಶಿಲೆ) ಶಿಲೆಯಿಂದಾಗಿ ಉತ್ಪತ್ತಿಯಾಗುತ್ತದೆ. ಕಪ್ಪುಶಿಲೆ ಅಥವಾ ಬಸಾಲ್ಟ್ ಶಿಲೆ ಸವೆದು ಅಥವಾ ವಿಭಜನೆ ಹೊಂದಿ ಕಪ್ಪು ಮಣ್ಣು ಉಂಟಾಗುತ್ತವೆ. ಇದರಲ್ಲಿ ಮೆಗ್ನಿಷಿಯಂ ಮತ್ತು ಟೈಟೇನಿಯಂ ಆಕ್ಸೈಡುಗಳ ಪ್ರಮಾಣ ಹೆಚ್ಚಿರುವುದರಿಂದ ಈ ಮಣ್ಣು ಕಪ್ಪು ಬಣ್ಣವನ್ನು ಹೊಂದಿದೆ. ಇದನ್ನು ಎರೆಮಣ್ಣು, ಕಪ್ಪುಹತ್ತಿ

ಮಣ್ಣು ಅಥವಾ 'ರೆಗ್ಗೂರ್ಸ್' ಎಂತಲೂ ಕರೆಯುವರು. ಇದು ಅತಿ ಸೂಕ್ಷ್ಮ ಕಣಗಳಿಂದ ಕೂಡಿದ ಭಾರವಾದ ಮಣ್ಣು. ಇಂತಹ ಮಣ್ಣಿಗೆ ನೀರನ್ನು ಬಹುಕಾಲದವರೆಗೆ ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯವಿದೆ. ಈ ಮಣ್ಣು ವನಸ್ಪತಿ ಆಹಾರ ದ್ರವ್ಯಗಳಿಂದ ಸಮೃದ್ಧವಾಗಿರುವುದರಿಂದ ಫಲವತ್ತಾಗಿದೆ. ಸಾವಯವ ಅಂಶಗಳು ಸಾರಜನಕ ಮತ್ತು ರಂಜಕಗಳ ಪ್ರಮಾಣ ಕಡಿಮೆಯಾಗಿರುತ್ತದೆ. ತೇವಾಂಶವಿರುವುದರಿಂದ ಮೃದುವಾಗಿರುತ್ತದೆ. ಆದರೆ ಬೇಸಿಗೆಯಲ್ಲಿ ಬಿರುಕುಗಳುಂಟಾಗುವುದು.

ಈ ಮಣ್ಣು ಫಲವತ್ತಾದುದು. ಕಪ್ಪುಮಣ್ಣು ವಿಶೇಷವಾಗಿ ಬಿಜಾಪುರ, ಧಾರವಾಡ, ಬೆಳಗಾವಿ, ಬಳ್ಳಾರಿ, ರಾಯಚೂರು, ಗುಲ್ಬರ್ಗ, ಬೀದರ್ ಮತ್ತು ಚಿತ್ರದುರ್ಗ ಜಿಲ್ಲೆಗಳು ಸೇರಿದಂತೆ ರಾಜ್ಯದ ಉತ್ತರ ಭಾಗಗಳಲ್ಲಿ ಹರಡಿದೆ. ಚಾಮರಾಜನಗರ ಮತ್ತು ಯಳಂದೂರು ತಾಲ್ಲೂಕುಗಳ ಕೆಲವೆಡೆ ಸಹ ಕಪ್ಪು ಮಣ್ಣು ಹರಡಿದೆ. ಬಿಜಾಪುರ, ಬೆಳಗಾವಿ, ಗುಲ್ಬರ್ಗ ಮತ್ತು ಬೀದರ್ ಜಿಲ್ಲೆಗಳಲ್ಲಿ ಕಪ್ಪುಮಣ್ಣು ಮತ್ತು ಶಿಷ್ಟ ಮತ್ತು ನೈಸಿಕ್ ಸಮ್ಮಿಶ್ರ ಮೂಲಗಳಿಂದಲೂ ಉಂಟಾಗಿದೆ. ಕಪ್ಪು ಮಣ್ಣಿನಲ್ಲಿ ಹತ್ತಿ ನೆಲಗಡಲೆ, ಗೋಧಿ, ಜೋಳ, ಹೊಗೆಸೊಪ್ಪು ಹಾಗೂ ಕಬ್ಬು ಚೆನ್ನಾಗಿ ಬೆಳೆಯುತ್ತದೆ.[44]

## 3. ಮೆಕ್ಕಲು ಮಣ್ಣು

ಈ ಮಣ್ಣು ಸಮುದ್ರದ ತೀರ ಪಶ್ಚಿಮ ಘಟ್ಟಗಳಿಂದ ಹರಿಯುವ ನೀರು ಶಿಲಾವಸ್ತುಗಳನ್ನು ದೂರದಿಂದ ಸಾಗಿಸಿಕೊಂಡು ಬಂದು ತಗ್ಗು ಪ್ರದೇಶಗಳಲ್ಲಿ ಸಂಚಯ ಮಾಡಿದ ಮಣ್ಣಾಗಿರುತ್ತದೆ. ಇಂತಹ ಮಣ್ಣು ಮರಳು ಮತ್ತು ಜೇಡಿ ಮಣ್ಣಿನಿಂದ ಕೂಡಿರುತ್ತದೆ. ಇವುಗಳಲ್ಲಿ ಸಸ್ಯ ಪೋಷಕವಾದ ಸಾರಜನಕ ಹೆಚ್ಚಾಗಿರುತ್ತದೆ. ಇವು ವಿಶೇಷವಾಗಿ ನದಿಗಳ ಮಹಾಪೂರ ಪ್ರದೇಶಗಳಲ್ಲಿ ಮತ್ತು ಕರಾವಳಿ ಪ್ರದೇಶಗಳಲ್ಲಿ ಹರಡಿದೆ. ಈ ಮಣ್ಣು ಅಷ್ಟೊಂದು ಆಳವಾಗಿರುವುದಿಲ್ಲ. ಇವುಗಳಲ್ಲಿ ಖನಿಜಾಂಶ ಹೆಚ್ಚು, ಕರಾವಳಿಯ ಮೆಕ್ಕಲು ಮಣ್ಣು ನದಿಯ ಮಹಾಪೂರ ಪ್ರದೇಶದಲ್ಲಿನ ಮೆಕ್ಕಲು ಮಣ್ಣಿನಷ್ಟು ಫಲವತ್ತಲ್ಲ. ಏಕೆಂದರೆ ಕರಾವಳಿ ಪ್ರದೇಶದಲ್ಲಿ ಮಳೆಯ ಪ್ರಮಾಣ ಹೆಚ್ಚಾಗಿರುತ್ತದೆ. ಕರಾವಳಿ ಮಣ್ಣು ಭತ್ತ, ಕಬ್ಬು, ಅಡಿಕೆ, ತೆಂಗು ಮತ್ತು ಮಸಾಲೆ ಬೆಳೆಗಳಿಗೆ ಬಹು ಉತ್ಕೃಷ್ಟವಾಗಿವೆ.[45]

## 4. ಜಂಬಿಟ್ಟಿಗೆ ಮಣ್ಣು

ಇಂತಹ ಮಣ್ಣು ಅಧಿಕ ಮಳೆ ಮತ್ತು ಉಷ್ಣಾಂಶವಿರುವ ಎತ್ತರವಾದ ಗುಡ್ಡಗಾಡು ಪ್ರದೇಶಗಳಲ್ಲಿ ಕಂಡುಬರುತ್ತದೆ. ನೀರಿನಲ್ಲಿ ಸುಲಭವಾಗಿ ಕರಗಬಲ್ಲ ಸಿಲಿಕೇಟ್ ಮತ್ತು ಸುಣ್ಣಗಳು ಮಳೆಯ ನೀರಿನಲ್ಲಿ ಕರಗಿ ತಳದ ಪದರುಗಳಿಗೆ ಸಾಗಿಸಲ್ಪಡುತ್ತವೆ. ಮೇಲ್ಪದರದಲ್ಲಿ ಹೆಚ್ಚು ಕಬ್ಬಿಣ ಮತ್ತು ಅಲ್ಯೂಮಿನಿಯಂಗಳು ಉಳಿಯುತ್ತವೆ. ಒತ್ತೊತ್ತಾದ ಕಣಗಳ ರಚನೆಯಿಂದ ಬಿಸಿಲಿಗೆ ಒಣಗಿ ಗಟ್ಟಿಯಾಗಿ ಲ್ಯಾಟರೈಟ್ ಶಿಲೆಯಾಗಿ ಪರಿಣಮಿಸುತ್ತವೆ. ಕ್ರಮೇಣ ಈ ಶಿಲೆಗಳು ಶಿಥಿಲೀಕರಣ ಹೊಂದಿ ಈ ಬಗೆಯ ಮಣ್ಣು ಉತ್ಪತ್ತಿಯಾಗುತ್ತದೆ. ಸುಣ್ಣದ ಕೊರತೆಯಿಂದ ಆಮ್ಲತೆ ಹೆಚ್ಚಾಗಿರುತ್ತದೆ. ಈ ಮಣ್ಣಿನಲ್ಲಿ ಸಾವಯವ ವಸ್ತು ಹೆಚ್ಚು. ಆದರೆ ಇದು ಸಾರಜನಕದಿಂದ ಕೂಡಿರುತ್ತದೆ. ರಂಜಕ ಮತ್ತು ಸುಣ್ಣದ ಕೊರತೆ ಅಧಿಕವಾಗಿರುತ್ತದೆ. ಆದ್ದರಿಂದ ಇದು ಆಮ್ಲಯುಕ್ತವಾಗಿದ್ದು ಸುಣ್ಣ ಮತ್ತಿತರೆ ಪೌಷ್ಠಿಕಾಂಶಗಳ ಕೊರತೆಯಿಂದ ಕೂಡಿದೆ. ಸಾಂದ್ರವಾದ ಈ ಮಣ್ಣಿನಲ್ಲಿ ನೀರು ಸುಲಭವಾಗಿ ಬಸಿದುಹೋಗುತ್ತದೆ. ಆದರೆ ಜೇಡಿಯ ಅಂಶವಿಲ್ಲದಿರುವ ಈ ಮಣ್ಣಿಗೆ ನೀರನ್ನು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯವಿಲ್ಲ. ಕರ್ನಾಟಕದಲ್ಲಿ ಪಶ್ಚಿಮ ಘಟ್ಟಗಳು, ಭಾರೀ ಮಳೆಯ ಪ್ರದೇಶಗಳಲ್ಲಿ ವಿಶೇಷವಾಗಿ ಚಿಕ್ಕಮಗಳೂರು, ಶಿವಮೊಗ್ಗ, ಉಡುಪಿ, ದಕ್ಷಿಣ ಕನ್ನಡ, ಉತ್ತರ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿ ಈ ರೀತಿಯ ಮಣ್ಣನ್ನು ಕಾಣಬಹುದು. ಬೆಳಗಾವಿ ಮತ್ತು ಧಾರವಾಡ ಜಿಲ್ಲೆಗಳ ಕೆಲವೆಡೆಗಳಲ್ಲೂ ಈ ರೀತಿಯ ಮಣ್ಣು ಕಂಡುಬರುತ್ತದೆ. ಈ ಮಣ್ಣು ಅಷ್ಟೊಂದು ಫಲವತ್ತಾಗಿಲ್ಲದಿದ್ದರೂ, ಇದರಲ್ಲಿ ಅನೇಕ ವಿವಿಧ ಕೃಷಿ ಬೆಳೆಗಳನ್ನು ಬೆಳೆಯುವರು.[46] ಉದಾ: ಗೋಡಂಬಿ, ರಬ್ಬರ್, ಅಡಿಕೆ, ತೆಂಗು, ಭತ್ತ, ಬಾಳೆ, ಕಾಫಿ, ಚಹಾ ಇತ್ಯಾದಿ.

## ಪರಾಮರ್ಶನಗಳು


1. ಹಾ.ಮಾ.ನಾಯಕ್ (ಪ್ರಧಾನ ಸಂಪಾದಕರು), *ಕನ್ನಡ ವಿಷಯ ವಿಶ್ವಕೋಶ,* ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.ಸಂ, 30–39.
2. ಕೃಷ್ಣರಾವ್ ಎಂ.ವಿ ಮತ್ತು ಕೇಶವಭಟ್ಟ – *ಕರ್ನಾಟಕದ ಪರಂಪರೆ,* ಬೆಂಗಳೂರು, ಸಂ–01, 1970, ಪು.ಸಂ, 30–40.
3. ವಾಡಿಯ ಡಿ.ಎನ್ : *ಜಿಯೋಗ್ರಫಿ ಆಫ್ ಇಂಡಿಯಾ,* ಡೆಲ್ಲಿ, 1983, ಚಾಪ್ಟರ್ ಆನ್ ಸದರನ್ ರೀಜನ್.
4. *ಕರ್ನಾಟಕರಾಜ್ಯ ಗೆಜಿಟಿಯರ್* : ವಾಲ್ಯುಮ್–01, ಭೌಗೋಳಿಕ ಲಕ್ಷಣಗಳ ಕುರಿತಾದ ಅಧ್ಯಾಯನ ಭಾಗ.
5. *ಕರ್ನಾಟಕ ಹ್ಯಾಂಡ್‌ಬುಕ್* : ಚಾಪ್ಟರ್–01, ಪು.ಸಂ, 1–66.
6. ಸಿಂಗ್ ಆರ್.ಎನ್ : *ಎ ರಿಜನಲ್ ಜೀಯೋಗ್ರಫಿ,* ವಾರಣಾಸಿ, 1989, ಚಾಪ್ಟರ್ ಆನ್ ಸದರನ್ ರೀಜನ್, ದಕ್ಷಿಣ ಪ್ರದೇಶದ ಅಧ್ಯಯನಕ್ಕೆ ಸೀಮಿತವಾದ ಅಧ್ಯಯದಲ್ಲಿನ ಉದಾಹರಣೆಯನ್ನು ಆಧರಿಸಿದೆ.
7. ಕೃಷ್ಣನ್ ಎಂ.ಎಸ್ : *ಜಿಯೋಲಜಿ ಆಫ್ ಇಂಡಿಯಾ, ಬರ್ಮ,* ಹಿಗ್ಗಿಮ್ ಬಾತಮ್ಸ್, ಮದ್ರಾಸ್, 1960, ದಕ್ಷಿಣದ ಪ್ರದೇಶಕ್ಕೆ ಸೀಮಿತವಾದ ಮಾಹಿತಿಯನ್ನು ಆಧರಿಸಿದೆ.
8. ಪ್ರಧಾನ ಗುರುದತ್ : ಕರ್ನಾಟಕದ ಭೂಗೋಳ, *ಅವಲೋಕನ,* ಸಂಪಾದಕರು – ಹೆಚ್.ಎಸ್.ಕೆ, 1985, ಪು.ಸಂ, 14–21.
9. ವೈಲಿಂಗರಾಜ್ : ಜಿಯೋಲಾಜಿಕಲ್ ಹಿಸ್ಟರಿ ಆಫ್ ಕರ್ನಾಟಕ, *ಅವಲೋಕನ,* ಸಂಪಾದಕರು – ಹೆಚ್.ಎಸ್.ಕೆ, ಬೆಂಗಳೂರು, 1985, ಪು.ಸಂ–22–25.
10. ಡಾ.ಹೆಚ್.ಚಂದ್ರಶೇಖರ : ಗ್ರೌಂಡ್ ವಾಟರ್ ರಿಸೋರ್ಸಸ್ ಅಫ್ ಕರ್ನಾಟಕ, *ಅವಲೋಕನ,* ಸಂಪಾದಕರು – ಹೆಚ್.ಎಸ್.ಕೆ, ಬೆಂಗಳೂರು, 1985, ಪು.ಸಂ, 32–35.
11. ಅದೇ ಪುಟ

12. ಹಯವದನರಾವ್, *ಮೈಸೂರು ಗೆಜಿಟಿಯರ್,* ಬೆಂಗಳೂರು, 1927, ವ್ಯಾಲುಮ್-01, ಪು.ಸಂ, 1-10.
13. ಅದೇ
14. ಅದೇ
15. ಬಿ.ಎಲ್.ರೈಸ್, 1897, ಮೈಸೂರು ಗೆಜಿಟಿಯರ್ ವ್ಯಾಲುಮ್-01, ಪು.ಸಂ,
16. *ಕರ್ನಾಟಕ ವಿಷಯ ವಿಶ್ವಕೋಶ,* 1978, ಪುಟ
17. ಅದೇ
18. ಅದೇ
19. ಅದೇ
20. ಅದೇ
21. ಅದೇ
22. ಹಯವದನರಾವ್, *ಮೈಸೂರು ಗೆಜಿಟಿಯರ್*, ವ್ಯಾಲುಮ್-01, ಪು.ಸಂ, 1-10.
23. ಅದೇ
24. ಅದೇ
25. ಅದೇ
26. ಟಿ.ವಿ.ನಾಗರಾಜರಾವ್ : *ಮೈಸೂರು ಸಂಸ್ಥಾನದಲ್ಲಿ ಕೆರೆ ನೀರಾವರಿ,* 2008, ಪು.ಸಂ, 18-32.
27. ಹರಿಹರ ಶ್ರೀನಿವಾಸರಾವ್ – ಚಾವುಂಡರಾಯನ ಲೋಕೋಪಕಾರದಲ್ಲಿ ಜಲ ವಿಜ್ಞಾನ, ಕನ್ನಡ ಸಾಹಿತ್ಯ ಪರಿಷತ್ತ್, ಬೆಂಗಳೂರು, 2010.
28. ಅದೇ
29. ಟಿ.ವಿ.ನಾಗರಾಜರಾವ್ - ಪೂರ್ವೋಕ್ತ, 2008, ಪು.ಸಂ, 18-32.
30. ಅದೇ
31. ಹಯವದನರಾವ್, *ಮೈಸೂರು ಗೆಜಿಟಿಯರ್*, ವ್ಯಾಲುಮ್-01, ಪು.ಸಂ.
32. ಅದೇ

33. *ಕರ್ನಾಟಕ ಹ್ಯಾಂಡ್‌ಬುಕ್ :* ಗೆಜೆಟಿಯರ್ ಇಲಾಖೆ, ಬೆಂಗಳೂರು, ತಂತ್ರಾಂಶ ಪ್ರತಿ, 2012, ಚಾಪ್ಟರ್-01, ಪು.ಸಂ, 1-60.
34. ಅದೇ
35. ಅದೇ
36. ಅದೇ
37. ಹಯವದನರಾವ್, *ಮೈಸೂರು ಗೆಜಿಟಿಯರ್,* ವ್ಯಾಲುಮ್-05, ಜಿಲ್ಲಾವಾರು ಅಧ್ಯಯನಗಳನ್ನು ಗಮನಿಸಿ.
38. ಅದೇ
39. ಅದೇ
40. *ಕರ್ನಾಟಕ ಹ್ಯಾಂಡ್‌ಬುಕ್* : ಗೆಜೆಟಿಯರ್ ಇಲಾಖೆ, ಬೆಂಗಳೂರು, ತಂತ್ರಾಂಶ ಪ್ರತಿ, ಬೆಂಗಳೂರು 2012, ಚಾಪ್ಟರ್-01, ಪು.ಸಂ, 1-60.
41. ಅದೇ
42. ರಂಗನಾಥ, *ಭಾರತದ ಭೂಗೋಳಶಾಸ್ತ್ರ,* ಗದಗ, 1995, ಪು.ಸಂ, 49-52.
43. ಅದೇ
44. ಅದೇ
45. ಅದೇ
46. ಅದೇ

## ಅಧ್ಯಾಯ-3

# ದಕ್ಷಿಣ ಕರ್ನಾಟಕದ ಸಂಕ್ಷಿಪ್ತ ಪ್ರಾಗ್ಇತಿಹಾಸ ಮತ್ತು ಇತಿಹಾಸ

ದಕ್ಷಿಣ ಕರ್ನಾಟಕದ ಎಲ್ಲೆಯೊಳಗೆ ನಾವು ಅಧ್ಯಯನಕ್ಕೆ ನಿಗದಿಪಡಿಸಿಕೊಂಡಿರುವ ಅಧ್ಯಾಯದ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳನ್ನು ಮತ್ತು ಪ್ರದೇಶಗಳನ್ನು ಈಗಾಗಲೇ ಗುರುತಿಸಿದ್ದೇವೆ. ಪ್ರಾಚೀನ ಆಡಳಿತ ವ್ಯವಸ್ಥೆಯಲ್ಲಿ ಯಾವುದೇ ಒಂದು ಪ್ರದೇಶದ ಎಲ್ಲೆಯನ್ನು ಭೌಗೋಳಿಕ ಲಕ್ಷಣಗಳನ್ನಾಧರಿಸಿ ಅಥವಾ ಜನರ ಭಾಷೆಯನ್ನಾಗಲೀ ಆಧರಿಸಿ ನಿರ್ಧರಿಸಲಾಗುತ್ತಿರಲಿಲ್ಲ. ಸಾಮ್ರಾಜ್ಯದ ಸೇನಾಶಕ್ತಿ ಮತ್ತು ರಾಜನ ತಂತ್ರಗಾರಿಕೆ ಮತ್ತು ರಾಜಕೀಯ ಇಚ್ಛಾಶಕ್ತಿಗಳು ಸೈನಿಕ ಕಾರ್ಯಚರಣೆಗಳ ಜೊತೆಗೂಡಿ ಇತಿಹಾಸದ ಕಾಲಘಟ್ಟಗಳು ನಿರ್ಧಾರವಾಗುತ್ತಿದ್ದವು.

ಪ್ರಾಂತೀಯ ವಿಭಾಗದ ಕ್ರಮದಲ್ಲಿಯೂ ಮಾಂಡಲೀಕನ ಅಥವಾ ಸಾಮಂತನ ಶಕ್ತಿ ಸಾಧನೆಗೆ ಅನುಗುಣವಾಗಿ ಆಯಾ ಕಾಲಘಟ್ಟದಲ್ಲಿ ಇವು ವಿಸ್ತರಿಸುವ ಅಥವಾ ಕುಗ್ಗುವ ಪ್ರಕ್ರಿಯೆಗೆ ಒಳಗಾಗುತ್ತಿದ್ದವು. ಆದರೆ ಸ್ವಾತಂತ್ರ್ಯ ನಂತರ ಆಡಳಿತದ ಅನುಕೂಲಕ್ಕಾಗಿ ಬ್ರಿಟಿಷ್ ಪ್ರಭಾವದಿಂದಾಗಿ ಪ್ರದೇಶಗಳನ್ನು ನಿರ್ದಿಷ್ಟ ಕ್ಷೇತ್ರವನ್ನಾಗಿ ವಿಂಗಡಿಸುವ ಪ್ರಕ್ರಿಯೆ ಕಂಡು ಬಂದಿದೆ. ಈ ಪ್ರಕ್ರಿಯೆಯೂ ಬ್ರಿಟಿಷ್ ಆಡಳಿತದಯುಗದಲ್ಲಿಯೇ ಪ್ರಾರಂಭವಾದರೂ ಭಾಷೆಯ ಆಧಾರದ ಮೇಲೆ ಈ ಆಡಳಿತದ ಘಟಕಗಳು ರೂಪುಗೊಂಡಿರಲಿಲ್ಲ. ಹೀಗಾಗಿ ಒಂದು ಭಾಷೆಯನ್ನಾಡುವ ಜನ ಅಥವಾ ಯಾವುದಾದರೊಂದು ಭಾಷೆಯನ್ನು ಮಾತೃ ಭಾಷೆಯನ್ನಾಗಿ ಹೊಂದಿರುವುದು ಬಹುತೇಕ ಪ್ರದೇಶಗಳ ಎಲ್ಲ ಜನರನ್ನು ಒಂದುಗೂಡಿಸಿ, ಭಾರತೀಯ ಒಕ್ಕೂಟ ವ್ಯವಸ್ಥೆಯನ್ನು ಪ್ರಾರಂಭಿಸಲಾಗಿದೆ.

ಈ ಹಂತದಲ್ಲಿ ಆದ ಬದಲಾವಣೆಗಳು ಮತ್ತು ಪ್ರದೇಶಗಳನ್ನು ಮತ್ತೆ ಆಡಳಿತಾತ್ಮಕ ಘಟಕಗಳಾಗಿ ವಿಭಾಗಿಸುತ್ತದೆ. ಹೀಗೆ ನೋಡಿದಾಗ ದಕ್ಷಿಣ ಕರ್ನಾಟಕ ಎರಡು ವಿಭಾಗಗಳಲ್ಲಿ

ಹಂಚಿಕೆಯಾಗಿದೆ. ಮೈಸೂರು ವಿಭಾಗ ಮತ್ತು ಬೆಂಗಳೂರು ವಿಭಾಗದಲ್ಲಿ ಈ ಪ್ರದೇಶಗಳ ಜಿಲ್ಲೆಗಳು ಒಗ್ಗೂಡಿದೆ. ಈ ವಿಭಾಗದ ಕ್ರಮ ಏನೇ ಇದ್ದರೂ ನಾವು ಪ್ರಾಚೀನ ಇತಿಹಾಸ ಅಧ್ಯಯನಗಳಾದ್ದರಿಂದ ಪ್ರಸ್ತುತ ಎಲ್ಲೆಯನ್ನು ನಿರ್ಧರಿಸಿಕೊಳ್ಳಲು ಕೆಲವೊಂದು ಐತಿಹಾಸಿಕ ಕಾಲಘಟ್ಟದಲ್ಲಿ ಆದ ಬದಲಾವಣೆ ಮತ್ತು ಬೆಳವಣಿಗೆಯನ್ನು ಗಮನದಲ್ಲಿಟ್ಟುಕೊಂಡು ಮುಂದುವರೆಯುತ್ತೇವೆ. ಹೀಗಾಗಿ ೧೮೦೦ರ ಮೈಸೂರು ಒಪ್ಪಂದದ ಆಧಾರದ ಮೇಲೆ ಮೈಸೂರು ಸಂಸ್ಥಾನದ ಅಡಿಯಲ್ಲಿ ಆಡಳಿತಕ್ಕೆ ಒಳಪಟ್ಟಂತಹ ಬಯಲು ಸೀಮೆಯ ದಕ್ಷಿಣದ ಭಾಗವನ್ನು ದಕ್ಷಿಣ ಕರ್ನಾಟಕದವೆಂದು ನಾವು ನಿರ್ಧರಿಸಿಕೊಂಡಿದ್ದೇವೆ.[1]

ಈಗಾಗಿ ಈ ಪ್ರದೇಶದಲ್ಲಿ ಕಂಡುಬಂದು ಪ್ರಾಗಿತಿಹಾಸಿಕ ನೆಲೆಯಲ್ಲಿ ಈ ಪ್ರದೇಶವನ್ನಾಳಿದ ರಾಜ ಮನೆತನಗಳ ಕಿರು ಇತಿಹಾಸದ ಪೂರ್ವ ಪೀಠಿಕೆಯೊಂದಿಗೆ ಪ್ರಸ್ತುತ ವಿಷಯವಾದ ದಕ್ಷಿಣ ಕರ್ನಾಟಕದ ಕೆರೆಗಳು ಅವುಗಳ ನಿರ್ಮಾಣ ಮತ್ತು ನಿರ್ವಹಣೆಯ ಅಧ್ಯಯನವನ್ನು ಮುಂದುವರೆಸುವುದು ಸೂಕ್ತ. ಈ ದಿಸೆಯಲ್ಲಿ ಪ್ರಸ್ತುತ ಪ್ರದೇಶದಲ್ಲಿ ಕಂಡುಬಂದಿರುವ ಪ್ರಾಗಿತಿಹಾಸಿಕ ಮತ್ತು ಇತಿಹಾಸದ ವಿವರಗಳನ್ನು ಸಂಕ್ಷಿಪ್ತವಾಗಿ ಮುಂದಿನ ಪುಟಗಳಲ್ಲಿ ದಾಖಲಿಸಲಾಗಿದೆ.

ದಕ್ಷಿಣ ಕರ್ನಾಟಕದ ವ್ಯಾಪ್ತಿಯಲ್ಲಿ ಕಂಡುಬರುವ ಜಿಲ್ಲೆಗಳಲ್ಲಿ ಈವರೆಗೆ ಪ್ರಕಟಗೊಂಡಿರುವ ಪ್ರಾಗಿತಿಹಾಸಿಕ ನೆಲೆಗಳ ವಿವರಗಳನ್ನು ಮತ್ತು ಉತ್ಖನನದ ವರದಿಯನ್ನು ಅಧ್ಯಯನ ಮಾಡುವುದಕ್ಕೆ ಮುನ್ನ ಈ ಪ್ರದೇಶದಲ್ಲಿ ಕಂಡುಬಂದಿರುವ ಪ್ರಾಗಿತಿಹಾಸಿಕ ನೆಲೆಗಳ ಸಂಕ್ಷಿಪ್ತ ನೋಟವನ್ನು ಈ ಕೆಳಗೆ ಕೋಷ್ಠಕದ ಮಾದರಿಯಲ್ಲಿ ನೀಡಲಾಗಿದೆ.[2]

| ಸಂಸ್ಕೃತಿ | ಚಿತ್ರದುರ್ಗ | ಶಿವಮೊಗ್ಗ | ಚಿಕ್ಕ ಮಗಳೂರು | ಹಾಸನ | ಕೊಡಗು | ಚಾ.ನಗರ | ಮಂಡ್ಯ | ಮೈಸೂರು | ತುಮಕೂರು | ಬೆಂಗಳೂರು ಗ್ರಾಮಾಂತರ | ಬೆಂಗಳೂರು ನಗರ | ಕೋಲಾರ |
|---|---|---|---|---|---|---|---|---|---|---|---|---|
| 1. ಹಳೆಯ ಶಿಲಾಯುಗ<br>ಎ.ಆದಿ ಹಳೆ ಶಿಲಾಯುಗ | √ | √ | √ | √ | | | √ | √ | √ | | | |
| ಬಿ.ಮಧ್ಯ ಹಳೆಶಿಲಾಯುಗ | | √ | √ | √ | | | √ | √ | √ | | | |
| ಇ. ಅಂತ್ಯ ಹಳೆ ಶಿಲಾಯುಗ | | | √ | √ | | | | | √ | | | |
| 2. ಸೂಕ್ಷ್ಮ ಶಿಲಾಯುಗ | √ | √ | √ | √ | | √ | √ | √ | √ | √ | √ | |
| 3. ನೂತನ ಶಿಲಾಯುಗ | √ | √ | √ | √ | | √ | √ | √ | √ | √ | √ | √ |
| 4. ಶಿಲಾ ತಾಮ್ರಯುಗ | √ | √ | | | | √ | | √ | √ | | | √ |
| 5. ಬೃಹತ್ ಶಿಲಾಯುಗ | √ | √ | √ | √ | √ | √ | √ | √ | √ | √ | √ | √ |
| 6. ಇತಿಹಾಸ ಆರಂಭ ಕಾಲ | √ | √ | √ | √ | | √ | √ | √ | √ | √ | √ | √ |

ಈ ಕೋಷ್ಟಕವನ್ನು ಡಾ.ಕೆ.ಬಿ.ಶಿವತಾರಾಕ್ ರಚಿಸಿರುವ ಕರ್ನಾಟಕ ಪುರಾತತ್ವ ನೆಲೆಗಳ ಕೃತಿಯಲ್ಲಿ (2001) ಪ್ರಕಟವಾಗಿರುವ ಜಿಲ್ಲಾವಾರು ಅಂಕಿ ಅಂಶಗಳನ್ನು ಆಧಾರಿಸಿ ಪುನರ್‌ರಚಿಸಲಾಗಿದೆ.

ದಕ್ಷಿಣ ಕರ್ನಾಟಕ ಜಿಲ್ಲೆಗಳಲ್ಲಿ ಈವರೆಗೆ ನಡೆದಿರುವ ಪುರಾತತ್ವ ಸರ್ವೇಕ್ಷಣ ಮತ್ತು ಉತ್ಖನನಗಳನ್ನು ಆಧಾರಿಸಿ ಈವರೆಗೆ ಈ ಪ್ರದೇಶದಲ್ಲಿ ಅಧ್ಯಯನ ಕೈಗೊಂಡಿರುವ ಹಲವಾರು ವಿದ್ವಾಂಸರುಗಳ ಪರಿಶ್ರಮದ ಫಲವಾಗಿ ಸಾಕಷ್ಟು ಸಂಖ್ಯೆಯ ಪ್ರಾಗಿತಿಹಾಸಿಕ ನೆಲೆಗಳು ಕಂಡುಬಂದಿವೆ. ಡಾ.ಎಂ.ಎಚ್.ಕೃಷ್ಣ, ಡಾ.ಎಂ.ಶೇಷಾದ್ರಿ, ಡಾ.ಕೆ.ಕೆ.ಸುಬ್ಬಯ್ಯ, ಶ್ರೀಯುತ ಕೃಷ್ಣಮೂರ್ತಿ, ಡಾ.ಎಸ್.ನಾಗರಾಜು. ಇತ್ತೀಚಿನ ವಿದ್ವಾಂಸರುಗಳಾದ ಡಾ.ಎಂ.ಎಚ್. ಕೃಷ್ಣಮೂರ್ತಿ ಡಾ. ಎಂ.ಎಸ್.ನಾಗರಾಜು ಮುಂತಾದ ವ್ಯಕ್ತಿಗಳ ವೈಯಕ್ತಿಕ ಅಧ್ಯಯನಗಳು ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ಅಧ್ಯಯನ ಕಾರ್ಯಗಳು, ಕರ್ನಾಟಕ ರಾಜ್ಯ ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆಯ ಇಲಾಖೆ ಮುಂತಾದ ವಿಶ್ವವಿದ್ಯಾನಿಲಯ, ಭಾರತೀಯ ಸರ್ವೇಕ್ಷಣ ಇಲಾಖೆ, ಕೈಗೊಂಡ ಅಧ್ಯಯನಗಳಿಂದಾಗಿ ಈ ಪ್ರದೇಶದ ಪ್ರಾಗಿತಿಹಾಸವನ್ನು ಪುನರ್ ರಚಿಸಲು ಸಹಾಯಕವಾಗಿದೆ.[3]

ದಕ್ಷಿಣ ಕರ್ನಾಟಕದಲ್ಲಿ ಮೊಟ್ಟ ಮೊದಲ ಬಾರಿಗೆ ಆದಿ ಹಳೆ ಶಿಲಾಯುಗದ ಸಾಂಸ್ಕೃತಿಕ ನೆಲೆಗಳನ್ನು ಮತ್ತು ನಿವೇಶನಗಳನ್ನು ಕಂಡುಹಿಡಿದ ವ್ಯಕ್ತಿಯೆಂದರೆ ರಾಬರ್ಟ್ ಬ್ರೂಸ್‌ಫುಟ್. ಈತನನ್ನು ಕರ್ನಾಟಕದ ಶೋಧನೆಯ ಪಿತಾಮಹನೆಂದು ಗುರುತಿಸಲಾಗಿದೆ.[4] ಇದಾದ ನಂತರ ತುಮಕೂರು ಜಿಲ್ಲೆಯ ಕಿಬ್ಬನಹಳ್ಳಿಯ ರಾಮರಾವ್ ಮತ್ತು ಸಂಪತ್ ಐಯ್ಯಂಗಾರ್ ಈ ಕಾಲಘಟ್ಟದ ಶಿಲಾಯುಧಗಳನ್ನು ಕಂಡುಹಿಡಿದು ಪ್ರಕಟಿಸಿದರು. ಡಾ.ಎಂ.ಶೇಷಾದ್ರಿಯವರ "The Stone Using Culture of Pre Historic Proto Historic Mysore" ಪ್ರೌಢ ಪ್ರಬಂಧವು ದಕ್ಷಿಣ ಕರ್ನಾಟಕದ ಶಿಲಾಯುಗದ ಸಂಸ್ಕೃತಿಗಳ ಬಗೆಗೆ ವಿಫುಲವಾದ ಮಾಹಿತಿಯನ್ನು ಒದಗಿಸುವ ದಕ್ಷಿಣ ಕರ್ನಾಟಕದ ಮಹತ್ವದ ಕೃತಿಯಾಗಿ ಇಂದಿಗೂ ಮುಂದುವರೆದುಕೊಂಡು ಬಂದಿದೆ.[5] ಮಧ್ಯ ಹಳೆ ಶಿಲಾಯುಗದ ಸಂಸ್ಕೃತಿಗಳ ನೆಲೆಗಳನ್ನು ಡಾ.ಎಸ್.ನಾಗರಾಜುರವರು ಪ್ರಕಟಿಸಿದ್ದಾರೆ. ಅಂತ್ಯ ಹಳೆ ಶಿಲಾಯುಗದ ನೆಲೆಗಳನ್ನು ಡಾ.ಶೇಷಾದ್ರಿ, ಡಾ.ಬಿ.ಕೆ.ಗುರುರಾಜರಾವ್, ಡಾ.ಪ್ರಭು ಮುಂತಾದವರು ಗುರುತಿಸಿದ್ದಾರೆ. ಈ ನಿವೇಶನಗಳು ಮತ್ತು ಅಧ್ಯಯನಗಳು ದಕ್ಷಿಣ ಕರ್ನಾಟಕದಲ್ಲಿ ಹಳೆಯ

ಶಿಲಾಯುಗದ ಮೂರು ಹಂತಗಳಲ್ಲಿ ಅಲ್ಲಲ್ಲಿ ಕಂಡುಬಂದಿರುವುದನ್ನು ಖಚಿತ ಪಡಿಸಿದುದ್ದರಿಂದ ಈ ಪ್ರದೇಶದಲ್ಲಿ ಪ್ರಾಚೀನ ಶಿಲಾಯುಗದ ಅಥವಾ ಹಳೆಯ ಶಿಲಾಯುಗದ ಎಲ್ಲಾ ಹಂತಗಳು ಕಂಡುಬಂದಿದೆ. ಎಂದು ಖಚಿತ ಪಡಿಸಬಹುದು. ಆದರೆ ಹಳೆ ಶಿಲಾಯುಗ ಮತ್ತು ತಾಮ್ರ ಶಿಲಾಯುಗದ ನಡುವಿನ ಸೂಕ್ಷ್ಮ ಶಿಲಾಯುಗದ ನೆಲೆಗಳು ಅಲ್ಲಲ್ಲಿ ವರದಿಯಾಗಿದ್ದರು ಅವುಗಳು ವಿಸ್ತೃತ ಅಧ್ಯಯನವಾಗಿದೆ. ಅವು ವರದಿಗಳಾಗಿ ಮಾತ್ರ ಉಳಿದಿವೆ.[6]

ಕರ್ನಾಟಕದಲ್ಲಿ ತಾಮ್ರ ಶಿಲಾಯುಗದ ನೆಲೆಗಳನ್ನು ಗುರುತಿಸಿದ ಮತ್ತು ಉತ್ಖನನ ಮಾಡಿದ ಕೀರ್ತಿ ಡಾ.ಎಂ.ಎಚ್.ಕೃಷ್ಣನವರಿಗೆ ಸಲ್ಲುತ್ತದೆ. ಡಾ.ಎಂ.ಎಚ್.ಕೃಷ್ಣರವರು ಬ್ರಹ್ಮಗಿರಿಯಲ್ಲಿ ಕೈಗೊಂಡ ಉತ್ಖನನ ಮಾರ್ಟಿಮರ್ ವ್ಹೀಲರ್‌ರವರನ್ನು ದಕ್ಷಿಣದ ನೆಲೆಗಳಗೆ ಗಮನ ಸೆಳೆಯುವಂತೆ ಮಾಡಿತ್ತು. 1947ರಲ್ಲಿ ವ್ಹೀಲರ್, ಡಾ.ಎಂ.ಎಚ್.ಕೃಷ್ಣರವರು ಉತ್ಖನನ ಮಾಡಿದ ನೆಲೆಯನ್ನು ಪುನಃ ಉತ್ಖನನ ನಡೆಸಿದರು. ಡಾ.ಎಂ.ಎಚ್.ಕೃಷ್ಣರವರ ಅಭಿಪ್ರಾಯಗಳನ್ನು ಅನುಮೋದಿಸಿ ನೆಲೆಯನ್ನು ಈ ಕಾಲಘಟ್ಟಕ್ಕೆ ಸೇರಿದುದೆಂದು ಖಚಿತ ಪಡಿಸಿದರು. ಈ ಸಂಸ್ಕೃತಿಯ ಹೆಚ್ಚಿನ ನೆಲೆಗಳು ದಕ್ಷಿಣ ಕರ್ನಾಟಕದಲ್ಲಿ ಉತ್ಖನನವಾಗದಿದ್ದರೂ ಡಾ.ಎಂ.ಶೇಷಾದ್ರಿ, ಡಾ.ಆರ್.ಸುಂದರ, ಡಾ.ನಾಗರಾಜ್‌ರಾವ್, ಡಾ.ಎಸ್.ನಾಗರಾಜು, ಡಾ.ಹನುಮಂತರಾವ್, ಡಾ.ಎಸ್.ಆರ್.ರಾವ್, ಡಾ.ಗುರುರಾಜರಾವ್, ಡಾ.ವಿ.ಮಿಶ್ರ, ಡಾ.ಬಿ.ನರಸಿಂಹಯ್ಯ, ಡಾ.ಬಿ.ಎಸ್.ನಯಾಲ್, ಡಾ.ಪೂಣಭಟ್ಟ ಮುಂತಾದ ವಿದ್ವಾಂಸರುಗಳು ಈ ಪ್ರದೇಶದಲ್ಲಿ ನೂತನ ಶಿಲಾಯುಗದ ನೆಲೆಗಳನ್ನು ಗುರುತಿಸಿದ್ದಾರೆ.[7]

ನೂತನ ಶಿಲಾಯುಗದ ಉತ್ಖನನದ ನೆಲೆಗಳಲ್ಲಿ ಮೈಸೂರು ಜಿಲ್ಲೆಯ ಟಿ.ನರಸೀಪುರದ ಉತ್ಖನನ ಪ್ರಮುಖ ಉತ್ಖನನವಾಗಿದೆ. ಈ ಉತ್ಖನನ ದಕ್ಷಿಣ ಭಾರತದ ನೂತನ ಶಿಲಾಯುಗದ ನೆಲೆಗಳ ಉತ್ಖನನದಲ್ಲಿ ಮಹತ್ವದ ಮೈಲಿಗಲ್ಲಾಯಿತ್ತೆಂದು ಕಂಡುಬರುತ್ತದೆ. ಹೆಮ್ಮಿಗೆಯ ಉತ್ಖನನ ಇದಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸುತ್ತದೆ. ಚಾಮರಾಜನಗರದ ಬೂದಿತಿಟ್ಟುವಿನ ಉತ್ಖನನ ಕೂಡ ಪ್ರಮುಖವಾದದ್ದು, ಡಾ.ಸಿ.ಕೃಷ್ಣಮೂರ್ತಿ, ಸೌಂದರ್ಯರಾಜನ್ ಕೋಲಾರ ಜಿಲ್ಲೆಯ ಬಾನಹಳ್ಳಿ ನೆಲೆಯನ್ನು

1972ರಲ್ಲಿ ಉತ್ಖನನ ಮಾಡಿ ನೂತನ ಶಿಲಾಯುಗದ ಮತ್ತು ಬೃಹತ್ ಶಿಲಾಯುಗದ ಸಂಸ್ಕೃತಿಯ ಸ್ತರಗಳನ್ನು ಬೆಳಕಿಗೆ ತಂದರು. ತದನಂತರ ಡಾ.ನಯಾಲ್ ಮತ್ತು ಡಾ.ಸಿ.ಕೃಷ್ಣಮೂರ್ತಿ, ಮತ್ತು ಡಾ.ಬಿ.ನರಸಿಂಹಯ್ಯ ಇಲ್ಲಿ ಅಧ್ಯಯನವನ್ನು ಮುಂದುವರೆಸಿ ಬೃಹತ್ ಶಿಲಾಯುಗದಿಂದ ಹರಪ್ಪ ಸಂಸ್ಕೃತಿಯ ಕಾಲಘಟ್ಟದವರೆಗಿನ ಸಂಸ್ಕೃತಿಯನ್ನು ಕಂಡುಹಿಡಿಯಲಾಯಿತು.[8]

ಮುತ್ತಲವಾಡಿಯಲ್ಲಿ ನಡೆದ ಉತ್ಖನನ ಕೂಡ ನೂತನ ಶಿಲಾಯುಗದ ಸಂಸ್ಕೃತಿಯನ್ನು ಹೊರಹಾಕಿತ್ತು. ಈ ಹಂತವನ್ನು ದಾಟಿ ಬೃಹತ್ ಶಿಲಾಯುಗದ ಹಂತಕ್ಕೆ ಬಂದರೆ ಬ್ರಹ್ಮಗಿರಿ, ಚಂದ್ರವಳ್ಳಿಯ ನೆಲೆಗಳನ್ನು ಗುರ್ತಿಸಬಹುದು. ಬ್ರಹ್ಮಗಿರಿಯ ಉತ್ಖನನವನ್ನು ಡಾ.ಎಂ.ಎಚ್.ಕೃಷ್ಣ ಮತ್ತು ಮಾರ್ಟಿಮರ್ ವ್ಹೀಲರ್‌ರವರು ನಡೆಸಿದರು. ಡಾ.ಎಂ.ಶೇಷಾದ್ರಿಯವರು ಜಡಿಗೆನಹಳ್ಳಿಯಲ್ಲಿ ನಡೆಸಿದ ಭೂ ಸಂಶೋಧನೆ ಪ್ರಮುಖವಾದದ್ದು,[9] ಇವರಲ್ಲದೆ ಡಾ.ಕೆ.ಕೆ.ಸುಬ್ಬಯ್ಯನವರು ಕೊಡಗಿನಲ್ಲಿ ನಡೆಸಿದ ಭೂ ಸಂಶೋಧನೆ ಪ್ರಮುಖವಾದದ್ದು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ ಸೋಮವಾರಪೇಟೆ ತಾಲ್ಲೂಕಿನ ಹೆಗ್ಗಡಹಳ್ಳಿಯ ಪಿರಿಯಾಪಟ್ಟಣ ತಾಲ್ಲೂಕಿನ ಕೊಪ್ಪದಲ್ಲಿ ಉತ್ಖನನ ನಡೆಸಿದರು.[10]

ಇತ್ತೀಚಿಗೆ ಇತಿಹಾಸ ಆರಂಭದ ಯುಗದ ನೆಲೆಗಳ ಸಂಶೋಧನೆ ಮಹತ್ವ ಪಡೆದುಕೊಂಡಿತ್ತು. ಡಾ.ಎಂ.ಎಚ್.ಕೃಷ್ಣರವರು ಮೈಸೂರು ಪುರಾತತ್ವ ಇಲಾಖೆಯ ನಿರ್ದೇಶಕರಾಗಿ ನಿಯೋಜನೆಗೊಂಡನಂತರ ಚಂದ್ರವಳ್ಳಿಯಲ್ಲಿ ಸಂಶೋಧನೆ ಕೈಗೊಂಡರು. 1929ರಲ್ಲಿ ನಡೆದ ಈ ಶೋಧನೆ ವ್ಹೀಲರ್‌ರವರು ಚಂದ್ರವಳ್ಳಿಯನ್ನು ಪುನಃ ಅಧ್ಯಯನಕ್ಕೆ ಒಳಪಡಿಸುವಂತೆ ಮಾಡಿತ್ತು, ಮುಂದುವರೆದು ಬ್ರಹ್ಮಗಿರಿಯು ಕೂಡ ಅಧ್ಯಯನಕ್ಕೆ ಒಳಪಟ್ಟಿತ್ತು.[11]

ತಲಕಾಡಿನಲ್ಲಿ ನಡೆದ ಸಂಶೋಧನೆಗಳು ಪುರಾತತ್ವ ಇಲಾಖೆ ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಸಂಯೋಜನೆಯಲ್ಲಿ 1992 ರಿಂದ 1998ರವರೆಗೆ ಮುಂದುವರೆಯಿತ್ತು. 2006-07ನೇ ಸಾಲಿನಲ್ಲಿ ರಾಜ್ಯ ಪುರಾತತ್ವ ಇಲಾಖೆ ಸ್ವತಂತ್ರವಾಗಿ ಇಲ್ಲಿ

ಸಂಶೋಧನೆಯನ್ನು ಮುಂದುವರೆಸಿತ್ತು. ಈ ಎಲ್ಲಾ ಸಂಶೋಧನೆಗಳು ದಕ್ಷಿಣ ಕರ್ನಾಟಕದ ಪ್ರಾಗೈತಿಹಾಸಿಕ ನೆಲೆಯನ್ನು ಕಟ್ಟಿಕೊಡಲು ಸಹಾಯಕವಾಗಿದೆ.[12]

ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರದ ರಾಜಘಟ್ಟದ ಉತ್ಖನನ ಸಹ ಪ್ರಮುಖವಾದದ್ದು. ಇದು ದಕ್ಷಿಣ ಕರ್ನಾಟಕದ ಇತಿಹಾಸ ಕಾಲಘಟ್ಟದ ಆರಂಭದ ನೆಲೆಯಾಗಿದೆ. ಈಗಾಗಿ ದಕ್ಷಿಣ ಕರ್ನಾಟಕವು ಆದಿ ಹಳೆಶಿಲಾಯುಗದ ಕಾಲದಿಂದ ಶಾತವಾಹನರ ಯುಗದವರೆವಿಗೂ ನಿರಂತರವಾದ ಸಾಂಸ್ಕೃತಿಕ ನೆಲೆಗಟ್ಟನ್ನು ಹೊಂದಿತ್ತೆಂದು ಹೇಳಬಹುದು.[13] ಇದಾದ ನಂತರ ಐತಿಹಾಸಿಕ ಯುಗ ಆರಂಭವಾಯಿತು. ದಕ್ಷಿಣ ಕರ್ನಾಟಕದ ಇತಿಹಾಸ ಕದಂಬ ಮತ್ತು ಗಂಗ ಯುಗದಿಂದ ಪ್ರಾರಂಭವಾಗುತ್ತದೆ.

## ಕದಂಬರು

ಕ್ರಿ.ಶ ಎರಡನೆಯ ಶತಮಾನದಿಂದ ಕೋಲಾರ ಜಿಲ್ಲೆ ಹಾಗೂ ಆಂಧ್ರಪ್ರದೇಶ, ತಮಿಳುನಾಡಿನ ಹಲವು ಪ್ರದೇಶಗಳಲ್ಲಿ ಬಾಣರಾಜ ರಾಜಮನೆತನವು ಸ್ಥಾಪನೆಯಾಗಿತ್ತು. ಪಲ್ಲವರು ಪ್ರಬಲವಾದ ನಂತರ ಸ್ವಲ್ಪಕಾಲ ಬಾಣರು ಅವರ ಅಧೀನರಾಗಿದ್ದರು. ಅನಂತರ ತಲಕಾಡಿನ ಗಂಗರು ಪ್ರಬಲರಾಗಿ ಬಾಣರನ್ನು ಆಶ್ರಿತರಾಜರನ್ನಾಗಿ ಮಾಡಿಕೊಂಡರು. ಶಾತವಾಹನರ ತರುವಾಯ ತೊಂಡೈಮಂಡಲದಲ್ಲಿ ಪ್ರಬಲರಾಗಿ ಅನಂತರ ತಮಿಳುನಾಡಿನ ಮೇಲೆ ಸಾರ್ವಭೌಮತ್ವ ಸ್ಥಾಪಿಸಿದ ಪಲ್ಲವರು ಕನ್ನಡನಾಡಿನ ಉತ್ತರಭಾಗದಲ್ಲೂ ತಮ್ಮ ಅಧಿಕಾರವನ್ನು ಸ್ಥಾಪಿಸಿದುದಾಗಿ ತಿಳಿದುಬರುತ್ತದೆ. ಪಲ್ಲವರ ದೊರೆ ಶಿವಸ್ಕಂದವರ್ಮನ ಹೀರೆಹಡಗಲಿ ಶಾಸನವು ಮತ್ತು ಕದಂಬರಾಜ್ಯ ಸ್ಥಾಪಕ ಮಯೂರವರ್ಮನು ಅವರೊಡನೆ ವಿಜಯಗಳಿಸಿದ ಸಂಗತಿಯೂ ಆ ಪ್ರದೇಶದಲ್ಲಿ ಸ್ಥಾಪಿತವಾಗಿದ್ದ ಪಲ್ಲವರ ಆಳ್ವಿಕೆಯ ಸೂಚನೆಯನ್ನು ನೀಡುತ್ತದೆ.[14]

ಬನವಾಸಿಯ ಕದಂಬರ ಆರನೇ ಪ್ರಭುವೂ, ಕಾಕುಸ್ಥವರ್ಮನ ಮೊಮ್ಮಗನೂ ಆದ ಶಾಂತಿವರ್ಮನು ತಾಳಗುಂದದಲ್ಲಿ ಸ್ಥಾಪಿಸಿದ ಶಾಸನದ ಪ್ರಕಾರ ಕದಂಬರ ರಾಜ್ಯ ಸ್ಥಾಪಕನಾದ ಮಯೂರಶರ್ಮನು ಬ್ರಾಹ್ಮಣನಾಗಿದ್ದನು. ಇವನು ಹೆಚ್ಚಿನ ಅಧ್ಯಯನಕ್ಕಾಗಿ ಕಂಚಿಗೆ ಹೋದನು. ಅಲ್ಲಿ ಆಗ ಪಲ್ಲವರು ನೆರವೇರಿಸಿದ ಯಾಗದ ಸಂದರ್ಭದಲ್ಲಿ ಅವರ

ಭೃತ್ಯರಿಂದ ಇವನಿಗೆ ಅಪಮಾನವುಂಟಾಗಿ ಕುಪಿತನಾದ ಮಯೂರವರ್ಮನು ತ್ರಿಪರ್ವತದ ಬಳಿಗೆ ಬಂದು ಸೈನ್ಯವನ್ನು ಕಟ್ಟಿ ಪಲ್ಲವರ ಸೈನ್ಯವನ್ನು ಪರಾಜಿತಗೊಳಿಸಿದನೆಂದೂ ಇದರಿಂದ ಪಲ್ಲವರು ಬನವಾಸಿ ಮತ್ತು ಸುತ್ತುಮುತ್ತಲಿನ ಪ್ರದೇಶವನ್ನು ಅವನಿಗೆ ಬಿಟ್ಟುಕೊಟ್ಟು ಇವನನ್ನು ರಾಜನೆಂದು ಒಪ್ಪಿದರೆಂದೂ ತಿಳಿಯಬಹುದು. ಈ ಘಟನೆಯಿಂದ ಬ್ರಾಹ್ಮಣನಾದ ಮಯೂರವರ್ಮನು ಮಯೂರಶರ್ಮ ಎಂಬ ಕ್ಷತ್ರಿಯನಾಮವನ್ನು ಪಡೆದನೆಂದೂ ಹೇಳಲಾಗಿದೆ. ಆದರೆ ಈ ಶಾಸನವು ಕೂಡ ಕದಂಬವಂಶದ ಪ್ರಾರಂಭದ ರಾಜರ ಕಾಲದಲ್ಲಿ ಹಾಕಿಸಿದುದಲ್ಲ ಆದುದರಿಂದ ನಂಬಲಾರ್ಹವಲ್ಲ.

ಇವರ ರಾಜಧಾನಿಯಾಗಿದ್ದ ಬನವಾಸಿ ಅಥವಾ ವೈಜಯಂತೀಪುರವು ಪ್ರಾಚೀನ ಕಾಲದಲ್ಲಿ ಪ್ರಸಿದ್ಧವಾದ ನಗರವಾಗಿತ್ತು. ಅಶೋಕನು ಬನವಾಸಿ ಅಥವಾ ವನವಾಸಿಗೆ ಮತ ಪ್ರಚಾರಕ್ಕಾಗಿ ಬೌದ್ಧ ಭಿಕ್ಷುಗಳನ್ನು ಕಳುಹಿಸಿದ್ದು ಸರಿಯಷ್ಟೆ. ಗ್ರೀಕ್ ಮತ್ತು ರೋಮನ್ ಬರಹಗಾರರು ಬನವಾಸಿಯು ಶಾತವಾಹನರ ಕಾಲದಲ್ಲೇ ಪ್ರಸಿದ್ಧ ವ್ಯಾಪಾರ ಕ್ಷೇತ್ರಗಳಲ್ಲೊಂದೆಂದು ತಿಳಿಯಬಹುದು. ನಾಗಾರ್ಜುನ ಕೊಂಡದಲ್ಲಿ ದೊರೆತಿರುವ ಪ್ರಾಕೃತ ಶಾಸನಗಳ ಪ್ರಕಾರ ಅಲ್ಲಿನ ನಿವಾಸಿಗಳು ಯಾತ್ರಾರ್ಥಿಗಳಾಗಿ ಬನವಾಸಿಗೆ ಹೋಗಿ ಬೌದ್ಧಾಲಯದಲ್ಲಿ ಸಂದರ್ಶಿಸುತ್ತಿದ್ದುದಾಗಿ ತಿಳಿದುಬರುತ್ತದೆ. ಅತ್ಯಂತ ಪ್ರಾಚೀನವು, ಧಾರ್ಮಿಕ ಮತ್ತು ವಾಣಿಜ್ಯ ಕೇಂದ್ರವು ಆಗಿದ್ದ ಬನವಾಸಿಯನ್ನು ಕದಂಬರು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಈ ಮನೆತನವು ಕ್ರಿ.ಶ 4ನೇ ಶತಮಾನದ ಮಧ್ಯದಲ್ಲಿ ಪ್ರಾರಂಭವಾಯಿತು. ಇವರ ರಾಜ್ಯವು ಶಿವಮೊಗ್ಗ, ದಕ್ಷಿಣ ಕನ್ನಡ ಜಿಲ್ಲೆ, ಉತ್ತರಕನ್ನಡ ಜಿಲ್ಲೆ ಮತ್ತು ಧಾರವಾಡ ಜಿಲ್ಲೆಗಳ ಹಲವು ಪ್ರದೇಶಗಳನ್ನೊಳಗೊಂಡಿತ್ತು.

ಕದಂಬ ಸಂತತಿಯ ಸ್ಥಾಪಕನಾದ ಮಯೂರವರ್ಮನ ಆಳ್ವಿಕೆಯ ಘಟನಾವಳಿಗಳನ್ನು ವಿವರಿಸುವ ಸಮಕಾಲೀನ ಐತಿಹಾಸಿಕ ಆಧಾರಗಳೂ ದೊರೆತಿಲ್ಲ. ಮಯೂರವರ್ಮನು ತ್ರಿಕೂಟ, ಅಭೀರ, ಪಲ್ಲವ, ಪಾರಿಯಾತ್ರ, ಶಕಸ್ಥಾನ, ಸೇಂದ್ರಕ, ಪುನ್ನಾಟ ಮತ್ತು ಮೌಖರಿ ರಾಜರನ್ನೆಲ್ಲ ಗೆದ್ದುದನ್ನು ಚಂದ್ರವಳ್ಳಿಯ ಬಳಿಯಲ್ಲಿ ದೊರೆತಿರುವ ಪ್ರಾಕೃತ ಶಾಸನದಲ್ಲಿ ತಿಳಿಸಿದೆ. ಆದರೆ ಗಂಗಾನದಿ ತೀರದಲ್ಲಿದ್ದ ಮೌಖಕರಿ ರಾಜ್ಯವನ್ನು

ಪಂಜಾಬ್ ಮತ್ತು ಸಿಂಧ್ ಪ್ರಾಂತ್ಯದಲ್ಲಿದ್ದ ದೂರದ ಪ್ರದೇಶಗಳನ್ನು ಮಯೂರವರ್ಮನು ಗೆದ್ದನೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ ಇದರೊಂದಿಗೆ ಚಂದ್ರವಳ್ಳಿಯ ಶಾಸನದ ಪ್ರಕಾರ ವರ್ಮನು ಗೆದ್ದೆನೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಚಂದ್ರವಳ್ಳಿಯ ಶಾಸನದ ವಿಷಯವಾಗಿ ಭಿನ್ನಾಭಿಪ್ರಾಯಗಳಿವೆ. ಈ ಶಾಸನವನ್ನು ಇತ್ತೀಚಿಗೆ ಓದಿ ಹಿಂದಿನ ತಪ್ಪುಗಳನ್ನು ಮನಗಾಣಿಸಲಾಗಿದೆ. ಮಯೂರವರ್ಮನು ಕ್ರಿ.ಶ ೩೪೫ರಿಂದ ೩೬೦ರವರೆಗೂ ಆಳಿದನೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅವನ ಆಳ್ವಿಕೆಯ ಕಾಲವನ್ನು ತಿಳಿಯಲು ಯಾವ ಸಮಕಾಲೀನ ಆಧಾರಗಳು ದೊರೆತಿಲ್ಲ. ಮಯೂವರ್ಮನ ನಂತರ ಕ್ರಮವಾಗಿ ಅವನ ಮಗನಾದ ಕಂಗವರ್ಮನೂ, ಮೊಮ್ಮಗನಾದ ಭಗೀರಥನೂ ಆಳಿದರು. ವಿವರಗಳು ಲಭ್ಯವಾಗಿಲ್ಲ. ಕದಂಬರ ಕಾಲದ ಕೆಲವು ಪದ್ಮಟಂಕಗಳ ಮೇಲೆ 'ಭಗೀ' ಎಂಬ ಭಗೀರಥನ ತರುವಾಯ ಆಳ್ವಿಕೆಯನ್ನಾರಂಭಿಸಿದ ರಘುವಿಗೆ ಮಕ್ಕಳಿಲ್ಲದ ಕಾರಣ, ಅವನ ಅಲ್ಪಕಾಲದ ಆಳ್ವಿಕೆಯ ಅನಂತರ, ಹಲಸಿ ಪ್ರಾಂತ್ಯದಲ್ಲಿ ಆಳುತ್ತಿದ್ದ ಅವನ ತಮ್ಮನಾದ ಕಾಕುಸ್ಥವರ್ಮನು, ಕದಂಬ ಸಿಂಹಾಸವನ್ನೇರಿದನು.

ಬನವಾಸಿಯ ಕದಂಬ ರಾಜರಲ್ಲಿ ಅತ್ಯಂತ ಪ್ರಸಿದ್ಧನಾದವನೆಂದರೆ ಕಾಕುಸ್ಥವರ್ಮ. ಇವನ ಆಳ್ವಿಕೆಯ ಕಾಲ ಕ್ರಿ.ಶ. ಸುಮಾರು ೪೨೦ರಿಂದ ೪೫೦ರವರೆಗೆಂದು ತಿಳಿಯಲಾಗಿದೆ. ತನ್ನ ಅಣ್ಣನಾದ ರಘುವಿನ ಕಾಲದಲ್ಲಿ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದ ಕಾರಣ ಇವನು ಸ್ವಾಭಾವಿಕವಾಗಿಯೇ ನುರಿತಯೋಧನಾಗಿದ್ದನು. ಹಲಸಿಯ ಒಂದು ಶಾಸನದಿಂದ ಕದಂಬ ದಳಪತಿಗಳಲ್ಲೊಬ್ಬನಾದ ಶೃತಕೀರ್ತಿಯು ಯುದ್ಧದಲ್ಲಿ ಪ್ರಾಣಾಪಾಯಕ್ಕೊಳಗಾಗಿದ್ದ ಕಾಕುಸ್ಥವರ್ಮನನ್ನು ರಕ್ಷಿಸಿದ ಅಂಶವು ತಿಳಿದಬರುತ್ತದೆ. ಕಾಕುಸ್ಥವರ್ಮನು ಯುದ್ಧ ಮತ್ತು ಆಡಳಿತದಲ್ಲಿ ಒಳ್ಳೆಯ ಅನುಭವವನ್ನು ಪಟ್ಟಕ್ಕೆ ಬರುವ ಮೊದಲೇ ಗಳಿಸಿದ್ದನೆಂದು ತಿಳಿದುಬರುತ್ತದೆ. ಅಲ್ಲದೆ ತಾಳಗುಂದ ಶಾಸನವು ಆತನನ್ನು ಧರ್ಮಿಷ್ಟನಾದ ಪ್ರಭುವಾಗಿದ್ದನೆಂದೂ, ಕದಂಬ ಕುಲ ಭೂಷಣಪ್ರಾಯನೆಂದೂ ವರ್ಣಿಸಿದೆ. ಇದೇ ಶಾಸನದ ಪ್ರಕಾರ ಧಾರ್ಮಿಕ ಕೇಂದ್ರವಾಗಿದ್ದ ತಾಳಗುಂದ ಅಥವಾ ಸ್ಥಾನಕುಂದೂರು ಗ್ರಾಮಕ್ಕೆ ಭೇಟಿಯ ನಿಮಿತ್ತ ಹೋಗಿದ್ದ ಕಾಕುಸ್ಥವರ್ಮನು ಅಲ್ಲಿ ಪ್ರಣವೇಶ್ವರ ದೇವಾಲಯದ ಮುಂದೆ

ಕೆರೆಯನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಸ್ಥಾನಕುಂದೂರಿನ ಬಳಿಯ ತಟಾಕಕ್ಕೆ ಇಂದಿಗೂ ಪಣವನಕೆರೆ ಎಂಬ ಹೆಸರಿದೆ. ಪ್ರಣವೇಶ್ವರ ದೇವಾಲಯವಿದ್ದ ಈ ಸ್ಥಳಕ್ಕೆ ಶಾತವಾಹನರ ಪ್ರಭುಗಳು ಭೇಟಿಕೊಡುತ್ತಿದ್ದರೆಂಬ ಅಂಶವೂ ತಿಳಿದುಬರುತ್ತದೆ.

ಕಾಕುಸ್ಥವರ್ಮನ ಕೀರ್ತಿ ವಿಶೇಷವಾಗಿ ವ್ಯಾಪಿಸಿ ಭಾರತದ ಬೇರೆ ಬೇರೆ ಪ್ರದೇಶದಲ್ಲಿ ಆಳುತ್ತಿದ್ದ ರಾಜರು ಕದಂಬ ಮನೆತನದೊಡನೆ ವೈವಾಹಿಕ ಸಂಬಂಧಗಳನ್ನು ಬೆಳೆಸಿದ ಅಂಶವೂ ತಿಳಿದುಬರುತ್ತದೆ. ಚಂದ್ರಗುಪ್ತ ವಿಕ್ರಮಾದಿತ್ಯನ ಮಗನಾದ ಕುಮಾರ ಗುಪ್ತನು, ಕಾಕುಸ್ಥವರ್ಮನ ಒಬ್ಬಳು ಪುತ್ರಿಯನ್ನೂ, ವಿದರ್ಭದ ವಾಕಾಟಕ ಅರಸ ನರೇಂದ್ರನು ಇನ್ನೊಬ್ಬ ಮಗಳಾದ ಹಾಗೂ ಪಶ್ಚಿಮ ತೀರದಲ್ಲಿ ಆಳುತ್ತಿದ್ದ  ಅಳುಪರಾಜನು, ಕಾಕುಸ್ಥವರ್ಮನ ಮತ್ತೊಬ್ಬ ಮಗಳಾದ ಲಕ್ಷ್ಮಿಯನ್ನೂ ವಿವಾಹವಾಗಿದ್ದರೆಂದೂ ತಿಳಿದುಬರುತ್ತದೆ. ಅಲ್ಲದೆ ಕುಂತಳೇಶ್ವರದಿಂದ ಗುಪ್ತ, ವಾಕಾಟಕ ಹಾಗೂ ಕದಂಬ ಮನೆತನಗಳಿಗೆ ಸಖ್ಯವಿತ್ತೆಂದು ಗೊತ್ತಾಗುತ್ತದೆ. ಕಾಕುಸ್ಥವರ್ಮನ ಮತ್ತೊಬ್ಬ ಮಗಳು ತಲಕಾಡು ಗಂಗರಾಜನಾದ ಮಾಧವನನ್ನು ವಿವಾಹವಾಗಿದ್ದಳು.

ತನ್ನ ಮೂವರು ಪುತ್ರರಾದ ಶಾಂತಿವರ್ಮ ಮಾಂಧಾತರ್ಮ ಹಾಗೂ ಕೃಷ್ಣವರ್ಮ್ ಇವರಲ್ಲಿ ಕಾಕುಸ್ಥವರ್ಮನು ತಾನು ಜೀವಿತವಿರುವಾಗಲೇ ಹಿರಿಯ ಪುತ್ರನಾದ ಶಾಂತಿವರ್ಮನಿಗೆ ಪಟ್ಟ ಕಟ್ಟಿದನು. ಆದರೆ ಶಾಂತಿವರ್ಮನ ಅಕಾಲಮರಣದ ಪ್ರಯುಕ್ತ ರಾಜ್ಯಭಾರವನ್ನು ಕಾಕುಸ್ಥವರ್ಮನೇ ಪುನಃ ವಹಿಸಿಕೊಳ್ಳಬೇಕಾಯಿತು. ಅನಂತರ ಶಾಂತಿವರ್ಮನ ಮಗನಾದ ಯುವರಾಜ ಮೃಗೇಶನು ಪಟ್ಟಕ್ಕೆ ಬಂದನು. ಮೃಗೇಶವರ್ಮನ ಕಾಲದಲ್ಲಿ ಪಲ್ಲವರಾಜನಾದ ಸಿಂಹವರ್ಮ ಮತ್ತು ವಿಜಯಸ್ಕಂದವರ್ಮನು ಕದಂಬ ರಾಜ್ಯದ ಮೇಲೆ ದಂಡೆತ್ತಿ ಬಂದು ಪೂರ್ವ ಭಾಗಗಳನ್ನು ಆಕ್ರಮಿಸಿಕೊಂಡರು. ಆದರೆ ಇವರನ್ನು ಎದುರಿಸಿದ ಮೃಗೇಶವರ್ಮ ಹಾಗೂ ಕಾಕುಸ್ಥವರ್ಮನ ಅಳಿಯನಾದ ಅಳುಪ ರಾಜ ಪಶುಪತಿಯೂ ಸೇರಿ ಪಲ್ಲವ ಸಾಮಂತರಾದ ಬಾಣ, ಸೇಂದ್ರಕ ಮೊದಲಾದವರನ್ನು ಸೋಲಿಸಿದರು.

ಕಾಕುಸ್ಥವರ್ಮನ ಮರಣಾನಂತರ ಪಟ್ಟಕ್ಕೆ ಬಂದ ಮೃಗೇಶವರ್ಮನ ಕಾಲದಿಂದ ಕದಂಬರಲ್ಲಿ ದಾಯಾದಿ ಕಲಹವು ಪ್ರಾರಂಭವಾಯಿತು. ಪಲ್ಲವರ ಸಹಾಯ ಪಡೆದ ಮೃಗೇಶವರ್ಮನ ಚಿಕ್ಕಪ್ಪನಾದ ಕೃಷ್ಣವರ್ಮನು, ಮೃಗೇಶವರ್ಮನನ್ನು ಸೋಲಿಸಿ ತ್ರಿಪರ್ವತ ಅಥವಾ ಉಚ್ಚಂಗಿಯಲ್ಲಿ ತನ್ನ ಆಡಳಿತವನ್ನು ಸ್ಥಾಪಿಸಿದರು. ಧರ್ಮಸಹಿಷ್ಣುವಾಗಿದ್ದ ಮೃಗೇಶವರ್ಮನು ಸ್ವತಃ ವೈದಿಕ ಮತೀಯನಾಗಿದ್ದರೂ, ಜೈನಮತೀಯರಿಗೆ ಉದಾರ ದಾನಗಳನ್ನು ನೀಡಿದನು. ಕೈಕೆಯ ಸಂತತಿಯ ಪ್ರಭಾವತಿ ಎಂಬುವಳೂ ಮೃಗೇಶವರ್ಮನ ರಾಣಿಯಾಗಿದ್ದಳು. ಮೃಗೇಶವರ್ಮನ ಮೂವರು ಪುತ್ರರಾದ ರವಿವರ್ಮ, ಭಾನುವರ್ಮ ಹಾಗೂ ಶಿವರಥದಲ್ಲಿ ಆತನ ಮರಣದ ನಂತರ ರವಿವರ್ಮನು ಪಟ್ಟಕ್ಕೆ ಬಂದನು. ಮೃಗೇಶವರ್ಮನ ಕಾಲದಲ್ಲಿ ಆರಂಭವಾದ ದಾಯಾದಿ ಕಲಹವು ಈತನ ಕಾಲದಲ್ಲೂ ಮುಂದುವರೆಯಿತು. ತ್ರಿಪರ್ವತ ಕದಂಬ ಶಾಖೆಯ ಒಂದನೇ ಕೃಷ್ಣವರ್ಮನ ಮಗ ವಿಷ್ಣುವರ್ಮ ಮತ್ತು ಮೊಮ್ಮಗ ಎರಡನೇ ಕೃಷ್ಣವರ್ಮ ಮೊದಲಾದವರು ಬನವಾಸಿ ಕದಂಬರೊಡನೆ ದಾಯಾದಿ ಕಲಹವನ್ನು ಮುಂದುವರಿಸಿದರು. ಪರಿಣಾಮವಾಗಿ ಎರಡು ಮನೆತನಗಳು ಅವನತಿಯ ಹಾದಿ ಹಿಡಿದವು. ಶತ್ರುಗಳನ್ನು ನಿರಂತರವಾಗಿ ಎದುರಿಸಿ ರಾಜ್ಯವನ್ನು ಶತ್ರುಗಳು ಸಂಪೂರ್ಣವಾಗಿ ಆಕ್ರಮಿಸಿದಂತೆ ಮಾಡಲು ಕಾರಣರಾದವರೆಂದರೆ ಬನವಾಸಿಯ ರವಿವರ್ಮ ಮತ್ತು ಅವನ ಹರಿವರ್ಮ, ಬನವಾಸಿ ಕದಂಬರ ಕಡೆಯ ಅರಸನೇಂದರೆ ರವಿವರ್ಮ. ಈತನು ಕ್ರಿ.ಶ 6ನೇ ಶತಮಾನದ ಉತ್ತರಾರ್ಧದವರೆಗೂ ಸ್ವತಂತ್ರವಾಗಿ ಆಳುತ್ತಿದ್ದನ್ನು. ಆ ವೇಳೆಗೆ ಪ್ರಾಬಲ್ಯಕ್ಕೆ ಬಂದ ಬಾದಾಮಿ ಚಾಲುಕ್ಯ ವಂಶದ 1ನೇ ಪುಲಿಕೇಶಿ ಮತ್ತು ಆತನ ಮಗ 1ನೇ ಕೀರ್ತಿವರ್ಮನು ಕದಂಬರನ್ನು ಸಂಪೂರ್ಣವಾಗಿ ಸೋಲಿಸಿದರು. ಕ್ರಿ.ಶ. 11 ಮತ್ತು 12ನೇ ಶತಮಾನದಲ್ಲಿ ಬನವಾಸಿ, ಹಾನಂಗಲ್ ಮತ್ತು ಗೋವೆ ಪ್ರದೇಶಗಳಲ್ಲಿ ಉಪಶಾಖೆಗಳನ್ನಾರಂಭಿಸಿದ ಕದಂಬ ಶಾಖೆಯ ಅರಸರು ಕಲ್ಯಾಣಿ ಚಾಲುಕ್ಯರಿಗೆ ಸಾಮಂತರಾಗಿ ಆಳ್ವಿಕೆ ನಡೆಸಿದರು.

## ತಲಕಾಡಿನ ಗಂಗರು

ತಲಕಾಡಿನ ಗಂಗ ಸಂತತಿಗೆ ಪಶ್ಚಿಮ ಗಂಗರೆಂದೂ ಹೆಸರಾಗಿದೆ. ಗಂಗಮನೆತನವು ಕ್ರಿ.ಶ 4ನೇ ಶತಮಾನದ ಮಧ್ಯದಲ್ಲಿ ಪ್ರಾರಂಭವಾಗಿ ಕ್ರಿ.ಶ 11ನೇ ಶತಮಾನದ ಪೂರ್ವಾರ್ಧದವರೆಗೂ ಅತಿ ಧೀರ್ಘಕಾಲ ಆಳ್ವಿಕೆ ನಡೆಸಿತು.[5] ಗಂಗರ ರಾಜ್ಯವನ್ನು ಗಂಗವಾಡಿ ತೊಂಭತ್ತಾರುಸಾವಿರ(96,000) ಎಂದು ಶಾಸನಗಳಲ್ಲಿ ನಿರ್ದೇಶಿಸಲಾಗಿದೆ. ಗಂಗರ ಶಾಸನಗಳು ಕೊಡುಗು ಜಿಲ್ಲೆಯಿಂದ ಉತ್ತರದ ಅರ್ಕಾಟ್ ಜಿಲ್ಲೆಯವರೆಗೂ ಬಳ್ಳಾರಿ ಜಿಲ್ಲೆಯಿಂದ ಸೇಲಂ ಮತ್ತು ಕೊಯಮತ್ತೂರು ಜಿಲ್ಲೆಗಳ ಪ್ರದೇಶದಲ್ಲೂ ದೊರೆತಿವೆ. ಮೈಸೂರು ಜಿಲ್ಲೆಯ ತಲಕಾಡು ಇವರ ಮುಖ್ಯ ರಾಜಧಾನಿಯಾಗಿತ್ತು. ರಾಜ್ಯವು ವಿಸ್ತಾರವಾಗಿದ್ದುದರಿಂದ ಬೆಂಗಳೂರು ಜಿಲ್ಲೆಯಲ್ಲಿರುವ ಮಾನ್ಯಪುರ ಅಥವಾ ಇಂದಿನ ಮನ್ನೆ ಮೊದಲಾದ ಪಟ್ಟಣಗಳು ಇವರ ಉಪರಾಜಧಾನಿಯಾಗಿದ್ದವು. ಈ ಸಂತತಿಯ ಸುಮಾರು 30 ಮಂದಿ ರಾಜರು ದೀರ್ಘಕಾಲದ ಆಳ್ವಿಕೆ ನಡೆಸಿದರು. ತಮ್ಮ ಸುದೀರ್ಘ ಆಳ್ವಿಕೆಯ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಆಳಿದರಾಜ ಮನೆತನಗಳಾದ ಪಲ್ಲವರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟ ಮತ್ತು ಚೋಳ ರಾಜ ಮನೆತನಗಳೊಡನೆ ರಾಜಕೀಯ ಸಂಬಂಧ ಮತ್ತು ಹಲವು ವೇಳೆ ರಕ್ತಸಂಬಂಧವನ್ನೂ ಹೊಂದಿದ್ದರು. ತಲಕಾಡಿನ ಗಂಗ ಸಂತತಿಯು ಆಳಿದ ನಂತರ ಇದರ ಉಪಶಾಖೆಗಳು ಶಿವಮೊಗ್ಗ, ಮೈಸೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ರಾಜ್ಯಗಳನ್ನು ಸ್ಥಾಪಿಸಿಕೊಂಡು ಹೊಯ್ಸಳರು ಅನಂತರ ವಿಜಯನಗರ ಮತ್ತು ಕೋಲಾರ ಜಿಲ್ಲೆಗಳಲ್ಲಿ ರಾಜ್ಯಗಳನ್ನು ಸ್ಥಾಪಿಸಿಕೊಂಡು ಹೊಯ್ಸಳರು ಅನಂತರ ವಿಜಯನಗರ ಸಾಮ್ರಾಜ್ಯದ ಅಧೀನರಾಗಿ ಕ್ರಿ.ಶ 15ನೇ ಶತಮಾನದವರೆಗೂ ಆಳಿದರು. ದೀರ್ಘಕಾಲ ಆಳ್ವಿಕೆ ನಡೆಸಿ ಆಡಳಿತ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಂಪರೆಗೆ ಅಮೋಘ ಕಾಣಿಕೆ ಸಲ್ಲಿಸಿರುವ ಗಂಗರ ಇತಿಹಾಸವು ಪ್ರಾಚೀನ ಕರ್ನಾಟಕ ಇತಿಹಾಸದಲ್ಲಿ ಒಂದು ಭವ್ಯ ಅಧ್ಯಾಯವಾಗಿದೆ.

ಕರ್ನಾಟಕದಲ್ಲಿ ಆಳಿದ ರಾಜ ಮನೆತನಗಳಲೆಲ್ಲಾ ಗಂಗರ ಆಳ್ವಿಕೆಯೇ ಅತಿ ದೀರ್ಘಕಾಲದ್ದು. ಗಂಗ ಸಂತತಿಯ ಮೂಲಕ್ಕೆ ಸಂಬಂಧಿಸಿದಂತೆ ಅನೇಕ ಜಿಜ್ಞಾಸೆಗಳಿವೆ. ಈ ಸಂತತಿಯ ಪ್ರಾರಂಭದ ರಾಜರ ಶಾಸನಗಳಲ್ಲಿ ಗಂಗರ ಮೂಲಕ್ಕೆ ಸಂಬಂಧಿಸಿದ ವಿವರಗಳು

ಕಾಣಬರುವುದಿಲ್ಲ. ಶತಮಾನಗಳ ತರುವಾಯದ ಹಾಗೂ 10 ಮತ್ತು 11ನೇ ಶತಮಾನದಲ್ಲಿ ಸ್ಥಾಪಿತವಾದ ಶಾಸನಗಳಲ್ಲಿ ಗಂಗರ ಮೂಲಕ್ಕೆ ಸಂಬಂಧಿಸಿದಂತೆ ಬೇರೆಬೇರೆ ಹೇಳಿಕೆಗಳು ಪ್ರಚಲಿತವಾಗಿವೆ.

## ಗಂಗರ ರಾಜಕೀಯ ಇತಿಹಾಸ

ದಡಿಗ ಮತ್ತು ಮಾಧವ ಎಂಬ ಸಹೋದರರು ಗಂಗರಾಜ್ಯ ಸ್ಥಾಪಕರೆಂದು ಶಾಸನಗಳಿಂದ ತಿಳಿದುಬರುತ್ತದೆ. ದಡಿಗನು ರಾಜ್ಯ ಸ್ಥಾಪಿಸಿದ ಮೇಲೆ ಮಾಧವನೆಂಬ ಹೊಸ ಹೆಸರಿನಿಂದ ರಾಜ್ಯವಾಳಿರಬೇಕೆಂದು ತೋರುತ್ತದೆ. ಕೆಲವು ಇತಿಹಾಸಕಾರರು ರಾಜ್ಯ ಸ್ಥಾಪಿಸುವ ವೇಳೆಗೆ ದಡಿಗನಿಗೆ ವಯಸ್ಸಾಗಿದ್ದುದರಿಂದ ಅವನು ಬೇಗ ಮರಣಹೊಂದಿ ಅವನ ಸಹೋದರನಾದ ಒಂದನೇ ಮಾಧವನು ರಾಜನಾಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಮಾಧವನು ಕ್ರಿ.ಶ 340 ರಿಂದ 370ರವರೆಗೆ ಆಳಿದನೆಂದು ತಿಳಿದುಬರುತ್ತದೆ. ತಲಕಾಡು ಮಾಧವನ ರಾಜಧಾನಿಯಾಗಿತ್ತು. ಇವನು ಇಂದಿನ ಸೇಲಂ ಮತ್ತು ಕೊಯಮತ್ತೂರು ಜಿಲ್ಲೆಗಳನ್ನು ಜಯಸಿದನು. ಆಗ ಈ ಪ್ರದೇಶವನ್ನು ಕೊಂಗು ಎಂದು ಕರೆಯಲಾಗಿತ್ತು. ಆದ್ದರಿಂದ ಕೊಂಗುಣಿವರ್ಮ ಎಂಬ ಬಿರುದನ್ನು ಧರಿಸಿದನು. ಈ ಬಿರುದನ್ನು ಇವನ ಸಂತತಿಯ ರಾಜರೆಲ್ಲರೂ ಹೊಂದಿದ್ದರು. ಮಾಧವ ಕೊಂಗುಣಿವರ್ಮನು ಬಾಣರನ್ನು ಸೋಲಿಸಿ ಕೋಲಾರದವರೆಗೂ ರಾಜ್ಯವನ್ನು ವಿಸ್ತರಿಸಿದನು. ಒಂದನೇ ಮಾಧವನ ಮರಣಾನಂತರ ಇವನ ಸಹೋದರನ ಮಗನಾದ ಎರಡನೇ ಮಾಧವನು ರಾಜನಾದನು. ಇವನನ್ನು ಕಿರಿಯ ಮಾಧವ ಎಂಬುದಾಗಿಯೂ ಕರೆಯಲಾಗಿದೆ. ಇವನು ಕ್ರಿ.ಶ 370 ರಿಂದ 390ರ ವರೆಗೆ ಆಳಿದನು. ಎರಡನೇ ಮಾಧವನು ತಾನೇ ವಿದ್ವಾಂಸನಾಗಿದ್ದು, ವಿದ್ವಾಂಸರಿಗೆ ಪ್ರೋತ್ಸಾಹ ನೀಡಿದನು. ಎರಡನೇ ಮಾಧವನು ಗೋಬ್ರಾಹ್ಮಣ ಮತ್ತು ಧರ್ಮರಕ್ಷಣೆಗಾಗಿ ಅಧಿಕಾರ ವಹಿಸಿಕೊಂಡನೆಂದು ಶಾಸನಗಳಲ್ಲಿ ಹೇಳಿರುವುದರಿಂದ ಇವನು ವೈದಿಕ ಮತಾವಲಂಬಿಯೆಂದು ಸ್ಪಷ್ಟವಾಗುತ್ತದೆ.

ಎರಡನೇ ಮಾಧವನ ತರುವಾಯ ಹರಿವರ್ಮನು ರಾಜನಾಗಿ ಕ್ರಿ.ಶ 390 ರಿಂದ 410ರವರೆಗೆ ಆಳಿದನು. ಆದರೆ ಎರಡನೇ ಮಾಧವನ ಮತ್ತಿಬ್ಬರು ಮಕ್ಕಳೂ ಬೇರೆ ಬೇರೆ

ಪ್ರದೇಶದಲ್ಲಿ ಸ್ವತಂತ್ರವಾಗಿ ಆಳುತ್ತಿದ್ದರೆಂದು ಹೇಳಲಾಗಿದೆ. ಕೃಷ್ಣವರ್ಮ ಎಂಬುವನು ಅನಂತಪುರ ಜಿಲ್ಲೆಯ ಪಾರವಿ ಎಂಬ ರಾಜಧಾನಿಯಿಂದಲೂ ಇನ್ನೊಬ್ಬನಾದ ಅಯ್ಯಾವರ್ಮನು ಕೋಲಾರ ಜಿಲ್ಲೆಯ ಕೈವಾರದಿಂದಲೂ ಆಳುತ್ತಿದ್ದರೆಂದು ಬೆಂಡಗಾನಹಳ್ಳಿ ಮತ್ತು ಚಿಕ್ಕತ್ತೂರು ಶಾಸನಗಳಲ್ಲಿ ಹೇಳಲಾಗಿದೆ. ಹರಿವರ್ಮನ ಹೆಸರನ್ನೇ ಬೇರೆ ಬೇರೆ ಶಾಸನಗಳಲ್ಲಿ ಬೇರೆ ಬೇರೆ ಹೆಸರಿನಿಂದ ಕೆತ್ತಲಾಗಿದೆ ಗಂಗರಾಜ್ಯವು ಶಾಖೆಗಳಾಗಿ ಒಡೆದಿರಲಿಲ್ಲವೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಪಲ್ಲವ ರಾಜನಾದ ಸಿಂಹವರ್ಮನು ಹರಿವರ್ಮನ ಪಟ್ಟಾಭಿಷೇಕ ಸಮಯದಲ್ಲಿ ತಲಕಾಡಿಗೆ ಬಂದಿದ್ದನು. ಇದರಿಂದ ಗಂಗರಿಗೂ ಪಲ್ಲವರಿಗೂ ಇದ್ದ ಅನ್ಯೋನ್ಯ ರಾಜಕೀಯ ಸಂಬಂಧ ವಿಷದವಾಗುತ್ತದೆ. ಹರಿವರ್ಮನು ಪ್ರಬಲವಾದ ಗಜಬಲವನ್ನಿಟ್ಟಿದ್ದನು. ಬಾಣಪ್ರಯೋಗದಲ್ಲಿ ಸಿದ್ಧ ಹಸ್ತನಾಗಿದ್ದನು. ತರುವಾಯ ವಿಷ್ಣಗೋಪನು ರಾಜನಾಗಿ ಕ್ರಿ.ಶ 410 ರಿಂದ 430 ರವರೆಗೆ ಆಳಿದನು. ಇವನು ಸದ್ಗುಣಿಯೂ ಜ್ಞಾನ ಪಕ್ಷಪಾತಿಯೂ ಆಗಿದ್ದನು. ವಿಷ್ಣುಗೋಪನು ವಿಷ್ಣುವಿನ ಆರಾಧಕನಾಗಿದ್ದನು.

ತಡಂಗಲ ಮಾಧವನನ್ನು ಮೂರನೇ ಮಾಧವ ಎಂದು ಕರೆಯಲಾಗಿದೆ. ಇವನು ಕ್ರಿ.ಶ 430 ರಿಂದ 466 ವರೆಗೆ ಆಳಿದನೆಂದು ತಿಳಿದುಬರುತ್ತದೆ. ಪಲ್ಲವ ರಾಜನಾದ ಸ್ಕಂದವರ್ಮನು ತಡಂಗಲ ಮಾಧವನ ಪಟ್ಟಾಭಿಷೇಕ ಸಮಯದಲ್ಲಿ ಪಾಲ್ಗೊಂಡಿದ್ದನು. ಮಾಧವನು ಪಲ್ಲವರೊಡನೆ ಸ್ನೇಹದಿಂದಿದ್ದು ರಾಜ್ಯವಿಸ್ತರಿಸಿದನು. ಕದಂಬ ರಾಜಕುಮಾರಿಯನ್ನು ವರಿಸಿದ್ದನು. ಪಾರವಿ ಮತ್ತು ಕೈವಾರ ಶಾಖೆಗಳನ್ನು ಅಂತ್ಯಗೊಳಿಸಿದನು. ವಿಶಾಲ ಗಂಗವಾಡಿ ರಾಜ್ಯದ ಮೇಲೆ ಇವನ ಆಳ್ವಿಕೆಯು ಸ್ಥಾಪಿತವಾಗಿತ್ತು. ಇವನು ವೈದಿಕ ಮತಾವಲಂಬಿಯಾಗಿದ್ದು ಬೌದ್ಧ ಮತ್ತು ಜೈನ ಧರ್ಮಗಳಿಗೂ ಪ್ರೋತ್ಸಾಹ ನೀಡಿದನು. ಇವನ ಆಳ್ವಿಕೆಯ ಕಾಲದಲ್ಲಿ ರಾಜ್ಯವು ಆರ್ಥಿಕವಾಗಿ ಹೆಚ್ಚು ಸುಭಿಕ್ಷವಾಗಿತ್ತು. ತಡಂಗಲ ಮಾಧವನ ತರುವಾಯ ಇವನ ಮಗ ಅವನೀತನು ರಾಜನಾಗಿ ಕ್ರಿ.ಶ. 466 ರಿಂದ 495 ರವರೆಗೆ ಆಳಿದನು. ಅವನೀತನು ಗಂಗ ಸಂತತಿಯ ಪ್ರಖ್ಯಾತ ರಾಜರಲ್ಲೊಬ್ಬನು. ಪುನ್ನಾಟದ ರಾಜನಾಧ ಸ್ಕಂದವರ್ಮನ ಪುತ್ರಿಯಾದ

ಜೇಷ್ಠಾದೇವಿ ಎಂಬುವಳನ್ನು ಅವನೀತನು ಸ್ವಯಂವರವಾಗಿದ್ದನು. ಇವನು ಗಜತುರುಗಗಳನ್ನು ನಡೆಸುವುದರಲ್ಲಿ ಪ್ರವೀಣನಾಗಿದ್ದನೆಂದೂ ಯುದ್ಧದಲ್ಲಿ ಪರಾಕ್ರಮಿಯಾಗಿದ್ದನೆಂದು ತಿಳಿದುಬರುತ್ತದೆ. ಅನೇಕ ಯುದ್ಧಗಳನ್ನು ಕೈಗೊಂಡು ರಾಜ್ಯವನ್ನು ವಿಸ್ತರಿಸಿದನು. ಅವನೀತನು ಉದಾರ ಮತೀಯ ನೀತಿಯನ್ನು ಅನುಸರಿಸಿದನು. ತಾನು ಸ್ವತಃ ವೈದಿಕ ಮತಾವಲಂಬಿಯಾದರೂ ವಿಜಯಕೀರ್ತಿ ಎಂಬ ಜೈನ ವಿದ್ವಾಂಸನನ್ನು ತನ್ನ ಗುರುವೆಂದು ಪುರಸ್ಕರಿಸಿದನು. ಇವನನ್ನು ವರ್ಣಾಶ್ರಮಧರ್ಮ ಸಂರಕ್ಷಕನಾಗಿದ್ದನೆಂದು ಶಾಸನಗಳಲ್ಲಿ ಹೆಸರಿಸಲಾಗಿದೆ. ಅವಿನೀತನು ಶವೋಪಾಸಕನಾಗಿದ್ದು, ಹರಚರಣಾರವಿಂದ ಪ್ರಣಿತ ಎಂಬ ಬಿರುದನ್ನು ಹೊಂದಿದ್ದನು. ಅವನೀತನ ತರುವಾಯ ಅವನ ಹಿರಿಯ ಮಗನಾದ ದುರ್ವಿನೀತನು ರಾಜನಾದನು. ಅವಿನೀತನು ತನ್ನ ಕಿರಿಯ ರಾಣಿಯ ಮಗನಿಗೆ ಪಟ್ಟಕಟ್ಟಿದುದರಿಂದ ಪ್ರಾರಂಭದಲ್ಲಿ ಸಹೋದರರಲ್ಲಿ ಯಾದವಿಕಲಹ ನಡೆಯಿತು. ಆದರೆ ಪರಾಕ್ರಮಿಯಾದ ದುರ್ವಿನೀತನು ತನ್ನ ಸಹೋದರ ಮತ್ತು ಅವನ ಸಹಾಯಕ್ಕೆ ಧಾವಿಸಿದ ಪಲ್ಲವರನ್ನು ಸೋಲಿಸಿ ಸಿಂಹಾಸನವನ್ನು ಪಡೆದನು. ದುರ್ವಿನೀತನ ಹೆಬ್ಬೆಟ್ಟ ಶಾಸನವು ಇವನ ಆಳ್ವಿಕೆ ಮತ್ತು ಗಂಗರ ಕಾಲಾನುಕ್ರಮಣಿಕೆಯನ್ನು ನೀಡುವ ಉತ್ತಮ ದಾಖಲೆಯಾಗಿದೆ. ದುರ್ವಿನೀತನು ಕ್ರಿ.ಶ 495 ರಿಂದ 535ರವರೆಗೆ ಆಳಿದನು.

ಜೇಷ್ಠಾದೇವಿ ಮತ್ತು ಅವಿನೀತನ ಪುತ್ರನಾದ ದುರ್ವಿನೀತನು ತನ್ನ ಮಲ ಸಹೋದರನನ್ನು ಸೋಲಿಸಿದ ಹಲವು ವರ್ಷಗಳ ಕಾಲ ಅವನ ಪ್ರತಿರೋಧವನ್ನು ಎದುರಿಸಬೇಕಾಯಿತು. ಅವನ ತಾಯಿಯು ಪಲ್ಲವ ಮನೆತನದ ಸಂಬಂಧಿಯಾಗಿದ್ದುದರಿಂದ ಪಲ್ಲವರು ದುರ್ವಿನೀತನ ಮೇಲೆ ಯುದ್ಧ ಹೂಡಿದರು. ದುರ್ವಿನೀತನು ಪಲ್ಲವರ ಸೈನ್ಯವನ್ನು ಕೊಯಮತ್ತೂರು ಮತ್ತು ಸೇಲಂ ಜಿಲ್ಲೆಗಳಲ್ಲಿರುವ ಅಂಧೇರಿ, ಆಲತ್ತೂರು, ಪುರುಲಾರೆ ಮತ್ತು ಪೆನ್ನಾಗರಂ ಎಂಬ ಸ್ಥಳಗಳಲ್ಲಿ ಪೂರ್ಣವಾಗಿ ಸೋಲಸಿದನು. ಅಲ್ಲದೆ ತನ್ನ ಮಲತಮ್ಮನ ಸಹಾಯಕ್ಕೆ ಧಾವಿಸಿದ್ದ ಕದಂಬ ಕೃಷ್ಣವರ್ಮನ ಮಕ್ಕಳಾದ ಅಜವರ್ಮ ಮತ್ತು ಬೋಗವರ್ಮರನ್ನೂ ಸೋಲಿಸಿದನು. ಈ ಯುದ್ಧಗಳು ಮತ್ತು ಅವುಗಳಲ್ಲಿ ಗಳಿಸಿದ ವಿಜಯಗಳಿಂದ ಗಂಗರಾಜ್ಯದ ಎಲ್ಲೆಗಳು ವಿಸ್ತಾರವಾದವು. ಪುನ್ನಾಟದ ರಾಜನು ಮಡಿದು

ಉತ್ತರಾಧಿಕಾರಿಗಳಿರಲಿಲ್ಲವಾದ್ದರಿಂದ ಅಲ್ಲಿನ ರಾಜನ ಮಗಳ ಮಗನಾದ ದುರ್ವಿನೀತನಿಗೆ ಆ ರಾಜ್ಯವು ಸೇರಿತು. ಕಾವೇರಿ ಕಪಿಲಾನದಿಗಳ ಬಯಲಿನಲ್ಲಿದ್ದ ಸಂಪದ್ಭರಿತವಾದ ಪುನ್ನಾಟವು ಗಂಗರಾಜ್ಯಕ್ಕೆ ಸೇರಿದುದರಿಂದ ಗಂಗವಾಡಿಯು ವಿಶಾಲವೂ ಅಜೇಯವೂ ಆದ ಸಾರ್ವಭೌಮ ರಾಜ್ಯವಾಗಿ ಪರಿಣಮಿಸಿತು.

ಪಲ್ಲವರು ಆಗತಾನೆ ಸ್ಥಾಪಿತವಾಗಿದ್ದ ಬಾದಾಮಿ ಚಾಲುಕ್ಯರ ಮೇಲೆ ಆಕ್ರಮಣ ಮಾಡಿದರು. ದುರ್ವಿನೀತನು ಮಗಳನ್ನು ಚಾಳುಕ್ಯ ಸಂತತಿಯ ವಿಜಯಾದಿತ್ಯನಿಗೆಕೊಟ್ಟು ಗಂಗ ಮತ್ತು ಚಾಳುಕ್ಯ ಮನೆತನಗಳ ಮಧ್ಯ ವೈವಾಹಿಕ ಬಾಂಧವ್ಯವನ್ನು ಏರ್ಪಡಿಸಿದನು. ಈ ಸಂದರ್ಭದಲ್ಲಿ ದುರ್ವಿನೀತನು ಚಾಲುಕ್ಯರ ಸಹಾಯಕ್ಕೆ ಧಾವಿಸಿ ಪಲ್ಲವರನ್ನು ಸೋಲಿಸಿ ಬಾಲಕ ಜಯಸಿಂಹನನ್ನು ಚಾಲುಕ್ಯ ಸಿಂಹಾಸನದ ಮೇಲೆ ಕೂಡಿಸಿದನು. ದುರ್ವಿನೀತನ ಕಾಲದಿಂದ ಗಂಗ ಮತ್ತು ಪಲ್ಲವರ ಮಧ್ಯೆ ಹಗೆತನವು ಮತ್ತು ಗಂಗ ಹಾಗೂ ಬಾದಾಮಿ ಚಾಳುಕ್ಯ ಮನೆತನೆಗಳ ಮಧ್ಯೆ ಮಧುರ ಬಾಂಧವ್ಯವೂ ಸ್ಥಾಪಿತವಾಯಿತು.

ದುರ್ವಿನೀತನು ರಾಜನೀತಜ್ಞನೆಂದೂ ವೀರಾಗ್ರಣಿಯೆಂದೂ ಸಂಗೀತ ಸಾಹಿತ್ಯದಲ್ಲಿ ಪ್ರೌಢಿಮೆ ಹೊಂದಿದ್ದನೆಂದೂ ಇವನ ಸಮಕಾಲೀನ ಶಾಸನಗಳಲ್ಲಿ ವಿವರಿಸಲಾಗಿದೆ. ರಾಜತಂತ್ರ ಕೌಶಲದಲ್ಲಿ ಚಾಣಕ್ಯನಿಗೂ ಕಲೆ, ಸಂಗೀತ ಮತ್ತು ನೃತ್ಯದಲ್ಲಿ, ತುಂಬರು ನಾರದ ಮತ್ತು ಭರತದೇವನಿಗೂ ಹಾಗೂ ಅಸ್ತ್ರೋಪಾಸ್ತ್ರ ಬಳಕೆಯಲ್ಲಿ ಪರಶುರಾಮನಿಗೂ, ಆಯುರ್ವೇದಪಾಂಡಿತ್ಯದಲ್ಲಿ ಚರಕ ಮತ್ತು ಧನ್ವಂತರಿಗೂ ಇವನನ್ನು ಹೋಲಿಸಲಾಗಿದೆ. ಒಂದು ಶಾಸನದಲ್ಲಿ ಇವನನ್ನು ಶ್ರೀ ಕೃಷ್ಣನಿಗೂ ಮತ್ತೊಂದರಲ್ಲಿ ಶ್ರೀ ಮನ್ಮಹಾವಿಷ್ಣುವಿನ ಅವತಾರವೆಂದೂ ಪೌರಾಣಿಕವಾಗಿಯೂ ನಲವತ್ತು ವರ್ಷಗಳ ಕಾಲದ ಇವನ ಆಳ್ವಿಕೆಯು ಕನ್ನಡನಾಡಿನ ಬಹುಭಾಗ ಮತ್ತು ಆಜುಬಾಜಿನ ಪ್ರದೇಶಗಳ ಮೇಲೆ ಸ್ಥಾಪನೆಯಾಗಿತ್ತು. ಈತನ ಕಾಲದಲ್ಲಿ ಮನೆತನವು ಅಜೇಯವಾದುದಾಗಿತ್ತು. ಬಾದಾಮಿ ಚಾಳುಕ್ಯ ಮನೆತನ ಉಳಿದು ಬಾಳಲು ದುರ್ವಿನೀತನು ನೆರವಾದನು. ದುರ್ವಿನೀತನ ಮರಣಾನಂತರ ಇವನ ಮಗನಾದ ಮುಷ್ಕರನು ರಾಜನಾಗಿ ಕ್ರಿ.ಶ 535 ರಿಂದ 585 ರವರೆಗೆ ಆಳ್ವಿಕೆ ನಡೆಸಿದನು. ಇವನ ಶಾಸನವೊಂದು ಮುಷ್ಕರನು ರಾಜ್ಯಾಡಳಿತವನ್ನು ಸಮರ್ಥವಾಗಿ ಮುಂದುವರಿಸಿದನು.

ಇವನ ತಮ್ಮನಾದ ಪೊಲವೀರನು ಆಡಳಿತದಲ್ಲಿ ಮುಷ್ಕರನಿಗೆ ನೆರವಾಗಿದ್ದನು. ಮುಷ್ಕರನ ಮರಣಾನಂತರ ಇವನ ಮಗ ಶ್ರೀವಿಕ್ರಮನು ಪಟ್ಟಕ್ಕೆ ಬಂದು ಕ್ರಿ.ಶ 585ರಿಂದ 635ರವರೆಗೆ ಆಳಿದನು. ಇವನು ಸಹ ತನ್ನ ತಾತನಂತೆ ವಿದ್ವಾಂಸನಾಗಿದ್ದನೆಂದು ತಿಳಿದುಬರುತ್ತದೆ. ಶ್ರೀವಿಕ್ರಮನೂ ಇವನ ಮಗ ಭೂ ವಿಕ್ರಮನೂ ಗಂಗವಾಡಿಯ ಬೇರೆಬೇರೆ ಪ್ರದೇಶಗಳನ್ನು ಏಕಕಾಲದಲ್ಲಿ ಆಳುತ್ತಿದ್ದರೆಂದು ನಂಬಲಾಗಿತ್ತು. ಆದರೆ ಇತ್ತೀಚಿನ ಸಂಶೋಧನೆಗಳಿಂದ ಯುವರಾಜ ಭೂ ವಿಕ್ರಮನು ತನ್ನ ತಂದೆಯ ಕಾಲದಲ್ಲಿ ಕೋಲಾರ ಪ್ರಾಂತ್ಯದ ಮಾಂಡಲಿಕನಾಗಿ ಹೆಚ್ಚು ಸ್ವತಂತ್ರವಹಿಸಿ ಅಧಿಕಾರ ನಡೆಸಿದನೆಂದು ಗೊತ್ತಾಗಿದೆ. ಶ್ರೀವಿಕ್ರಮನ ಮರಣಾನಂತರ ಭೂವಿಕ್ರಮನು ರಾಜನಾದನು.

ಭೂವಿಕ್ರಮನು ಕ್ರಿ.ಶ 635 ರಿಂದ 679 ರವರೆಗೆ ಆಳಿದನು. ಕ್ರಿ.ಶ 608 ರಿಂದ ಕುವಲಾಲನಾಡಿನ ಪ್ರಾಂತ್ಯಧಿಕಾರಿಯಾಗಿ ದಕ್ಷತೆಗೂ ಪರಾಕ್ರಮಕ್ಕೂ ಹೆಸರಾಗಿದ್ದನು. ಚಾಳುಕ್ಯರಿಗೂ ಗಂಗರಿಗೂ ರಕ್ತ ಸಂಬಂಧವಿತ್ತು. ಚಾಳುಕ್ಯ ಇಮ್ಮಡಿ ಪುಲಿಕೇಶಿಯ ದಕ್ಷಿಣ ವಿಜಯದಲ್ಲಿ ಭೂವಿಕ್ರಮನು ಭಾಗವಹಿಸಿದ್ದನೆಂದು ತಿಳಿದುಬರುತ್ತದೆ. ಪಲ್ಲವ ಒಂದನೇ ನರಸಿಂಹನ ವಾತಾಪಿಯ ಮುತ್ತಿಗೆ ಪುಲಿಕೇಶಿಯ ಮರಣ ಮತ್ತು ಚಾಳುಕ್ಯ ರಾಜ್ಯಶ್ರೀಗೆ ಕುಪಿತನಾದ ಭೂ ವಿಕ್ರಮನು ಪಲ್ಲವರನ್ನು ಪರಾಜಯಗೊಳಿಸಲು ಕಂಕಣಬದ್ಧನಾದನು. ಚಾಳುಕ್ಯರ ಒಂದನೇ ವಿಕ್ರಮಾದಿತ್ಯನ ರಾಣಿಯಾದ ಗಂಗಮಹಾದೇವಿಯು ಭೂ ವಿಕ್ರಮನ ಮಗಳೆಂದು ತಿಳಿದುಬರುತ್ತದೆ. ಭೂ ವಿಕ್ರಮನು ನರಸಿಂಹವರ್ಮನ್ ಮತ್ತು ಅವನ ಉತ್ತರಾಧಿಕಾರಿಗಳೊಡನೆ ವೀರಾವೇಶದಿಂದ ಹೋರಾಡಿ ಅವರನ್ನು ವಿಲಂದೆ ಎಂಬ ಪ್ರಸಿದ್ಧ ಯುದ್ಧದಲ್ಲಿ ಸೋಲಿಸಿ ಪಲ್ಲವ ರಾಜನ ಉಗ್ರೋದಯ ಎಂಬ ಕಂಠೀಹಾರವನ್ನು ಕಸಿದು ಕೊಂಡುದಲ್ಲದೆ ಶ್ರೀವಲ್ಲಭ ಮೊದಲಾದ ಸಾರ್ವಭೌಮ ಬಿರುದುಗಳನ್ನು ಧರಿಸಿದನು.

ಇವನ ಮರಣಾನಂತರ ಇವನಿಗೆ ಗಂಡು ಮಕ್ಕಳಿರಲಿಲ್ಲದುದರಿಂದ ಕಿರಿಯ ಸೋದರ ಒಂದನೇ ಶಿವಮಾರನು ರಾಜನಾಗಿ ಕ್ರಿ.ಶ 679 ರಿಂದ 725ರವರೆಗೆ ಆಳಿದನು. ಇವನಿಗೆ ನವಕಾಮ, ಶಿಷ್ಟಪ್ರಿಯ, ಅವನೀಮಹೇಂದ್ರ, ಸ್ಥಿರವಿನೀತ, ವೃದ್ಧರಾಜ ಮೊದಲಾದ ಬಿರುದುಗಳಿದ್ದವು. ಪರಾಕ್ರಮಿಯಾದ ಗೋವಿಂದನು ಕಂಭನನ್ನು ಸೋಲಿಸಿನು. ಅನಂತರ

ಗಂಗವಾಡಿಯನ್ನು ಮುತ್ತಿ ಶಿವಮಾರನನ್ನು ಸೋಲಿಸಿ ಸೆರೆಹಿಡಿದನು. ತನ್ನ ಸಹೋದರನನ್ನು ಕ್ಷಮಿಸಿ ಅವನನ್ನು ಪುನಃ ಗಂಗವಾಡಿಯ ರಾಜ್ಯಪಾಲನ್ನಾಗಿ ನೇಮಿಸಿದನು. ಹಲವು ವರ್ಷಗಳ ನಂತರ ಕಂಬನು ಮರಣ ಹೊಂದಿದನು. ಆ ವೇಳೆಗೆ ಉತ್ತರದ ದಿಗ್ವಿಜಯವನ್ನು ಕೈಗೊಂಡು ಯಶಸ್ವಿಯಾಗಿ ಹಿಂದಿರುಗಿದ ಮೂರನೇ ಗೋವಿಂದನು ಕರುಣೆಯಿಂದ ಶಿವಮಾರನನ್ನು ನಡೆಸಿಕೊಂಡನು. ಅವನನ್ನು ಸೆರೆಯಿಂದ ಬಿಡಿಸಿ ತಾನೇ ಸ್ವತಃ ತಲಕಾಡಿಗೆ ಬಂದು ಶಿವಮಾರನನ್ನು ಪುನಃ ಸಿಂಹಾಸನದ ಮೇಲೆ ಕೂಡಿಸಿದನು. ಅನಂತರ ಶಿವಮಾರನು ಗೋವಿಂದನಿಗೆ ನಿಷ್ಠೆಯಿಂದಿದ್ದು, ಶಾಂತಿಯಿಂದ ರಾಜ್ಯಭಾರ ಮಾಡಿದನು.

ಶಿವಮಾರನ ಮರಣಾನಂತರ ಮಾರಸಿಂಹ ಎರಯಪ್ಪನು ತಲಕಾಡಿನಲ್ಲಿ ಅಧಿಕಾರ ವಹಿಸಿ ಕ್ರಿ.ಶ 812 ರಿಂದ 817ರವರೆಗೆ ಆಳಿದನು. ಇವನನ್ನು ಒಂದನೇ ಮಾರಸಿಂಹ ಎಂದು ಕರೆಯಲಾಗಿದೆ. ಪೃಥ್ವೀಪತಿಯು ಕೋಲಾರ ಪ್ರದೇಶದಲ್ಲಿ ಆಳುತ್ತಿದ್ದನು. ಪೃಥ್ವೀಪತಿಗೂ ಮಾರಸಿಂಹ ಎಂಬ ಮಗನಿದ್ದನು ಇವನನ್ನು ಎರಡನೇ ಮಾರಸಿಂಹ ಎಂದು ಹೆಸರಿಸಲಾಗಿದೆ. ಇವನು ಕ್ರಿ.ಶ. 880 ರಿಂದ 821 ರವರೆಗೂ ಆಳುತ್ತಿದ್ದನು. ಇವನಿಗೆ ಎರಡನೇ ಪೃಥ್ವೀಪತಿ ಎಂಬ ಮಗನಿದ್ದನು. ಅವನು ಸ್ವಲ್ಪಕಾಲ ರಾಜ್ಯವಾಳಿದ ತರುವಾಯ ಅವನ ಮಗನಾದ ನನ್ನೀಯಗಂಗನು ಸ್ವಲ್ಪಕಾಲ ಆಳ್ವಿಕೆ ನಡೆಸಿ ಮರಣ ಹೊಂದಿದನು. ಆನಂತರ ಈ ಶಾಖೆಯ ವಶದಲ್ಲಿ ರಾಜ್ಯ ತಲಕಾಡಿನ ಮೂಲ ಸಂತತಿಯ ರಾಜ್ಯದೊಡನೆ ವಿಲೀನವಾಯಿತು.

ತಲಕಾಡಿನ ಎರಡನೇ ಮಾರಸಿಂಹನ ತರುವಾಯ ಇವನ ಚಿಕ್ಕಪ್ಪ ವಿಜಯಾದಿತ್ಯನು ರಾಜನಾಗಿ ಸ್ವಲ್ಪಕಾಲ ಅಧಿಕಾರವಹಿಸಿದ್ದನು. ವಿಜಯಾದಿತ್ಯನು ತನ್ನ ಮಗನಾದ ರಾಜಮಲ್ಲನಿಗೆ ಅಧಿಕಾರವಹಿಸಿದನು. ರಾಚಮಲ್ಲನು ಕ್ರಿ.ಶ. 817 ರಿಂದ 853ರವರೆಗೂ ಆಳಿದನು. ಇವನನ್ನು ಒಂದನೇ ರಾಚಮಲ್ಲ ಸತ್ಯವಾಕ್ಯ ಎಂಬ ಹೆಸರಿನಿಂದ ಕರೆಯಲಾಗಿದೆ. ರಾಚಮಲ್ಲನು ನೊಳಂಬ ಸಿಂಹ ಪೋತನ ಮಗಳನ್ನು ವರಿಸಿದ್ದನು. ರಾಷ್ಟ್ರಕೂಟ ನೃಪತುಂಗ ಚಕ್ರವರ್ತಿಯ ಮೇಲೆ ಯುದ್ಧ ಘೋಷಿಸಿದನು. ಒಂದನೇ ರಾಚಮಲ್ಲನು ಉತ್ತರ ಅರ್ಕಾಟ್ ಜಿಲ್ಲೆಯಲ್ಲಿರುವ ವಳ್ಳಿಮಲೈ ಎಂಬಲ್ಲಿ ಒಂದು ಜೈನ ಗುಹಾಲಯವನ್ನು ನಿರ್ಮಿಸಿದನು. ಇವನ ಮರಣಾನಂತರ ನೀತಿಮಾರ್ಗ ಎರೆಗಂಗನು ರಾಜನಾದನು.

ನೀತಿಮಾರ್ಗ ಎರೆಯಂಗನು ಕ್ರಿ.ಶ. 835 ರಿಂದ 870ರವರೆಗೆ ಆಳಿದನು. ಇವನ ಆಳ್ವಿಕೆಯು ಮಗ ಮತ್ತು ರಾಷ್ಟ್ರಕೂಟರ ಮನೆತನಗಳ ಹಗೆತನ ಮತ್ತು ಸಖ್ಯಕ್ಕೆ ಸಂಬಂಧಿಸಿದಂತೆ ಒಂದು ಮುಖ್ಯ ಮಜಲಾಗಿದೆ. ಇವನು ಬಾಣರನ್ನು ಸೋಲಿಸಿ ರಾಜ್ಯ ವಿಸ್ತರಿಸಿದನು. ಆ ವೇಳೆಗೆ ಅಧಿಕಾರದಲ್ಲಿ ಭದ್ರವಾಗಿ ನೆಲೆಯೂರಿದ್ದ ರಾಷ್ಟ್ರಕೂಟರ ಚಕ್ರವರ್ತಿ ಅಮೋಘವರ್ಷ ನೃಪತುಂಗನು ಗಂಗರ ಮೇಲೆ ಯುದ್ಧಮಾಡಿ ದೊಡ್ಡ ಸೈನ್ಯವನ್ನು ಕಳುಹಿಸಿದನು. ಕೋಲಾರ ಜಿಲ್ಲೆಯ ರಾಜರಮಡು ಎಂಬಲ್ಲಿ ಭೀಕರ ಯುದ್ಧ ಸಂಭವಿಸಿತು. ನೀತಿಮಾರ್ಗನು ರಾಷ್ಟ್ರಕೂಟ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿದನು. ನೃಪತುಂಗನು ಗಂಗರೊಡನೆ ಸಂಧಾನವೇರ್ಪಡಿಸಿಕೊಳ್ಳ ಬೇಕಾಯಿತು. ಚಕ್ರವರ್ತಿಯು ತನ್ನ ಮಗಳಾದ ಚಂದ್ರೋಬಲಬ್ಬೆಯನ್ನು ನೀರ್ತಿಮಾರ್ಗನ ಕುಮಾರನಾದ ಒಂದನೇ ಭೂತುಗನಿಗೆ ವಿವಾಹ ಮಾಡಿಕೊಟ್ಟನು. ಇದರಿಂದ ಈ ಎರಡು ಮನೆತನಗಳ ಮಧ್ಯೆ ಸುಮಾರು ಒಂದು ಶತಮಾನ ಕಾಲದ ಹಗೆತನ ಮತ್ತು ಕಾದಾಟ ಕೊನೆಗೊಂಡು ಮಧುರ ಬಾಂಧವ್ಯ ಏರ್ಪಟ್ಟಿತ್ತು. ನೀತಿಮಾರ್ಗನು ಜೈನಮತಕ್ಕೆ ಪ್ರೋತ್ಸಾಹ ನೀಡಿದನು. ತಿರುಮಕೂಡಲು ನರಸೀಪುರ ತಾಲ್ಲೂಕಿನ ದೊಡ್ಡ ಹುಂಡಿ ಶಾಸನದಲ್ಲಿ ನೀತಿಮಾರ್ಗನ ಮರಣಶಯ್ಯೆಯನ್ನು ಕೆತ್ತಲಾಗಿದೆ. ಇವನಿಗೆ ರಾಚಮಲ್ಲ ಮತ್ತು ಭೂತುಗ ಎಂಬ ಇಬ್ಬರು ಗಂಡು ಮಕ್ಕಳಿದ್ದರು. ನೀತಿ ಮಾರ್ಗನ ನಂತರ ರಾಚಮಲ್ಲನು ಅಧಿಕಾರಕ್ಕೆ ಬಂದನು.

ಇವನಿಗೆ ಎರಡನೇ ರಾಚಮಲ್ಲ ಸತ್ಯವಾಕ್ಯ ಎಂದು ಹೆಸರಾಗಿದೆ. ಇದು ಕ್ರಿ.ಶ 870 ರಿಂದ 907ರವರೆಗೆ ಆಳಿದನು. ರಾಚಮಲ್ಲ ಸತ್ಯವಾಕ್ಯನು ಬಾಣರು, ಚೋಳರು ಮತ್ತು ವೆಂಗಿಚಾಳುಕ್ಯರ ಮೇಲೆ ಯುದ್ಧ ಮಾಡಿ ಈ ಎಲ್ಲಾ ಯುದ್ಧಗಳಲ್ಲೂ ಜಯಗಳಿಸಿದನು. ಈತನ ಕಾಲದಲ್ಲೇ ಇವರ ತಮ್ಮನಾದ ಭೂತುಗನು ಮರಣ ಹೊಂದಿದನು ಆದುದ್ದರಿಂದ ಭೂತುಗನ ಮಗನಾದ ಎರೆಯಪ್ಪನನ್ನು ಯುವರಾಜನಾಗಿ ನೇಮಿಸಿದ್ದನು. ಎರಡನೇ ರಾಚಮಲ್ಲನು ಗಂಟಲಿನ ಬೇನೆಯಿಂದ ಮರಣಕ್ಕೆ ತುತ್ತಾದ. ಆನಂತರ ನೀತಿಮಾರ್ಗ ಎರೆಯಪ್ಪನು ರಾಜನಾದನು.

ಇವನನ್ನು ಎರಡನೇ ನೀತಿಮಾರ್ಗ ಎಂದು ಕರೆಯಲಾಗಿದೆ. ಇವನು ಕ್ರಿ.ಶ ೯೦೭ರಿಂದ ೯೨೦ರವರೆಗೆ ಆಳಿದನು. ಇವನು ಚಂದ್ರೋಬಲಬ್ಬೆ ಮತ್ತು ಯುವರಾಜನಾಗಿದ್ದ ಭೂತುಗ ಇವರ ಮಗನು. ನೊಳಂಬರಿಗೂ ಗಂಗರಿಗೂ ನಡೆದ ಯುದ್ಧವು ಎರಡನೇ ನೀತಿಮಾರ್ಗ ಎರೆಯಪ್ಪನ ಕಾಲದ ಪ್ರಮುಖ ಘಟನೆಗಳಲ್ಲೊಂದಾಗಿದೆ. ನೊಳಂಬ ರಾಜ ವೀರಮಹೇಂದ್ರನು ಗಂಗವಾಡಿಯ ಹಲವು ಭಾಗಗಳನ್ನು ಆಕ್ರಮಿಸಿದನು. ತುಮಕೂರು ಜಿಲ್ಲೆಯಲ್ಲಿರುವ ತುಂಬೆಪಾಡಿ ಎಂಬಲ್ಲಿ ಘೋರ ಯುದ್ಧವು ನಡೆಯಿತು. ಗಂಗರ ದಂಡನಾಯಕನಾದ ನಾಗತ್ತರ ಎಂಬುವನು ಈ ಯುದ್ಧದಲ್ಲಿ ಮಡಿದನು. ನೀತಿಮಾರ್ಗನು ತಾನೇ ಸೈನ್ಯದ ಮುಖಂಡತ್ವವನ್ನು ವಹಿಸಿ ವೀರಾವೇಶದಿಂದ ಹೋರಾಡಿ ನೊಳಂಬರ ವೀರಮಹೇಂದ್ರನನ್ನು ಕೊಂದನು. ತನ್ನ ನೆಚ್ಚಿನ ದಂಡನಾಯಕನ ಜ್ಞಾಪಕಾರ್ಥವಾಗಿ ಬೆಂಗಳೂರಿನ ಬಳಿಯ ಬೇಗೂರಿನಲ್ಲಿ ಒಂದು ವೀರಗಲ್ಲನ್ನು ಸ್ಥಾಪನೆ ಮಾಡಿದನು. ಎರಡನೇ ನೀತಿಮಾರ್ಗನ ನಂತರ ಇವರ ಹಿರಿಯ ಮಗ ನರಸಿಂಹದೇವನು ಕ್ರಿ.ಶ ೯೨೦ ರಿಂದ ೯೨೫ರವರೆಗೂ ಆಳಿದನು. ನರಸಿಂಹನು ಇತಿಹಾಸ, ಪುರಾಣ ಆಯುರ್ವೇದ, ಸಂಗೀತ ಮತ್ತು ನೃತ್ಯದಲ್ಲಿ ಪಾಂಡಿತ್ಯ ಮತ್ತು ಅಭಿರುಚಿ ಹೊಂದಿದ್ದುದಾಗಿ ತಿಳಿದುಬರುತ್ತದೆ. ನರಸಿಂಹದೇವನ ತರುವಾಯ ಅವನ ಸಹೋದರ ರಾಚಮಲ್ಲ ಸತ್ಯವಾಕ್ಯನು ರಾಜನಾಗಿ ಕ್ರಿ.ಶ. ೯೨೫ ರಿಂದ ೯೩೫ರ ವರೆಗೆ ಆಳಿದನು. ಇವನನ್ನು ೩ನೇ ರಾಚಮಲ್ಲ ಸತ್ಯವಾಕ್ಯ ಎಂದು ಕರೆಯಲಾಗಿದೆ. ಇವನು ಗಂಗ ಮನೆತನದ ಅರಸರಲ್ಲಿ ವಿಲಕ್ಷಣವಾಗಿ ಕೊನೆಗೊಂಡ ಅರಸನಾಗಿದ್ದಾನೆ. ಇವನ ತಮ್ಮನಾದ ಎರಡನೇ ಭೂತುಗನು ತಾನೇ ಸಿಂಹಾಸನವನ್ನು ಪಡೆಯಲು ಕಾತುರನಾಗಿದ್ದನು. ಭೂತುಗನು ಎರಡನೇ ಅಮೋಘವರ್ಷನ ಪುತ್ರಿಯಾದ ರೇವಕನಿಮ್ಮಡಿಯನ್ನು ವರಿಸಿದ್ದನು. ಸಿಂಹಾಸನಕ್ಕಾಗಿ ಕಚ್ಚಾಟಗಳು ನಡೆದವು. ಆದರೆ ಭೂತುಗನು ತನ್ನ ಭಾವಮೈದುನನಾದ ರಾಷ್ಟ್ರಕೂಟ ಮೂರನೇ ಕೃಷ್ಣನ ಸಹಾಯದಿಂದ ರಾಚಮಲ್ಲನನ್ನು ಕೊಂದು ತಾನೇ ರಾಜನಾದನು.

ಎರಡನೇ ಭೂತುಗನು ಕ್ರಿ.ಶ ೯೩೯ರಿಂದ ೯೬೦ರವರೆಗೂ ಆಳಿದನು. ಭೂತುಗನು ರಾಚಮಲ್ಲನನ್ನು ವಧಿಸಿ ಸಿಂಹಾಸನ ಪಡೆದುದು ಸರಿಯಷ್ಟೆ. ಆನಂತರ ರಾಚಮಲ್ಲನಿಗೆ

ಸಹಾಯ ಮಾಡಿದ ಬಾಣರನ್ನು ಮತ್ತು ಚೋಳರನ್ನು ಶಿಕ್ಷಿಸಲು ಹವಣಿಸಿದನು. ಆ ವೇಳೆಗೆ ಅವನ ಮಾವನಾದ ಎರಡನೇ ಅಮೋಘವರ್ಷನು ಗತಿಸಿದನು. ಆ ಸಮಯದಲ್ಲಿ ಮೂರನೇ ಕೃಷ್ಣನು ಉತ್ತರದ ದಂಡಯಾತ್ರೆಯಲ್ಲಿ ತೊಡಗಿದ್ದನು. ಮಾನ್ಯಖೇಟದಲ್ಲಿ ಲಲ್ಲಯ್ಯ ಎಂಬುವನು ದಂಗೆ ಎದ್ದು ಸಿಂಹಾಸನವನ್ನಾಕ್ರಮಿಸಿದನು. ಭೂತುಗನು ರಾಷ್ಟ್ರಕೂಟರ ರಾಜಧಾನಿಗೆ ಧಾವಿಸಿ ದಂಗೆಕೋರ ಲಲ್ಲಯ್ಯನನ್ನು ಸದೆಬಡಿದು ಅವನಿಂದ ಸಿಂಹಾಸನವನ್ನೂ ಇತರ ರಾಜಲಾಂಛನಗಳನ್ನು ವಶಪಡಿಸಿಕೊಂಡು ಆ ವೇಳೆಗೆ ರಾಜಧಾನಿಗೆ ಹಿಂತಿರುಗಿದ ಕೃಷ್ಣನಿಗೆ ವಹಿಸಿದನು. ರಾಷ್ಟ್ರಕೂಟ ಸಂತತಿಗೆ ಒದಗಿದ್ದ ವಿಪತ್ತಿನಿಂದ ಅದನ್ನು ಭೂತುಗನು ಪಾರುಮಾಡಿದನು.

ಆ ವೇಳೆಗೆ ತಮಿಳುನಾಡಿನಲ್ಲಿ ಪಲ್ಲವರನ್ನು ಸೋಲಿಸಿ ಚೋಳರು ಪ್ರವರ್ಧಮಾನಕ್ಕೆ ಬಂದಿದ್ದರು. ಚೋಳ ಸಂತತಿಯ ಪರಾಂತಕನು ಕರ್ನಾಟಕದತ್ತ ರಾಜ್ಯವಿಸ್ತರಿಸುವ ಯೋಜನೆಯನ್ನು ಹಾಕಿಕೊಂಡನು. ಆದ್ದರಿಂದ ಗಂಗರಿಗೂ ಚೋಳರಿಗೂ ಘರ್ಷಣೆಗಳು ಪ್ರಾರಂಭವಾದವು. ರಾಷ್ಟ್ರಕೂಟರ ಮುಮ್ಮಡಿಕೃಷ್ಣ ಮತ್ತು ಗಂಗರ ಇಮ್ಮಡಿ ಭೂತುಗ ಇವರ ನೇತೃತ್ವದಲ್ಲಿ ಹಿರಿದಾದ ಸೈನ್ಯವು ತಮಿಳುನಾಡಿನತ್ತ ಧಾವಿಸಿತು. ಪರಾಂತಕನ ಮಗನಾದ ಆದಿತ್ಯನು ಕರ್ನಾಟಕ ಬಲವನ್ನು ಎದುರಿಸಿದನು. ಕ್ರಿ.ಶ. ೯೪೯ರ ಸುಮಾರಿನಲ್ಲಿ ತಕ್ಕೋಲಂ ಎಂಬಲ್ಲಿ ಭೀಕರವಾದ ಯುದ್ಧವು ನಡೆದು ಚೋಳ ಸೈನ್ಯವು ಸೋತು ಓಡಿ ಹೋಯಿತು. ಈ ರಣರಂಗದಲ್ಲಿ ಭೂತುಗನ ದಳಪತಿಗಳಾದ ಕೋಟೆ ದಂಡನಾಯಕ ಎಂಬುವರೂ ಸಹ ವೀರಾವೇಶದಿಂದ ಹೋರಾಡಿದನು. ಕೃಷ್ಣ ಮತ್ತು ಭೂತುಗರು ಕಂಚಿಯವರೆಗೂ ದಂಡೆಯಾತ್ರೆ ನಡೆಸಿದನು. ಚೋಳರು ಈ ಅಪಜಯದಿಂದ ಚೇತರಿಸಿಕೊಳ್ಳಲು ಹಲವಾರು ವರ್ಷಗಳು ಬೇಕಾಯಿತು.

ಭೂತುಗನ ನೊಳಂಬ ಸಾಮಂತ ದಿಲೀಪನನ್ನು ಅವಿಧೇಯತೆಗಾಗಿ ಶಿಕ್ಷಿಸಿದನು. ಮುಮ್ಮಡಿ ಕೃಷ್ಣ ಉತ್ತರ ದಿಗ್ವಿಜಯದಲ್ಲಿ ಪಾಲ್ಗೊಂಡು ಚಿತ್ರಕೂಟ ಮತ್ತು ಮಾಳವಗಳಲ್ಲಿ ನಡೆದ ಯುದ್ಧಗಳಲ್ಲಿ ವೀರಾವೇಶದಿಂದ ಶತ್ರುಗಳನ್ನು ಸೋಲಿಸಿದನು. ಇವನ ಕಾಲದಲ್ಲಿ ಗಂಗರ ಪ್ರಭುತ್ವವು ಅಜೇಯವಾಗಿತ್ತು. ರಾಷ್ಟ್ರಕೂಟ ಸಿಂಹಾಸನವನ್ನು ಆಪತ್ತಿನಿಂದ

ಪಾರುಮಾಡಿ, ಚೋಳರ ಆಕ್ರಮಣದಿಂದ ಕನ್ನಡನಾಡನ್ನು ಸಂರಕ್ಷಿಸಿದನು. ಇವನಿಗೆ ನನ್ನೀಯಗಂಗ, ಗಂಗನಾರಾಯಣ ಮತ್ತು ಗಂಗಗಾಂಗೇಯ ಮೊದಲಾದ ಬಿರುದುಗಳಿದ್ದವು. ಇವನ ಮರಣಾನಂತರ ಕ್ರಿ.ಶ. 969 ರಲ್ಲಿ ಪಟ್ಟದ ರಾಣಿಯ ಕುಮಾರನಾದ ಮರುಳದೇವನು ಸಿಂಹಾಸನಕ್ಕೆ ಬಂದನು. ಆದರೆ ಇವನು ಕೆಲವೇ ತಿಂಗಳಲ್ಲಿ ಅಕಾಲ ಮರಣಕ್ಕೀಡಾದನು. ಅನಂತರ ಭೂತುಗನ ಎರಡನೇ ಮಗನಾದ ಮಾರಸಿಂಹನು ರಾಜನಾದನು.

ಮೂರನೇ ಮಾರಸಿಂಹನು ಕ್ರಿ.ಶ 960 ರಿಂದ 974ರವರೆಗೆ ಆಳಿದನು. ಇವನಿಗೆ ನೊಳಂಬ ಕುಲಾಂತಕ ಮಾರಸಿಂಹನೆಂದೇ ಹೆಸರಾಗಿದೆ. ಇವನ ಆಳ್ವಿಕೆಯ ಕಾಲವೂ ಕರ್ನಾಟಕದ ಚರಿತ್ರೆಯಲ್ಲಿ ಮುಖ್ಯ ಘಟನಾವಳಿಗಳಿಂದ ಕೂಡಿದೆ. ರಾಷ್ಟ್ರಕೂಟ ಗಂಗರ ಅಸಾಧಾರಣ ಮೈತ್ರಿ, ಗೂರ್ಜರ ರಾಜ್ಯದ ಆಕ್ರಮಣ, ನೊಳಂಬ ಪ್ರಭಾವ ನಿರ್ಮೂಲನೆ, ರಾಷ್ಟ್ರಕೂಟ ಸಂತತಿಯ ಅಂತ್ಯ, ಕಲ್ಯಾಣಿ ಚಾಲುಕ್ಯ ಸಾಮ್ರಾಜ್ಯದ ಉದಯಸಾಹಿತ್ಯ ಮತ್ತು ಕಲೆಯ ಪ್ರೋತ್ಸಾಹ ಮೊದಲಾದವು ಇವನ ಕಾಲದ ಮುಖ್ಯ ಘಟನೆಗಳಾಗಿವೆ.

ಮೂರನೇ ಮಾರಸಿಂಹನು ಬಾಲ್ಯದಿಂದಲೂ ಶೌರ್ಯ, ಪರಾಕ್ರಮ ಮತ್ತು ಸದ್ಗುಣಗಳಿಗೆ ಹೆಸರಾಗಿದ್ದನು. ಇವನು ಭೂತುಗ ಮತ್ತು ಅವನ ರಾಣಿ ಕಲ್ಲಬ್ಬರಿಸಿಯ ಪುತ್ರ. ಇವನ ಪಟ್ಟಾಭೀಷೇಕವನ್ನು ಮೂರನೇ ಕೃಷ್ಣನು ತಾನೇ ಸ್ವತಃ ತಲಕಾಡಿಗೆ ಬಂದು ನೆರವೇರಿಸಿ ಕೊಟ್ಟನು. ರಾಜನಾದ ಕೆಲವೇ ವರ್ಷಗಳಲ್ಲಿ ರಾಷ್ಟ್ರಕೂಟ ಸಾಮ್ರಾಟನ ಉತ್ತರ ಭಾಗಗಳ ರಕ್ಷಣೆಗಾಗಿ ಮಾರಸಿಂಹನು ದಂಡೆತ್ತಿ ಹೋಗಬೇಕಾಯಿತು. ಗುಜರಾತಿನಲ್ಲಿ ಅದುವರೆಗೂ ವಿಧೇಯನಾಗಿ ಆಳುತ್ತಿದ್ದ ಸಾಮಂತ ರಾಜನಾದ ಪಾರಮಾರ ಸೀಯಕ ಹರ್ಷನು ರಾಷ್ಟ್ರಕೂಟರ ಪರಮಾಧಿಕಾರವನ್ನು ಕಡೆಗಣಿಸಿದ್ದನು. ಅವನನ್ನು ಶಿಕ್ಷಿಸಲು ಮುಮ್ಮಡಿ ಕೃಷ್ಣನು ಮೂರನೇ ಮಾರಸಿಂಹನನ್ನು ಸೈನ್ಯಸಮೇತ ಕಳುಹಿಸಿದನು. ಗಂಗ ಮತ್ತು ರಾಷ್ಟ್ರಕೂಟ ಸೈನ್ಯಗಳ ನಾಯಕತ್ವವನ್ನು ವಹಿಸಿ ಮಾರಸಿಂಹ ಮಾಳವದತ್ತ ಮುಂದುವರಿಸಿದನು. ಸೀಯಕನಿಗೂ ಮಾರಸಿಂಹನಿಗೂ ಅನೇಕ ಕಡೆ ಕದನಗಳು ನಡೆದವು. ಸೀಯಕನು ಸೋತು ಹೋದನು. ಮಾರಸಿಂಹನ ದಳಪತಿಗಳಾದ ಶೂದ್ರಕಯ್ಯ ಮತ್ತು ಗೊಗ್ಗಿಮಯ್ಯ ಎಂಬುವರು ಶತ್ರುಗಳನೊಡನೆ ಪರಾಕ್ರಮದಿಂದ ಹೋರಾಡಿದರು. ಉಜ್ಜೈನಿಯ

ಮಾರಸಿಂಹನ ವಶವಾಯಿತು. ಪಾರಮಾರ ಸೀಯಕನು ಪುನಃ ರಾಷ್ಟ್ರಕೂಟರ ಪರಮಾಧಿಕಾರವನ್ನು ಒಪ್ಪಿದನು.

ಕ್ರಿ.ಶ. ೯೬೮ರಲ್ಲಿ ಮುಮ್ಮಡಿ ಕೃಷ್ಣನು ಮರಣ ಹೊಂದಿದನು. ಅವನ ಉತ್ತರಾಧಿಕಾರಿಯಾದ ಖೊಟ್ಟಿಗನು ಅಶಕ್ತನಾಗಿದ್ದನು. ಮಾರಸಿಂಹನು ರಾಷ್ಟ್ರಕೂಟ ಸಾಮ್ರಾಜ್ಯದ ಹಿತರಕ್ಷಣೆಗೆ ತೊಡಗಿದ್ದಾಗ ನೊಳಂಬರು ಗಂಗರ ಪರಮಾಧಿಕಾರವನ್ನು ಪುನಃ ಧಿಕ್ಕರಿಸಿ ರಾಜ್ಯ ವಿಸ್ತರಣೆಯಲ್ಲಿ ತೊಡಗಿದನು. ಮಾರಸಿಂಹನು ಸೈನ್ಯ ಸಮೇತ ನೊಳಂಬ ರಾಜ್ಯವನ್ನು ಮುತ್ತಿದನು. ನೊಳಂಬರ ಸೈನ್ಯವು ಸೋತಿತು. ನೊಳಂಬರಾಜನು ತಲೆಮರೆಸಿಕೊಂಡನು. ಯುದ್ಧದಲ್ಲಿ ಮಾರಸಿಂಹನ ದಂಡನಾಯಕರಾದ ಅಮಾವಾಸಯ್ಯ ಮತ್ತು ಚಾವುಂಡರಾಯ ಇವರು ವಿಶೇಷ ಪರಾಕ್ರಮದಿಂದ ಹೋರಾಡಿದರು.

ಈ ಮಧ್ಯೆ ರಾಷ್ಟ್ರಕೂಟರ ವೈರಿಗಳು ಮಾನ್ಯಖೇಟವನ್ನು ಮುತ್ತಿದ್ದರು. ಆ ವೇಳೆಗೆ ಮಾರಸಿಂಹನು ಸೈನ್ಯ ಸಮೇತ ರಾಷ್ಟ್ರಕೂಟರ ನೆರವಿಗೆ ಧಾವಿಸಿ ಶತ್ರುಗಳನ್ನು ಸೋಲಿಸಿ ಓಡಿಸಿದರು. ಆದರೆ ರಾಷ್ಟ್ರಕೂಟರ ರಾಜಧಾನಿಯಲ್ಲಿ ಅನಾಯಕತೆ ತಲೆದೋರಿತ್ತು. ಸಿಂಹಾಸನಕ್ಕಾಗಿ ಕಚ್ಚಾಟಗಳು ನಡೆದವು. ಮುಮ್ಮಡಿ ಕೃಷ್ಣರಾಜನ ಮೊಮ್ಮಗನಾದ ೩ನೇ ಇಂದ್ರನಿಗೆ ಮಾರಸಿಂಹನು ಪಟ್ಟಕಟ್ಟಿದನು. ಆದರೆ ಸಾಮಂತರ ವಿರೋಧ ಸಿಂಹಾಸನಕ್ಕಾಗಿ ನಡೆದ ಕಚ್ಚಾಟದಿಂದ ಅರಾಜಕತೆಯುಂಟಾಗಿತ್ತು. ಕ್ರಿ.ಶ ೯೭೩ರಲ್ಲಿ ಕಲ್ಯಾಣಿ ಚಾಳುಕ್ಯ ತೈಲಪನ್ನು ರಾಷ್ಟ್ರಕೂಟ ಸಂತತಿಯನ್ನು ಕೊನೆಗಾಣಿಸಿ ತನ್ನ ಮನೆತನವನ್ನು ಸ್ಥಾಪಿಸಿದನು. ಮಾರಸಿಂಹನು ತನ್ನ ರಾಜ್ಯದಲ್ಲಿ ಅರಾಜಕತೆಯನ್ನು ಹೊಡೆದು ತನ್ನ ಮಗ ರಾಚಮಲ್ಲನಿಗೆ ಪಟ್ಟಕಟ್ಟಿ ಕ್ರಿ.ಶ ೯೭೫ರಲ್ಲಿ ಸಿಂಹಾಸನ ತ್ಯಾಗ ಮಾಡಿದನು. ಅನಂತರ ಬಂಕಾಪುರಕ್ಕೆ ಹೋಗಿ ಅಲ್ಲಿ ತನ್ನ ಗುರುವಾದ ಅಜಿತ ಸೇನಾಚಾರ್ಯರ ಬಳಿಯಲ್ಲಿ ಜೈನವಿಧಿ ಸಲ್ಲೇಖನ ವ್ರತವನ್ನು ಕೈಗೊಂಡು ಕೊನೆಯುಸಿರೆಳೆದನು.

ಮಾರಸಿಂಹನ ಮಗನಾದ ನಾಲ್ಕನೇ ರಾಚಮಲ್ಲ ಸತ್ಯವಾಕ್ಯನು ಕ್ರಿ.ಶ ೯೭೫ ರಿಂದ ೯೮೩ ರವರೆಗೆ ಆಳಿದನು. ಇವನ ಆಳ್ವಿಕೆಯಲ್ಲಿ ಸಿಂಹಾಸನಕ್ಕಾಗಿ ಅಂತಃಕಲಹಗಳು ನಡೆದವು.

ಮಾರಸಿಂಹನ ತಮ್ಮನಾದ ಗೋವಿಂದರಸನು ಸಿಂಹಾಸನಕ್ಕಾಗಿ ಸೆಣಸಿದನು. ಆದರೆ ಅವನು ಪರಾಭವಗೊಂಡನು.

ಗಂಗರ ಆಳ್ವಿಕೆಯ ಈ ಕಾಲದ ಅತ್ಯಂತ ಪ್ರಸಿದ್ಧ ವ್ಯಕ್ತಿಯೆಂದರೆ ಚಾವುಂಡರಾಯನು ಸ್ವಾಮಿ ನಿಷ್ಠೆಯಿಂದ ಗಂಗರ ಸಿಂಹಾಸನಕ್ಕೊದಗಿದ ತೀವ್ರ ಕಂಟಕಗಳನ್ನು ನಿರ್ನಾಮ ಮಾಡಿದನು. ಆನಂತರ ನೊಳಂಬ ಜಗದೇಕವೀರನನ್ನು ಗೋಣೂರು ಯುದ್ಧದಲ್ಲಿ ಸೋಲಿಸಿ ವೀರಮಾರ್ತಾಂಡ ಎಂಬ ಬಿರುದುಗೆ ಪಾತ್ರನಾದನು. ಬಾಗೆಯೂರು ಕದನದಲ್ಲಿ ತ್ರಿಭುವನವೀರನೆಂಬ ಮತ್ತೊಬ್ಬ  ಶತ್ರುವನ್ನು ಸಂಹರಿಸಿದನು. ಉಚ್ಚಂಗಿಯ ಪಾಂಡ್ಯ ರಾಜ ರಾಜಾಧಿತ್ಯನನ್ನು ಸೋಲಿಸಿ ರಣರಂಗ ಸಿಂಹ ಎಂಬ ಬಿರುದನ್ನು ಪಡೆದನು. ರಾಚಮಲ್ಲನು ಪರಾಕ್ರಮಿಯಾದ ಚಾವುಂಡರಾಯನಿಗೆ ವೈರಿಕುಲ ಕಾಲದಂಡ, ಭುಜವಿಕ್ರಮ, ಸಮರ ದುರಂಧರ, ವೀರಮಾರ್ತಾಂಡ ಮೊದಲ ಬಿರುದುಗಳನ್ನು ನೀಡಿ ಗೌರವಿಸಿದನು.

ಚಾವುಂಡರಾಯ ಪರಾಕ್ರಮಿಯಾಗಿದ್ದಂತೆ ವಿದ್ವಾಂಸನು ಆಗಿದ್ದನು. ಕನ್ನಡ, ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳನ್ನು ಅವನು ವಿಶೇಷ ಪಾಂಡಿತ್ಯವನ್ನು ಹೊಂದಿದ್ದನು. ವ್ಯಾಕರಣ, ತರ್ಕ, ಗಣಿತಶಾಸ್ತ್ರಗಳಲ್ಲಿಯೂ ಅವನಿಗೆ ವಿಶೇಷ ಪರಿಣತೆವಿತ್ತು. ಜೈನ ತೀರ್ಥಂಕರನ್ನು ಕುರಿತು ಕನ್ನಡ ಭಾಷೆಯಲ್ಲಿ ಚಾವುಂಡರಾಯ ಪುರಾಣ ಎಂಬ ಕೃತಿಯನ್ನು ರಚಿಸಿದನು. ಅಲ್ಲದೆ ನೇಮಿಚಂದ್ರ, ಸಿದ್ಧಾಂತ ಚಕ್ರವರ್ತಿ ಎಂಬ ಜೈನಯತಿಯಿಂದ ರಚಿತವಾದ 'ಗೊಮ್ಮಟಸಾರ' ಎಂಬ ಗ್ರಂಥಕ್ಕೆ ಭಾಷ್ಯವನ್ನು ರಚಿಸಿದ್ದಾನೆ. ಪ್ರಸಿದ್ಧ ಕವಿಯಾದ ರನ್ನನ್ನು ಸಹ ಚಾವುಂಡರಾಯನಿಂದ ಪ್ರೋತ್ಸಾಹವನ್ನು ಪಡೆದಿದ್ದನು.

ಜೈನ ಧರ್ಮವಲಂಬಿಯಾಗಿದ್ದ ಚಾವುಂಡರಾಯನು ಜೈನ ಧರ್ಮದ ಏಳಿಗೆಗೆ ಸತತವಾಗಿ ಶ್ರಮಿಸಿದನು. ಅನ್ಯಮತ ಸಹಿಷ್ಣುವಾಗಿದ್ದನು ಚಾವುಂಡರಾಯನು ಮಾರಸಿಂಹ ಮತ್ತು ರಾಚಮಲ್ಲನ ಗುರು ಅಜಿತಸೇನಾಚಾರ್ಯರ ಶಿಷ್ಯನಾಗಿದ್ದನು. ಇತಿಹಾಸದಲ್ಲಿ ಮೇರು ಶಿಲ್ಪಕೃತಿಯಾದ ಶ್ರವಣಬೆಳಗೊಳದ 58 ಅಡಿ ಎತ್ತರದ ಗೊಮ್ಮಟ ವಿಗ್ರಹವನ್ನು ಅಖಂಡ ಶಿಲೆಯಿಂದ ಕೆತ್ತಿಸಿದನು. ಅವನ ಶ್ರದ್ಧೆ ಹಾಗೂ ಪ್ರೋತ್ಸಾಹದ ಫಲವಾಗಿ ಶ್ರವಣಬೆಳಗೊಳವು ಇಂದಿಗೂ ಭಾರತದಲ್ಲಿ ಜೈನರ ಪವಿತ್ರ ಕ್ಷೇತ್ರವಾಗಿ ಉಳಿದು ಬಂದಿದೆ. ಈ ಎಲ್ಲಾದರ

ಪರಿಣಾಮವಾಗಿ ಅನಂತರದ ಶಾಸನಗಳಲ್ಲಿ ಈತನನ್ನು 'ರಾಯ' ಎಂಬ ಗೌರವದ ಹೆಸರಿನಿಂದ ಸ್ಮರಿಸಲಾಗಿದೆ. ಪರಾಕ್ರಮ, ಸ್ವಾಮಿನಿಷ್ಠೆ, ಸ್ವಧರ್ಮ ನಿಷ್ಠೆ, ಪರಧರ್ಮ ಸಹಿಷ್ಣುತೆ, ಸಾಹಿತ್ಯ ರಚನೆ ಮತ್ತು ಬೃಹತ್ ಶಿಲ್ಪ ನಿರ್ಮಾಣ ಇವುಗಳಿಂದ ಚಾವುಂಡರಾಯನ ಹೆಸರು ಕರ್ನಾಟಕದ ಇತಿಹಾಸದಲ್ಲಿ ಅಜರಾಮರವಾಗಿದೆ.

ರಾಚಮಲ್ಲನ ಆಳ್ವಿಕೆಯು ಕ್ರಿ.ಶ 988 ರಲ್ಲಿ ಕೊನೆಗೊಂಡು ಇವನ ತಮ್ಮನಾದ ರಕ್ಕಸ ಗಂಗನ ಆಳ್ವಿಕೆಯು ಪ್ರಾರಂಭವಾಯಿತು. ತನ್ನ ಅಣ್ಣನ ಆಳ್ವಿಕೆಯ ಕಾಲದಲ್ಲಿ ಅನೇಕ ಯುದ್ಧಗಳಲ್ಲಿ ಪಾಲ್ಗೊಂಡಿದ್ದಲ್ಲದೇ ಪ್ರಾಂತ್ಯಾಧಿಕಾರಿಯಾಗಿ ಆಡಳಿತ ನಡೆಸಿದ ರಕ್ಕಸಗಂಗನು ಕ್ರಿ.ಶ 1004ರ ವರೆಗೆವಿಗೂ ಸ್ವತಂತ್ರವಾಗಿ ಆಳ್ವಿಕೆಯನ್ನು ಮುಂದುವರಿಸಿದನು. ಕ್ರಿ.ಶ 990ರಲ್ಲಿ ದಕ್ಷಮಂತ್ರಿ ಚಾವುಂಡರಾಯನ ಮರಣ ನಂತರ ಗಂಗರ ಆಳ್ವಿಕೆ ಮುಂದುವರೆಯುವುದು ದುರ್ಲಭವಾಯಿತು.

ತಕ್ಕೋಲಂನಲ್ಲಿ ಹೊಂದಿದ್ದ ಅಪಜಯದ ಸೇಡನ್ನು ತೀರಿಸಿಕೊಳ್ಳಲು ಅವಣಿಸುತ್ತಿದ್ದ ಚೋಳರಿಗೆ ಕ್ರಿ.ಶ 984 ರಲ್ಲಿ ಪರಾಕ್ರಮಿಯಾದ ರಾಜ ರಾಜನು ಪಟ್ಟಕ್ಕೆ ಬಂದದ್ದು ವರವೇ ಆಯಿತು. ಚೇರ, ಪಾಂಡ್ಯ ಮತ್ತು ಸಿಂಹಳದ ರಾಜರನ್ನು ಸೋಲಿಸಿ ಅವನು ಗಂಗವಾಡಿಯತ್ತಾ ಗಮನಹರಿಸಿದನು. ಕ್ರಿ.ಶ 991 ರಲ್ಲಿ ರಾಜರಾಜನ ದಕ್ಷ ಸೇನಾನಿಗಳು ಕೋಲಾರ ಪ್ರದೇಶವನ್ನು ಆಕ್ರಮಿಸಿದರು. ಕ್ರಿ.ಶ 997 ರಲ್ಲಿ ರಾಜರಾಜನೇ ಸ್ವತಃ ಸೈನ್ಯವನ್ನು ನಡೆಸಿ ಹೋಸಕೋಟೆ ಯವರೆಗಿನ ಪ್ರದೇಶವನ್ನು ವಶಪಡಿಸಿಕೊಂಡನು. ರಾಜರಾಜನು ಗೆದ್ದ ಪ್ರದೇಶಗಳನ್ನು ದಕ್ಷ ದಳಪತಿಗಳ ನೇತೃತ್ವದಲ್ಲಿ ಸೈನ ತುಕಡಿಗಳನ್ನು ನೆಲಗೊಳಿಸಿದನು. ಗಂಗವಾಡಿಯನ್ನು ಜಯಿಸುವ ಕಾರ್ಯವನ್ನು ವಹಿಸಿಕೊಂಡ ಯುವರಾಜ ರಾಜೇಂದ್ರನು ಕ್ರಿ.ಶ 1004ರಲ್ಲಿ ದೊಡ್ಡ ಸೈನ್ಯದೊಂದಿಗೆ ತಲಕಾಡನ್ನು ಮುತ್ತಿ ವಶಪಡಿಸಿಕೊಂಡು 700 ವರ್ಷಗಳ ಗಂಗರ ದೀರ್ಘ ಆಳ್ವಿಕೆಯನ್ನು ಕೊನೆಗಾಣಿಸಿದನು.

ತಲಕಾಡಿನ ಪತನದ ನಂತರವು ಉಳಿದಿದ್ದ ರಕ್ಕಸ ಗಂಗನು ಛಂದೋಬುದಿಯ ಪ್ರಕಾರ ಕ್ರಿ.ಶ 1025 ರವರೆಗೆ ಚೋಳರ ಸಾಮಂತರಾಗಿ ಆಡಳಿತ ನಡೆಸಿದ ಎಂದು ತಿಳಿದುಬರುತ್ತದೆ. ರಕ್ಕಸ ಗಂಗರು ತಲಕಾಡು ಗಂಗ ಮನೆತನದ ರಾಜರಲ್ಲಿ ಕಟ್ಟ

ಕಡೆಯವನು. ಗಂಗರ ಮುಖ್ಯ ಶಾಖೆ ರಕ್ಕಸ ಗಂಗನ ಕಾಲಕ್ಕೆ ಮುಗಿದರೂ ಗಂಗ ಉಪಶಾಖೆಗಳು ಕಲ್ಯಾಣಿ ಚಾಳುಕ್ಯರ ಹಾಗೂ ಆನಂತರ ಹೊಯ್ಸಳರ ಆಶ್ರಿತರಾಗಿ ಆಳ್ವಿಕೆ ಮುಂದುವರಿಸಿದರು. ವಿಜಯನಗರದ ಸಾಮ್ರಾಟರ ಕೃಷ್ಣದೇವರಾಯನು ಉಮ್ಮತ್ತೂರಿನ (ಶಿವಸಮುದ್ರ) ಗಂಗ ರಾಜ ಆಳ್ವಿಕೆಯನ್ನು ಕೊನೆಗಾಣಿಸಿದಾಗ ಗಂಗ ಸಂತತಿಯ ಕೊನೆಯ ಉಪ ಶಾಖೆಯು ಅಂತ್ಯಗೊಂಡಿತ್ತು.

## ರಾಷ್ಟ್ರಕೂಟರು

ರಾಷ್ಟ್ರಕೂಟ ಸಾಮ್ರಾಜ್ಯದ ಸ್ಥಾಪಕ ದಂತಿದುರ್ಗ ಬಾದಾಮಿ ಚಾಳುಕ್ಯರ ಸಾಮಂತನಾಗಿದ್ದು ಇವನ ಪೂರ್ವಿಕರು ಚಿಕ್ಕ ಸಂಸ್ಥಾನವನ್ನು ಆಳುತ್ತಿದ್ದರು. ದಂತಿದುರ್ಗನ ತಂದೆ 2ನೇ ಇಂದ್ರನು ಚಾಳುಕ್ಯರ ರಾಜಕುಮಾರಿಯನ್ನು ವಿವಾಹವಾಗಿದನು. ಈತನ ಬಗ್ಗೆ ಹೆಚ್ಚಿನ ಮಾಹಿತಿ ತಿಳಿದು ಬರುವುದಿಲ್ಲ. ಚಾಳುಕ್ಯ ಇಮ್ಮಡಿ ವಿಕ್ರಮಾದಿತ್ಯನ ಕಾಲದಲ್ಲಿ ಪ್ರಸಿದ್ಧಿಗೆ ಬಂದ ದಂತಿದುರ್ಗನು ಕ್ರಿ.ಶ 745 ರಲ್ಲಿ ಚಾಳುಕ್ಯ ಸಾಮ್ರಾಜ್ಯದ ಉತ್ತರ ಭಾಗದ ಶತ್ರುಗಳೊಂದಿಗೆ ನಡೆಸಿದ ಹೋರಾಟಗಳಲ್ಲಿ ಭಾಗವಹಿಸಿದನು. ವಿಕ್ರಮಾದಿತ್ಯನ ಮರಣದ ನಂತರ ತನ್ನ ಬಲವನ್ನು ವೃದ್ಧಿಸಿಕೊಂಡ ದಂತಿದುರ್ಗನು ಚಾಳುಕ್ಯರ ಕೊನೆಯ ಅರಸನಾಗಿದ್ದ ಕೀರ್ತಿವರ್ಮನ ಅಸಮರ್ಥತೆಯ ಲಾಭವನ್ನು ಪಡೆದುಕೊಂಡು ತನ್ನ ರಾಜ್ಯ ವಿಸ್ತರಿಸುವ ಯೋಜನೆಯನ್ನು ಹಾಕಿಕೊಂಡನು. ಸಾಮಂತರುಗಳನ್ನು ಮೊದಲು ಎದರಿಸಿ ಸೋಲಿಸಿದ ದಂತಿದುರ್ಗನು ಮಾಳವ, ಗುಜರಾತ್ ಪ್ರದೇಶಗಳನ್ನು ಗೆದ್ದು ಉಜ್ಜೈನಿಯಲ್ಲಿ ಹಿರಣ್ಯಗರ್ಭಯಾಗವನ್ನು ಆಚರಿಸಿದನು. ಕೆಲವು ಶಾಸನಗಳ ಪ್ರಕಾರ ಈತನು ಕಂಚಿಯ ಪಲ್ಲವರನ್ನು ಮಧುರೈ ಪಾಂಡ್ಯರನ್ನು ಕಳಿಂಗ ಮತ್ತು ಕೋಸಲದ ರಾಜರನ್ನು ಸೋಲಿಸಿದನೆಂದು ತಿಳಿದುಬರುತ್ತದೆ. ಈ ಹೇಳಿಕೆಯು ಉತ್ಪ್ರೇಕ್ಷೆಯಿಂದ ಕೂಡಿದೆ. ಕ್ರಿ.ಶ 753 ರಿಂದ 757 ರವರೆಗೆ ಚಾಳುಕ್ಯರೊಡನೆ ನಿರಂತರ ಹೋರಾಟ ನಡೆಸಿದ ದಂತಿದುರ್ಗನು ಅಂತಿಮವಾಗಿ ಬಾದಾಮಿಯನ್ನು ಮುತ್ತಿ ಕೀರ್ತಿವರ್ಮನನ್ನು ಸೋಲಿಸಿ ಸಾಮ್ರಾಟನಾದನು.[16] ದಂತಿದುರ್ಗನು ಮಹಾರಾಜಾಧಿರಾಜ, ರಾಜಪರಮೇಶ್ವರ, ಖಡ್ಗಾವಲೋಕ ಮತ್ತು ಪೃಥ್ವಿವಲ್ಲಭ ಎಂಬ ಬಿರುದುಗಳನ್ನು ವರಿಸಿದನು. ಸಾಮ್ರಾಟನಾದ ಸ್ವಲ್ಪಕಾಲದಲ್ಲೇ ಮರಣ ಹೊಂದಿದ್ದ

ದಂತಿದುರ್ಗನಿಗೆ ಪುತ್ರರಿಲ್ಲದ ಕಾರಣ ಇವನ ಚಿಕ್ಕಪ್ಪನ ಮಗನಾದ ಕೃಷ್ಣನು ಅಧಿಕಾರೂಢನಾದನು.

## ಒಂದನೇ ಕೃಷ್ಣ (ಕ್ರಿ.ಶ 757–775)

ಅಧಿಕಾರವನ್ನು ವಹಿಸಿಕೊಂಡ ಪ್ರಾರಂಭದಲ್ಲಿ ಕೃಷ್ಣನು ರಾಚಪ್ಪಯ್ಯ ಎಂಬ ಚಾಳುಕ್ಯ ದಳಪತಿಯನ್ನು ಎದುರಿಸಬೇಕಾಯಿತು. ಇದರಲ್ಲಿ ಜಯಪ್ರಥನಾದ ಕೃಷ್ಣನು ಚಾಳುಕ್ಯ ಸಾಮ್ರಾಜ್ಯದ ದಕ್ಷಿಣ ಭಾಗದ ಸಾಮಂತರನ್ನು ಸೋಲಿಸಿ ಅಧೀನಪಡಿಸಿಕೊಂಡನು. ಕೊಂಕಣದ ಸಿಲ್ಹಾರ ರಾಜನು ಕೃಷ್ಣನ ಸಾಮಂತನಾಗಿ ಆಳ್ವಿಕೆ ನಡೆಸುತ್ತಿದ್ದನು ವೆಂಗಿಯ ರಾಜನನ್ನು ಸೋಲಿಸಿದ ಯುವರಾಜ ಗೋವಿಂದನನ್ನು ಅಲ್ಲಿ ರಾಷ್ಟ್ರಕೂಟರ ಪರಾಮಾಧಿಕಾರವನ್ನು ಸ್ಥಾಪಿಸಿದನು. ರಾಷ್ಟ್ರಕೂಟರಿಗೂ, ಗಂಗರಿಗೂ ಯುದ್ಧಗಳು ಆರಂಭವಾಗಿದ್ದು, ಗಂಗರಾಜನಾದ ಶ್ರೀಪುರುಷನ ಪ್ರಬಲ ವಿರೋಧದಿಂದ ಕೃಷ್ಣನನ್ನು ಎದುರಿಸಿ ಹೋರಾಡಿದನು. ಪಾಶುಪಥ ಶೈವಪಂಥದತ್ತ ಹೆಚ್ಚಿನ ಒಲವನ್ನು ಹೊಂದಿದ್ದ ಕೃಷ್ಣನ್ನು ಎಲ್ಲೋರದ ಜಗತ್ಪ್ರಸಿದ್ಧ ಗುಹಾಂತರ ದೇವಾಲಯವನ್ನು ಕೆತ್ತಿಸಿ ಪಾಶುಪಥ ಶೈವಪಂಥದ ಆಚಾರ್ಯ ಮಹಾವೃತ್ತಿಯೆಂಬುವನಿಗೆ ಅರ್ಪಿಸಿದನು. ಈ ದೇವಾಲಯಕ್ಕೆ ಕನ್ನರೇಶ್ವರ ಎಂದು ಹೆಸರಾಯಿತು.

ದಕ್ಷಿಣ ಭಾರತದ ಎಲ್ಲಾ ಪ್ರಸಿದ್ಧ ರಾಜಮನೆತನಗಳನ್ನು ಜಯಿಸಿದ ಮೇಲೆ ಗೋವಿಂದನು ಉತ್ತರ ಭಾರತದ ದಿಗ್ವಿಜಯನ್ನು ಕೈಗೊಂಡನು. ಮುಮ್ಮಡಿ ಗೋವಿಂದ ಉತ್ತರ ಭಾರತದ ದಿಗ್ವಿಜಯವು ಕ್ರಿ.ಶ ೭೯೬ ರಿಂದ ೮೦೦ ಮಧ್ಯದ ರೇಖೆಯೆಂದು ತಿಳಿದು ಬಂದಿದೆ. ಮಾಳವ ಮತ್ತು ಗುಜರಾತಿನ ಪ್ರಾಂತ್ಯಾಧಿಕಾರಿಯು ತನ್ನ ಕಿರಿಯ ಸಹೋದರನಾದ ೨ನೇ ಇಂದ್ರನು ಶತ್ರುಗಳ ಚಲನವಲನದ ಬಗ್ಗೆ ಎಚ್ಚರಿಕೆ ವಹಿಸುವಂತೆ ಏರ್ಪಾಟು ಮಾಡಿದನು. ವಿಂಧ್ಯ ಪ್ರದೇಶದಲ್ಲಿ ಆಯಾಕಟ್ಟಿನ ನೆಲೆಗಳಲ್ಲಿ ಸೈನ್ಯದ ತುಕಡಿಗಳನ್ನು ಸ್ಥಾಪಿಸಿದನು. ಎಲ್ಲ ಮುನ್ನಚ್ಚರಿಕೆ ಕ್ರಮಗಳನ್ನು ಪೂರ್ಣಗೊಳಿಸಿದ ನಂತರ ಸೈನ್ಯ ಸಮೇತನಾಗಿ ದಿಗ್ವಿಜಯ ಹೊರಟನು.

ಗೋವಿಂದನು ಉತ್ತರ ಭಾರತದ ದಿಗ್ವಿಜಯದಲ್ಲಿ ತೊಡಗಿದ್ದಾಗ ದಕ್ಷಿಣದ ರಾಜರುಗಳು ರಾಷ್ಟ್ರಕೂಟರ ಪ್ರಭಾವವನ್ನು ಕೊನೆಗಾಣಿಸಲು ಯತ್ನಿಸಿದರು. ಗೋವಿಂದನು ಸೇನೆ ಸಮೇತನಾಗಿ ಶತ್ರುಗಳ ಮೇಲೆ ಆಕ್ರಮಣ ನಡೆಸಿದನು. ವೆಂಗಿಯ ವಿಜಯಾದಿತ್ಯನನ್ನು ಸೋಲಿಸಿ ಪದಚ್ಯುತಗೊಳಿಸಿ ಅವನ ತಮ್ಮನಾದ ಭೀಮನನ್ನು ವೆಂಗಿಯ ರಾಜನಾಗಿ ನೇಮಿಸಿದನು. ಪಲ್ಲವರು ತಮ್ಮ ಸಾಮಂತರೊಡಗೂಡಿ ರಾಷ್ಟ್ರಕೂಟರನ್ನು ವಿರೋಧಿಸಿದರು. ಗೋವಿಂದನು ಪಲ್ಲವ, ಪಾಂಡ್ಯ ಮತ್ತು ಚೋಳ ಸೈನ್ಯಗಳನ್ನು ಸೋಲಿಸಿ ಕಂಚಿಯನ್ನು ಆಕ್ರಮಿಸಿಕೊಂಡನು. ಪಲ್ಲವರ ಬಿರುದಾದ ವೈರಮೇಘ ಎಂಬುವುದನ್ನು ತಾನೇ ಧರಿಸಿದನು. ಗೋವಿಂದನ ಕೀರ್ತಿಯನ್ನು ತಿಳಿದ ಸಿಂಹಳದ ರಾಜನು ಅವನ ಸ್ನೇಹವನ್ನು ಬಯಸಿ ಅನೇಕ ಅಮೂಲ್ಯ ವಸ್ತುಗಳನ್ನು ಅವನಿಗೆ ಕಾಣಿಕೆಯಾಗಿ ಕಳುಹಿಸಿದನು. ಅವುಗಳಲ್ಲಿ ಸಿಂಹಳದ ರಾಜನ ಮತ್ತು ಮಂತ್ರಿಯ ಪ್ರತಿಕೃತಿಗಳು ಇದ್ದವು. ಗೋವಿಂದನು ಅವುಗಳನ್ನು ಕಂಚಿಯ ಶಿವಾಲಯದಲ್ಲಿ ಸ್ಥಾಪಿಸಿದನು. ಕ್ರಿ.ಶ ೮೦೩ ರ ವೇಳೆಯಲ್ಲಿ ತನ್ನ ದಕ್ಷಿಣದ ದಿಗ್ವಿಜಯದಿಂದ ರಾಜಧಾನಿಗೆ ಹಿಂದುರಿಗಿ ತನ್ನ ಕೊನೆಯ ಕಾಲದವರೆಗೂ ಶಾಂತಿಯಿಂದ ರಾಜ್ಯವನ್ನಾಳಿದನು.

## ಅಮೋಘವರ್ಷ ನೃಪತುಂಗ (814–878)

ಗೋವಿಂದನ ಮರಣ ನಂತರ ಅವನ ಕುಮಾರ ಸರ್ವನು, ಅಮೋಘವರ್ಷ ನೃಪತುಂಗ ಎಂಬ ಹೆಸರಿನಿಂದ ಸಿಂಹಾಸನಾರೂಢನಾದನು. ಇವನು ಅಧಿಕಾರವಹಿಸಿದಾಗ ಕೇವಲ 14 ವರ್ಷದ ಬಾಲಕನಾಗಿದ್ದನು. ಆದ್ದರಿಂದ ಇವನು ಪ್ರಾಪ್ತವಯಸ್ಕನಾಗುವವರೆಗೂ ಚಿಕ್ಕಪ್ಪನ ಮಗನಾದ ಕಕ್ಕ ಸುವರ್ಣವರ್ಷನು ರಾಜ್ಯ ಸೂತ್ರಗಳನ್ನು ನಿರ್ವಹಿಸಿದನು. ಅಮೋಘವರ್ಷನು ಆಳ್ವಿಕೆಯ ಪೂರ್ವಾರ್ಧದಲ್ಲಿ ಎಡಬಿಡದೆ ಯುದ್ಧ ಕಾರ್ಯಾಚರಣೆಗಳು ನಡೆದು ರಾಷ್ಟ್ರಕೂಟರ ಪರಮಾಧಿಕಾರವು ನಿರಂತಕವಾಗಿ ಮುಂದುವರಿಯಲಾಗಲಿಲ್ಲ. ಆದರೆ ಉತ್ತಾರಾರ್ಧ ಕಾಲವು ಶಾಂತಿಯಿಂದ ಕೂಡಿದ್ದು ಸಾಹಿತ್ಯ ಮತ್ತು ಸಂಸ್ಕೃತಿಯ ಪುರೋಭಿವೃದ್ಧಿಗೆ ಸಹಕಾರಿಯಾಯಿತು.

ನೃಪತುಂಗನು ಅಧಿಕಾರ ವಹಿಸಿದ ನಂತರ 3 ವರ್ಷಗಳ ಕಾಲ ಇವನ ಅಧಿಕಾರಕ್ಕೆ ತೊಂದರೆಗಳು ಬರಲಿಲ್ಲ. ಅವೇಳೆಯಲ್ಲಿ ಸಾಮ್ರಾಜ್ಯದ ಸಾಮಂತರೂ ವಿರೋಧಿಗಳು ರಾಷ್ಟ್ರಕೂಟರ ಪ್ರಭಾವವನ್ನು ನಿರ್ನಾಮಗೊಳಿಸಲು ಸಿದ್ಧರಾದರು. ಗುಜರಾತಿನ ಕಕ್ಕ ಸುವರ್ಣವರ್ಷನು ಸೈನ್ಯ ಸಮೇತನಾಗಿ ಮುಂದುವರೆದು ನೃಪತುಂಗನ ವಿರೋಧಿಗಳನ್ನು ಸೋಲಿಸಿ ರಾಷ್ಟ್ರಕೂಟರ ಸಿಂಹಾಸನವನ್ನು ಮರಳಿ ಪಡೆದು ಕ್ರಿ.ಶ. 821ರಲ್ಲಿ ಅಮೋಘವರ್ಷನನ್ನು ಸಿಂಹಾಸನದಲ್ಲಿ ಸ್ಥಾಪಿಸಿದನು. ಸುವರ್ಣವರ್ಷನ ನಿಷ್ಠೆಯಿಂದಲೂ, ಸಾಹಸದಿಂದಲೂ ವಿರೋಧಿಗಳನ್ನಡಗಿಸಿ ಸಾಮ್ರಾಜ್ಯವನ್ನು ಕಂಟಕದಿಂದ ಪಾರುಮಾಡಿದನು. ಕ್ರಿ.ಶ. 830ರ ನಂತರ ಅಮೋಘವರ್ಷನು ತನ್ನ ದಳಪತಿಗಳ ನೆರವಿನಿಂದ ಶತ್ರುಗಳನ್ನು ನಿಗ್ರಹಿಸುವುದರಲ್ಲಿ ಜಯಶೀಲನಾದ. ಇವನು ದಕ್ಷಿಣದಲ್ಲಿ ಗಂಗರ ಪ್ರತಿರೋಧವನ್ನು ಎದುರಿಸಬೇಕಾಯಿತು. ಎರಡನೇ ಶಿವಮಾರನ ತರುವಾಯ ಆಳಿದ ಒಂದನೇ ರಾಚಮಲ್ಲ ಮತ್ತು ಅವನ ಮಗ ನೀತಿಮಾರ್ಗ ಇವರು ನಿರಂತರ ಯುದ್ಧದಲ್ಲಿ ತೊಡಗಿದರು. ನೃಪತುಂಗನ ಸಮರ್ಥ ದಂಡನಾಯಕನಾದ ಬಂಗೇಶನು ಗಂಗರನ್ನು ಸೋಲಿಸಿ ಇಂದಿನ ತುಮಕೂರು ಜಿಲ್ಲೆಯವರೆವಿಗೂ ಅವರ ರಾಜ್ಯವನ್ನು ಆಕ್ರಮಿಸಿದನು. ಆದರೆ ಚಕ್ರವರ್ತಿಯು ಅವನನ್ನು ಹಿಂದಕ್ಕೆ ಕರೆಯಿಸಿ ವೆಂಗಿ ಮಂಡಲದ ಮೇಲೆ ಯುದ್ಧಕ್ಕೆ ಕಳುಹಿಸುದುದ್ದರಿಂದ ಗಂಗರು ಪುನಃ ತಾವು ಕಳೆದುಕೊಂಡಿದ್ದ ರಾಜ್ಯವನ್ನು ವಶಪಡಿಸಿಕೊಂಡು ರಾಷ್ಟ್ರಕೂಟರ ಗಡಿಗಳನ್ನು ಮುತ್ತಿದ್ದರು. ರಾಷ್ಟ್ರಕೂಟರ ಸೈನ್ಯವನ್ನು ನೀತಿಮಾರ್ಗ ಎರೆಯಪ್ಪನ ಕ್ರಿ.ಶ 856ರಲ್ಲಿ ಕೋಲಾರ ಜಿಲ್ಲೆಯ ರಾಜರಮಡು ಎಂಬಲ್ಲಿ ಸಂಪೂರ್ಣವಾಗಿ ಸೋಲಿಸಿದನು. ನೃಪತುಂಗನು ಗಂಗರೊಡನೆ ಮೈತ್ರಿಯನ್ನು ಬಯಸಿ ತನ್ನ ಕುಮಾರಿಯಾದ ಚಂದ್ರೋಲಬ್ಬೆಯನ್ನು ನೀತಿಮಲ್ಲನ ಮಗನಾದ ಭೂತುಗನಿಗೆ ವಿವಾಹಮಾಡಿಕೊಟ್ಟನ್ನು. ಸುಮಾರು ಒಂದುನೂರು ವರ್ಷಗಳ ಕಾಲ ಈ ಎರಡು ಮನೆತನಗಳಗೂ ಇದ್ದ ಹಗೆತನವು ಕೊನೆಗೊಂಡು ಪರಸ್ಪರ ಬಾಂಧವ್ಯದಲ್ಲಿ ಪರ್ಯವಸನವಾಯಿತು.

ರಾಷ್ಟ್ರಕೂಟರಿಗೂ ವೆಂಗಿಚಾಳುಕ್ಯರಿಗೂ ಯುದ್ಧಗಳು ಎಡಬಿಡದೇ ನಡೆದವು. ಪ್ರಾರಂಭದಲ್ಲಿ ವಿಜಯಾದಿತ್ಯನು ಜಯಗಳಿಸಿದರೂ ಅವನು ರಾಷ್ಟ್ರಕೂಟ ಸೈನ್ಯಗಳಗೆ

ಮಣಿಯಬೇಕಾಯಿತು. ರಾಷ್ಟ್ರಕೂಟರು ಮತ್ತು ವೆಂಗಿ ಚಾಳುಕ್ಯರ ಧ್ರುವನು ಅಧಿಕಾರವಹಿಸಿದ ತರುವಾಯು ಮನೆತನಗಳ ಮಧ್ಯ ಏರ್ಪಟ್ಟಿದ್ದ ಕಲಹವು ಕೊನೆಗೊಂಡಿತ್ತು. ಆವೇಳೆಗೆ ಗೂರ್ಜರ ಪ್ರತಿಹಾರರು ತಮ್ಮ ಹಿಂದಿನ ಸೋಲಿಗೆ ರಾಷ್ಟ್ರಕೂಟರ ಮೇಲೆ ಸೇಡುತೀರಿಸಿಕೊಳ್ಳಲು ಪ್ರಯತ್ನಶೀಲರಾಗಿದ್ದರು. ನಾಗಭಟ್ಟನ ಉತ್ತರಾಧಿಕಾರಿಯಾದ ಒಂದನೇ ಭೋಜನು ರಾಷ್ಟ್ರಕೂಟರ ಗಡಿಗಳನ್ನು ಆಕ್ರಮಿಸಿದನು. ಆದರೆ ಧ್ರುವನು ರಾಷ್ಟ್ರಕೂಟರೊಡನೆ ಶಾಂತಿಯನ್ನು ಏರ್ಪಡಿಸಿಕೊಂಡ ಕೂಡಲೇ ಪ್ರತಿಹಾರರ ಎಣಿಕೆಯು ತಪ್ಪಿತ್ತು. ಅವರು ರಾಷ್ಟ್ರಕೂಟರ ಗಡಿಗಳಿಂದ ಹಿಂತಿರುಗಿದರು. ಈ ರೀತಿಯಾಗಿ ಅಧಿಕಾರ ವಹಿಸಿಕೊಂಡ ತರುವಾಯ ಸುಮಾರು 4 ದಶಲಕ್ಷಗಳ ಕಾಲ ಅಮೋಘವರ್ಷನ ಶತ್ರುಗಳೊಡನೆ ನಿರಂತರವಾಗಿ ಹೋರಾಟದಲ್ಲಿ ತೊಡಗಬೇಕಾಯಿತು.

ಅಮೋಘವರ್ಷ ನೃಪತುಂಗನ ಆಳ್ವಿಕೆಯು ಕನ್ನಡನಾಡಿನ ಚರಿತ್ರೆಯಲ್ಲಿ ಸಾಂಸ್ಕೃತಿಕ ದೃಷ್ಟಿಯಿಂದ ಒಂದು ಅಮೋಘವಾದ ಅಧ್ಯಾಯವಾಗಿದೆ. ಇವನ ಆಳ್ವಿಕೆಯು ಸೈನಿಕ ವಿಜಯಗಳಿಗಿಂತಲೂ ಮಿಗಿಲಾಗಿ ಧಾರ್ಮಿಕ ಹಾಗೂ ಸಾಹಿತ್ಯ ಪ್ರಗತಿಯಲ್ಲಿ ಒಂದು ಮಹತ್ವ ಪೂರ್ಣವಾದ ಕಾಲವಾಗಿದೆ.

## ಎರಡನೇ ಕೃಷ್ಣ (878–914)

ಅಮೋಘವರ್ಷನ ತರುವಾಯ ಅವನ ಮಗ ಕೃಷ್ಣನು ಅಧಿಕಾರ ವಹಿಸಿಕೊಂಡು 36 ವರ್ಷಗಳ ಕಾಲ ಆಳಿದನು. ಇವನು ಗೂರ್ಜರರ ಮತ್ತು ವೆಂಗಿ ಚಾಳುಕ್ಯರ ಪ್ರತಿರೋಧವನ್ನು ಸತತವಾಗಿ ಎದುರಿಸಬೇಕಾಯಿತು. ಗೂರ್ಜರ ರಾಜನಾದ ಭೋಜನು ಉಜ್ಜೈನಿಯನ್ನು ಹಾಗೂ ರಾಷ್ಟ್ರಕೂಟರ ಇತರ ಗಡಿ ಪ್ರದೇಶಗಳನ್ನು ಆಕ್ರಮಿಸಿದನು. ಎರಡನೇ ಕೃಷ್ಣನ ಸೈನ್ಯವು ನರ್ಮದಾ ನದಿ ತೀರದಲ್ಲಿ ಭೋಜನಿಂದ ಸೋಲನ್ನಭವಿಸಿತು. ಗುಜರಾತಿನ ಎರಡನೇ ಕೃಷ್ಣನು ಇವನ ಸಹಾಯಕ್ಕೆ ಧಾವಿಸಿದನು. ಅವನು ಭೋಜನನ್ನು ಸೋಲಿಸಿ ಉಜ್ಜೈನಿಯನ್ನು ವಶಪಡಿಸಿಕೊಂಡು ರಾಷ್ಟ್ರಕೂಟರ ಮುಖ್ಯ ಶಾಖೆಯ ಗೌರವವನ್ನೂ ಗಡಿಗಳನ್ನೂ ಸಂರಕ್ಷಿಸಿದನು. ಅದೇ ವೇಳೆಗೆ ವೆಂಗಿ ಚಾಳುಕ್ಯರ ವಿನಯಾದಿತ್ಯನು ರಾಷ್ಟ್ರಕೂಟರ

ಗಡಿಗಳನ್ನು ಆಕ್ರಮಿಸಿದನು. ಅವನು ಬೀರೂರಿನವರೆವಿಗೂ ದಂಡೆಯಾತ್ರೆಯನ್ನು ಮುಂದುವರಿಸಿದನು ಅವನೊಡನೆ ನಡೆದ ಯುದ್ಧಗಳಲ್ಲಿ ಕೃಷ್ಣನು ಪರಾಭವಗೊಂಡನು.

ದಕ್ಷಿಣದಲ್ಲಿ ಪ್ರಾಬಲ್ಯಕ್ಕೆ ಬರುತ್ತಿದ್ದ ಚೋಳರನೊಡನೆ ಕೃಷ್ಣನು ವಿವಾಹ ಸಂಬಂಧ ಬೆಳೆಸಿದನು. ತನ್ನ ಮಗಳನ್ನು ಒಂದನೇ ಆದಿತ್ಯನಿಗೆ ಕೊಟ್ಟು ಮದುವೆ ಮಾಡಿದನು. ಆದರೆ ಆದಿತ್ಯನು ತರುವಾಯ ಅವನ ಮತ್ತೋರ್ವ ರಾಣಿಯ ಮಗನಾದ ಪಾರಂತಕನು ಸಿಂಹಾಸನಕ್ಕೆ ಬಂದನು. ಕೃಷ್ಣನು ತನ್ನ ಮೊಮ್ಮಗನಾದ ಕನ್ನರನ್ನನ್ನು ಅಧಿಕಾರಕ್ಕೆ ತರಲು ಹೋರಾಡಿ ವಿಫಲನಾದನು. ಆದ್ದರಿಂದ ಈ ಸಂತತಿಗಳ ನಡುವಿನ ಮೈತ್ರಿಯು ಯಶಸ್ವಿಯಾಗಲಿಲ್ಲ. ಕೃಷ್ಣನಿಗೆ ಜಗತ್ತುಂಗ ಎಂಬ ಮಗನಿದ್ದನು.

## ಮೂರನೇ ಇಂದ್ರ (ಕ್ರಿ.ಶ 941 ರಿಂದ 928)

ಅಧಿಕಾರ ರೂಢನಾದ ಕೂಡಲೇ ಗೂರ್ಜರ ಪ್ರತೀಹಾರ ಸಾಮಂತ ಉಪೇಂದ್ರನ ಮೇಲೆ ದಂಡೆತ್ತಿ ಹೋಗಿ ಅವನನ್ನು ಸೋಲಿಸಿದನು. ಆ ವೇಳೆಗೆ ಗೂರ್ಜರ ಪ್ರತೀಹಾರ ಮನೆತನವು ದುರ್ಬಲವಾಗಿತ್ತು. ಪ್ರತಿಹಾರರ ಒಂದನೇ ಭೋಜನ ನಂತರ ಮಹೇಂದ್ರವರ್ಮನು ಸ್ವಲ್ಪ ಕಾಲ ಆಳಿದನು. ಅವನ ತರುವಾಯ ಮಹೇಂದ್ರಪಾಲನ ಮಕ್ಕಳಾದ ಎರಡನೇ ಭೋಜ ಮತ್ತು ಮಹಿಪಾಲರು ಸಿಂಹಾಸನಕ್ಕಾಗಿ ಅಂತರ್ಯುದ್ಧಗಳಲ್ಲಿ ತೊಡಗಿದ್ದರು. ವೆಂಗಿ ಚಾಳುಕ್ಯ ಮನೆತನವು ಎರಡನೇ ಕೃಷ್ಣನ ಕಾಲದಿಂದಲೂ ಸ್ವಾತಂತ್ರವಾಗಿತ್ತು. ಚಾಳುಕ್ಯ ಭೀಮನ ತರುವಾಯ ಅಲ್ಲಿ ಸಿಂಹಾಸನಕ್ಕಾಗಿ ಒಳ ಜಗಳಗಳೂ ನಡೆದವು. ಆದರೆ ಮೂರನೇ ಇಂದ್ರನು ಅಲ್ಲಿನ ರಾಜಕೀಯದಲ್ಲಿ ಆಸಕ್ತಿ ತೋರಲಿಲ್ಲ. ಇವನ ತರುವಾಯ ಇವನ ಹಿರಿಯ ಮಗನಾದ ಅಮೋಘವರ್ಷನು ರಾಜನಾದನು.

## ಎರಡನೇ ಅಮೋಘವರ್ಷ (ಕ್ರಿ.ಶ 929–930)

ಇವನು ಕೇವಲ ಎರಡು ವರ್ಷಗಳ ಕಾಲ ಆಳಿದನು. ಅಮೋಘವರ್ಷ ಮತ್ತು ಇವನ ಕಿರಿಯ ಸಹೋದರನಾದ ಗೋವಿಂದನಿಗೂ ಅಧಿಕಾರಕ್ಕಾಗಿ ಕಚ್ಚಾಟಗಳು ಪ್ರಾರಂಭವಾದವು. ಇವನ ಕ್ರಿ.ಶ ೯೩೦ ರಲ್ಲಿ ಮರಣ ಹೊಂದಿದನು.

## ನಾಲ್ಕನೇ ಗೋವಿಂದ (ಕ್ರಿ.ಶ 931 ರಿಂದ 937)

ಎರಡನೇ ಅಮೋಘವರ್ಷನ ತರುವಾಯ ಇವನ ತಮ್ಮನಾದ ನಾಲ್ಕನೇ ಗೋಂವಿದನು ವಿಜೃಭಣೆಯಿಂದ ಪಟ್ಟಕ್ಕೆ ಬಂದ ಮಹೋತ್ಸವನ್ನು ನೆರವೇರಿಸಿಕೊಂಡನು. ಕೀರ್ತಿಗಳಿಸಲು ಭಂಡಾರವನ್ನು ಬರಿದುಮಾಡಿದನು. ಇವನಿಗೆ ಅಧಿಕಾರ ವರ್ಗದ ಅಥವಾ ಸಾಮಂತರ ಅನುರಾಗ ಗಳಿಸಲಾಗಲಿಲ್ಲ. ಗೋವಿಂದನು ರಣರಂಗದಲ್ಲಿ ಸೋತು ಹೋಡಿಹೋಗಿ ತಲೆಮರೆಸಿಕೊಂಡನು ಆನಂತರ ಅಮೋಘವರ್ಷನು ರಾಜನಾದನು.

## 3ನೇ ಅಮೋಘವರ್ಷ (ಕ್ರಿ.ಶ 936 ರಿಂದ 939)

ಜಗತ್ತುಂಗನ ಕಿರಿಯ ಮಗನಾದ ಅಮೋಘವರ್ಷ ಪಟ್ಟಕ್ಕೆ ಬರುವ ವೇಳೆಗೆ ವಯೋವೃದ್ಧನಾಗಿದ್ದನು. ತ್ರಿಪುರದ ರಾಜಕುಮಾರಿ ಕುಂಧದೇವಿ ಎಂಬುವಳು ಇವನ ರಾಣಿಯಾಗಿದ್ದಳು. ಅಮೋಘವರ್ಷನಿಗೆ ಕೃಷ್ಣ, ಖೊಟ್ಟಿಗೆ, ಜಗತ್ತುಂಗ ಮತ್ತು ನಿರುಪಮಾ ಎಂಬ ನಾಲ್ವರು ಮಕ್ಕಳಿದ್ದರು. ಇವನ ಪುತ್ರಿಯಾದ ರೇವಕನಿಮ್ಮಡಿಯನ್ನು ತಲಕಾಡಿನ ಭೂತುಗನು ವರಿಸಿದನು. ಅಮೋಘವರ್ಷನು ವೃದ್ಧಾಪ್ಯ ಹಾಗೂ ಆಧ್ಯಾತ್ಮಿಕ ಸ್ವಭಾವನಾಗಿದುದ್ದರಿಂದ ಆಡಳಿತದ ಜವಾಬ್ದಾರಿಯನ್ನೆಲ್ಲ ಹಿರಿಯ ಮಗನಾದ ಕೃಷ್ಣನು ವಹಿಸಿಕೊಂಡಿದ್ದನು. ಇವನು ಕೇವಲ ಮೂರು ವರ್ಷದ ರಾಜನಾಗಿದ್ದು ಮೂರನೇ ಅಮೋಘವರ್ಷನು ಕ್ರಿ.ಶ ೯೩೯ರಲ್ಲಿ ಮರಣ ಹೊಂದಿದನು.

## ಮೂರನೇ ಕೃಷ್ಣ (ಕ್ರಿ.ಶ 936 – 967)

ಅಮೋಘವರ್ಷನ ಹಿರಿಯ ಮಗನು ಯುವರಾಜನು ಆಗಿದ್ದ ಕೃಷ್ಣನು ಕ್ರಿ.ಶ ೯೩೯ರಲ್ಲಿ ಮೂರನೇ ಕೃಷ್ಣ ಎಂಬ ಹೆಸರಿನಿಂದ ಚಕ್ರವರ್ತಿಯಾದನು. ಇವನು ರಾಷ್ಟ್ರಕೂಟ ಸಂತತಿಯ ಸಮರ್ಥ ಚಕ್ರವರ್ತಿಗಳಲ್ಲಿ ಕೊನೆಯವನು. ತನ್ನ ಪರಾಕ್ರಮದಿಂದ ರಾಷ್ಟ್ರಕೂಟ ಸಂತತಿಯ ಪ್ರಚಂಡ ಶಕ್ತಿ ಸಾಮರ್ಥ್ಯವನ್ನು ಪುನಃ ಪ್ರದರ್ಶಿಸಿದನು. ಇವನು ದಕ್ಷ ಆಡಳಿತಗಾರನಾಗಿದ್ದು, ಕವಿಗಳಿಗೂ, ವಿದ್ವಾಂಸರಿಗೂ ವಿಶೇಷ ಪ್ರೋತ್ಸಾಹ ನೀಡಿದನು. ಇವನನ್ನು ಕನ್ನರದೇವನೆಂದು ಹೆಸರಿಸಲಾಗಿದೆ. ಇವನು ಅಕಾಲವರ್ಷ ಎಂಬ ಬಿರುದನ್ನು ಪಡೆದಿದ್ದನು. ಕೃಷ್ಣನಿಗೆ ಒಬ್ಬನೇ

ಪುತ್ರರಿದ್ದು ಅವನು ತಂದೆಗಿಂತ ಮೊದಲೆ ಮರಣ ಹೊಂದಿದನು. ಮೊಮ್ಮಗ ಇನ್ನು ಬಾಲಕನಾಗಿದ್ದರಿಂದ ಈತನ ತರುವಾಯ ಇವನ ತಮ್ಮನಾದ ಖೊಟ್ಟಿಗನು ಅಧಿಕಾರಕ್ಕೆ ಬಂದನು. ರಾಷ್ಟ್ರಕೂಟ ಸಂತತಿಯ ಕೊನೆಯ ಸಾಮಂತ ಸಾಮ್ರಾಟ ಮುಮ್ಮಡಿ ಕೃಷ್ಣನು ಕ್ರಿ.ಶ 947ರಲ್ಲಿ ಮರಣ ಹೊಂದಿದನು.

## ಖೊಟ್ಟಿಗ (ಕ್ರಿ.ಶ 967–972)

ಮುಮ್ಮಡಿ ಕೃಷ್ಣನ ತರುವಾಯ ಅವನ ಮೊಮ್ಮಗನಾದ ಇಂದ್ರನು ಇನ್ನು ಬಾಲಕನಾದುದ್ದರಿಂದ ಅವನ ಸಹೋದರನಾದ ಖೊಟ್ಟಿಗನು ರಾಜನಾದನು. ಇವನು ದುರ್ಬಲ ರಾಜನಾಗಿದ್ದು ವಿಶಾಲ ಸಾಮ್ರಾಜ್ಯದ ಆಡಳಿತ ಸೂತ್ರವನ್ನು ದಕ್ಷತೆಯಿಂದ ನಿರ್ವಹಿಸಲು ಸಾಧ್ಯವಾಗಲಿಲ್ಲ. ಸಾಮ್ರಾಜ್ಯದಿಂದ ಶತ್ರುಗಳು ಸೇಡು ತೀರಿಸಿಕೊಳ್ಳಲು ಸನ್ನದ್ಧರಾದರು. ಸಾಮಂತರು ಸ್ವತಂತ್ರರಾಗಲೂ ಸಮಯ ಕಾಯುತ್ತಿದ್ದರು. ಮುಮ್ಮಡಿ ಕೃಷ್ಣನಿಂದ ಪರಾಜಿತನಾಗಿದ್ದ ಪಾರಮಾರಸೀಯಕ ಹರ್ಷನು ಕ್ರಿ.ಶ 972 ರಿಂದ ರಾಷ್ಟ್ರಕೂಟರ ರಾಜಧಾನಿಯನ್ನು ಮುತ್ತಿದನು. ಸಾಮಂತರು ಖೊಟ್ಟಿಗನ ಸಹಾಯಕ್ಕೆ ಧಾವಿಸಲಿಲ್ಲ. ರಾಜಧಾನಿಯು ಶತ್ರುವಿನ ವಶವಾಯಿತು. ಖೊಟ್ಟಿಗನು ಯುದ್ಧದಲ್ಲಿ ಮಡಿದನು. ಈ ಧಾರುಣ ವಾರ್ತೆಯು ತಿಳಿದ ಕೂಡಲೇ ಗಂಗವಾಡಿಯ ಗಂಗರ ಪ್ರಭು ಮಾರಸಿಂಹನು ರಾಷ್ಟ್ರಕೂಟರ ಸಂತತಿಯ ಸಹಾಯಕ್ಕೆ ಧಾವಿಸಿದನು. ಮಾರಸಿಂಹನು ಸೀಯಾಕ ಹರ್ಷನನ್ನು ಸೋಲಿಸಿ ರಾಜಧಾನಿಯಿಂದ ಓಡಿಸುದ್ದಲ್ಲದೆ ವಿಂಧ್ಯ ಪರ್ವತದ ತಪ್ಪಲಿನವರೆವಿಗೂ ಅವನನ್ನು ಬೆನ್ನಟ್ಟಿದ್ದನು. ಅವನು ಸೀಯಾಕನ ಪರವಾಗಿದ್ದ ಅನೇಕ ಸಾಮಂತರನ್ನು ಶಿಕ್ಷಿಸಿ ರಾಷ್ಟ್ರಕೂಟ ರಾಜಧಾನಿಗೆ ಹಿಂತಿರುಗಿದನು.

## ಎರಡನೇ ಕಕ್ಕ ಅಥವಾ ನಾಲ್ಕನೇ ಇಂದ್ರ (ಕ್ರಿ.ಶ 973)

ಖೊಟ್ಟಿಗೆನ ಮರಣದಿಂದ ರಾಜಧಾನಿಯಲ್ಲಿನ ಅರಾಜಕತೆಯೂ ಸಿಂಹಾಸನಕ್ಕಾಗಿ ಘರ್ಷಣೆಗಳು ನಡೆದವು. ಮಾರಸಿಂಹನು ತನ್ನ ಮಗಳ ಮಗನು ಹಾಗೂ ಮುಮ್ಮಡಿ ಕೃಷ್ಣನ ಮಗಳಾದ ಇಂದ್ರನನ್ನು ರಾಜನೆಂದು ಸಾರಿದಳು. ಆದರೆ ಮುಮ್ಮಡಿ ಕೃಷ್ಣನ ಮತ್ತೊಬ್ಬ

ಸಹೋದರ ನಿರುಪಮಾನ ಮಗನಾದ ಕಕ್ಕನು ತಾನೇ ಸಾಮ್ರಾಟನೆಂದು ಕ್ರಿ.ಶ 973 ರಲ್ಲಿ ಘೋಷಿಸಿಕೊಂಡನು. ರಾಷ್ಟ್ರಕೂಟರ ರಾಜಧಾನಿಯ, ಸಾಮ್ರಾಜ್ಯವು ಗೊಂದಲ ಮತ್ತು ಅಶಾಂತಿಯ ಬೀಡಾದವು. ಇಂತಹ ಗೊಂದಲಮಯ ಸಮಯದಲ್ಲಿ ಎರಡನೇ ತೈಲಪನು ಪ್ರಬಲನಾಗಿ ರಾಷ್ಟ್ರಕೂಟರ ಸಾರ್ವಭೌಮತ್ವವನ್ನು ಕೊನಗಾಣಿಸಿ ಕಲ್ಯಾಣ ಚಾಳುಕ್ಯರ ಆಡಳಿತವನ್ನು ಸ್ಥಾಪಿಸಿದನು. ತೈಲಪನಿಂದ ಪರಾಜಿತನಾದ ಕಕ್ಕನು ತಲೆಮರಿಸಿಕೊಂಡನು. ನಾಲ್ಕನೇ ಇಂದ್ರನು ಗಂಗ ರಾಜ್ಯಕ್ಕೆ ಬಂದು ಶ್ರವಣಬೆಳಗೊಳದಲ್ಲಿ ಹಲವು ವರ್ಷಗಳ ಕಾಲ ಬದುಕಿದ್ದು ಕ್ರಿ.ಶ 975ರಲ್ಲಿ ಸಲ್ಲೇಖನ ವಿಧಿಯಿಂದ ಹಸುನೀಗಿದನು. ಎರಡು ಶತಮಾನಗಳಂದ ಮಿಗಿಲಾಗಿ ಪ್ರತಾಪ ಮತ್ತು ವೈಭವದಿಂದ ಕರ್ನಾಟಕದ ಕೀರ್ತಿಪತಾಕೆಯನ್ನು ಮೆರೆಸಿದ ರಾಷ್ಟ್ರಕೂಟ ಸಾರ್ವಭೌಮ ಮನೆತನವು ಕೊನೆಗೊಂಡಿತ್ತು.

**ಹೊಯ್ಸಳರು:**

ಕರ್ನಾಟಕದ ಇತಿಹಾಸವನ್ನು ಅವಲೋಕಿಸಿದಾಗ ಕಲ್ಯಾಣದ ಚಾಲುಕ್ಯರ ಕಾಲ ಆರ್ಥಿಕ ಹಾಗೂ ವ್ಯವಸಯ ಅಭಿವೃದ್ಧಿಯ ಅತ್ಯಂತ ಮಹತ್ವದ ಕಾಲವಾಗಿ ಕಂಡುಬರುತ್ತದೆ. ಈ ಕಾಲಘಟ್ಟದಲ್ಲಿಯೇ ಅಂದರೆ ಕಲ್ಯಾಣ ಚಾಲುಕ್ಯರು ಪುರೋಭಿವೃದ್ಧಿಗೆ ಬಂದ ಕೆಲ ದಿನಗಳ ನಂತರ ದಕ್ಷಿಣದಲ್ಲಿ ಹೊಯ್ಸಳರು ಪ್ರಬಲರಾದರು, ಸಳನಿಂದ ಪ್ರಾರಂಭವಾದ ಹೊಯ್ಸಳ ಮನೆತನ ಗಂಗವಾಡಿಯ ಬಹುತೇಕ ಪ್ರದೇಶಗಳನ್ನು ಚೋಳರ ವಿರುದ್ಧದ ವಿಜಯದ ನಂತರ ತನ್ನದಾಗಿಸಿಕೊಂಡಿತ್ತು. ಚೋಳರಿಗೂ ಹೊಯ್ಸಳೆರಿಗೂ ಗಂಗವಾಡಿಯ ಕುರಿತಾದ ಯುದ್ಧಗಳು ಹೊಯ್ಸಳ ಬದಲಾಗಿ ವಿಷ್ಣುವರ್ಧನನ ಕಾಲದಲ್ಲಿಯೇ ಪ್ರಾರಂಭವಾಗಲಿಲ್ಲ. ಇದಕ್ಕೆ ಬಲದಾಗಿ ಗಂಗರು ಚೋಳರಿಗೆ ಅಧೀನವಾದ ಕೆಲವೇ ವರ್ಷಗಳ ತರುವಾಯ ಅಂದರೆ ಕ್ರಿ.ಶ 1006ರಲ್ಲಿ ಹೊಯ್ಸಳ ವಂಶಸ್ಥರು ಚೋಳರ ಮಾಂಡಲಿಕ ಅಪ್ರಮೇಯಾನ ವಿರುದ್ಧ ಈ ಪ್ರದೇಶದ ಪ್ರಭುತ್ವಕ್ಕಾಗಿ ಹೋರಾಡಿದುದನ್ನು ಕಲಿಯೂರಿನನ ಶಾಸನ ಖಚಿತ ಪಡಿಸುತ್ತದೆ. ಅಂದರೆ ಗಂಗರ ಸಹಾಯಕರಾಗಿದ್ದ ಅಥವಾ ಗಂಗರ ಸಮಕಾಲೀನರಾಗಿದ್ದ ಕರ್ನಾಟಕದ ಇತರ ಸಣ್ಣ ಮನೆತನಗಳು ಚೋಳರನ್ನು ಗಂಗವಾಡಿಯಿಂದ ಹೊರಗೋಡಿಸಲು ಪ್ರಯತ್ನಿಸಿದರಾದರೂ ವಿಫಲರಾದರು. ಹೊಯ್ಸಳರು

ವಿನಯಾದಿತ್ಯ, ಯರಯಂಗ, ಒಂದನೇ ಬಲ್ಲಾಳನ ಕಾಲದಲ್ಲಿ ಕಲ್ಯಾಣದ ಚಾಲುಕ್ಯರ ನಿಷ್ಠಾವಂತ ಮಾಂಡಲಿಕರಾಗಿ 6ನೇ ವಿಕ್ರಮಾದಿತ್ಯನ ಎಲ್ಲಾ ದಕ್ಷಿಣದ ದಂಡೆಯಾತ್ರೆಗಳಲ್ಲಿ ಸಹಕರಿಸಿದ್ದರು. ವಿಷ್ಣುವರ್ಧನನು ಇದಕ್ಕೆ ಹೊರತಾಗಲಿಲ್ಲ ತನ್ನ ಸ್ವಾತಂತ್ರ್ಯಕ್ಕಾಗಿ ಪ್ರಯತ್ನಿಸಿದರಾದರು. 6ನೇ ವಿಕ್ರಮಾದಿತ್ಯನಿಂದ ಸೋತು ಆತನ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳಬೇಕಾಯಿತು. ಹೀಗಾಗಿ 6ನೇ ವಿಕ್ರಮಾದಿತ್ಯನ ಮರಣದವರೆಗೆ ಹೊಯ್ಸಳರು ಕಲ್ಯಾಣದ ಚಾಲುಕ್ಯರ ಸಾಮಂತರಾಗಿಯೇ ಮುಂದುವರಿದರು. ಹೀಗಾಗಿ ಹೊಯ್ಸಳರ ಪ್ರಾರಂಭದ ಕಾಲಘಟ್ಟವನ್ನು ಕಲ್ಯಾಣದ ಚಾಲುಕ್ಯರ ಕಾಲಘಟ್ಟದ ಇತಿಹಾಸದೊಂದಿಗೆ ಅಧ್ಯಯನ ಮಾಡಬೇಕಾಗುತ್ತದೆ. 2ನೇ ಬಲ್ಲಾಳನ ಕಾಲದಲ್ಲಿ ಹೊಯ್ಸಳರು ಸ್ವಾತಂತ್ರ್ಯರಾದರೇ ಹೊರತು ಅದರ ಪೂರ್ವದಲ್ಲಿ ಅಲ್ಲ. ಆದರೂ ದಕ್ಷಿಣ ಕರ್ನಾಟಕ ಈ ಪ್ರದೇಶಗಳು ಬಹುತೇಕ ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿದ್ದವೆಂದು ಹೇಳಬಹುದು.

ಹೊಯ್ಸಳ ಸಾಮ್ರಾಜ್ಯವು ಕ್ರಿ.ಶ.1000 ದಿಂದ 1346ರವರೆಗೆ ಸುಮಾರು 350 ವರ್ಷಗಳ ಕಾಲ ಸುಧೀರ್ಘವಾಗಿ ದಕ್ಷಿಣ ಭಾರತದಲ್ಲಿ ರಾಜ್ಯವನ್ನಾಳಿದ ಪ್ರಮುಖ ರಾಜವಂಶಗಳಲ್ಲಿ ಇದು ಸಹ ಒಂದಾಗಿದೆ.[17] ಇವರು ಈಗಿನ ಚಿಕ್ಕಮಗಳೂರು ಜಿಲ್ಲೆಯ ಮೂಡುಗೆರೆ ತಾಲ್ಲೂಕಿಗೆ ಸೇರಿದ ಶಶಕಪುರ (ಶಶಪುರ) ಅಥವಾ ಸೊಸೆವೂರು ಎಂಬ (ಈಗ ಅಂಗಡಿ ಎಂಬ ಹೆಸರಿನಿಂದ ಕರೆಯಲ್ಪಡುವ ಗ್ರಾಮ) ಒಂದು ಸಣ್ಣ ಪಾಳೇಯದಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸಿ ಅಧಿಕಾರ ನಡೆಸಲು ಪ್ರಾರಂಭಿಸಿದರು. ತಮ್ಮ ರಾಜ್ಯವನ್ನು ಸ್ವಲ್ಪ ಸ್ವಲ್ಪವಾಗಿ ವಿಸ್ತರಿಸುತ್ತಲೇ ಮುಂದುವರೆದ ಇವರು ದಕ್ಷಿಣ ಭಾರತದ ಕರ್ನಾಟಕ, ಆಂಧ್ರಪ್ರದೇಶ ಮತ್ತು ತಮಿಳುನಾಡುಗಳಲ್ಲಿನ ಬಹುಭಾಗವನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರು. ಇವರ ರಾಜ್ಯವು ತುಂಗಭದ್ರಾ ಮತ್ತು ಕಾವೇರಿ ಪ್ರದೇಶದಲ್ಲಿ ಆಳ್ವಿಕೆಯು ಸುಮಾರು ಮೂರೂವರೆ ಶತಮಾನಗಳವರೆಗೆ ಮುಂದುವರೆಯಿತು.

ಹೊಯ್ಸಳರ ಆದಿ ಮತ್ತು ಅಂತ್ಯ ಇವೆರಡೂ ಮಂಜಿನಿಂದ ಆವೃತ್ತವಾದಂತೆ ಅಸ್ಪಷ್ಟವಾಗಿದೆ. ಆದರೆ ಇವರ ಮೂಲವನ್ನು ಮಂಜಿನಿಂದ ಎರಡು ಪ್ರಮುಖವಾದ ಘಟನೆಗಳಿಂದ ಗುರ್ತಿಸಬಹುದಾಗಿದೆ. ಅವುಗಳಲ್ಲಿ ಒಂದು ಘಟನೆಯು ಕಾಲ್ಪನಿಕ ಅಥವಾ

ಕಟ್ಟುಕಥೆಯ ಸ್ವರೂಪದ್ದಾಗಿದೆ. ಮತ್ತೊಂದು ಐತಿಹಾಸಿಕ ಸ್ವರೂಪದ್ದಾಗಿದೆ. ಪ್ರಚಲಿತದಲ್ಲಿರುವ ಒಂದು ದಂತ ಕಥೆಯ ಪ್ರಕಾರ ಸಳನು ಹುಲಿಯನ್ನು ಹೊಡೆದು ಕೊಂದುದಕ್ಕೆ ಸಂಬಂಧಿಸಿದೆ. ಮತ್ತೊಂದು ಕಥೆಯು ಐತಿಹಾಸಿಕ ಸ್ವರೂಪದಾಗಿದ್ದು ಗೌರವಕ್ಕೆ ಪಾತ್ರನಾದ ಒಬ್ಬ ರಾಜನು ಮಧುರೆ ಸಮೀಪದಲ್ಲಿ 'ಕಬ್ಬಮ್' ಎಂಬ ಸ್ಥಳದಲ್ಲಿ ಒಬ್ಬ ಮುಸಲ್ಮಾನ ದೊರೆಯೊಡನೆ ನಡೆದ ಕದನದಲ್ಲಿ ಮೃತನಾದ ಘಟನೆಗೆ ಸಂಬಂಧಿಸಿದೆ.

ಕಾಲ್ಪನಿಕ ಕಥೆಯು ಹೊಯ್ಸಳರ ಆಳ್ವಿಕೆಯ ಆದಿಗೆ ಸಂಬಂಧಿಸಿದಂತೆ ಕಬ್ಬಮ್ ಕದನವು ಹೊಯ್ಸಳರ ಆಳ್ವಿಕೆಯ ಅಂತ್ಯಕ್ಕೆ ಸಂಬಂಧಿಸಿದ್ದು, ಹುಲಿಯನ್ನು ಕೊಂದನೆಂದು ಪ್ರಸಿದ್ಧಿವಾಗಿರುವ ಯುವಕನ ಹೆಸರು "ಸಳ" ಎಂದೂ ಅವನೇ ಹೊಯ್ಸಳ ಆಳ್ವಿಕೆಯ ಮೂಲ ಪುರುಷ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ.

ಈ ಸಂತತಿಯ ಸ್ಥಾಪಕನಾದ ಹೊಯ್ಸಳನು ಕಾಲ್ಪನಿಕ ವ್ಯಕ್ತಿಯಾಗಿರಬೇಕೆಂದು ಹಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಕ್ರಿ.ಶ 10ನೇ ಶತಮಾನದ ಕೊನೆಯ ಭಾಗದಿಂದ ಹೊಯ್ಸಳ ಎಂಬ ಹೆಸರು ಹಲವಾರು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಹೊಯ್ಸಳ ಮಾರುಗ ಎಂಬುವವನು ಗಂಗರೊಂದಿಗೆ ಸೇರಿ ನೊಳಂಬರಾಜನನ್ನು ಸೋಲಿಸಿದ ಸಂಗತಿಯು ಇದೇ ಬಗೆಯ ಶಾಸನದಲ್ಲಿ ಉಲ್ಲೇಖವಾಗಿದೆ. ಇದರ ಹಿನ್ನೆಲೆಯಲ್ಲಿ ಹೇಳುವುದಾದರೆ ಹೊಯ್ಸಳರು ಗಂಗರ ಮಾಂಡಲೀಕರಾಗಿ ಮಲೆನಾಡಿನಲ್ಲಿ ಅಸ್ತಿತ್ವಕ್ಕೆ ಬಂದು ಗಂಗರ ಬಿರುದುಗಳನ್ನು ಹೊಂದಿದ್ದರು. ಈ ಸಂತತಿಯ ಸ್ಥಾಪಕನಾದ ಸಳನ ಶಾಸನಗಳಾವುವು ದೊರೆತಿಲ್ಲ. ಆದರೆ ಸಳನು ಐತಿಹಾಸಿಕ ವ್ಯಕ್ತಿ ಎಂಬುವುದು ನಿರ್ವಿವಾದವಾದ ಸಂಗತಿ ಅವನು 10ನೇ ಶತಮಾನದ ಕೊನೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದು ಕ್ರಿ.ಶ 1006ರವರೆಗೂ ಆಳ್ವಿಕೆ ನಡೆಸಿದನೆಂದು ತಿಳಿದುಬರುತ್ತದೆ. ಕ್ರಿ.ಶ 1006ರ ಟಿ.ನರಸೀಪುರದ ಕಲಿಯೂರಿನ ಶಾಸನದಲ್ಲಿ ಗಂಗರ ಪುನರುತ್ಥಾನಕ್ಕೆ ಹೊಯ್ಸಳರು ಮತ್ತು ಗಂಗರ ಇತರ ಮಾಂಡಲಿಕರು ಯುದ್ಧಮಾಡಿದುದ್ದನ್ನು ಮತ್ತು ಯುದ್ಧದಲ್ಲಿ ಕರ್ನಾಟಕದ ಪಡೆ ಸೋಲು ಅನುಭವಿಸಿದ್ದನ್ನು ದಾಖಲಿಸಲಾಗಿದೆ. ಇದೆಲ್ಲವೂ ಹೊಯ್ಸಳ ಸಾಮ್ರಾಜ್ಯ ಸ್ಥಾಪಕ

ಸಳನ ಆಡಳಿತಾವಧಿಯಲ್ಲಿ ಜರುಗಿತು. ಈತನ ನಂತರ ನೃಪಕಾಮನು ಹೊಯ್ಸಳ ದೊರೆಯಾದನು.

## ಒಂದನೇ ವಿನಯಾದಿತ್ಯ

ಹೊಯ್ಸಳರ ತರುವಾಯ ಒಂದನೇ ವಿನಯಾದಿತ್ಯನು ರಾಜನಾದನು. ಇವನು ಹೊಯ್ಸಳ ಮತ್ತು ಅವನ ಪತ್ನಿ ಭೂಮಿದೇವಿಯರ ಮಗ. ವಿನಯಾದಿತ್ಯನು ಕ್ರಿ.ಶ 1022 ವರೆಗೂ ಆಳಿದನು. ಇವನ ಆಳ್ವಿಕೆಯ ಪ್ರಾರಂಭದಲ್ಲಿ ಹೊಯ್ಸಳರಿಗೂ ಮತ್ತು ಚೋಳರಿಗೂ ಘರ್ಷಣೆಗಳು ನಡೆದವು ಎಂದು ಶಾಸನಗಳಿಂದ ತಿಳಿದುಬರುತ್ತದೆ.

## ನೃಪಕಾಮ

ಒಂದನೇ ವಿನಯಾದಿತ್ಯನ ಮಗನಾದ ನೃಪಕಾಮನು ತನ್ನ ತಂದೆಯ ಮರಣ ನಂತರ ಅಧಿಕಾರಕ್ಕೆ ಬಂದನು. ಇವನು ಕ್ರಿ.ಶ 1047ರವರೆವಿಗೂ ಆಳ್ವಿಕೆ ನಡೆಸಿದನು. ನೃಪಕಾಮನನ್ನು 'ಕಾಮನೃಪ' ಎಂದು ಹಲವು ಶಾಸನಗಳಲ್ಲಿ ಹೆಸರಿಸಲಾಗಿದೆ. ಅಧಿಕಾರಕ್ಕೆ ಬಂದ ನಂತರ ರಾಜ್ಯ ವಿಸ್ತರಣೆಯಲ್ಲಿ ತೊಡಗಿದನು. ಮೊದಲಿಗೆ ಅವನು ಚೋಳ ಸಾಮಂತರಾಗಿದ್ದ ಚೆಂಗಾಳ್ವರ ಮೇಲೆ ಯುದ್ಧಮಾಡಬೇಕಾಯಿತು. ಅನೇಕ ಬಾರಿ ಚೆಂಗಾಳ್ವರ ಮೇಲೆ ಹೋರಾಟ ಮಾಡಿದನು ಎಂದು ಶಾಸನಗಳು ತಿಳಿಸುತ್ತವೆ. ನೃಪಕಾಮನು ಚೆಂಗಾಳ್ವರನ್ನು ಸೋಲಿಸಿ ರಾಜ್ಯವಿಸ್ತರಿಸಿ 'ಮಹಾಮಂಡಲೇಶ್ವರ', 'ರಾಚಮಲ್ಲ ಪೆರ್ಮಾಡಿ' ಎಂಬ ಬಿರುದುಗಳನ್ನು ಧರಿಸಿದನು. ನೃಪಕಾಮನು ಕ್ರಿ.ಶ.1047ರಲ್ಲಿ ಮರಣಹೊಂದಿದನು. ನೃಪಕಾಮನ ತರುವಾಯ ಅವನ ಮಗ ಇಮ್ಮಡಿ ವಿನಯಾದಿತ್ಯನು ರಾಜನಾದನು.

## ಇಮ್ಮಡಿ ವಿನಯಾದಿತ್ಯ (ಕ್ರಿ.ಶ 1048 – 1100)

ಸಮರ್ಥನಾದ ಇಮ್ಮಡಿ ವಿನಯಾದಿತ್ಯನು ತನ್ನ ಸ್ವಸಾಮರ್ಥ್ಯದಿಂದ ಹೊಯ್ಸಳರ ಪ್ರಾಬಲ್ಯವನ್ನು ವಿಸ್ತರಿಸಿದನು. ವಿನಯಾದಿತ್ಯನ ಕಾಲವನ್ನು ಹೊಯ್ಸಳರ ಶಕ್ತಿ ಸಂಘಟನೆಯ ಮತ್ತು ಸಂಚಯನದ ಕಾಲ ಎಂದು ಕರೆಯಲಾಗಿದೆ. ಇವನು ಚೋಳ ಮತ್ತು ಚಾಳುಕ್ಯರ ನಡುವಿನ ಕಾದಾಟದಿಂದ ಒದಗಿದ್ದ ಒಳ್ಳೆಯ ಅವಕಾಶವನ್ನು ಉಪಯೋಗಿಸಿಕೊಂಡು ರಾಜ್ಯ

ವಿಸ್ತರಣೆಯಲ್ಲಿ ತೊಡಗಿದನು. ನಂತರ ಸೈನ್ಯ ಬಲವನ್ನು ಹೆಚ್ಚಿಸಿಕೊಂಡು ಚಿಕ್ಕಮಗಳೂರು, ಹಾಸನ ಜಿಲ್ಲೆಗಳ ಮೇಲೂ ಮತ್ತು ಮೈಸೂರು, ಶಿವಮೊಗ್ಗ ಜಿಲ್ಲೆಗಳ ಮೇಲೂ ತನ್ನ ಅಧಿಪತ್ಯವನ್ನು ಸ್ಥಾಪಿಸಿ ಪ್ರಾರಂಭದಲ್ಲಿ ಸೊಸೆವೂರನ್ನು ರಾಜಧಾನಿಯನ್ನಾಗಿ ಹೊಂದಿದ್ದ ಇವನು ಅನಂತರ ಸ್ವಲ್ಪಮಟ್ಟಿಗೆ ಮೈದಾನ ಪ್ರದೇಶವಾಗಿದ್ದ, ಹಾಗೂ ಸಂಪರ್ಕ ಸಾಧನೆಗಳಿಗೆ ಅನುಕೂಲಕರವಾಗಿದ್ದ ದೋರಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು.

ಚೆಂಗಾಳ್ವ ಮತ್ತು ಕೊಂಗಾಳ್ವರನ್ನು ಸೋಲಿಸಿ ಮೈಸೂರು ಜಿಲ್ಲೆಯ ಕನ್ನಂಬಾಡಿಯ ವರೆವಿಗೂ ರಾಜ್ಯ ವಿಸ್ತರಿಸಿದನು. ತಲಕಾಡು ಗಂಗರ ಬಿರುದಾದ ರಕ್ಕಸ ಗಂಗ ಎಂಬುದನ್ನು ಧರಿಸಿ ಗಂಗವಾಡಿಯನ್ನು ಚೋಳರ ಆಳ್ವಿಕೆಯಿಂದ ಮುಕ್ತಗೊಳಿಸಲು ಪ್ರಯತ್ನಿಸಿದನು.

ಕಲ್ಯಾಣಿ ಸಾರ್ವಭೌಮ ಅಧಿಕಾರವನ್ನು ಒಪ್ಪಿಕೊಂಡು ಅವರ ಬಿರುದುಗಳಲ್ಲಿ ಒಂದಾದ ತ್ರಿಭುವನಮಲ್ಲ ಎಂಬುದನ್ನು ತಾನು ಧರಿಸಿದನು. ಕೇವಲ ರಾಜಕೀಯ ಸಂಬಂಧವಷ್ಟೇ ಅಲ್ಲದೇ ವೈವಾಹಿಕ ಸಂಬಂಧವು ಇವನ ಕಾಲದಲ್ಲಿ ಹೊಯ್ಸಳ ಮತ್ತು ಚಾಳುಕ್ಯರ ನಡುವೆ ಏರ್ಪಟ್ಟಿತ್ತೆಂದು ಶಾಸನವೊಂದು ತಿಳಿಸುತ್ತದೆ. ಆರನೇ ವಿಕ್ರಮಾದಿತ್ಯನು ಕೈಗೊಂಡ ಉತ್ತರದ ದಂಡೆಯಾತ್ರೆಯ ಸಂದರ್ಭದಲ್ಲಿ ಎರೆಯಂಗನು ಚಾಳುಕ್ಯ ಸೈನ್ಯದ ನೇತೃತ್ವವನ್ನು ವಹಿಸಿದನು. ಮಾಳವವನ್ನು ಮುತ್ತಿದನಲ್ಲದೇ ದಾರ ನಗರವನ್ನು ಮತ್ತು ಚಿತ್ರಕೂಟವನ್ನು ವಶಪಡಿಸಿಕೊಂಡನು.

ಹೊಯ್ಸಳರು, ಚೋಳರು ಕ್ರಿ.ಶ 1004ರವೆಳೆಗೆ ತಲಕಾಡಿನ ಗಂಗರನ್ನು ಸೋಲಿಸಿ ಗಂಗವಾಡಿಯನ್ನು ಆಕ್ರಮಿಸಿದರು. ಗಂಗರ ಚಿಕ್ಕಮಾಂಡಲಿಕ ಮನೆತನವೊಂದಾಗಿದ್ದ ಹೊಯ್ಸಳರು ಕ್ರಿ.ಶ 1006ರವೇಳೆಗೆ ಚೋಳರ ಮೇಲೆ ಯುದ್ಧಮಾಡಿ ಪರಾಜಿತರಾದರು. ಹೊಯ್ಸಳರು ಅನಂತರ ಕಲ್ಯಾಣ ಚಾಳುಕ್ಯರ ಪರಮಾಧಿಕಾರವನ್ನು ಅಂಗೀಕರಿಸಿ ಕ್ರಮೇಣ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸಿದರು.

ಹೊಯ್ಸಳರ ಮೂಲಕ್ಕೆ ಸಂಬಂಧಿಸಿದಂತೆ ವಿಭಿನ್ನ ಹೇಳಿಕೆಗಳಿವೆ. ಆ ಪ್ರಕಾರವಾಗಿ ಯದುವಂಶದ ಸಾಹಸಿಯೊಬ್ಬ ದಕ್ಷಿಣಕ್ಕೆ ಯಾತ್ರೆಗಾಗಿ ಬಂದನೆಂದು ಅವನು ರಾಜ್ಯಸ್ಥಾಪಿಸಿ

ತನ್ನ ರಾಜಧಾನಿಗೆ ದೋರಸಮುದ್ರ ಎಂದು ನಾಮಕರಣ ಮಾಡಿದನೆಂದೂ ಸಳನು ಅವನ ವಂಶಸ್ಥನೆಂದೂ ಪೌರಾಣಿಕ ವರ್ಣನೆಯನ್ನು ನೀಡಲಾಗಿದೆ. ಆದರೆ ಪ್ರಾರಂಭದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಮೂಡುಗೆರೆ ತಾಲ್ಲೂಕಿನ ಸೊಸವೂರು (ಇಂದಿನ ಅಂಗಡಿ) ಎಂಬುದು ಹೊಯ್ಸಳರ ರಾಜಧಾನಿಯಾಗಿತ್ತು. ತಮ್ಮ ಪ್ರಾಬಲ್ಯವನ್ನು ವಿಸ್ತರಿಸಿದ ನಂತರ ಬೇಲೂರು ನಂತರ ದೋರಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಕ್ರಿ.ಶ ೯೬೦ರ ಸುಮಾರಿನಿಂದಲೂ ಹೊಯ್ಸಳ ಅಥವಾ ಪೊಯ್ಸಳ ಎಂಬ ಹೆಸರೇ ಶಾಸನಗಳಲ್ಲಿ ದೊರೆಯುತ್ತದೆ. ಅಲ್ಲದೆ ಆ ಕಾಲದ ಶಾಸನಗಳಲ್ಲಿ ಹೊಯ್ಸಳಗೌಂಡ, ಪೊಯ್ಸಳ ಮಾರುಗ, ಪೊಯ್ಸಳಚಾರಿ ಮೊದಲಾದ ಹೆಸರುಗಳನ್ನು ಕಾಣಬಹುದು ಆದ್ದರಿಂದ ಈ ಸಂತತಿಯ ರಾಜ್ಯ ಸ್ಥಾಪಕನ ಹೆಸರು ಪ್ರಾರಂಭದಿಂದಲೂ ಪೊಯ್ಸಳ ಎಂಬುದಾಗೇ ಇದ್ದಿತೆಂದು ಖಚಿತಪಡಿಸುತ್ತದೆ.

ಹೊಯ್ಸಳ ಸಂತತಿಯ ಪ್ರಾರಂಭದ ರಾಜರ ಬಿರುದುಗಳಾದ, ಮಲೆ ಪೆರೋಳ್ಗಂಡ "ತೊರೆವರಮಾರಿ" ಮತ್ತು 'ಮಲೆವರಮಾರಿ' ಮೊದಲಾದ ಬಿರುದುಗಳು ಅವರ ರಾಜ್ಯ ಸ್ಥಾಪನೆಯ ಕಾಲದಲ್ಲಿ ಮೇಲ್ಕಂಡ ಪಂಗಡಗಳೊಡನೆ ಸೆಣಸಾಟದಲ್ಲಿ ತೊಡಗಿ ಅವುಗಳನ್ನು ಹತ್ತಿಕ್ಕಿ ತಮ್ಮ ಪ್ರಭಾವವನ್ನು ಸ್ಥಾಪಿಸಿದ್ದರೆಂದು ಸಾರುತ್ತದೆ. ಆದ್ದರಿಂದ ಬಿ.ಎಲ್.ರೈಸ್ ಅಭಿಪ್ರಾಯ ಪಟ್ಟಿರುವಂತೆ ಹೊಯ್ಸಳರು ಮೂಲತಃ ಕನ್ನಡ ನಾಡಿನವರಾಗಿದ್ದು ಮಲೆನಾಡಿನ ನಿವಾಸಿಗಳಾಗಿದ್ದರೆಂಬುದು ಖಚಿತವಾಗಿದೆ.

ಈ ಸಂತತಿಯ ಸ್ಥಾಪಕನಾದ ಹೊಯ್ಸಳನು ಕಾಲ್ಪನಿಕ ವ್ಯಕ್ತಿಯಾಗಿರಬೇಕೆಂದು ಹಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದರು. ಆದರೆ ಕ್ರಿ.ಶ 10 ನೇ ಶತಮಾನದ ಕೊನೆಯ ಭಾಗದಿಂದ ಹೊಯ್ಸಳ ಎಂಬ ಹೆಸರು ಹಲವು ಶಾಸನಗಳಲ್ಲಿ ಕಂಡು ಬರುತ್ತಿರುವುದನ್ನು ನಾವು ನೋಡಬಹುದು.

ವಿನಯಾದಿತ್ಯನು ಜೈನ ಮತಿಯನಾದರು ಪರಮ ಸಹಿಷ್ಣುವಾಗಿದ್ದನು. ತೊಣಚಿಯ ಬಸವೇಶ್ವರ, ಕುಪ್ಪತ್ತೂರಿನ ಕೈಟಭೈರವೇಶ್ವರ ದೇವಾಲಯಗಳು ಈ ಕಾಲದಲ್ಲಿ ನಿರ್ಮಾಣವಾದವು. ಅವನು ಅನೇಕ ದಾನದತ್ತಿಗಳನ್ನು ಬಿಟ್ಟಿದ್ದಕ್ಕೆ ನಿದರ್ಶನಗಳು ಇವೆ.

ಬಳ್ಳಿಗಾವೆಯಲ್ಲಿರುವ ಕೇದಾರೇಶ್ವರ ದೇವಾಲಯವು ವಿನಯಾದಿತ್ಯನ ಆಳ್ವಿಕೆಯಲ್ಲಿ ಕಟ್ಟಲಾದುದೆಂದು ಅಭಿಪ್ರಾಯ ಪಡಲಾಗಿದೆ. ಹೊಯ್ಸಳ ಸಂತತಿಯ ಪ್ರಾರಂಭದ ಪ್ರಬಲ ರಾಜನಾದ ವಿನಯಾದಿತ್ಯನು ಅನೇಕ ಕೆರೆ, ಕಟ್ಟೆಗಳನ್ನು ಕಟ್ಟಿಸಿದನು. ಕೃಷಿಗೆ ಪ್ರೋತ್ಸಾಹವನ್ನು ನೀಡಿದ್ದನು. ವಿನಯಾದಿತ್ಯನು ಕ್ರಿ.ಶ 1100 ರಲ್ಲಿ ಮರಣ ಹೊಂದಿದನು.

## ಒಂದನೇ ಬಲ್ಲಾಳ (ಕ್ರಿ.ಶ 1100 – 1107)

ಯುವರಾಜ ಎರೆಯಂಗನು ಮೊದಲೇ ಮರಣವೊಂದಿದ್ದರಿಂದ ವಿನಯಾದಿತ್ಯನ ಮೊಮ್ಮಗನಾದ ಹಾಗೂ ಎರೆಯಂಗನ ಹಿರಿಯ ಮಗನಾದ ಬಲ್ಲಾಳನೂ ರಾಜನಾದನು ಇವನನ್ನೇ ಒಂದನೇ ಬಲ್ಲಾಳನೆಂದು ಕರೆಯಲಾಗಿದೆ. ತನ್ನ ತಾತನಂತೆ ಬಲ್ಲಾಳನು ಕೂಡ ಕಲ್ಯಾಣದ ಚಾಲುಕ್ಯರ ಸಾಮಂತತ್ವವನ್ನು ಒಪ್ಪಿಕೊಂಡು 'ತ್ರಿಭುವನಮಲ್ಲ' ಎಂಬ ಬಿರುದನ್ನು ಹೊಂದಿದ್ದನು. ಅವನು ಪಟ್ಟಕ್ಕೆ ಬಂದ ಕೂಡಲೇ ಚೆಂಗಾಳ್ವರನ್ನು ಹತ್ತಿಕ್ಕಬೇಕಾಯಿತು. ಬಲ್ಲಾಳನು ದೋರಸಮುದ್ರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಬಲ್ಲಾಳನಿಗೆ ಮಕ್ಕಳಾಗಲಿಲ್ಲ ಅವನು ಯಾವುದೋ ಒಂದು ಜನ್ಮಾಂತರೀಯ ರೋಗದಿಂದ ನರಳುತ್ತಿದ್ದನು. ಶ್ರವಣಬೆಳಗೊಳದ ಚಾರುಕೀರ್ತಿ ಪಂಡಿತನೆಂಬ ಯತಿಯು ರೋಗವನ್ನು ಉಪಶಮನಗೊಳಿಸಿ 'ಬಲ್ಲಾಳ ಜೀವರಕ್ಷಕ' ಎಂಬ ಬಿರುದನ್ನು ಪಡೆದನು ಆದರೂ ಬಲ್ಲಾಳನು ಅನಾರೋಗ್ಯಕ್ಕೆ ತುತ್ತಾಗಿ ಮರಣ ಹೊಂದಿದನು. ಅವನು ಜೈನಮತಾವಲಂಬಿಯಾಗಿದ್ದರೂ ಪರಮತ ಸಹಿಷ್ಣುವಾಗಿದ್ದನು. ಶುಭಚಂದ್ರ ಜೈನಮುನಿ ಎಂಬ ಜೈನ ಯತಿ ಅವನ ಸಮಕಾಲೀನವನಾಗಿದ್ದನು. ರಾಜಧಾನಿ ಮತ್ತು ಇತರೆ ಕಡೆಗಳಲ್ಲಿನ ಹಲವೂ ಜೈನ ಬಸದಿಗಳು ಅವನ ಕಾಲದಲ್ಲಿ ನಿರ್ಮಾಣವಾದವು.

## ವಿಷ್ಣುವರ್ಧನ (ಕ್ರಿ.ಶ 1108 – 1142)

ಒಂದನೇ ಬಲ್ಲಾಳನಿಗೆ ಮಕ್ಕಳಿರಲಿಲ್ಲವಾದ್ದರಿಂದ ಅವನ ಮರಣ ನಂತರ ಅವನ ತಮ್ಮನಾದ ವಿಷ್ಣುವರ್ಧನನು ರಾಜನಾದನು. ತನ್ನ ಮೂವತ್ತೈದು ವರ್ಷಗಳ ಆಳ್ವಿಕೆಯಲ್ಲಿ ವಿಷ್ಣುವರ್ಧನನು ಹೊಯ್ಸಳ ಸಂತತಿಯ ಅಧಿಕಾರವನ್ನು ಮಹಾಂತರ ಬುನಾದಿಯಮೇಲೆ

ಸ್ಥಾಪಿಸಿದನು. ರಾಜ್ಯವನ್ನು ವಿಸ್ತರಿಸಿದನು. ಆಡಳಿತವನ್ನು ವ್ಯವಸ್ಥೆಗೊಳಿಸಿದನು. ಸಾಹಿತ್ಯ, ಧರ್ಮ, ಕಲೆಗೆ ಪ್ರೋತ್ಸಾಹವನ್ನು ನೀಡಿದನು. ಪ್ರಜೆಗಳ ಪುರೋಭಿವೃದ್ಧಿಗಾಗಿ ಪ್ರಜಾನುರಾಗ ಗಳಿಸಿದನು. ಚೋಳರನ್ನು ಕನ್ನಡನಾಡಿನಿಂದ ಓಡಿಸಿ ಬೇಲೂರು ಮತ್ತು ಹಳೇಬೀಡಿನ ಮನೋಮೋಹಕ ದೇವ ಮಂದಿರಗಳನ್ನು ನಿರ್ಮಿಸಿ ಬಿಟ್ಟಿಗ ವಿಷ್ಣುವರ್ಧನನು ಹೊಯ್ಸಳ ಸಂತತಿಯ ಪರಮಶ್ರೇಷ್ಠ ರಾಜರಲ್ಲಿ ಒಬ್ಬನಾಗಿರುವುದಲ್ಲದೇ ಕನ್ನಡನಾಡಿನ ಆದರ್ಶ ಪ್ರಭುಗಳಲ್ಲಿ ಒಬ್ಬನಾಗಿದ್ದಾನೆ.

ವಿಷ್ಣುವರ್ಧನನು ತನ್ನ ತಾತನಾದ 2ನೇ ವಿಕ್ರಮಾದಿತ್ಯನ ಆಳ್ವಿಕೆಯ ಕೊನೆಗಾಲದಲ್ಲಿ ಶ್ರೀರಂಗಪಟ್ಟಣ ತಾಲ್ಲೂಕಿನ ಬೆಳಗೊಳದ ಸುತ್ತಮುತ್ತಲಿನ ಪ್ರದೇಶಕ್ಕೆ ಪ್ರಾಂತ್ಯಾಧಿಕಾರಿಯಾಗಿದ್ದನು. ಬೆಳಗೊಳದ ಸೀತರಾಮದೇವಾಲಯಕ್ಕೆ ದಾನ ನೀಡಿ ಆ ಗ್ರಾಮವನ್ನು ಒಂದು ಅಗ್ರಹಾರವಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ಕೊಟ್ಟನು ಆ ಪ್ರದೇಶವನ್ನು ಕ್ರಿ.ಶ 1096ರ ಶಾಸನವು ಶ್ರೀ ವಿಷ್ಣುವರ್ಧನ ಚತುರ್ವೇಧಿ ಮಂಗಲ ಎಂಬ ಹೆಸರಿನಿಂದಲೇ ಕರೆದಿದೆ. ತಮ್ಮ ಬಲ್ಲಾಳನ ಆಳ್ವಿಕೆಯಲ್ಲಿ ಯುದ್ಧ ಮತ್ತು ಆಡಳಿತದಲ್ಲಿ ಸಕ್ರಿಯ ಪಾತ್ರವಹಿಸಿದನು. ಜಗದೇವ ಹಾಗೂ ಇತರರ ಪರಾಕ್ರಮದಿಂದ ಹೋರಾಡಿ ಶತ್ರುಗಳನ್ನು ಸೋಲಿಸಿದನು.

ಕ್ರಿ.ಶ 1008ರಲ್ಲಿ ವಿಷ್ಣುವರ್ಧನನು ಸಿಂಹಾಸನಕ್ಕೆ ಬಂದನು. ಈತನ ಎರಡು ಆಸೆಯಗಳನ್ನು ಹೊಂದಿದ್ದನು. ಅವುಗಳೆಂದರೆ ಮೊದಲನೇಯದಾಗಿ ಗಂಗವಾಡಿ ಮತ್ತು ನೊಳಂವಾಡಿ ಪ್ರದೇಶಗಳನ್ನು ಚೋಳರ ಆಳ್ವಿಕೆಯಿಂದ ಪಾರುಮಾಡುವುದು. ಎರಡನೇಯದಾಗಿ ಚಾಲುಕ್ಯರ ಅಧೀನತೆಯನ್ನು ಕೊನೆಗಾಣಿಸಿ ತನ್ನ ಮನೆತನದ ಸ್ವತಂತ್ರ ಆಳ್ವಿಕೆಯನ್ನು ಕನ್ನಡನಾಡಿನಲ್ಲಿ ಸ್ಥಾಪಿಸುವುದು ಈ ಧ್ಯೇಯಗಳ ಸಾಧನೆಗಾಗಿ ಕಾರ್ಯೋನ್ಮುಖನಾದನು. ಸಿಂಹಾಸನಕ್ಕೆ ಬಂದ ಕೂಡಲೇ ಆಡಳಿತವನ್ನು ಬಿಗಿಗೊಳಿಸಿ, ಸೈನ್ಯವನ್ನು ಹೆಚ್ಚಿಸಿಕೊಂಡು, ಅನುಭವಿಗಳನ್ನು, ಸಚಿವ ಮತ್ತು ಪರಾಕ್ರಮಿಗಳನ್ನು ಸಚಿವ ಮತ್ತು ದಂಡನಾಯಕರಾಗಿ ನಿರ್ಮಿಸಿಕೊಂಡನು. ಶೂರನು, ಅನುಭವಿಯು, ದಕ್ಷನು ಆದ ಗಂಗರಾಜನನ್ನು ತನ್ನ ಪ್ರಧಾನ ದಂಡನಾಯಕನಾಗಿ ನೇಮಿಸಿದನು. ಸರ್ವ ಸಿದ್ಧತೆಗಳನ್ನು

ಮಾಡಿಕೊಂಡು ಗಂಗವಾಡಿಯನ್ನು ಚೋಳರ ಆಕ್ರಮಣದಿಂದ ತೆರವು ಮಾಡಲು ಅಣಿಯಾದನು. ಕ್ರಿ.ಶ 1114ರಲ್ಲಿ ತಲಕಾಡನ್ನು ಮುತ್ತಲು ನಿರ್ಧರಿಸಿದನು. ಗಂಗರಾಜನನ್ನು ಮುಖ್ಯ ದಂಡನಾಯಕನಾಗಿ ನೇಮಿಸಿ ಅವನಿಗೆ ಕೆಲವು ಗ್ರಾಮಗಳನ್ನು ದತ್ತಿಯಾಗಿ ನೀಡಿ ರಣವೀಳ್ಯ ನೀಡಿದನು.

ವಿಷ್ಣುವರ್ಧನನ ರಾಜ್ಯ ವಿಸ್ತರಣೆಯು ತಲಕಾಡು ಕದನದಿಂದ ಆರಂಭವಾಯಿತು. ಆ ಸಮಯದಲ್ಲಿ ಆದಿಯಮ ಎಂಬುವನು ಚೋಳ ಸಾಮ್ರಾಟನ ಪ್ರಾಂತ್ಯಾಧಿಕಾರಿಯಾಗಿ ಗಂಗವಾಡಿಯ ಆಡಳತಕ್ಕೆ ನೇಮಕವಾಗಿದ್ದನು. ಚೋಳರು ಗಂಗವಾಡಿಯನ್ನು 'ರಾಜರಾಜಚೋಳ ಮಂಡಲ ಚೋಳ' ಎಂಬುದಾಗಿಯೂ ತಲಕಾಡನ್ನು "ರಾಯಪುರ" (ರಾಜರಾಜಪುರ) ಎಂಬುದಾಗಿಯೂ ಕರೆಯುತ್ತಿದ್ದರು. ವಿಷ್ಣುವರ್ಧನ ಮತ್ತು ಗಂಗ ಅರಸರು ಹೊಯ್ಸಳ ಸೈನ್ಯವನ್ನು ಕನ್ನಂಬಾಡಿ ಮತ್ತು ಶ್ರೀರಂಗಪಟ್ಟಣದ ಮುಖಾಂತರ ತಲಕಾಡಿನತ್ತ ನಡೆಸಿದರು. ಮೊದಲೇ ಸಿದ್ಧರಾಗಿದ್ದ ಚೋಳರ ಅಧಿಕಾರಿಯಾಗಿದ್ದ ಆದಿಯಮ, ದಾಮೋದರ, ನರಸಿಂಗವರ್ಮನು ಮೊದಲಾದವರು ತಲಕಾಡಿನ ಹೊರವಲಯದಲ್ಲಿ ಹೊಯ್ಸಳ ಸೈನ್ಯವನ್ನು ಎದುರಿಸಿದರು.

ತಲಕಾಡಿನ ಹೊರವಲಯದಲ್ಲಿ ಹೊಯ್ಸಳ ಮತ್ತು ಚೋಳ ಸೇನೆಗಳಗೆ ಭೀಕರ ಕದನವು ಜರುಗಿತು. ಹೊಯ್ಸಳ ಸೇನೆಯ ಆಕ್ರಮಣವನ್ನು ಆದಿಯಮನು ತಡೆಗಟ್ಟಲಾಗಲಿಲ್ಲ. ಚೋಳ ಸೈನ್ಯದಲ್ಲಿ ಹೆಚ್ಚು ಸಾವುನೋವುಗಳುಂಟಾದವು. ಚೋಳ ಸೈನ್ಯವು ಸೋತು, ಕಂಗೆಟ್ಟು, ಹಿಮ್ಮೆಟ್ಟಿ ತಲಕಾಡಿನ ಕೋಟೆಯೊಳಗೆ ರಕ್ಷಣೆಪಡೆಯಲು ಧಾವಿಸಿತ್ತು. ಗಂಗ ರಾಜನು ಆದಿಯಮನ ನಿವೇಶನವನ್ನು ಹೊಕ್ಕು, ಅವನನ್ನು ಹಿರಿದುಕೊಂದನು. ಅಳಿದುಳಿದ ಚೋಳ ಸೇನೆ ಎರಡು ಗುಂಪುಗಳಾಗಿ ತಮಿಳುನಾಡಿನತ್ತಾ ಧಾವಿಸಿತು. ವಿಷ್ಣುವರ್ಧನನ ಸೈನ್ಯ ಚೋಳರನ್ನು ಬೆನ್ನಟ್ಟಿ ಕೊಂಗುನಾಡನ್ನು ವಶಪಡಿಸಿಕೊಂಡಿತ್ತು. ಮತ್ತೊಂದು ಪಡೆಯು ಕೋಲಾರದ ಮಾರ್ಗವಾಗಿ ಫಲಾಯನಮಾಡಿತ್ತು. ವಿಷ್ಣುವರ್ಧನನೇ ಸ್ವತಃ ಇದನ್ನು ಬೆನ್ನಟ್ಟಿ ನೊಳಂಬವಾಡಿಯನ್ನು ಆಕ್ರಮಿಸಿ ಕೋಲಾರ ಮತ್ತು ನಾಂಗಲೀಯವರೆಗಿನ ಪ್ರದೇಶಗಳನ್ನು ವಶಪಡಿಸಿಕೊಂಡರು. ಗಂಗವಾಡಿಯು ಚೋಳರಿಂದ ಮುಕ್ತವಾಯಿತು.

ತಲಕಾಡು ವಿಜಯವು ಕನ್ನಡನಾಡಿನ ಇತಿಹಾಸದಲ್ಲಿ ಹಾಗೂ ಹೊಯ್ಸಳರ ಅಭ್ಯುಧಯಕ್ಕೆ ಸಂಬಂಧಿಸಿದಂತೆ ಒಂದು ಮಹತ್ತರ ಘಟನೆಯಾಗಿದೆ. ಕ್ರಿ.ಶ 1004ರಲ್ಲಿ ಗಂಗ ಸಂತತಿಯು ವಿನಾಶದೊಡನೆ ಸುಮಾರು ಒಂದು ನೂರು ವರ್ಷಗಳ ಕಾಲ ಚೋಳರ ಆಳ್ವಿಕೆಗೆ ಒಳಗಾಗಿದ್ದ, ಕನ್ನಡ ಪ್ರದೇಶಗಳು ವಿಮೋಚನೆ ಪಡೆದವು.

ಹೊಯ್ಸಳ ರಾಜ್ಯವು ವಿಸ್ತಾರವಾಯಿತು. ಗಂಗವಾಡಿ, ನೊಳಂಬವಾಡಿ, ಕೊಂಗುನಾಡುಗಳು ಹೊಯ್ಸಳ ರಾಜ್ಯಕ್ಕೆ ಸೇರಿದವು. ವಿಷ್ಣುವರ್ಧನನು 'ತಲಕಾಡುಗೊಂಡ' ಹಾಗೂ ಗಂಗವಂಶದ ಉತ್ತರಾಧಿಕಾರಿ ಎಂಬರ್ಥದಲ್ಲಿ 'ವಿಕ್ರಮಗಂಗ' ಎಂಬ ಬಿರುದುಗಳನ್ನು ಧರಿಸಿದನು. ತನ್ನ ವಿಜಯಗಳ ಜ್ಞಾಪಕಾರ್ಥವಾಗಿ ತನ್ನ ಇಷ್ಟದೇವನಾದ ವಿಷ್ಣುವಿಗಾಗಿ ಅನೇಕ ಮಂದಿರಗಳನ್ನು ಕಟ್ಟಿಸಿದನು. ಬೇಲೂರಿನ ಚೆಲುವನಾರಾಯಣ, ತಲಕಾಡಿನ ಕೀರ್ತಿನಾರಾಯಣ ಮೊದಲಾದವುಳನ್ನು ನಿರ್ಮಿಸಿದನು. 'ತಲೆಕಾಡುಗೊಂಡ', 'ನೊಳಂಬವಾಡಿಗೊಂಡ', 'ಮಲೆಪರೋಳ್‌ಗಂಡ' ಎಂಬ ಬಿರುದುಗಳನ್ನು ಚಿನ್ನದ ನಾಣ್ಯಗಳನ್ನು ಹಚ್ಚು ಹಾಕಿಸಿದನು. ಕ್ರಿ.ಶ 1140ರ ಪ್ರಾರಂಭದಿಂದ ಚೋಳರ ಶಾಸನಗಳು ಗಂಗವಾಡಿಯ ಪ್ರದೇಶದಲ್ಲಿ ದೊರಕದೇ ಇರುವುದರಿಂದ ಹಾಗೂ ವಿಷ್ಣುವರ್ಧನನು ಕ್ರಿ.ಶ1115ರ ಆದಿಯಲ್ಲೇ ಪ್ರಥಮವಾಗಿ ತಲಕಾಡುಗೊಂಡ ಎಂಬ ಬಿರುದನ್ನು ಧರಿಸಿದ್ದುದರಿಂದಲೂ ತಲಕಾಡು ಕದನವು ಕ್ರಿ.ಶ 1114 ರಲ್ಲಿಯೇ ನಡೆಯಿತ್ತೆಂದು ಖಚಿತವಾಗಿ ತಿಳಿದುಬರುತ್ತದೆ.

ಚೋಳರನ್ನು ಸೋಲಿಸಿ ಗಂಗವಾಡಿಯ ಮೇಲೆ ತನ್ನ ಆಳ್ವಿಕೆಯನ್ನು ಸ್ಥಾಪಿಸಿದ ಆನಂತರ ವಿಷ್ಣುವರ್ಧನನು ಸ್ವತಂತ್ರವಾಗಿ ಆಳಲು ಪ್ರಾರಂಭಿಸಿದನು. ಪುಣಿಸಮಯ್ಯನ ನೇತೃತ್ವದ ಹೊಯ್ಸಳ ಸೇನೆಯೂ ನೀಲಗಿರಿಯನ್ನು ವಶಪಡಿಸಿಕೊಂಡು ನೀಲಾಂದ್ರಿಯ ಮೇಲೆ ಹೊಯ್ಸಳ ಧ್ವಜವನ್ನು ಆರಿಸಿತ್ತು. ವಿಷ್ಣುವರ್ಧನನು ಸ್ವತಃ ಸೈನ್ಯ ಸಮೇತನಾಗಿ ಹೋಗಿ ಚಾಳುಕ್ಯರ ಸಾಮಂತನಾದ ಶಾಂತಾರರನ್ನು ಹಾನಂಗಲ್ಲಿನ ಕದಂಬರನ್ನು ಸೋಲಿಸಿದನು. ಕ್ರಿ.ಶ.1117ರಲ್ಲಿ ಉಚ್ಛಂಗಿಯ ಪಾಂಡ್ಯರನ್ನು ಚಿತ್ರದುರ್ಗ ಜಿಲ್ಲೆಯ 'ದುಮ್ಮೆ' ಎಂಬಲ್ಲಿ ಸೋಲಿಸಿ ಕಪ್ಪಕಾಣಿಕೆಯನ್ನು ಪಡೆದು ತನ್ನ ರಾಜ್ಯದ ಗಡಿಯನ್ನು ವಿಸ್ತರಿಸಿದನು. ಹೊಯ್ಸಳರ ಪ್ರಾಬಲ್ಯ

ಕ್ರಮೇಣ ಬೆಳೆಯುತ್ತಿದ್ದುದನ್ನು ಗಮನಿಸಿದ ಚಾಳುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನು ತನ್ನ ಸಾಮಂತರನ್ನು ಸೋಲಿಸಿದ ವಿಷ್ಣುವರ್ಧನನ್ನು ಶಿಕ್ಷಿಸಲು ಹವಣಿಸಿದನು. ಹೊಯ್ಸಳ ಸೇನೆಯು ಅನೇಕ ಯುದ್ಧಗಳಲ್ಲಿ ಗಳಿಸಿದ ವಿಜಯಗಳಿಂದ ಅದರ ಬಲವನ್ನು ಅರಿತ್ತಿದ್ದ ವಿಕ್ರಮಾದಿತ್ಯನು ಸಾಮ್ರಾಜ್ಯದ ಜೊತೆಗೆ ಎಲ್ಲಾ ಸಾಮಂತರ ಸೈನ್ಯಗಳನ್ನು ಒಟ್ಟುಗೂಡಿಸಿ ಹೊಯ್ಸಳರ ರಾಜಧಾನಿ ದೋರಸಮುದ್ರವನ್ನು ಆಕ್ರಮಿಸಲು ಕಳುಹಿಸಿದನು. ಕ್ರಿ.ಶ 1118ರಲ್ಲಿ ಅಪರಿಮಿತ ಚಾಳುಕ್ಯ ಸೈನ್ಯ ದೋರಸಮುದ್ರವನ್ನು ಆಕ್ರಮಿಸಲು ಪ್ರಯಾಣ ಕೈಗೊಂಡು ಹಾಸನ ಜಿಲ್ಲೆಯ ಕಣ್ಣೇಗಾಲ ಗ್ರಾಮವನ್ನು ತಲುಪಿತ್ತು.

ವಿಷ್ಣುವರ್ಧನ ಮತ್ತು ದಂಡನಾಯಕ ಗಂಗರಾಜನು ಚಾಳುಕ್ಯ ಸೈನ್ಯವನ್ನು ದೂರದಲ್ಲೇ ಎದುರಿಸಲು ತೀರ್ಮಾನಿಸಿದರು. ವಿಷ್ಣುವರ್ಧನನು ಯುದ್ಧ ನಿರ್ವಹಣೆಯ ಸಮಸ್ತ ಅಧಿಕಾರವನ್ನು ಗಂಗ ರಾಜನಿಗೆ ವಹಿಸಿದನು. ಗಂಗರಾಜನು ಚಾಳುಕ್ಯ ಸೈನ್ಯವನ್ನು ಕಣ್ಣೇಗಾಲದ ಬಳಿಯಲ್ಲಿ ತಡಗಟ್ಟಿದನು. ಅಪಾರ ಚಾಳುಕ್ಯ ಸೈನ್ಯದ ಮೇಲೆ ರಾತ್ರಿವೇಳೆಯಲ್ಲಿ ಎರಗಿದನು. ಹೊಯ್ಸಳ ಸೈನ್ಯದ ಈ ಅನಿರೀಕ್ಷಿತ ಧಾಳಿಗೀಡಾದ ಚಾಲುಕ್ಯ ಸೈನ್ಯವು ಸೋತು ಯುದ್ಧ ಸಾಮಾಗ್ರಿಗಳನ್ನು ರಣರಂಗದಲ್ಲೇ ಬಿಟ್ಟು ಓಡಿತು. ಗಂಗರಾಜನು ಹೊಯ್ಸಳ ಗಡಿಯವರೆವಿಗೂ ವೈರಿಗಳನ್ನು ಬೆನ್ನಟ್ಟಿ ಹೋದನು. ಶತ್ರು ಸೈನ್ಯ ಬಿಟ್ಟು ಹೋದ ಯುದ್ಧ ಸಾಮಾಗ್ರಿಯನ್ನು ಸಂಗ್ರಹಿಸಿ ತಂದು ವಿಷ್ಣುವರ್ಧನಿಗೆ ಒಪ್ಪಿಸಿದನು.

ವಿಕ್ರಮಾದಿತ್ಯನು ಬದುಕಿರುವವರೆಗೂ ಹೊಯ್ಸಳರಿಗೂ ಚಾಳುಕ್ಯರಿಗೂ ಯುದ್ಧಗಳು ಪುನಃ ಸಂಘಟಿಸಲಿಲ್ಲ. ಕ್ರಿ.ಶ. 1127ರಲ್ಲಿ ವಿಕ್ರಮಾದಿತ್ಯನ ಮರಣ ನಂತರ ವಿಷ್ಣುವರ್ಧನನ ರಾಜ್ಯ ವಿಸ್ತರಣಾ ನೀತಿಗೆ ಅವಕಾಶ ದೊರೆಯಿತು. ಕೃಷ್ಣ ನದಿಯವರೆವಿಗೂ ತನ್ನ ಅಧಿಕಾರ ಸ್ಥಾಪಿಸಲು ಯೋಚಿಸಿಕೊಂಡಿದ್ದನು. ಕ್ರಿ.ಶ 1131ರಲ್ಲಿ ಲಕ್ಷ್ಮೀದೇವಿ ಎಂಬುವವಳನ್ನು ವರಿಸಿದನು. ಕ್ರಿ.ಶ 1133ರ ಅವನ ಪಟ್ಟದ ರಾಣಿ ಲಕ್ಷ್ಮೀದೇವಿಗೆ ಪುತ್ರೋತ್ಸವವಾಯಿತು. ತನ್ನ ರಾಜ್ಯದ ಉತ್ತರದ ಗಡಿಗಳತ್ತ ದಂಡೆತ್ತಿಹೋಗಿ ವಿಜಯದಿಂದ ಹಿಂತಿರುಗುತ್ತಿದ್ದಾಗ ಸುದ್ಧಿಮುಟ್ಟಿತ್ತು. ಅದೇ ವೇಳೆಗೆ ಗಂಗ ರಾಜನ ಸ್ಮರಣಾರ್ಥವಾಗಿ ಅವನ ಮಗ ಬೊಪ್ಪದಂಡನಾಯಕನು ರಾಜಧಾನಿಯಲ್ಲಿ ಕಟ್ಟಿಸಿದ ಜೈನ ಬಸದಿಯು ಪೂರ್ಣಗೊಂಡ

'ದ್ರೋಹರಘಟ್ಟ' ಜಿನಾಲಯದ ತೀರ್ಥ ಪ್ರಸಾದಗಳು ರಾಜನಿಗೆ ತಲುಪಿದವು. ಇವುಗಳಿಂದ ಆನಂದಪಟ್ಟ ವಿಷ್ಣುವರ್ಧನನು ತನ್ನ ಪುತ್ರನಿಗೆ ವಿಜಯಸಿಂಹನೆಂದೂ, ಗಂಗರಾಜನ ಸ್ಮರಣಾರ್ಥ ಕಟ್ಟಿಸಿದ ಬಸದಿಗೆ ವಿಜಯಪಾರ್ಶ್ವನಾಥ ಜಿನಾಲಯ ಎಂದು ಹೆಸರಿಟ್ಟನು. ವಿಜಯ ನರಸಿಂಹನಿಗೆ ಕೂಡಲೇ ಯುವರಾಜ ಪಟ್ಟವನ್ನು ಕಟ್ಟಿ ತನ್ನ ಅನೇಕ ಬಿರುದುಗಳನ್ನು ಅವನಿಗೆ ಕೊಟ್ಟನು.

ಉತ್ತರಾಧಿಕಾರಿಯ ಜನನದಿಂದ ಹರ್ಷಗೊಂಡ ವಿಷ್ಣುವರ್ಧನನು ಉತ್ಸಾಹದಿಂದ ರಾಜ್ಯವಿಸ್ತರಣೆಗೆ ತೊಡಗಿದನು. ತನ್ನ ರಾಜ್ಯದ ಗಡಿಗಳನ್ನು ದಾಟಿ ಶಾಂತಾರರನ್ನು, ಸಿಂಧ್ಯರನ್ನು, ಕಂದಬರನ್ನು ಮತ್ತು ಉಚ್ಛಂಗಿ ಪಾಂಡ್ಯರನ್ನು ಯುದ್ಧಗಳಲ್ಲಿ ಸೋಲಿಸಿ ಅವರಿಂದ ಕಾಣಿಕೆಯನ್ನು ಪಡೆದು ವಿಕ್ರಮಾದಿತ್ಯನ ಉತ್ತರಾಧಿಕಾರಿಯಾಗಿದ್ದ, ಭೂಲೋಕ ಮಲ್ಲನ್ನು ಅಸಮರ್ಥವಾಗಿದ್ದುವಲ್ಲದೇ ಸಾಮ್ರಾಜ್ಯದ ಶತ್ರುಗಳು ಮತ್ತು ಮಾಂಡಲಿಕರಿಂದ ಪ್ರಾರಂಭವಾಗಿದ್ದ ಗೊಂದಲಮಯ ಪರಿಸ್ಥಿತಿಯಲ್ಲಿದ್ದನು. ವಿಷ್ಣುವರ್ಧನನು ತನ್ನ ರಾಜ್ಯ ವಿಸ್ತರಿಸಲು ಒಳ್ಳೆಯ ಅವಕಾಶ ಉಂಟಾಗಿತ್ತು. ಅವನು ಕ್ರಿ.ಶ 1137ರವೇಳೆಗೆ ತುಂಗನದಿಯ ಪ್ರದೇಶಗಳ ಮೇಲೆ ತನ್ನ ಅಧಿಕಾರ ಸ್ಥಾಪಿಸಿ ಕೃಷ್ಣನದಿಯವರೆಗೂ ದಂಡೆತ್ತಿ ಹೋದನೆಂದು, ದಣಿದ ಕುದುರೆಗಳು ಪೆರ್ದೊರೆ (ಪೆದ್ದೊರೆ)ಯಲ್ಲಿ ಜಲಪಾನ ಮಾಡಿದವೆಂದು ಶಾಸನಗಳಲ್ಲಿ ವರ್ಣಿಸಲಾಗಿದೆ. ಹಾನಂಗಲ್, ಹಲಸಿಗೆ ಮತ್ತು ಬೆಳ್ವೊಲ ಪ್ರದೇಶಗಳ ಮೇಲೆ ತನ್ನ ಅಧಿಕಾರ ಸ್ಥಾಪಿಸಿ ಹಾನಂಗಲ್‌ನ್ನು ಉಪ ರಾಜಧಾನಿಯನ್ನಾಗಿ ಮಾಡಿಕೊಂಡನು. ಹಲವು ಕಾಲ ತನ್ನ ರಾಜಧಾನಿ ದೋರಸಮುದ್ರದಲ್ಲಿ ಧರ್ಮ ಮತ್ತು ಕಲೆಗೆ ಪ್ರೋತ್ಸಾಹ ನೀಡುತ್ತಾ ಸುಖ ಸಂತೋಷ ವಿನೋದದಿಂದ ಆಡಳಿತ ನಡೆಸುತ್ತಿದ್ದನು. ಪುನಃ ಕ್ರಿ.ಶ.1142ರಲ್ಲಿ ಉಪರಾಜಧಾನಿಯಾದ ಬಂಕಾಪುರದಲ್ಲಿದ್ದನು. ಆ ವೇಳೆಗೆ ವೃದ್ಧಾಪ್ಯವನ್ನು ಸಮೀಪಿಸಿದ್ದ ಅವನು ಅಲ್ಲಿ ಸ್ವರ್ಗಸ್ಥನಾದನು. ವಿಷ್ಣುವರ್ಧನನ ಮಂತ್ರಿಗಳು ರಾಜನ ಕಳೇಬರವನ್ನು ದೋರಸಮುದ್ರಕ್ಕೆ ಸಾಗಿಸಿಕೊಂಡುಬಂದು ಅಂತ್ಯಕ್ರಿಯೆ ನೆರವೇರಿಸಿಕೊಂಡು ಇನ್ನು ಬಾಲಕನ್ನಾಗಿದ್ದ ಅವನ ಪುತ್ರ ವಿಜಯನರಸಿಂಹನಿಗೆ ಪಟ್ಟಾಭಿಷೇಕ ಮಾಡಿದರು. ಕೀರ್ತಿ ನಾರಾಯಣ ವಿಷ್ಣುವರ್ಧನನ ಆಳ್ವಿಕೆಯು ಕ್ರಿ.ಶ 1142ರಲ್ಲಿ ಕೊನೆಗೊಂಡಿತ್ತು.

ವಿಷ್ಣುವರ್ಧನನಿಗೆ ಮೊದಲು ಬಿಟ್ಟಿದೇವ ಎಂದು ಹೆಸರಿತ್ತೆಂದು ವೈಷ್ಣವ ಮತಕ್ಕೆ ಸೇರಿದ ಮೇಲೆ ವಿಷ್ಣುವರ್ಧನ ಎಂಬ ಹೊಸ ನಾಮಾಂಕಿತವಾಯಿತ್ತೆಂದು ಅಭಿಪ್ರಾಯವಿದ್ದರೂ ಬಿಟ್ಟಿ ವಿಠಲ ವಿಷ್ಣು ಎಂಬುದು ರೂಪಾಂತರ ಎಂಬುವುದು ನಿಜ. ಅವನಿಗೆ ಮೊದಲಿನಿಂದಲೂ ವಿಷ್ಣುವರ್ಧನ ಎಂಬ ಹೆಸರಿತ್ತೆಂದು ಹೇಳಲು 1096ರ ಶಾಸನವೊಂದರಲ್ಲಿದೆ.

## ಒಂದನೇ ನರಸಿಂಹ (ಕ್ರಿ.ಶ.1143–1172)

ವಿಷ್ಣುವರ್ಧನನು ಕ್ರಿ.ಶ.1142ರಲ್ಲಿ ಸ್ವರ್ಗಸ್ಥನಾದ ಮೇಲೆ ಅವನ ಮಕ್ಕಳು ಇನ್ನು ಬಾಲಕನಾಗಿದ್ದ ವಿಜಯ ನರಸಿಂಹನಿಗೆ ಪಟ್ಟಕಟ್ಟಿ ಪ್ರಾಪ್ತ ವಯಸ್ಕನಾಗುವವರೆಗೂ ನಿಷ್ಠೆಯಿಂದ ಆಡಳಿತ ಮುಂದುವರೆಸಿಕೊಂಡು ಹೋದರು. ಕಲ್ಯಾಣದ ಚಾಲುಕ್ಯರು ಹೊಯ್ಸಳರನ್ನು ಸೋಲಿಸಿ ನರಸಿಂಹನು ಪುನಃ ತನ್ನ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳುವಂತೆ ಮಾಡಿದರು. ತುಂಗಭದ್ರನದಿಯ ಪ್ರದೇಶಗಳು ಕೈಬಿಟ್ಟುಹೋದವು. ನರಸಿಂಹನು ಪ್ರಾಪ್ತವಯಸ್ಕನಾದ ಮೇಲೆ ಅಧಿಕಾರವಹಿಸಿಕೊಂಡನು. ಸುಖಲೋಲುಪ್ತನು ವಿಲಾಸಪ್ರಿಯನು ಆದ ನರಸಿಂಹನು ತಂದೆಯಂತೆಯೇ ದಕ್ಷನಾಗಿರಿಲಿಲ್ಲ. ರಾಜ್ಯವಿಸ್ತರಣೆಗೆ ಆಸಕ್ತಿ ತೋರಲಿಲ್ಲ. ಕ್ರಿ.ಶ 1156ರಲ್ಲಿ ಕಲ್ಯಾಣದಲ್ಲಿ ವಿಪ್ಲವ ನಡೆಯಿತು. ಕಲ್ಯಾಣಿ ಚಾಳುಕ್ಯರ ಬಲ ಕುಗ್ಗಿತು. ಕಲಾಚೂರಿ ಬಿಜ್ಜಳನು ಚಾಳುಕ್ಯ ಸಿಂಹಾಸನವನ್ನು ಆಕ್ರಮಿಸಿ ಕಳಚೂರಿ ಸಂತತಿಯನ್ನು ಸ್ಥಾಪಿಸಿದನು. ಇಂತಹ ಸಂದರ್ಭದಲ್ಲಿ ಹೊಯ್ಸಳರ ಪ್ರಭಾವವನ್ನು ಉತ್ಕ್ಯನ್ನಕ್ಕೇರಿಸುವ ಅವಕಾಶಗಳಿದ್ದರು ನರಸಿಂಹನು ಆಲಸ್ಯದಿಂದ ಅಸಡ್ಡೆ ತೋರಿದನು. ವ್ಯರ್ಥವಾಗಿ ಕಾಲಕಳೆದನು ತನ್ನ ರಾಜ್ಯವನ್ನು ವಿಸ್ತರಿಸುವುದಿರಲಿ ತನ್ನ ಗಡಿಗಳೇ ಪರರ ಆಕ್ರಮಣಗಳಿಗೆ ತುತ್ತಾದವು. ವಿಷ್ಣುವರ್ಧನನಿಂದ ಸೋಲನ್ನು ಅನುಭವಿಸಿದ ಉಚ್ಚಂಗಿಯ ಪಾಂಡ್ಯರು ಪುನಃ ಕಳೆದುಕೊಂಡಿದ್ದ ಪ್ರದೇಶಗಳನ್ನು ವಶಪಡಿಸಿಕೊಂಡರು ಚೆಂಗಾಳ್ವರು ಹೊಯ್ಸಳರ ಮೇಲೆ ಎರಗಿದರು. ಆದರೆ ನರಸಿಂಹನ ದಂಡನಾಯಕರು ಚೆಂಗಾಳ್ವರನ್ನು ಸೋಲಿಸಿದರು. ತುಂಗಭದ್ರ ಪ್ರದೇಶಗಳು ಬಿಜ್ಜಳನ ವಶವಾದವು. ನರಸಿಂಹನ ದಂಡನಾಯಕರು ನಿಷ್ಠೆಯಿಂದ ಹೋರಾಡಿ ಇನ್ನು ಹೆಚ್ಚು ಪ್ರದೇಶಗಳು ಬಿಜ್ಜಳವಶವಾಗುವಂತೆ ತಡೆದರು.

ವಿಷಯ ಲಂಪಟನಾದ ನರಸಿಂಹನ ಆರೋಗ್ಯ ಅಷ್ಟರಲ್ಲಿ ಕೆಡುತ್ತಾ ಬಂತು ರಾಜ್ಯ ರಕ್ಷಣೆಯ ದೃಷ್ಟಿಯಿಂದ ಕುಮಾರ ಬಲ್ಲಾಳನು ತಂದೆಯ ವಿರುದ್ಧ ಸಿಡಿದೆದ್ದು ಅಧಿಕಾರ ವಹಿಸಿಕೊಂಡನು ನರಸಿಂಹನು ಕ್ರಿ.ಶ.1183ರ ಪ್ರಾರಂಭದಲ್ಲಿ ಮರಣ ಹೊಂದಿದನು.

## ಇಮ್ಮಡಿ ವೀರಬಲ್ಲಾಳ (ಕ್ರಿ.ಶ 1173–1220)

ಬಲ್ಲಾಳನು ಚಿಕ್ಕವಯಸ್ಸಿನಲ್ಲಿಯೇ ತನ್ನ ತಾತನಾದ ವಿಷ್ಣುವರ್ಧನ ಗುರಿಯಾಗಿದ್ದ ಸಾಮ್ರಾಜ್ಯ ಸ್ಥಾಪನೆಯನ್ನು ಸಾಧಿಸುವ ಸಂಕಲ್ಪಮಾಡಿದನು. ಇವನ ಆಳ್ವಿಕೆಯಲ್ಲಿ ಕಲ್ಯಾಣಿ ಚಾಳುಕ್ಯ ಮತ್ತು ಕಲಚೂರಿ ಮನೆತನಗಳು ಇತಿಹಾಸದಿಂದ ನಿರ್ಗಮಿಸಿದವು. ಸೇವುಣರ ವಿಸ್ತರಣಾ ನೀತಿಯನ್ನು ಕುಂಠಿತಗೊಳಿಸಿದನು. ಪಾಂಡ್ಯರ ಆಕ್ರಮಣದಿಂದ ಚೋಳರಿಗೆ ಪುನಃ ಸಿಂಹಾಸನ ದೊರಕಿಸಿಕೊಟ್ಟು ಚೋಳರ ಬಿರುದಾದ ಚೋಳರಾಜ್ಯ ಪ್ರತಿಷ್ಠಾಪನಾಚಾರ್ಯ ಎಂಬ ಬಿರುದು ಧರಿಸಿದನು. ಬಲ್ಲಾಳನು ಪರಾಕ್ರಮದಿಂದ ಹೊಯ್ಸಳ ರಾಜ್ಯವು ವಿಶಾಲ ಸಾಮ್ರಾಜ್ಯವಾಗಿ ಮಾರ್ಪಾಡಾಯಿತು. ಸಕಲ ಶತ್ರುಗಳನ್ನು ಮರ್ದಿಸಿ ದಕ್ಷಿಣ ಭಾರತದಲ್ಲಿ ಹೊಯ್ಸಳರ ರಾಜ್ಯವನ್ನು ಅಜೇಯ ಸಾಮ್ರಾಜ್ಯವನ್ನಾಗಿ ಪರಿವರ್ತಿಸಿದನು ವೀರಬಲ್ಲಾಳನ ಪ್ರೋತ್ಸಾಹದಿಂದ ವ್ಯವಸಾಯ ಮತ್ತು ವ್ಯಾಪಾರಗಳು ಪ್ರಗತಿಪಥದಲ್ಲಿದ್ದವು. ಅನೇಕ ಸುಂದರ ದೇವಮಂದಿರಗಳು ನಿರ್ಮಾಣವಾದವು.

ಅಧಿಕಾರವಹಿಸಿಕೊಂಡ ಕೂಡಲೇ ಅರಾಜಕತೆಯನ್ನು ಹೋಗಲಾಡಿಸಿ ರಾಜ್ಯವಿಸ್ತರಣಾ ವಿಷ್ಣುವರ್ಧನನ ಕಾಲದಲ್ಲಿ ಸಾಮಾಂತರಾಗಿದ್ದ ಅನೇಕ ಸಣ್ಣಪುಟ್ಟ ರಾಜರು ನರಸಿಂಹನ ಕಾಲದಲ್ಲಿ ಸ್ವಾತಂತ್ರ್ಯರಾದರು. ಕೊಡಗಿನ ಚೆಂಗಾಳ್ವರು ನರಸಿಂಹನ ಕಾಲದಲ್ಲಿ ಸ್ವತಂತ್ರರಾದರು ಯುದ್ಧ ಅನಿವಾರ್ಯವಾಗಿ ಬಲ್ಲಾಳನು ದಂಡನಾಯಕ ಬೆಟ್ಟರಸನು ಕ್ರಿ.ಶ 1173ರಲ್ಲಿ ಚೆಂಗಾಳ್ವರನ್ನು ಸೋಲಿಸಿದನು. ಆದರೆ ಮತ್ತೆ ಕೆಲವು ದಿನಗಳಲ್ಲಿ ಚೆಂಗಾಳ್ವರು ಬೆಟ್ಟರಸನ ಸೈನ್ಯವನ್ನು ಮುತ್ತಿದರು. ತಕ್ಷಣನೇ ವೀರಬಲ್ಲಾಳನು ಬೆಟ್ಟರಸನ ಸಹಾಯಕ್ಕೆ ಹೆಚ್ಚು ಸೈನ್ಯವನ್ನು ಕಳುಹಿಸಿದನು. ಚೆಂಗಾಳ್ವರು ಬಲ್ಲಾಳನ ಪರಮಾಧಿಕಾರವನ್ನು ಒಪ್ಪಿಕೊಂಡರು. ಚೆಂಗಾಳ್ವ ರಾಜಕುಮಾರಿಯನ್ನು ಬಲ್ಲಾಳನು ವರಿಸಿದನೆಂದು ತಿಳಿದುಬರುತ್ತದೆ.

ಎಮ್ಮೆಗನೂರು ಎಂಬಲ್ಲಿ ಪಾಂಡ್ಯರ ಸೇನೆಯನ್ನು ಸೋಲಿಸಿ ರಾಜಧಾನಿಗೆ ಕ್ರಿ.ಶ 1177ರಲ್ಲಿ ಮುತ್ತಿಗೆ ಹಾಕಿದರು. ಪಾಂಡ್ಯ ರಾಜ ಕಾಮದೇವನು ಸೋತು ಶರಣಾದನು. ಹೇರಳ ಕಪ್ಪಕಾಣಿಕೆಯನ್ನು ನೀಡಿ ಶನಿವಾರಸಿದ್ಧಿ, ಗಿರಿದುರ್ಗಮಲ ಎಂಬ ಬಿರುದುಗಳನ್ನು ಪಡೆದನು. ಆನಂತರ ಪೊಟ್ಟಿಪೊಂಬುರ್ಚ ದಶಾಂತಾರರನ್ನು, ಹಾನಂಗಲ್ಲಿನ ಕದಂಬರನ್ನು ತುಳುರಾಜ್ಯದಲ್ಲಿ ಸೋಲಿಸಿದನು. ಆ ವೇಳೆಗೆ ಸಾಮಂತ ಪಕ್ಷವನ್ನು ವಹಸಿದ್ದ ಕಾಮದೇವನನ್ನು ಪುನಃ ಸದೆಬಡಿಯಬೇಕಾಯಿತು.

ತನ್ನ ಮಾಂಡಲೀಕರನ್ನು ಸೋಲಿಸಿದ್ದರಿಂದ ಕುಪಿತನಾದ ಕಳಚೂರಿ ಚಕ್ರವರ್ತಿ ಸಂಕಮನು ಕ್ರಿ.ಶ. 1180ರಲಿ ಬಲ್ಲಾಳನ ವಿರುದ್ಧ ಸೇನೆ ಕಳುಹಿಸಿದನು. ವೀರ ಬಲ್ಲಾಳನು ಕಲಚೂರಿನ ಸೇನೆಗಳನ್ನು ಸೋಲಿಸಿ. ಉದ್ರಿಕೋಟೆಯನ್ನು ಆಕ್ರಮಿಸಿದನು. ಸಂಕಮನು ಬಲ್ಲಾಳನೊಡನೆ ಸಂಧಾನಕ್ಕೆ ಒಡಂಬಡಬೇಕಾಯಿತು. ಕೊನೆಗೆ ವೀರಬಲ್ಲಾಳನು ಕ್ರಿ.ಶ 1179ರಲ್ಲಿ ಕಲ್ಯಾಣದವರೆಗೂ ದಂಡೆತ್ತಿಹೋಗಿ ಸೋಮೇಶ್ವರ ದಂಡನಾಯಕನಾದ ಬ್ರಹ್ಮ ದಂಡೇಶನನ್ನು ಸೋಲಿಸಿದನು. ಸೋಮೇಶ್ವರನ ಬಲಗೈಯಂತಿದ್ದ ಬ್ರಹ್ಮದಂಡನಾಯಕನು ಸೋತಮೇಲೆ ದಿಕ್ಕುತೋಚದ ಚಾಳುಕ್ಯ ದೊರೆ ತಲೆಮರೆಸಿಕೊಂಡನು ಬಲ್ಲಾಳನು ಚಾಳುಕ್ಯ ಸಾಮ್ರಾಜ್ಯದ ದಕ್ಷಿಣ ಭಾಗದ ಮೇಲೆ ತನ್ನ ಆಳ್ವಿಕೆಯನ್ನು ಸ್ಥಾಪಿಸಿ 'ಕರ್ನಾಟಕ ಚಕ್ರವತಿ' ಎಂಬ ಬಿರುದನ್ನು ವರಿಸಿದನು. ಆನಂತರ ಕುಂತಳದ ಒಡೆತನಕ್ಕಾಗಿ ದೇವಗಿರಿಯ ಸೇವುಣರಿಗೂ ಹೊಯ್ಸಳರಿಗೂ ಯುದ್ಧಗಳು ಪ್ರಾರಂಭವಾದವು . ಸೇವುಣರ ರಾಜ ಭಿಲ್ಲಮನು 1190ರಲ್ಲಿ ಕಲ್ಯಾಣಿಯನ್ನು ಆಕ್ರಮಿಸಿ ಧಾರವಾಡದ ಜಿಲ್ಲೆಯ ಸೊರಟೂರಿನವರೆಗೆ ಮುಂದುವರೆಸಿದನು. ಧಾರವಾಡ ಜಿಲ್ಲೆಯ ಸೊರಟೂರಿನ ಬಳಿಯಲ್ಲಿ ಭೀಕರ ಕದನ ನಡೆಯಿತ್ತು. ಬಲ್ಲಾಳನು ಶತ್ರು ಸೈನ್ಯದ ಮುಖ್ಯ ದಂಡನಾಯಕ ಜೈತುಗಿಯನ್ನು ಕೊಂದನು. ಸೇವುಣರ ಬಲವು ಹೊಡೆತಗಳನ್ನು ತಾಳಲಾರದೇ ರಕ್ಷಣೆಗಾಗಿ ಓಡಿತು. ಸೇವುಣರ ಭಿಲ್ಲಮನು ಪ್ರಾಣ ರಕ್ಷಣೆಗಾಗಿ ರಣರಂಗದಿಂದ ಸೈನ್ಯದೊಡನೆ ಲೊಕ್ಕಿಗುಂಡಿಕೋಟೆ ಸೇರಿದನು. ಹೊಯ್ಸಳ ಸೈನ್ಯವು ಲೊಕ್ಕಿಗುಂಡಿಕೋಟೆಗೆ ನುಗ್ಗಿತು. ಸೇವುಣ ಸೈನ್ಯ ಪುನಃ ಸೋತ್ತಿತ್ತು. ಸೋತು ಫಲಾಯನ ಮಾಡುತ್ತಿದ್ದ ಭಿಲ್ಲಮನು ಬಲ್ಲಾಳನಿಂದ ಹತನಾದನು.

ಕೃಷ್ಣಾನದಿಯವರೆವಿಗೂ ಶತ್ರುವನ್ನು ಬೆನ್ನಟ್ಟಿ ಅಲ್ಲಿಯವರೆಗಿನ ಪ್ರದೇಶಗಳ ಮೇಲೆ ಬಲ್ಲಾಳನು ತನ್ನ ಆಳ್ವಿಕೆಯನ್ನು ಸ್ಥಾಪಿಸಿದನು.

ಸೊರಟೂರು ಮತ್ತು ಲೊಕ್ಕಗುಂಡಿ ಕದನಗಳ ವಿಜಯಗಳಿಂದ ಹೊಯ್ಸಳ ರಾಜ್ಯವು ಸಾಮ್ರಾಜ್ಯವಾಗಿ ಮಾರ್ಪಟ್ಟಿತ್ತು. ವೀರಾಬಲ್ಲಾಳನು ದಕ್ಷಿಣ ಚಕ್ರವರ್ತಿ ಎಂಬ ಬಿರುದನ್ನು ವಹಿಸಿದನು. ಯುದ್ಧದ ಸೋಲಿನಿಂದ ಚೇತರಿಸಿಕೊಳ್ಳಲು ಸೇವುಣರಿಗೆ 20 ವರ್ಷಗಳು ಬೇಕಾಗಿತ್ತು. ವಿಜಯಗಳ ಕುರುವಾಗಿ ಬಲ್ಲಾಳನು ಕ್ರಿ.ಶ.1191ರಿಂದ 'ಬಲ್ಲಾಳಯುಗ' ಎಂಬ ಹೆಸರಿನಿಂದ ಕಾಲಗಣನೆಯನ್ನು ಆಚರಣೆಗೆ ತಂದನು. ಈ ವಿಜಯದಿಂದ ಹೊಯ್ಸಳರ ಅಧಿಕಾರವು ಬನವಾಸಿ, ಹಾನಂಗಲ್, ಬೆಳುವೊಲ, ಹಲಸಿಗೆ ಮೊದಲಾದ ಪ್ರದೇಶಗಳ ಮೇಲೆ ಸ್ಥಾಪಿತವಾಗಿತ್ತು. ಹೊಯ್ಸಳ ಸಂತತಿಯ ಪ್ರಭಾವವು ಇಮ್ಮಡಿಯಾಯಿತು. ಅದು ದಕ್ಷಿಣ ಭಾರತದ ಅತ್ಯಂತ ಪ್ರಬಲ ಸಾಮ್ರಾಜ್ಯವಾಗಿ ಮಾರ್ಪಟ್ಟಿತ್ತು.

ಕ್ರಿ.ಶ 1215ರ ಆನಂತರ ಬಲ್ಲಾಳನ ಗಮನ ತಮಿಳುನಾಡಿನತ್ತ ತಿರುಗಿತ್ತು. ಬಲ್ಲಾಳನು ಜೀವನದ ಸಂಧ್ಯಕಾಲದಲಿ ಚೋಳರಿಗೂ ಅವರ ಸಾಮಂತರಾದ ಪಾಂಡ್ಯರಿಗೂ ವೈರತ್ವ ಪ್ರಾರಂಭವಾಯಿತು. 3ನೇ ರಾಜರಾಜನು ಪಾಂಡ್ಯರಿಂದ ಸಿಂಹಾಸನ ಚ್ಯುತನಾಗಿ ಬಲ್ಲಾಳನ ಸಹಾಯವನ್ನು ಯಾಚಿಸಿದನು. ಬಲ್ಲಾಳನು ಯುವರಾಜ ನರಸಿಂಹನ ನೇತೃತ್ವದಲ್ಲಿ ಹೊಯ್ಸಳ ಸೈನ್ಯವನ್ನು ತಮಿಳುನಾಡಿಗೆ ಕಳುಹಿಸಿದನು. ಅದು ಚೋಳರ ಶತ್ರುವನ್ನು ಸೋಲಿಸಿ. ಪುನಃ ಸಿಂಹಾಸನವನ್ನು ದೊರಕಿಸಿಕೊಟ್ಟಿತ್ತು. ರಾಜರಾಜನು ಬಲ್ಲಾಳನಿಗೆ ಹೇರಳ ಕಾಣಿಕೆಯನ್ನು ಸಲ್ಲಿಸಿದನು. ಬಲ್ಲಾಳನು ಚೋಳರಾಜ ಪ್ರತಿಷ್ಠಾಪನಾಚಾರ್ಯ ಎಂಬ ಬಿರುದನ್ನು ಧರಿಸಿದನು. ಇಮ್ಮಡಿ ವೀರಬಲ್ಲಾಳನ ಕಾಲದಲ್ಲಿ ಸಾಹಿತ್ಯ ಮತ್ತು ಕಲೆಯಲ್ಲಿ ಅಸಾಧಾರಣ ಪ್ರಗತಿಯಾಯಿತು. ಸುಪ್ರಸಿದ್ಧ ಕವಿಗಳಾದ ಜನ್ನ, ರುದ್ರಭಟ್ಟ, ರಾಜಾದಿತ್ಯ, ವಿದ್ಯಾಚಕ್ರವರ್ತಿ ಮೊದಲಾದವರು ವೀರಬಲ್ಲಾಳನ ಸಮಕಾಲೀನವರಾಗಿದ್ದರು. ಜನ್ನನಿಗೆ ಬಲ್ಲಾಳನು ಉಭಯಕವಿಚಕ್ರವರ್ತಿ ಎಂಬ ಬಿರುದನ್ನು ನೀಡಿ ಗೌರವಿಸಿದನು. ಪ್ರಜೆಗಳ ಏಳಿಗಾಗಿ, ಕೃಷಿ ಅಭಿವೃದ್ಧಿಗಾಗಿ ಬಲ್ಲಾಳನು ಕೆರೆ, ಕಟ್ಟೆ ಕಾಲುವೆಗಳನ್ನು ನಿರ್ಮಿಸಿದನು. ಕೃಷಿ ಭೂಮಿಯನ್ನು ವಿಸ್ತರಿಸಿದನು. ವ್ಯಾಪಾರ ವಾಣಿಜ್ಯಕ್ಕೆ ಪ್ರೋತ್ಸಾಹ ನೀಡಿದರು. ಸ್ಥಳೀಯ ದೊಡ್ಡ

ವ್ಯಾಪಾರಿಗಳನ್ನು ಪುರಸಭೆ ಮತ್ತು ನಾಡುಗಳ ಮುಖಂಡರಾಗಿ ನೇಮಿಸಿ ಗೌರವಿಸಿದನು. ಹಳೇಬೀಡು ಬೇಲೂರು ಆಸಂದಿ, ಬಂಕಾಪುರ, ಭಟ್ಕಲ್, ಬೆಳಗೊಳ, ಮೇಲ್ಕೋಟೆ, ತಲಕಾಡು ಮತ್ತು ಇತರ ಸ್ಥಳಗಳು ವ್ಯಾಪಾರ ಕೇಂದ್ರಗಳಾಗಿದ್ದವು. ವ್ಯವಸಾಯ, ವ್ಯಾಪಾರಕ್ಕೆ ನೀಡಿದ್ದ ಪ್ರೋತ್ಸಾಹ ಶ್ಲಾಘನೀಯವಾದುದು.

ತನ್ನ ಅರ್ಧ ಶತಮಾನದ ವರ್ಣರಂಜಿತ ಆಳ್ವಿಕೆಯಲ್ಲಿ ಹೊಯ್ಸಳ ರಾಜ್ಯವನ್ನು ಸಾಮ್ರಾಜ್ಯವಾಗಿ ಮಾರ್ಪಡಿಸಿ ಹೊಯ್ಸಳರ ಪ್ರಭುತ್ವವನ್ನು ದಕ್ಷಿಣ ಭಾರತದಲ್ಲಿ ಅಜೇಯ ಸಾಮ್ರಾಜ್ಯವಾಗಿ ಮಾಡಿ ಧರ್ಮ, ಸಾಹಿತ್ಯ ಕಲೆಗಳಿಗೆ ವಿಶೇಷ ಪ್ರೋತ್ಸಾಹನೀಡಿ, ಪ್ರಜೆಗಳ ಏಳಿಗೆಗೆ ಕಾರಣವಾದ ವೀರಬಲ್ಲಾಳನು ಕ್ರಿ.ಶ 1220ರಲ್ಲಿ ಕೀರ್ತಿಶೇಷನಾದನು. ಅವನ ಮರಣ ವಾರ್ತೆಯನ್ನು ತಿಳಿದಕೂಡಲೇ ಅವನ ಅನೇಕ ನೆಚ್ಚಿನ ಭಟರು, ಗರುಡರು, ಲೆಂಕರು ಪ್ರಾಣಾರ್ಪಣೆ ಮಾಡಿಕೊಂಡರು ಅವರಲ್ಲಿ ಕುವರಲಕ್ಷ್ಮೀ ಎಂಬುವವನು ಮುಖ್ಯನು.

## ವೀರರಾಮನಾಥ (ಕ್ರಿ.ಶ 1256–1294)

ವೀರ ರಾಮನಾಥನು ಪ್ರಾರಂಭದಲ್ಲಿ ಕಣ್ಣಾನೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಸ್ಥಾಪಿಸಿದರು. ಅವನು ಬಹುಬೇಗ ಜಟಾವರ್ಮನ್ ಸುಂದರ ಪಾಂಡ್ಯನಿಂದ ಪರಾಜಿತನಾಗಿ ತನ್ನ ರಾಜ್ಯದ ಹೆಚ್ಚು ಭಾಗವನ್ನೂ ಕೊನೆಗೆ ರಾಜಧಾನಿಯನ್ನು ಕಳೆದುಕೊಂಡನು. ಅನಂತರ ಹೊಸೂರು ಬಳಿಯ ಕುಂದಾಣಿ ಗ್ರಾಮವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ತನ್ನ ಸಹೋದರನಾದ ವೀರನರಸಿಂಹನ ರಾಜ್ಯದ ಮೇಲೆ ನಿರಂತರವಾದ ಆಕ್ರಮಣದಲ್ಲಿ ತೊಡಗಿದನು. ಅವನು ಕುಣಿಗಲ್‌ವರೆಗೂ ಧಾಳಿಯನ್ನು ಮುಂದುವರಿಸಿದನು. ಆದರೆ ವೀರನರಸಿಂಹನಿಂದ ಪರಾಜಿತನಾಗಿ ಹಿಂದಿರುಗಬೇಕಾಯಿತು. ಆದರೂ ಆಕ್ರಮಣಗಳನ್ನು ಮುಂದುವರಿಸಿದನು. ಕ್ರಮೇಣ ವೀರನರಸಿಂಹನೂ ಅವನ ಮಗನಾದ ಮೂರನೇ ಬಲ್ಲಾಳನೂ ರಾಮನಾಥನ ಆಕ್ರಮಣವನ್ನು ಯಶಸ್ವಿಯಾಗಿ ಎದುರಿಸಿದನು.

## ವೀರವಿಶ್ವನಾಥ (ಕ್ರಿ.ಶ 1294–1297)

ವೀರರಾಮನಾಥನ ಮರಣಾನಂತರ ಅವನ ಮಗನಾದ ವೀರವಿಶ್ವನಾಥನು ಕುಂದಾಣಿಯಿಂದ ಸ್ವಲ್ಪಕಾಲ ರಾಜ್ಯಭಾರ ಮಾಡಿದನು. ಆದರೆ ಆ ವೇಳೆಗೆ ದೋರಸಮುದ್ರದಲ್ಲಿ ಸಿಂಹಾಸನಕ್ಕೆ ಬಂದಿದ್ದ ಮೂರನೇ ಬಲ್ಲಾಳನು ರಾಜ್ಯ ವಿಸ್ತರಣೆಯಲ್ಲಿ ತೊಡಗಿ ಕುಂದಾಣಿಯನ್ನು ಆಕ್ರಮಿಸಿದನು. ಕ್ರಿ.ಶ.1298ರ ವೇಳೆಗೆ ಬಲ್ಲಾಳನು ಪುನಃ ಅಖಂಡ ಹೊಯ್ಸಳ ರಾಜ್ಯದ ಅಧಿಪತಿಯಾದನು. ವಿಶ್ವನಾಥನ ಅಂತ್ಯವು ಎಲ್ಲಿ ಮತ್ತು ಯಾರಿಂದ ಸಂಭವಿಸಿತೆಂದು ತಿಳಿದುಬರುವುದಿಲ್ಲ.

## ಮೂರನೇ ವೀರಬಲ್ಲಾಳ (1292–1343)

ಮೂರನೇ ನರಸಿಂಹನ ಮಗನಾದ ಮೂರನೇ ವೀರಬಲ್ಲಾಳನು ಹೊಯ್ಸಳ ಸಂತತಿಯ ಅತಿಸಮರ್ಥ ರಾಜರಲ್ಲಿ ಒಬ್ಬನೂ ಹಾಗೂ ಆ ಸಂತತಿಯ ಕೊನೆಯ ಚಕ್ರವರ್ತಿಯೂ ಆಗಿದ್ದಾನೆ. ಅವನು ಪರಾಕ್ರಮಿಯೂ, ರಾಜತಂತ್ರ ನಿಪುಣನೂ ಆಗಿದ್ದನು. ಆದರೆ ಅವನ ಆಳ್ವಿಕೆಯ ಕಾಲವು ದಕ್ಷಿಣ ಭಾರತದ ಇತಿಹಾಸದಲ್ಲಿ ಜಟಿಲವೂ ಸಂಧಿಗ್ಧವೂ ಆದ ಕಾಲವಾಗಿತ್ತು.

ದೆಹಲಿ ಸುಲ್ತಾನರು ದಕ್ಷಿಣ ಭಾರತದ ಮೇಲೆ ಸತತವಾಗಿ ಆಕ್ರಮಣ ನಡೆಸತೊಡಗಿದರು. ಅಂತಹ ದುರ್ಬಲ ಸಮಯದಲ್ಲಿ ದಕ್ಷಿಣ ರಾಜ್ಯಗಳೆಲ್ಲವೂ ಒಂದೊಂದಾಗಿ ನಿನಾ ೯ಮವಾಗಿದ್ದವು. ವೀರಬಲ್ಲಾಳನು ಪರಾಕ್ರಮದಿಂದ ಹಾಗೂ ಜಾಣ್ಮೆಯಿಂದ ಆಗ ಸಂಭವಿಸಿದ ವಿಪ್ಲವದಿಂದ ತನ್ನ ಮನೆತನದ ಕೀರ್ತಿಯನ್ನು ಹೆಚ್ಚಿಸಿ ದಕ್ಷಿಣ ಭಾರತವನ್ನು ಉತ್ತರದ ದಂಡಯಾತ್ರೆಗಳಿಂದ ಪಾರು ಮಾಡಲು ಹೋರಾಡಿದನು. ಆದರೆ ಅಕಸ್ಮಿಕ ಹೊಡೆತದಿಂದ ತಾನೂ ಕಣ್ಮರೆಯಾದನು. ಹೊಯ್ಸಳ ಸಾಮ್ರಾಜ್ಯವೂ ಇತಿಹಾಸದಿಂದ ನಿರ್ಗಮಿಸಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಸಹಕಾರಿಯಾಯಿತು.

ಮೂರನೇ ವೀರಬಲ್ಲಾಳನು ಪಟ್ಟಕ್ಕೆ ಬರುವ ವೇಳೆಗೆ 28 ವರ್ಷಗಳ ವೀರ ಯುವಕನಾಗಿದ್ದನು. ಯುವರಾಜನಾಗಿದ್ದಾಗಲೇ ತಂದೆಗೆ ಸಹಾಯಕನಾಗಿ ಅನೇಕ

ಯುದ್ಧಗಳಲ್ಲಿ ಭಾಗವಹಿಸಿ ರಾಜ್ಯಕ್ಕೊದಗಿದ ದುರ್ಗತಿಯನ್ನು ಅರಿತಿದ್ದನು. ಪಟ್ಟಕ್ಕೆ ಬಂದ ಕೂಡಲೇ ರಾಜ್ಯವನ್ನು ಸುವ್ಯವಸ್ಥೆಗೊಳಿಸಿ ತನ್ನ ಮನೆತನದಲ್ಲಿ ಗತಿಸಿದ ಪ್ರಾಬಲ್ಯವನ್ನು ಪುನರುಜ್ಜೀವನಗೊಳಿಸಲು ಬದ್ಧ ಕಂಕಣಬದ್ಧನಾದನು. ದಾಯಾದಿ ಕಲಹದಿಂದ ರಾಜ್ಯವನ್ನು ಪಾರುಮಾಡುವುದು ಅವನ ಮೊದಲ ಕರ್ತವ್ಯವಾಗಿತ್ತು. ಚಿಕ್ಕಪ್ಪನಾದ ರಾಮನಾಥನು ಹೀರೆನಾಡು ಮತ್ತು ಚಿತ್ರದುರ್ಗ ಜಿಲ್ಲೆಯವರೆಗೂ ಆಕ್ರಮಣಗಳನ್ನು ಮುಂದುವರಿಸಿದನು. ಬಲ್ಲಾಳನು ಕ್ರಿ.ಶ. 1394ರಲ್ಲಿ ಅವನ ಸೈನ್ಯವನ್ನು ಸೋಲಿಸಿ ಹಿಮ್ಮೆಟ್ಟಿಸಿದನು. ಆ ವೇಳೆಗೆ ರಾಮನಾಥನು ಗತಿಸಿ ಅವನ ಮಗನಾದ ವಿಶ್ವನಾಥನು ಅಧಿಕಾರ ವಹಸಿದನು. ಬಲ್ಲಾಳನಿಗೂ ವಿಶ್ವನಾಥನಿಗೂ ನಡೆದ ಯುದ್ಧಗಳ ಮಾಹಿತಿಯು ಲಭ್ಯವಿಲ್ಲ. ಆದರೆ ಕ್ರಿ.ಶ 1300ರ ವೇಳೆಗೆ ವಿಶ್ವನಾಥನ ಅಧಿಕಾರವು ಕೊನೆಗೊಂಡು ವೀರ ಬಲ್ಲಾಳನು ಹೋಳಾಗಿದ್ದ ರಾಜ್ಯವನ್ನು ಪುನಃ ಒಂದುಗೂಡಿಸಿದನು. ಅನಂತರ ರಾಜ್ಯವನ್ನು ಪಶ್ಚಿಮ ಹಾಗೂ ಉತ್ತರದ ಗಡಿಗಳಲ್ಲಿ ತಲೆದೋರಿದ್ದ ಅಭದ್ರತೆಯನ್ನು ಸರಿಪಡಿಸಲು ತೊಡಗಿದನು.

ದೇವಗಿರಿಯ ಸೇವುಣರು ಹೊಯ್ಸಳ ರಾಜ್ಯದ ಉತ್ತರ ಗಡಿಗಳನ್ನು ಆಕ್ರಮಿಸಿ ಉಪದ್ರವವನ್ನು ಮುಂದುವರಿಸುತ್ತಿದ್ದರು. ಬಲ್ಲಾಳನು ಸೇವುಣರ ಆಕ್ರಮಣವನ್ನು ಕೊನೆಗಾಣಿಸಲು ಕ್ರಿ.ಶ. 1301ರಲ್ಲಿ ತನ್ನ ಸೈನ್ಯವನ್ನು ಕಳುಹಿಸಿದರು. ಆ ಸೈನ್ಯವು, ವಿರೋಧಿಗಳನ್ನೂ ಹಾನಂಗಲ್ಲಿನ ಕದಂಬ ಮೊದಲಾದ ಸೇವುಣರ ಮಾಂಡಲಿಕರನ್ನೂ ಸೋಲಿಸಿ ಸಿರಸಿಯವರೆಗೂ ಹೊಯ್ಸಳ ರಾಜ್ಯದ ಗಡಿಗಳನ್ನು ವಿಸ್ತರಿಸಲಾಯಿತು. ಕ್ರಿ.ಶ 1303ರಲ್ಲಿ ಸೇವುಣ ದಂಡನಾಯಕ ಮುಮ್ಮಡಿ ಸಿಂಗೇಯ ನಾಯಕನ ಮಗ ಕಂಪಿಲನು ತುಂಗಭದ್ರಾ ತೀರದಲ್ಲಿ ಹೊಯ್ಸಳ ಸೈನ್ಯವನ್ನು ಎದುರಿಸಿದನು. ಬಲ್ಲಾಳನ ಭಾವಮೈದುನನೂ ದಂಡನಾಯಕನೂ ಆದ ಸೋಮೇಯ ದಂಡನಾಯಕನು ಕಂಪಿಲನು ಎದುರಿಸಿ ವೀರಾವೇಶದಿಂದ ಯುದ್ಧಮಾಡಿ ಸೇವುಣರ ಪಡೆಗಳನ್ನು ಸೋಲಿಸಿ ತಾನೂ ರಣರಂಗದಲ್ಲಿ ಅಸುನೀಗಿದನು. ಕೂಡಲೇ ಬಲ್ಲಾಳನು ಸೈನ್ಯದ ನಾಯಕತ್ವನ್ನು ವಹಿಸಿ ಸೇವುಣ ಬಲವನ್ನು ಹಿಮ್ಮೆಟ್ಟಿಸಿದನು. ಕ್ರಿ.ಶ 1305ರ ವೇಳೆಗೆ ಪುನಃ ಸೇವುಣ ರಾಜ ರಾಮಚಂದ್ರ ದೇವನು ಹೊಯ್ಸಳ ರಾಜ್ಯದ ಮೇಲೆ ಅಕ್ರಮಣಕ್ಕಾಗಿ ಸೈನ್ಯ ಕಳುಹಿಸಿದನು. ಬಲ್ಲಾಳನನ್ನು ಸೆರೆಹಿಡಿದು

ತರಬೇಕೆಂದು ತನ್ನ ದಳಪತಿಗಳಿಗೆ ಆದೇಶ ನೀಡಿದ್ದನು. ಬಲ್ಲಾಳನು ಆ ವೇಳೆಗೆ ತುಂಗಭದ್ರತೀರದ ಕಂಪಿಲೆಯಲ್ಲಿ ಅಧಿಕಾರ ಸ್ಥಾಪಿಸಿದ್ದ ಕಂಪಿಲ ರಾಯನನ್ನೂ ಸೇವುಣ ಸೈನ್ಯವನ್ನು ಸೋಲಿಸಿ ಓಡಿಸಿದುದಲ್ಲದೆ ಬೆಳುವೊಲ ಪ್ರದೇಶವನ್ನು ಆಕ್ರಮಿಸಿ ಲೊಕ್ಕಿಗುಂಡಿವರೆಗೂ ರಾಜ್ಯವನ್ನು ವಿಸ್ತರಿಸಿದನು. ಆನಂತರ ಬಲ್ಲಾಳನು ರಾಜ್ಯವಿಸ್ತರಣಾ ಕಾರ್ಯದಲ್ಲಿ ತೊಡಗಿ ತನ್ನ ತಾತ ಮುತ್ತಾತಂದಿರ ಕಾಲದ ಹೊಯ್ಸಳ ವೈಭವವನ್ನು ಸ್ಥಾಪಿಸುವಲ್ಲಿ ಪ್ರಯತ್ನಶೀಲನಾಗಿ ತಮಿಳುನಾಡಿನತ್ತ ಗಮನ ಹರಿಸಿದನು.

ವೀರಬಲ್ಲಾಳನು ತಮಿಳುನಾಡಿನಲ್ಲಿ ಹೊಯ್ಸಳರ ಪ್ರಭಾವವನ್ನು ಸ್ಥಾಪಿಸುವ ಪ್ರಯತ್ನದಲ್ಲಿರುವಾಗ ದಕ್ಷಿಣ ಭಾರತಕ್ಕೆ ಹೊಸ ಉಪದ್ರವವು ತಲೆದೋರಿತು. ಕ್ರಿ.ಶ 1311ರಲ್ಲಿ ಅಲ್ಲಾವುದ್ದೀನನ ದಳಪತಿಯಾದ ಮಲ್ಲಿಕಾಫರನ್ನು ದಕ್ಷಿಣದ ರಾಜ ಮನೆತನಗಳನ್ನು ಸೋಲಿಸಿ ಅಪರಿಮಿತ ಐಶ್ವರ್ಯವನ್ನು ದೋಚುವ ಉದ್ದೇಶಕ್ಕಾಗಿ ನೇಮಕಗೊಂಡು ದೇವಗಿರಿಯ ಸೇವುಣರನ್ನು ಸೋಲಿಸಿ ದೋರಸಮುದ್ರ ಮತ್ತು ಮಧುರೈಯತ್ತಾ ಮುಂದುವರಿದನು. ಕಾಫರನು ಹೊಯ್ಸಳ ಗಡಿಗಳನ್ನು ಪ್ರವೇಶಿಸುವ ವೇಳೆಯಲ್ಲಿ ವೀರಬಲ್ಲಾಳನು ಸೈನ್ಯ ಸಮೇತನಾಗಿ ತಮಿಳುನಾಡಿನಲ್ಲಿದ್ದನು. ಪಾಂಡ್ಯ ರಾಜಕುಮಾರರು ಸಿಂಹಾಸನಕ್ಕಾಗಿ ಕಲಹದಲ್ಲಿ ತೊಡಗಿ ಅವರಲ್ಲೊಬ್ಬನು ಬಲ್ಲಾಳನ ಸಹಾಯವನ್ನು ಯೋಚಿಸಿದನು. ಇಂತಹ ಸಂದರ್ಭಕ್ಕಾಗಿ ಕಾಯುತ್ತಿದ್ದ ಬಲ್ಲಾಳನು ಮಧುರೆಯತ್ತ ಧಾವಿಸಿದ್ದನು. ಮಲ್ಲಿಕಾಫರ ದಂಡೆಯಾತ್ರೆಯ ಸುದ್ಧಿ ತಿಳಿದೊಡನೆ ಅವನು ದೋರಸಮುದ್ರಕ್ಕೆ ಪ್ರಯಾಣ ಕೈಗೊಂಡು ಶತ್ರುವನ್ನು ತಡೆಯುವ ವಿಧಾನವನ್ನು ಯೋಚಿಸಲು ಇಂತಹ ಸಂದರ್ಭಕ್ಕಾಗಿ ಕಾಯುತ್ತಿದ್ದ ಬಲ್ಲಾಳನು ಮಧುರೆಯತ್ತ ಧಾವಿಸಿದ್ದನು. ಮಲ್ಲಿಕಾಫರನ ದಂಡೆಯಾತ್ರೆಯ ಸುದ್ಧಿ ತಿಳಿದೊಡನೆ ಅವನು ದೋರಸಮುದ್ರಕ್ಕೆ ಪ್ರಯಾಣ ಕೈಗೊಂಡು ಶತ್ರುವನ್ನು ತಡೆಯುವ ವಿಧಾನವನ್ನು ಯೋಚಿಸಿದನು. ಆ ವೇಳೆಗೆ ಹೊಯ್ಸಳ ಸೈನ್ಯವು ಗಡಿಪ್ರದೇಶದಲ್ಲಿ ಕಾಫರನಿಂದ ಪರಾಜಯಗೊಂಡಿತ್ತು. ಮಹಮ್ಮದೀಯ ಸೈನ್ಯವು ಗಡಿಪ್ರದೇಶದಲ್ಲಿ ಕಾಫರನಿಂದ ಪರಾಜಯಗೊಂಡಿತ್ತು. ಮಹಮ್ಮದಿಯ ಸೈನ್ಯವು ರಾಜಧಾನಿಯನ್ನು ಸಮೀಪಿಸಿತು. ಸುತ್ತಮುತ್ತಿನ ಪ್ರದೇಶಗಳು ಶತ್ರು ಸೈನ್ಯದ ಧಾಳಿಗೆ ಸಿಕ್ಕಿ ಪಾಳುಬಿದ್ದವು. ಬಲ್ಲಾಳನು

ಅನಿರೀಕ್ಷಿತವಾಗಿ ಒದಗಿದ ಈ ದುರ್ಬಲ ಸ್ಥಿತಿಯಿಂದ ರಾಜ್ಯವನ್ನು ರಕ್ಷಿಸಲು ಕಾಫರನೊಡನನೆ ಒಪ್ಪಂದಕ್ಕೆ ಒಡಂಬಡಬೇಕಾಯಿತು. ಅವನಿಗೆ ವಿಶೇಷ ಐಶ್ವರ್ಯವನ್ನು ನೀಡುವುದರ ಮೂಲಕ ಯುದ್ಧವನ್ನು ಮತ್ತು ಭೀಕರ ಪರಿಣಾಮವನ್ನು ಪರಿಹರಿಸಿದನು. ಅನಂತರ ಮಹಮ್ಮದೀಯ ಸೈನ್ಯವು ದೇವಾಲಯಗಳನ್ನು ಸೂರೆ ಮಾಡಿ ವಿಶೇಷ ಐಶ್ವರ್ಯದೊಡನೆ ಹಿಂದಿರುಗಿ ಹೋಗುವಾಗ ಕಾಫರನ ಅಪೇಕ್ಷೆಯಂತೆ ವೀರಬಲ್ಲಾಳನು ತನ್ನ ಕುಮಾರನಾದ ನಾಲ್ಕನೇ ಬಲ್ಲಾಳನನ್ನು ಗೌರವದಿಂದ ಬರಮಾಡಿಕೊಂಡು ಅವನಿಗೆ ಉಚಿತ ಉಡುಗೊರೆಯನ್ನು ನೀಡಿ ಹಿಂದಕ್ಕೆ ಕಳುಹಿಸಿದನು. ಕುಮಾರ ಬಲ್ಲಾಳನು ಕ್ರಿ.ಶ 1313ರಲ್ಲಿ ಹಿಂದಿರುಗಿ ಬಂದಾಗ ದೋರಸಮುದ್ರಲ್ಲಿ ವಿಶೇಷ ಸಂಭ್ರಮಗಳು ಜರುಗಿದವು. ಮಹಮ್ಮದೀಯ ದಾಳಿಯಿಂದ ದೇವಗಿರಿಯ ಸೇವುಣ ಹಾಗೂ ಮಧುರೆಯ ಪಾಂಡ್ಯ ರಾಜಮನೆತನಗಳು ಅಂತ್ಯಗೊಂಡವು.

ತಮಿಳುನಾಡಿನಲ್ಲಿ ಕೈಬಿಟ್ಟು ಹೋಗಿದ್ದ ಪ್ರದೇಶಗಳ ಮೇಲೆ ಹೊಯ್ಸಳರ ಅಧಿಕಾರವನ್ನು ಪುನಃ ಸ್ಥಾಪಿಸಿದನು. ತುಂಗಭದ್ರಾ ತೀರದ ಸಣ್ಣಪುಟ್ಟ ಪಾಳೆಯಗಾರರನ್ನು ಸೋಲಿಸಿ ಅವರು ಹೊಯ್ಸಳರ ಪರಮಾಧಿಕಾರವನ್ನು ಒಪ್ಪುವಂತೆ ಮಾಡಿದನು. ಮುಮ್ಮಡಿ ವೀರಬಲ್ಲಾಳನು ಹೊಯ್ಸಳರ ಪ್ರಭುತ್ವವನ್ನು ದಕ್ಷಿಣ ಭಾರತದಲ್ಲಿ ಅಜೇಯ ಸಾಮ್ರಾಜ್ಯವನ್ನಾಗಿ ಮಾಡಲು ಪ್ರಯತ್ನಶೀಲನಾಗಿದ್ದಾಗ ಪುನಃ ಉತ್ತರದಿಂದ ಉಪದ್ರವ ತಲೆದೋರಿತು. ಆ ವೇಳೆಗೆ ಖಿಲ್ಜಿ ಮನೆನತದ ಆಳ್ವಿಕೆ ಕೊನೆಗೊಂಡು ತೊಗಲಕ್ ಮನೆತನದ ಆಳ್ವಿಕೆ ಉತ್ತರಭಾರತದಲ್ಲಿ ಪ್ರಾರಂಭವಾಗಿತ್ತು. ಮಹಮ್ಮದ್ ಬಿನ್ ತೊಗಲಕ್‌ನು ದಖನ್ ಪ್ರಸ್ಥಭೂಮಿಯವರೆಗೂ ರಾಜ್ಯವನ್ನು ವಿಸ್ತರಿಸಿದನು. ಅವನು ತನ್ನ ಹತ್ತಿರದ ಸಂಬಂಧಿ ಬಹಾವುದ್ಧಿನ್‌ನನ್ನು ತನ್ನ ರಾಜ್ಯ ದಕ್ಷಿಣ ಪ್ರದೇಶಗಳ ಮಾಂಡಲಿಕನಾಗಿ ನೇಮಿಸಿದನು. ಕ್ರಿ.ಶ 1326ರಲ್ಲಿ ಬಹಾವುದ್ದೀನನು ಮಹಮ್ಮದ್ ಬಿನ್ ತೊಗಲಕ್‌ನ ವಿರುದ್ಧ ದಂಗೆಯೆದ್ದುದರಿಂದ ಅವನನ್ನು ಶಿಕ್ಷಿಸಲು ತೊಗಲಕ್‌ನು ದೊಡ್ಡ ಸೈನ್ಯವನ್ನು ಕಳುಹಿಸಿದನು. ಬಹಾವುದ್ದೀನನು ತೊಗಲಕ್‌ನ ಸೈನ್ಯವು ಅವನನ್ನು ಹಿಂಬಾಲಿಸಿ ವಾರಂಗಲ್ಲನ್ನು ಮುತ್ತಿ ನಾಶಪಡಿಸಿದನು. ಬಹಾವುದ್ಧೀನನು ಅಲ್ಲಿಂದ ಕಂಪಿಲರಾಯನ ಆಸ್ಥಾನಕ್ಕೆ ಓಡಿ ಬಂದನು. ತೊಗಲಕ್‌ನ ಸೈನ್ಯ

ಕಂಪಿಲೆಯನ್ನು ಮುತ್ತಿ ಸರ್ವನಾಶಪಡಿಸಿತು. ಅನಂತರ ಬಹಾವುದ್ದೀನನು ಬಲ್ಲಾಳನ ರಾಜಧಾನಿಗೆ ಧಾವಿಸಿದನು. ವಾರಂಗಲ್ ಮತ್ತು ಕಂಪಿಲೆ ಮನೆತನಗಳಿಗೆ ಒದಗಿದ ವಿನಾಶವನ್ನರಿತ ಬಲ್ಲಾಳನು ಬಹಾವುದ್ದೀನನ್ನು ಬಂಧಿಸಿ ತೊಘಲಕ್‌ನ ಸೈನ್ಯಕ್ಕೆ ಒಪ್ಪಿಸಿದನು. ಬಹಾವುದ್ದೀನನನ್ನು ದೆಹಲಿಗೆ ಕರೆದುಕೊಂಡು ಹೋಗಿ ಅಲ್ಲಿ ಅವನನ್ನು ಧರ್ಮ ಸುಲಿಸಿ ಕೊಲ್ಲಲಾಯಿತು.

ತೊಗಲಕ್‌ನ ಆಳ್ವಿಕೆಯ ಕಾಲದಲ್ಲಿ ಹೊಯ್ಸಳ ಸಂತತಿಯ ಹೊರತಾಗಿ ದಕ್ಷಿಣ ಭಾರತದ ಎಲ್ಲ ಪ್ರಸಿದ್ಧ ರಾಜಮನೆತನಗಳೂ ನಿರ್ನಾಮವಾದವು. ದಕ್ಷಿಣ ಭಾರತವನ್ನು ಮಹಮ್ಮದೀಯರ ಧಾಳಿಯಿಂದ ರಕ್ಷಿಸಲು ಬಲ್ಲಾಳನು ನಿರ್ಧರಿಸಿದನು. ಆಡಳಿತವನ್ನು ಸಜ್ಜುಗೊಳಿಸಿ ದಾಳಿಗಳನ್ನು ತಡೆಗಟ್ಟುವ ಅಜೇಯ ಸೈನ್ಯ ಶಕ್ತಿಯ ಸ್ಥಾಪನೆಗೆ ಬಲ್ಲಾಳನು ಹೆಚ್ಚು ಗಮನ ಕೊಟ್ಟನು. ರಾಜ್ಯದ ಅನೇಕ ಕಡೆಗಳಲ್ಲಿ ಸುಗಮ ರಕ್ಷಣಾ ವ್ಯವಸ್ಥೆಗಾಗಿ ಅನೇಕ ಉಪರಾಜಧಾನಿಗಳನ್ನು ಸ್ಥಾಪಿಸಿದನು. ತಮಿಳುನಾಡಿನ ಬಾರಕನೂರು, ತಮಿಳುನಾಡಿನ ತಿರುವಣ್ಣಾಮಲೈ ಮತ್ತು ತುಂಗಭದ್ರಾ ತೀರದ ಹೊಸಪಟ್ಟಣಗಳನ್ನು ಉಪರಾಜಧಾನಿಗಳನ್ನಾಗಿ ಮಾಡಿಕೊಂಡು ಅಲ್ಲಿ ಬಲವಾದ ರಕ್ಷಣಾಪಡೆಗಳನ್ನು ಸ್ಥಾಪಿಸಿದನು. ಸಾಮ್ರಾಜ್ಯದಲ್ಲಿ ವ್ಯಾಪಕವಾದ ಸಂಚಾರ ಕೈಗೊಂಡು ಸಂಸ್ಥಾನಿಕರಿಗೂ, ಮಾಂಡಲಿಕರಿಗೂ, ಪಾಳೆಯಗಾರರಿಗೂ ಎದುರಿಸಬೇಕಾಗಿದ್ದ ಉಪದ್ರವವನ್ನು ಮನವರಿಕೆ ಮಾಡಿಕೊಟ್ಟ. ಐಕ್ಯಮತಕ್ಕಾಗಿ ಕರೆನೀಡಿದನು. ತಿರುಪತಿ, ಕಂಚಿ ಮೊದಲಾದ ಧರ್ಮ ಕ್ಷೇತ್ರಗಳಲ್ಲಿ ಸಂಚರಿಸಿ ವಿಶೇಷ ಪೂಜಾರ್ಚನೆಗಳನ್ನು ನೆರವೇರಿಸಿದನು. ಕ್ರಿ.ಶ ೧೩೩೯ರಲ್ಲಿ ತುಂಗಭದ್ರಾ ತೀರದಲ್ಲಿ ಹೊಸ ಪಟ್ಟಣವನ್ನು ಸ್ಥಾಪಿಸಿ ಅಲ್ಲಿ ತನ್ನ ಕುಮಾರನಾದ ವಿಜಯ ವಿರುಪಾಕ್ಷ ಬಲ್ಲಾಳನಿಗೆ ಪಟ್ಟಾಭೀಷೇಕ ಮಹೋತ್ಸವವನ್ನು ನೇರವೇರಿಸಿದನು. ವೀರಬಲ್ಲಾಳನು ತುಂಗಭದ್ರಾ ತೀರದಲ್ಲಿ ಸ್ಥಾಪಿಸಿದ ಪಟ್ಟಣವನ್ನು ಹೊಸಪಟ್ಟಣ, ವಿಜಯ ವಿರೂಪಾಕ್ಷಪುರ, ಹೊಸವೀಡು, ಹೊಸದುರ್ಗ ಎಂಬುದಾಗಿ ಶಾಸನಗಳಲ್ಲಿ ಹೆಸರಿಸಲಾಗಿದೆ. ಬಲ್ಲಾಳನು ಕಟ್ಟಿಸಿದ ಈ ಹೊಸಪಟ್ಟಣವೇ ಮುಂದೆ ವಿಜಯನಗರವೆಂದು ಪ್ರಸಿದ್ಧಿಗೆ ಬಂದಿತ್ತೆಂದು ಹಲವು ವಿದ್ವಾಂಸರು

ಅಭಿಪ್ರಾಯಪಟ್ಟಿದ್ದಾರೆ. ವೀರಬಲ್ಲಾಳನು ನಿರಂತರ ಪ್ರಯಾಸದಿಂದ ಇಡೀ ದಕ್ಷಿಣ ಭಾರತದಲ್ಲಿ ಸಾರ್ವಭೌಮತ್ವವನ್ನು ಸ್ಥಾಪಿಸಿ ರಾಮೇಶ್ವರದಲ್ಲಿ ಒಂದು ವಿಜಯಸ್ತಂಭವನ್ನು ಸ್ಥಾಪಸಿದನು.

ಕ್ರಿ.ಶ 1334ರ ವೇಳೆಗೆ ಮಧುರೆಯಲ್ಲಿ ಮಹಮ್ಮದೀಯರ ಆಳ್ವಿಕೆ ಸ್ಥಾಪನೆಯಾಯಿತು. ಅಲ್ಲಿ ಹಲವೇ ವರ್ಷಗಳಲ್ಲಿ ಅನೇಕ ಸುಲ್ತಾನರು ಅಧಿಕಾರ ಲಾಲಸೆಯಿಂದ ಕೊಲೆಗೀಡಾದರು. ಕ್ರಿ.ಶ 1342ರ ವೇಳೆಗೆ ಅಲ್ಲಿ ಗಯಾಸುದ್ದೀನ್ ಎಂಬುವನು ಸುಲ್ತಾನನಾಗಿದ್ದನು. ಅವನು ಹಿಂದೂಗಳಿಗೆ ಉಗ್ರ ದಂಡನೆಯನ್ನು ನೀಡುತ್ತಾ ಮತಾಂಧನಾಗಿದ್ದನು. ಅವನ ಉಪದ್ರವವನ್ನು ಕುರಿತಾದ ವರದಿಗಳನ್ನು ಬಲ್ಲಾಳನಿಗೆ ತಲುಪಿದವು. ಬಲ್ಲಾಳನು ಅಪರಿಮಿತ ಸೈನ್ಯಗಳೊಡನೆ ಮಧುರೈಗೆ ಧಾವಿಸಿದನು. ಕೊಪ್ಪಂ ಕಣ್ಣಾನೂರಿನ ಬಳಿಯಲ್ಲಿ ಸುಲ್ತಾನನ ಸೈನ್ಯ ಬಲ್ಲಾಳನನ್ನು ಎದುರಿಸಿ ಸಂಪೂರ್ಣವಾಗಿ ಸೋತು ಶರಣಾಗತವಾಗಿ ಅಲ್ಲಿಂದ ಹೊರಟು ಹೋಗಲು ಹದಿನಾಲ್ಕು ದಿವಸಗಳ ಅವಧಿಯನ್ನು ಬೇಡಿತು. ಬಲ್ಲಾಳನು ಉದಾರವಾಗಿ ಅವರ ಬೇಡಿಕೆ ಒಪ್ಪಿಗೆ ನೀಡಿದನು. ಈ ಅವಧಿಯಲ್ಲಿ ಪಕ್ಕದ ಅರಣ್ಯದಲ್ಲಿ ಹೊಯ್ಸಳ ಸೈನ್ಯವು ಶಿಬಿರನ್ನೇರ್ಪಡಿಸಿಕೊಂಡಿತು. ಶತ್ರುಗಳ ಭೀತಿ ನಿವಾರಣೆಯಾಯಿತ್ತೆಂದು ಹೊಯ್ಸಳರ ಸೈನ್ಯ ಅಜಾಗರೂಕತೆಯಿಂದಿತು. ಆದರೆ ಈ ಅವಧಿ ಮುಗಿಯುವ ಮುನ್ನ ಹೊಯ್ಸಳ ಸೈನ್ಯ ಅಜಾಗರೂಕತೆಯಿಂದ ನಿರಾಯುಧವಾಗಿದ್ದ ಸಮಯದಲ್ಲಿ ಸುಲ್ತಾನರ ಸೈನ್ಯ ಆಕ್ರಮಣ ಮಾಡಿತು. ಮುಂದಿನ ದುರಂತವನ್ನು ಪ್ರತ್ಯೇಕ್ಷ ದರ್ಶಿಯಾದ ಇಬನ್ ಭೂತುಗನು ಯಥವತ್ತಾಗಿ ವಿವರಿಸಿರುವನು. ಇವನ ಪ್ರಕಾರ ಮಧ್ಯಾಹ್ನದ ವೇಳೆಯಲ್ಲಿ ಹೊಯ್ಸಳ ಸೈನಿಕರು ಕುದುರೆಯನ್ನು ಮೇಯಲು ಬಿಟ್ಟು ವಿಶ್ರಾಂತಿ ಪಡೆಯುತ್ತಿದ್ದಾಗ ಈ ಧಾಳಿ ನಡೆಯಿತು. ಮಹಮ್ಮದೀಯ ಸೈನ್ಯದ ಅನಿರೀಕ್ಷಿತ ಧಾಳಿಯಿಂದ ಕಂಗೆಟ್ಟ ಹೊಯ್ಸಳ ಸೈನ್ಯವು ದಿಕ್ಕುದಿಕ್ಕಿಗೆ ಓಡತೊಡಗಿತ್ತು. ಸುಮಾರು 80 ವರ್ಷ ವಯಸ್ಸಿನ ವೀರಬಲ್ಲಾಳ ಚಕ್ರವರ್ತಿ ಕುದುರೆಯೇರಿ ಸೈನನ್ಯದಲ್ಲಿ ಸ್ಥೈರ್ಯ ಮೂಡಿಸುವ ಪ್ರಯತ್ನದಲ್ಲಿದ್ದಾಗ ವೈರಿಗಳಿಗೆ ಸೆರೆ ಸಿಕ್ಕಿದನು. ವೃದ್ಧ ಬಲ್ಲಾಳನನ್ನು ಮಧುರೈಗೆ ಕೆರೆದುಕೊಂಡು ಹೋಗಿ ಸುಲ್ತಾನನ ಮುಂದೆ ನಿಲ್ಲಿಸಲಾಯಿತು. ಸುಲ್ತಾನನು ಹೇರಳವಾದ ಧನಕನಕವನ್ನು ದೋರಸಮುದ್ರದಿಂದ ತರಿಸಿಕೊಟ್ಟರೆ ಅವನನ್ನು ಬಿಡುಗಡೆ ಮಾಡುವುದಾಗಿ ತಿಳಿಸಿದನು. ಅಪರಿಮಿತ ಐಶ್ವರ್ಯವನ್ನು

ಬಲ್ಲಾಳನಿಂದ ಪಡೆದ ಕೂಡಲೇ ವೃದ್ಧ ಚಕ್ರವರ್ತಿಯನ್ನು ಕೊಲ್ಲಿಸಿ ಅವನ ಧರ್ಮವನ್ನು ತೆಗೆಸಿ ಅದಕ್ಕೆ ದ್ರಾವಣಗಳನ್ನು ಸಿಂಪಡಿಸಿ ಮಧುರೈಯ ಕೋಟೆಯ ಗೋಡೆಯ ಮೇಲೆ ನೇತುಹಾಕಿಸಲಾಯಿತು. ಮೂರನೇ ವೀರಬಲ್ಲಾಳನು ಕೊಲೆಯಾದ ನಂತರ ಅವನ ಮಗ ವಿಜಯ ವಿರೂಪಾಕ್ಷ ಬಲ್ಲಾಳನು ನಾಲ್ಕನೇ ಬಲ್ಲಾಳ ಎಂಬ ಹೆಸರಿನಿಂದ ಸಿಂಹಾಸನಕ್ಕೆ ಬಂದರು. ಹೊಯ್ಸಳ ರಾಜ್ಯರವಿಯು ಆಗಲೇ ಅಸ್ತಂಗತನಾಗಿದ್ದನು.

ಮುಮ್ಮಡಿ ವೀರಬಲ್ಲಾಳನು ಪರಾಕ್ರಮದಿಂದಲೂ ವಿಚಕ್ಷಣತೆಯಿಂದಲೂ ಸಾಮ್ರಾಜ್ಯದ ರಕ್ಷಣೆಗಾಗಿ ಕೊನೆಯವಗೆಗೂ ಹೋರಾಡಿ ಹೋಳಾಗಿದ್ದ ರಾಜ್ಯವನ್ನು ಒಂದುಗೂಡಿಸಿದನು. ಕೈಬಿಟ್ಟು ಹೋಗಿದ್ದ ಪ್ರದೇಶಗಳನ್ನು ವಶಪಡಿಸಿಕೊಂಡನು. ದಕ್ಷ ಆಡಳಿತವನ್ನು ಸ್ಥಾಪಿಸಿದನು. ನಾಡಿನಲ್ಲಿ ನವ ಹುಮ್ಮಸ್ಸನ್ನು ಮೂಡಿಸಿದನು. ವಿಧಿವಿಪರ್ಯಾಸದಿಂದ ಮಡಿದನು. ದಕ್ಷಿಣ ಭಾರತವನ್ನು ಮಹಮ್ಮದೀಯ ಧಾಳಿಗಳಿಂದ ರಕ್ಷಿಸಲು ಸಮರ್ಥ ಸಾರ್ವಭೌಮತ್ವವನ್ನು ಸ್ಥಾಪಿಸುವದು, ಅವನ ಸಂಕಲ್ಪವಾಯಿತು. ಅವನ ಸಂಕಲ್ಪ ಇನ್ನೇನು ನೆರವೇರಿತು ಎನ್ನುವಷ್ಟರಲ್ಲಿ ಅವನು ಹುತಾತ್ಮನಾದನು. ಆದರೆ ಅವನ ಸಂಕಲ್ಪಕ್ಕೆ ಚ್ಯುತಿ ಬರಲಿಲ್ಲ. ಅವನ ಧ್ಯೇಯ ವಿಜಯನಗರ ಸ್ಥಾಪನೆಯ ಮೂಲಕ ನೇರವೇರಿದಂತಾಯಿತು. ಮೂರನೇ ವೀರಾಬಲ್ಲಾಳನ ಮರಣ ವಾರ್ತೆಯು ಸಾಮ್ರಾಜ್ಯದಲ್ಲಿ ಪ್ರಸರಿಸುತ್ತಿದ್ದಂತೆಯೇ ಸಾಮ್ರಾಜ್ಯ ಅದೃಶ್ಯವಾಯಿತು.

## ವಿಜಯನಗರ ಸಾಮ್ರಾಜ್ಯದ ಉಗಮ

ದಕ್ಷಿಣ ಭಾರತದ ರಾಜಮನೆತನಗಳಾದ ದೇವಗಿರಿಯ ಸೇವುಣರು ಓರಂಗಲ್ಲಿನ ಕಾಕತೀಯರು ಮತ್ತು ಮಧುರೆಯ ಪಾಂಡ್ಯರು, ಅಲ್ಲಾವುದ್ದೀನ್ ಖಿಲ್ಜಿ ಮತ್ತು ಮಹಮ್ಮದ್ ಬಿನ್ ತೊಗಲಕ್‌ರ ದಾಳಿಗಳಿಂದ ವಿನಾಶ ಹೊಂದಿದವು. ದೋರಸಮುದ್ರದ ಹೊಯ್ಸಳ ಮನೆತನವೊಂದು ಮಾತ್ರ ಉತ್ತರದ ಮಹಮ್ಮದೀಯರ ಧಾಳಿಯಿಂದ ಉಳಿದ ಕೆಲ ಕಾಲ ಮುಂದುವರೆಯಿತು. ಆದರೆ ಆ ಸಂತತಿಯ ಕೊನೆಯ ಪ್ರಖ್ಯಾತ ರಾಜರಾದ ಮೂರನೇ ವೀರಬಲ್ಲಾಳನು ಮಧುರೈಯ ಸುಲ್ತಾನನ್ನು ಅಡಗಿಸಲು ಯತ್ನಿಸಿದಾಗ ಕ್ರಿ.ಶ ೧೩೪೩ರಲ್ಲಿ ಮೋಸದಿಂದ ಕೊಲೆ ಮಾಡಲ್ಪಟ್ಟನು. ಹೊಯ್ಸಳ ಸಂತತಿ ಮತ್ತು ಸಾಮ್ರಾಜ್ಯವು ಆ ಕೂಡಲೇ

ಅಸ್ತಂಗತವಾಯಿತು. ಉಮ್ಮಳಿಸುತ್ತಿದ್ದ ಮಹಮ್ಮದೀಯ ಆಕ್ರಮಣ ಹಾಗೂ ಕೇವಲ ಆಶಾದಾಯಕವಾಗಿದ್ದ ಹೊಯ್ಸಳ ಸಾಮ್ರಾಜ್ಯದ ಮಿಂಚಿನ ವೇಗದ ನಿರ್ನಾಮ, ಈ ಕಾರಣಗಳಿಂದ ದಕ್ಷಿಣ ಭಾರತದಲ್ಲಿ ರಾಜಕೀಯ ಶೂನ್ಯವು, ಸಂಧಿಗ್ದ ವಾತಾವರಣವು ಉಂಟಾದವು. ಹೊಯ್ಸಳ ಸಾಮ್ರಾಜ್ಯವು ಬಹು ಬೇಗ ನಾಶವಾಯಿತು. ಅದರ ಪ್ರದೇಶದಲ್ಲಿ ಅಷ್ಟೇ ಬೇಗ ವಿಜಯನಗರ ಸಾಮ್ರಾಜ್ಯ ಅಂಕುರಾರ್ಪಣೆಯಾಗಿ ತುಂಗಭದ್ರಾ ನದಿಯ ದಕ್ಷಿಣ ಭಾಗವನ್ನೆಲ್ಲಾ ವ್ಯಾಪಿಸಿತು.[18]

ವಿಜಯನಗರ ಸಾಮ್ರಾಜ್ಯದ ಸ್ಥಾಪಕರು ಸಂಗಮನ ಮಕ್ಕಳಾದ ಹರಿಹರ, ಬುಕ್ಕ, ಕಂಪನ, ಮಾರಪ್ಪ ಮತ್ತು ಮುದ್ದಪ್ಪ ಎಂಬ ಐವರು ಸಹೋದರರು ಇವರಲ್ಲಿ ಹರಿಹರ ಮತ್ತು ಬುಕ್ಕರ ಪಾತ್ರ ಹಿರಿದಾದದು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಸಂಬಂಧಿಸಿದಂತೆ ವಿದ್ವಾಂಸರು ವಿಭಿನ್ನ ಭಿನ್ನಭಿಪ್ರಾಯವನ್ನು ಮಂಡಿಸಿದರು.

## ಒಂದನೇ ಹರಿಹರ (ಕ್ರಿ.ಶ 1336–1358)

ವಿಜಯನಗರ ಸಾಮ್ರಾಜ್ಯವನ್ನು ನಾಲ್ಕು ಸಂತತಿಗಳ ರಾಜರು ಆಳಿದರು. ಸಂಗಮ ವಂಶವು ಅವುಗಳಲ್ಲಿ ಮೊದಲನೆಯವು. ಈ ರಾಜರು ಕ್ರಿ.ಶ 1336 ರಿಂದ 1485 ರವರೆಗೆ ಆಳಿದರು. ಹರಿಹರನು ಸಂಗಮನ ಪುತ್ರರಲ್ಲಿ ಹಿರಿಯವನು. ಇವನು ತನ್ನ ಸಹೋದರರಾದ ಬುಕ್ಕ, ಮಾರಪ್ಪ, ಒಡೆಯರ್, ಮುದ್ದಪ್ಪ ಒಡೆಯರ್ ಮತ್ತು ಕೆಂಪಣ್ಣ ಒಡೆಯರ್ ಇವರ ಸಹಾಯದಿಂದ ರಾಜ್ಯ ಸ್ಥಾಪಿಸಿದನು. ಕ್ರಿ.ಶ 1336ರಿಂದ 1358ರವರೆಗೆ ಆಳಿದನು. ಇವನು ಹೊಯ್ಸಳರ ಕೊನೆಯ ಸಾಮ್ರಾಟ ಮೂರನೇ ಬಲ್ಲಾಳನ ಅಳಿಯನಾದ ನಾಯಕನ ಕುಮಾರಿಯನ್ನು ವರಿಸಿದ್ದನು. ಒಂದನೇ ಹರಿಹರನು ಮೂರನೇ ವೀರಬಲ್ಲಾಳನಿಂದ ತುಂಗಭದ್ರ ಪ್ರದೇಶದಲ್ಲಿ ಮಾಂಡಲೀಕನಾಗಿ ನೇಮಿಸಲ್ಪಟ್ಟನ್ನೆಂದು ಭಾವಿಸಲಾಗಿದೆ. ಹರಿಹರನು ಕ್ರಿ.ಶ 1336ರಿಂದ 1343ರವರೆಗೆ ಮಹಾಮಂಡಲಿಕ ಎಂಬುದಾಗಿ ಕರೆದುಕೊಂಡಿದ್ದಾನೆ. ಇವನು 1336ರಲ್ಲಿ ಬಾರಕ್ಕೂರಿನ ಕೋಟೆಯನ್ನು ಕಟ್ಟಿಸಿದನು. ಕ್ರಿ.ಶ 1339ರಲ್ಲಿ ಮುಮ್ಮಡಿ ಬಲ್ಲಾಳನು ಹಂಪೆಗೆ ಭೇಟಿ ನೀಡಿ ಅಲ್ಲಿ ತನ್ನ ಮಗನಾದ ವಿಜಯ ವಿರೂಪಾಕ್ಷ ಬಲ್ಲಾಳನ ಯುವ ರಾಜ್ಯಭೀಷೇಕವನ್ನು ನೆರವೇರಿಸಿದನು. ಆ ಪಟ್ಟವನ್ನು ವಿಜಯ

ವಿರೂಪಾಕ್ಷ ಪಟ್ಟಣ ಮತ್ತು ಹೊಸಪಟ್ಟಣ ಎಂಬ ಹೆಸರಿನಿಂದ ಶಾಸನಗಳಲ್ಲಿ ಕರೆಯಲಾಗಿದೆ. ಬಲ್ಲಾಳನು ತನ್ನ ಸಾಮ್ರಾಜ್ಯದ ದಕ್ಷಿಣದಲ್ಲಿ ರಾಜ್ಯ ಆಡಳಿತ ವ್ಯವಸ್ಥೆ ಮತ್ತು ವಿಸ್ತರಣಾ ಕಾರ್ಯದಲ್ಲಿ ತೊಡಗಿದ್ದನು. ಕ್ರಿ.ಶ 1339ರ ಕರ್ನೂಲು ಜಿಲ್ಲೆಯ ಶಾಸನದಲ್ಲಿ ಹರಿಹರನು ಪೂರ್ವ ಪಶ್ಚಿಮ ಸಮುದ್ರಾಧಿಪತಿಯೆಂದೂ ಕ್ರಿ.ಶ.1340ರ ಬಾದಾಮಿ ಶಾಸನದಲ್ಲಿ ಹರಿರಾಯವಿಭಾಡ, ಭಾಷೆಗೆ ತಪ್ಪದರಾಯರ ಗಂಡ ಎಂದೂ ಪ್ರಶಂಸಿಸಲಾಗಿದೆ. ಕ್ರಿ.ಶ 1343ರಲ್ಲಿ ಹೊಯ್ಸಳ ಸಾಮ್ರಾಜ್ಯವು ಅಸ್ತಂಗತವಾಯಿತು. ಅನಂತರ ಒಂದನೇ ಹರಿಹರನು ಆ ಸಾಮ್ರಾಜ್ಯದ ಹೆಚ್ಚು ಭಾಗದ ಮೇಲೆ ತನ್ನ ಅಧಿಕಾರ ಸ್ಥಾಪಿಸಿ ಕ್ರಿ.ಶ 1334ರ ವೇಳೆಗೆ ಮಹಾರಾಜಾಧಿರಾಜ, ರಾಜಪರಮೇಶ್ವರ, ವೀರಪ್ರತಾಪ ಮೊದಲಾದ ಸಾರ್ವಭೌಮ ಬಿರುದುಗಳನ್ನು ವಹಿಸಿದನು. ಕ್ರಿ.ಶ 1347ರಲ್ಲಿ ಬಹುಮನಿ ರಾಜ್ಯವು ಸ್ಥಾಪಿತವಾಯಿತು. ಇದು ವಿಜಯನಗರ ಸಾಮ್ರಾಜ್ಯದ ಉತ್ತರದ ಕಡೆಗೆ ವ್ಯಾಪಿಸಲು ಅಡ್ಡಿಯಾಯಿತು.

## ಒಂದನೇ ಬುಕ್ಕರಾಯ (1358–77)

ಹರಿಹರನ ಮರಣನಂತರ ಒಂದನೇ ಬುಕ್ಕನು ರಾಜನಾದನು ಹರಿಹರನ ಕಾಲದಲ್ಲಿ ಯುವರಾಜನಾಗಿ ರಾಜ್ಯ ವಿಸ್ತರಣಾ ಮತ್ತು ಆಡಳಿತದಲ್ಲಿ ಪಾಲ್ಗೊಂಡಿದನು. ಅಧಿಕಾರ ವಹಿಸಿಕೊಂಡ ಕೂಡಲೇ ಬುಕ್ಕನು ರಾಜ್ಯ ವಿಸ್ತರಣೆ ಕಾರ್ಯದಲ್ಲಿ ತೊಡಗಿದನು. ಮೊದಲು ದಕ್ಷಿಣದತ್ತ ಗಮನಹರಿಸಿ ರಾಜಗಂಭೀರ ರಾಜ್ಯವನ್ನು ಆ ಕಾಲದಲ್ಲಿ ಉತ್ತರ ಆರ್ಕಾಟ್ ಮತ್ತು ದಕ್ಷಿಣ ಆರ್ಕಾಟ್ ಪ್ರದೇಶದಲ್ಲಿ ಆಳುತ್ತಿದ್ದ ಶಾಂಭುವರಾಯ ಎಂಬುವವನು ಮುಧುರೆಯ ಸುಲ್ತಾನನ್ನೂ ನಿಗ್ರಹಿಸಲು ತನ್ನ ಸಹೋದರನಾದ ವೀರ ಕಂಪಣ ರಾಯನನ್ನು ಸೈನ್ಯಸಮೇತ ಕಳುಹಿಸಿದನು. ಕಂಪಣನು ಶಾಂಭುವರಾಯನನ್ನು ಸೋಲಿಸಿ ಫೆನ್ನಾರ್ ನದಿಯವರೆಗೆ ರಾಜ್ಯವನ್ನು ವಿಸ್ತರಿಸಿದನು. ಆನಂತರ ಕಂಪಣನು ತನ್ನ ಸೈನ್ಯವನ್ನು ಮಧುರೆಯ ಸುಲ್ತಾನನ ವಿರುದ್ಧ ತಿರುಗಿಸಿದನು. ಸುಲ್ತಾನನಿಗೂ ಕಂಪಣನಿಗೂ ತೀವ್ರ ಯುದ್ಧವು ನಡೆದು ಸುಲ್ತಾನನು ಮರಣ ಹೊಂದಿದರು. ವಿಜಯನಗರ ಸಾಮ್ರಾಜ್ಯವು ರಾಮೇಶ್ವರದವರೆಗೂ ವಿಸ್ತರಿಸಿತ್ತು. ಕಂಪಣನ ಪತ್ನಿಯಾದ ಗಂಗಾದೇವಿಯು ರಚಿಸಿದ ಸಂಸ್ಕೃತ ಗ್ರಂಥ 'ಮಧುರವಿಜಯಂ' ಎಂಬುದು ವೀರಕಂಪಣನ ಈ ದಂಡೆಯಾತ್ರೆಯ ವಿವರಗಳನ್ನು ತಿಳಿಸುತ್ತದೆ. ಅನಂತರ

ಕಂಪಣನು ಮಧುರೆ, ಕಂಚಿ, ರಾಮೇಶ್ವರಂ ಮೊದಲಾದ ದೇವಾಲಯಗಳನ್ನು ಜೀರ್ಣೋದ್ಧಾರಮಾಡಿ ದಾನದತ್ತಿಗಳನ್ನು ನೀಡಿದನು. ರಕ್ಷಣೆಗಾಗಿ ಶ್ರೀರಂಗಂನಿಂದ ತಿರುಪತಿಗೆ ಆ ಮೊದಲು ಕೊಂಡೊಯ್ದಿದ್ದ ಶ್ರೀರಂಗನ ವಿಗ್ರಹವನ್ನು ಶ್ರೀರಂಗಂನಲ್ಲಿ ತಂದು ಸ್ಥಾಪಿಸಲಾಯಿತು ಎಂದು ತಿಳಿದುಬರುತ್ತದೆ.

ಒಂದನೇ ಬುಕ್ಕನ ಕಾಲದಲ್ಲಿ ವಿಜಯನಗರಕ್ಕೂ ಬಹುಮನಿ ರಾಜ್ಯಕ್ಕೂ ಯುದ್ಧಗಳು ಪ್ರಾರಂಭವಾಗಿ ಮುಂದುವರೆದವು. ಅಲ್ಲಾವುದ್ದೀನ್ ಬಹುಮನಿ-ಷಾ ಉತ್ತರಾಧಿಕಾರಿಯಾದ ಮಹಮ್ಮದ್‌ಷಾನು ರಾಜ್ಯ ವಿಸ್ತರಿಸಲು ಯತ್ನಿಸಿದನು. ಈ ಯುದ್ಧಕ್ಕೆ ಧಾರ್ಮಿಕ ಕಾರಣಗಳು ಪ್ರಮುಖವೆಂದು ನಂಬಲಾಗಿತ್ತು. ಆದರೆ ಧಾರ್ಮಿಕ ಕಾರಣಗಳಿಗಿಂತಲೂ ಮಿಗಿಲಾಗಿ ಕೃಷ್ಣ ತುಂಗಭದ್ರ ನದಿಗಳ ಫಲವತ್ತಾದ ದೋ-ಅಬ್ ಪ್ರದೇಶದ ಹತೋಟಿಗೆ ಮುಖ್ಯಕಾರಣವಾಯಿತು. ಅನೇಕ ವರ್ಷಗಳ ಕಾಲ ಯುದ್ಧಗಳು ಮುಂದುವರೆದವು. ಆದರೆ ನಿರ್ಣಾಯಕವಾದ ಜಯಾಪಜಯಗಳು ಯಾರಿಗೂ ಲಭಿಸಲಿಲ್ಲ. ಬುಕ್ಕರಾಯನು ವಾರಂಗಲ್ ರಾಜ್ಯದೊಡನೆ ಸ್ನೇಹದಿದ್ದ ಇದ್ದು ಬಹುಮನಿ ಸುಲ್ತಾನನ ಆಕ್ರಮಣವನ್ನು ಎದುರಿಸುವಲ್ಲಿ ಯಶಸ್ವಿಯಾದನು. ಬುಕ್ಕನು ಗೋವೆಯನ್ನು ಸೋಲಿಸಿ ವಶಪಡಿಸಿಕೊಂಡುದಲ್ಲದೇ ಕೊಂಡವೀಡುವಿನ ರೆಡ್ಡಿಮನೆತನವನ್ನು ಸೋಲಿಸಿ ತನ್ನ ಪ್ರಾಬಲ್ಯವನ್ನು ವಿಸ್ತರಿಸಿದನು. ಬಹುಮನಿ ಸುಲ್ತಾನನು ಕ್ರಿ.ಶ 1375ರ ವೇಳೆಗೆ ಪುನಃ ಮುದ್ಗಲ್ ಮತ್ತು ಅದೋಣಿ ಪ್ರದೇಶಗಳನ್ನು ಆಕ್ರಮಿಸಿ ವಿಜಯನಗರದ ರಾಜಧಾನಿಯನ್ನು ಆಕ್ರಮಿಸಲು ತುಂಗಭದ್ರದತ್ತ ಮುಂದುವರೆದನು. ಆದರೆ ವಿಜಯನಗರ ಸೈನ್ಯವು ಪ್ರಬಲ ಪ್ರತಿರೋಧದಿಂದ ಶತ್ರು ಪಡೆಗಳ ಮೇಲೆ ಬಿದ್ದು, ಹಿಮ್ಮೆಟ್ಟಿಸಿತ್ತು. ಒಂದನೇ ಬುಕ್ಕನು ನಿರಂತರವಾಗಿ ಯುದ್ಧಗಳನ್ನು ಮಾಡಬೇಕಾಗಿ ಬಂದರು ಸಾಮ್ರಾಜ್ಯದ ಆಡಳಿತ ಮತ್ತು ಪ್ರಜಾಹಿತ ಮೇಲ್ಮೆಯನ್ನು ಜಾಗರೂಕತೆಯಿಂದ ನಿರ್ವಹಿಸಿದನು. ಕೊಂಕಣದಿಂದ ರಾಮೇಶ್ವರದವರೆಗೆ ವಿಸ್ತರಸಿದ್ದ, ರಾಜ್ಯದಲ್ಲಿ ಶಾಂತಿಯನ್ನು ಸ್ಥಾಪಿಸಿ ವ್ಯವಸಾಯ ಮತ್ತು ವ್ಯಾಪಾರಕ್ಕೆ ಪ್ರೋತ್ಸಾಹ ನೀಡಿದನು. ರಾಜಧಾನಿಯ ರಕ್ಷಣೆಗಾಗಿ ಕೋಟೆ ಕೊತ್ತಲೆಗಳನ್ನು ಕಟ್ಟಿಸಿದನು. ತನ್ನ ಸಹೋದರನಾದ ಕಂಪಣನನ್ನು ತಮಿಳು ಪ್ರದೇಶದ ಪ್ರಾಂತ್ಯಾಧಿಕಾರಿಯಾಗಿ ನೇಮಿಸಿದನು. ಬುಕ್ಕರಾಯನು

ಕುಮಾರರ ಸಾಮ್ರಾಜ್ಯದ ಬೇರೆ ಬೇರೆ ಪ್ರಾಂತ್ಯಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಈತನ ಸಚಿವರು ಮತ್ತು ಅಧಿಕಾರಿಗಳು ವ್ಯವಸಾಯಕ್ಕಾಗಿ ಕೆರೆಗಳನ್ನು ಕಟ್ಟಿಸಿದರು. ವ್ಯಾಪಾರವು ಉತ್ಕೃಷ್ಟ ಸ್ಥಿತಿಯಲ್ಲಿತ್ತು ಎಂದು ತಿಳಿಸಲಾಗಿದೆ.

## ಎರಡನೇ ಹರಿಹರ (ಕ್ರಿ.ಶ 1376–1404)

2ನೇ ಹರಿಹರನು ಒಂದನೇ ಬುಕ್ಕನ ಹಿರಿಯ ಮಗ ತನ್ನ ತಂದೆಯ ಆಳ್ವಿಕೆಯ ಕಾಲದಲ್ಲಿ ಯುವರಾಜನಾಗಿದ್ದನು. ಬುಕ್ಕನ ಮರಣನಂತರ ಅಧಿಕಾರಕ್ಕೆ ಬಂದು 27 ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ವಿಜಯನಗರದ ಅರಸರಲ್ಲಿ ಚಕ್ರವರ್ತಿ ಎಂಬ ಬಿರುದನ್ನು ಧರಿಸಿದವರಲ್ಲಿ ಎರಡನೇ ಹರಿಹರನು ಮೊದಲಿಗನು ತಮಿಳುನಾಡಿನಲ್ಲಿ ಕಂಪಣನ ಮರಣನಂತರ ತಲೆದೋರಿದ ಮಾಂಡಲಿಕರ ದಂಗೆಯನ್ನು ಹರಿಹರನ ಮಗನಾದ ವಿರೂಪಾಕ್ಷನು ಅಡಗಿಸಿದನು. ವಿರೂಪಾಕ್ಷನು ಸಿಂಹಾಳ ದ್ವೀಪದ ಮೇಲೆ ಆಕ್ರಮಣ ನಡೆಸಿ ಅಲ್ಲಿನ ರಾಜರಾದ ಭುವನೈಕ ಬಾಹು ಎಂಬುವನಿಂದ ಕಪ್ಪಕಾಣಿಕೆಯನ್ನು ಪಡೆದನು. ಎರಡನೇ ಹರಿಹರನ ಕಾಲದಲ್ಲಿ ಸಾಮ್ರಾಜ್ಯದ ಉತ್ತರದ ಗಡಿಗಳು ವಿಸ್ತಾರವಾದವು. ಬಹುಮನಿ ಫೀರೋಜ್ ಷಾನು ವಿಜಯನಗರದ ಮೇಲೆ ಯುದ್ಧ ಹೂಡಿ ಪರಾಜಿತನಾಗಿ ಹಿಂದಿರುಗಿದನು. ಯುವರಾಜನಾದ ದೇವರಾಯನು ಉದಯಗಿರಿ ಪ್ರದೇಶದಲ್ಲಿ ಅಧಿಕಾರದಲ್ಲಿದ್ದು, ಬಹುಮನಿ ಮತ್ತು ರೆಡ್ಡಿ ಮನೆತನಗಳನ್ನು ಸೋಲಿಸಿ ಆಂಧ್ರದ ಮೆಹಬೂಬ್ ನಗರದ ಜಿಲ್ಲೆಯಲ್ಲಿದ್ದ ಪೆನಗಲ್ ಕೋಟೆಯನ್ನು ವಶಪಡಿಸಿಕೊಂಡನು.

ಎರಡನೇ ಹರಿಹರನ ಆಳ್ವಿಕೆಯ ಕೊನೆಗಾಲದಲ್ಲಿ ಸಾಮ್ರಾಜ್ಯವು ಶಾಂತಿಯಿಂದ ಕೂಡಿತ್ತು. ಸಚಿವರಾದ ಗುಂಡನಾಥ, ಮುದ್ದಪ್ಪ ಮತ್ತು ಇರುಗಪ್ಪ ಮೊದಲಾದವರು ಸಾಮ್ರಾಜ್ಯದ ಆಡಳಿತ ನಿರ್ವಹಣೆಗೆ ಸಹಕಾರಿಯಾಗಿದ್ದರು. ಎರಡನೇ ಹರಿಹರನ ಪುತ್ರರು ಪ್ರಾಂತ್ಯಾಧಿಕಾರಿಯಾಗಿ ಅಧಿಕಾರ ವಹಿಸಿದರು. 2ನೇ ಹರಿಹರನ ಕಾಲದಲ್ಲಿ ಹೊನ್ನಹೊಳೆಯಿಂದ ಪೆನುಕೊಂಡೆಯವರೆಗೆ ನೀರಾವರಿ ಕಾಲುವೆಯನ್ನು ಸಿಂಗಮಭಟ್ಟ ಎಂಬಾತನ ನೇತೃತ್ವದಲ್ಲಿ ನಿರ್ಮಿಸಲಾಯಿತು. ಪ್ರಾರಂಭದಲ್ಲಿ ವಿರೂಪಾಕ್ಷನು ಸಿಂಹಾಸನವನ್ನು ಆಕ್ರಮಿಸಿ ಸ್ವಲ್ಪಕಾಲ ಆಡಳಿತ ನಡೆಸಿದನು.

## ಒಂದನೇ ದೇವರಾಯ (1406–1422)

ಇವನ ಸಹೋದರರಲ್ಲಿ ಸಿಂಹಾಸನಕ್ಕಾಗಿ ನಡೆದ ಕಲಹವನ್ನು ಕೊನೆಗಾಣಿಸಿ ಅಧಿಕಾರವಹಿಸಿಕೊಂಡನು. ದೇವರಾಯನು ಬಹುಮನಿ ರಾಜ್ಯದೊಡನೆ ಸತತ ಕಾದಾಟ ನಡೆಸಬೇಕಾಯಿತು. ಬಹುಮನಿ ಸುಲ್ತಾನನು ವಿಜಯನಗರದ ಕೋಟೆಯನ್ನು ವಶಪಡಿಸಿಕೊಳ್ಳಲು ವಿಫಲನಾಗಿ ಹಿಂದಿರುಗಿದನು. ದೇವರಾಯನು ಉದಯಗಿರಿಯನ್ನು ಮುತ್ತಿ ರೆಡ್ಡಿಮನೆತನದ ಮತ್ತು ಒರಿಸ್ಸಾದ ಗಜಪತಿ ಇವರು ದೇವರಾಯನ ಶತ್ರುಗಳಾಗಿ ಮಾರ್ಪಟ್ಟರು. ದೇವರಾಯನ ಕಾಲದಲ್ಲಿ ಹರಿಹರದ ಸಮೀಪದಲ್ಲಿನ ಹರಿದ್ರನದಿಗೆ ಅಣೆಕಟ್ಟು ನಿರ್ಮಿಸಿ ನೀರಾವರಿ ವ್ಯವಸ್ಥೆ ಮಾಡಲಾಯಿತು. ರಾಜಧಾನಿಯ ಸಮೀಪದಲ್ಲಿ ತುಂಗಭದ್ರ ನದಿಗೂ ಅಣೆಕಟ್ಟೆ ಕಟ್ಟಿ ಕಾಲುವೆ ತೋಡಲಾಗಿದೆ ಎಂದು ತಿಳಿದುಬರುತ್ತದೆ. ಒಂದನೇ ದೇವರಾಯನು ಕ್ರಿ.ಶ 1422ರಲ್ಲಿ ಮರಣ ಹೊಂದಿದನು. ಅವನ ಉತ್ತರಾಧಿಕಾರಿಯಾದ ವೀರ ವಿಜಯರಾಯನು ದುರ್ಬಲನಾಗಿದ್ದನು. ಇವನು ಕೇವಲ ಎರಡು ವರ್ಷಗಳ ಕಾಲ ಅಧಿಕಾರದಲ್ಲಿದ್ದು ಕ್ರಿ.ಶ 1424ರಲ್ಲಿ ಮರಣ ಹೊಂದಿದ್ದನು.

## ಎರಡನೇ ದೇವರಾಯ (1424–1446)

ಇವನು ವಿಜಯರಾಯನ ಹಿರಿಯ ಮಗ ತನ್ನ ತಂದೆಯ ಕಾಲದಲ್ಲಿ ಮುಖ್ಯ ಆಡಳಿತ ಸೂತ್ರವನ್ನು ವಹಿಸಿದನು. ವಿಜಯರಾಯನ ಮರಣಾನಂತರ ಸಿಂಹಾಸನಕ್ಕೆ ಬಂದನು. ಇವನನ್ನು ಅಭಿನವ ವೀರದೇವರಾಯ, ಇಮ್ಮಡಿ ದೇವರಾಯ, ಪ್ರತಾಪ ವೀರದೇವರಾಯ ಮತ್ತು ಪ್ರೌಢದೇವರಾಯ ಎಂಬ ಹೆಸರುಗಳಿಂದ ಕರೆಯಲಾಗಿದೆ. ಗಜಭೇಂಟೆಕಾರ ಎಂಬುದು ಇವನ ಮತ್ತೊಂದು ಬಿರುದುಗಳಲ್ಲಿ ಒಂದಾಗಿದೆ. ಎರಡನೇ ದೇವರಾಯನ ಕಾಲದಲ್ಲಿ ಬಹುಮನಿ ಸುಲ್ತಾನರಿಗೂ ಮತ್ತು ವಿಜಯನಗರಕ್ಕೂ ಮೂರು ಯುದ್ಧಗಳು ನಡೆದವು. ಅಲ್ಲದೇ ಇವನು ಒರಿಸ್ಸಾದ ಗಜಪತಿಯೊಂದಿಗೆ ಯುದ್ಧ ಮಾಡಬೇಕಾಗಿ ಬಂದಿತ್ತು. ಇವನು ಸಿಂಹಳ ದ್ವೀಪದ ಮೇಲು ಆಕ್ರಮಣ ನಡೆಸಿದನು. ಪರ್ಶಿಯಾದ ರಾಯಭಾರಿ ಅಬ್ದುಲ್ ರಜಾಕ್ ಮತ್ತು ಇಟಲಿಯ ವರ್ತಕ ನಿಕಲೋಕಾಂಟೆ ಎಂಬ ವಿದೇಶಿಯರು ಇವನ ಕಾಲದಲ್ಲಿ ವಿಜಯನಗರವನ್ನು ಸಂದರ್ಶಿಸಿ ತಮ್ಮ ಅಭಿಪ್ರಾಯಗಳನ್ನು ಬರವಣಿಗೆಯಲ್ಲಿ ತಿಳಿಸಿದ್ದಾರೆ.

ಇಮ್ಮಡಿ ದೇವರಾಯನು ಅಧಿಕಾರ ವಹಿಸಿಕೊಳ್ಳುವ ವೇಳೆಗಾಗಲೇ ಬಹಮನೀ ರಾಜ್ಯದ ವಿರುದ್ಧ ಯುದ್ಧದಲ್ಲಿ ಭಾಗಿಯಾಗಿದ್ದನು. ಮೊದಲನೇ ಬಹಮನಿ ಯುದ್ಧದಲ್ಲಿ ಎರಡು ಪಕ್ಷದವರೂ ಜಯಾಪಜಯಗಳನ್ನೂ ಅನುಭವಿಸಿದರು. ಕೊನೆಗೆ ಬಹಮನಿ ಸುಲ್ತಾನನಾದ ಒಂದನೇ ಅಹಮದ್ ಷಾ ಪರಾಭವಗೊಂಡನು. ಅವನ ರಾಜಧಾನಿಯನ್ನು ಗುಲ್ಬರ್ಗಾದಿಂದ ಬೀದರ್‌ಗೆ ಬದಲಾಯಿಸಿಕೊಂಡನು. ಎರಡನೇ ದೇವರಾಯನು ನುರಿತ ಯೋಧನಾಗಿದ್ದನು. ರಕ್ಷಣಾ ಬಲವನ್ನು ಹೆಚ್ಚಿಸಿದನು. ಅಧಿಕಾರ ರೂಢನಾದ ಕೂಡಲೇ ಸಾಮ್ರಾಜ್ಯದ ಪಶ್ಚಿಮ ಗಡಿಯಲ್ಲಿ ಅರಗ ಎಂಬ ಪ್ರದೇಶದಲ್ಲಿ ತಲೆದೋರಿದ ಬೇಡ ನಾಯಕನೊಬ್ಬನ ದಂಗೆಯನ್ನು ಸುಲಭವಾಗಿ ಅಡಗಿಸಿದನು. ಒರಿಸ್ಸಾದ ಗಜಪತಿ ಸಂತತಿಯ ರಾಜನು ಪ್ರಬಲವಾಗಿ ರಾಜಮಹೇಂದ್ರಿಯ ರೆಡ್ಡಿ ರಾಜನನ್ನು ಸೋಲಿಸಿದನು. ವೇಮಲ ಸಂಸ್ಥಾನಿಕರು ಗಜಪತಿಗೆ ಬೆಂಬಲ ನೀಡಿದರು. ಕೊಂಡವೀಡು, ಬಾನುದೇವ, ಗಜಪತಿಯ ಅಧೀನ ರಾಜ್ಯವಾಯಿತು. ಈ ಪರಿಸ್ಥಿತಿಯನ್ನು ಗಮನಿಸಿದ ದೇವರಾಯನು ಸೈನ್ಯ ಸಮೇತನಾಗಿ ಆ ಪ್ರದೇಶಕ್ಕೆ ಧಾವಿಸಿ ವೇಮಲರನ್ನು ಸೋಲಿಸಿ ಕೊಂಡವೀಡು ಮತ್ತು ರಾಜಮಹೇಂದ್ರಿಯನ್ನು ಗೆದ್ದು ರಾಜಮಹೇಂದ್ರಿಯನ್ನು ರೆಡ್ಡಿ ರಾಜನಿಗೆ ಕೊಟ್ಟನು. ಹೊಯ್ಸಳರ ಬಾನುದೇವನು ಉತ್ತರಾಧಿಕಾರಿಯಾದ ಕಪಿಲೇಂದ್ರ ಗಜಪತಿಯು ಮೇಲ್ಕಂಡ ಪ್ರದೇಶಗಳ ಮೇಲೆ ಪುನಃ ತನ್ನ ಅಧಿಕಾರ ಸ್ಥಾಪಿಸಲು ಯತ್ನಿಸಿದನು. ಆದರೆ ರಾಜ ಮಹೇಂದ್ರಿ ಮತ್ತು ವಿಜಯನಗರ ಸೈನ್ಯಗಳು ಅವನನ್ನು ಎದುರಿಸಿ ಪರಾಜಯಗೊಳಿಸಿದರು.

ಎರಡನೇ ದೇವರಾಯನಿಗೂ ಬಹುಮನಿ ಸುಲ್ತಾನಿಗೂ ಎರಡನೇ ಯುದ್ಧವು ಕ್ರಿ.ಶ 1435ರಲ್ಲಿ ನಡೆಯಿತು. ಅಹಮದ್ ಷಾನು ಕೃಷ್ಣ ಮತ್ತು ತುಂಗಭದ್ರ ನದಿಗಳ ಫಲವತ್ತಾದ ಪ್ರದೇಶಗಳನ್ನು ಆಕ್ರಮಿಸಲು ದಂಡೆತ್ತಿ ಬಂದನು. ಆದರೆ ಬಹುಮನಿ ಸುಲ್ತಾನನ ಪ್ರಯತ್ನ ಕೈಗೂಡಲಿಲ್ಲ. ಬಹುಮನಿ ಸುಲ್ತಾನನು ಕ್ರಿ.ಶ 1443ರಲ್ಲಿ ಪುನಃ ಮೂರನೇಯ ಬಾರಿಗೆ ಆಕ್ರಮಣ ನಡೆಸಿದನು. ಆ ಆಕ್ರಮಣದ ಮಧ್ಯ ದೇವರಾಯನ ವಿರುದ್ಧ ರಾಜಮನೆತನದಲ್ಲಿ ಪಿತೂರಿಯೊಂದು ನಡೆದು ವಿಫಲವಾಯಿತು. ಇದರಿಂದುಂಟಾದ ಗೊಂದಲ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು ಬಹಮನೀ ಸುಲ್ತಾನನನ್ನು ಸೋಲಿಸಿ ಮುದ್ಗಲ್, ರಾಯಚೂರು,

ಬಂಕಾಪುರ ಮೊದಲಾದ ಸ್ಥಳಗಳನ್ನು ವಶಪಡಿಸಿಕೊಂಡನು. ತನ್ನ ಸಾಮ್ರಾಜ್ಯದ ದಕ್ಷಿಣ ಭಾಗದ ಭದ್ರತೆಗಾಗಿ ದೇವರಾಯನು ಸಿಂಹಳದ ರಾಜನನ್ನು ಅಧೀನದಲ್ಲಿಟ್ಟುಕೊಳ್ಳಲು ನೌಕದಳವನ್ನು ಕಳುಹಿಸಿದನು. ದೇವರಾಯನ ದಳಪತಿಗಳಲ್ಲಿ ಒಬ್ಬನಾದ ಲಕ್ಕಣದಂಡೇಶನು ಸಿಂಹಳದ ದ್ವೀಪವನ್ನು ತಲುಪಿ ಅಲ್ಲಿನ ರಾಜರನ್ನು ಸೋಲಿಸಿ ಅವನಿಂದ ಕಪ್ಪಕಾಣಿಕೆಯನ್ನು ಪಡೆದು ಹಿಂದಿರುಗಿದರು. ಲಕ್ಕಣ್ಣದಂಡೇಶನ ಸಾಹಸಕ್ಕೆ ಮೆಚ್ಚಿದ ಚಕ್ರವರ್ತಿಯು ಆತನಿಗೆ ದಕ್ಷಿಣ ಸಮುದ್ರ ಅಧಿಪತಿ ಎಂಬ ಬಿರುದು ನೀಡಿ ಗೌರವಿಸಿದನು. ನ್ಯೂನೀಜ್‌ನ ಬರವಣಿಗೆಯ ಪ್ರಕಾರ, ಕೇರಳದ ಕ್ವಿಲಾನ್, ಮದರಾಸಿನ ಬಳಿಯ ಪುಲಿಕಾಡು, ಸಿಂಹಳ ಮತ್ತು ಬರ್ಮಾದ ಪೆಗು ಹಾಗೂ ತೆನಸ್ಸೆರಿಮ್ ರಾಜರು ಇಮ್ಮಡಿ ದೇವರಾಯನಿಗೆ ಕಪ್ಪ ಸಲ್ಲಿಸುತ್ತಿದ್ದರೆಂದು ತಿಳಿದುಬರುತ್ತದೆ.

ಕ್ರಿ.ಶ 16ನೇ ಶತಮಾನದ ಪೂರ್ವಾರ್ಧದಲ್ಲಿ ವಿಜಯನಗರವು ಸಾಮ್ರಾಟ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಅತ್ಯಂತ ಉನ್ನತ ಸ್ಥಿತಿಯಲ್ಲಿದ್ದಂತೆ 15ನೇ ಶತಮಾನದ ಪೂರ್ವಾರ್ಧದಲ್ಲಿಯೂ ಸಹ ಅದು ಅಷ್ಟೇ ಉನ್ನತ ಸಾಮ್ರಾಜ್ಯವಾಗಿತ್ತೆಂದು ತಿಳಿದುಬರುತ್ತದೆ. ದೇವರಾಯನು ದಕ್ಷಿಣ ಭಾರತದ ಸಮರ್ಥ ಸಾಮ್ರಾಟರಲ್ಲಿ ಒಬ್ಬನಾಗಿದ್ದಾನೆ. ಪರ್ಶಿಯಾದ ರಾಯಭಾರಿಯಾದ ಅಬ್ದುಲ್‌ರಜಾಕ್‌ನು ವಿಜಯನಗರದ ವೈಭವವನ್ನು ವಿಶೇಷವಾಗಿ ವರ್ಣಿಸಿದ್ದಾನೆ. ಇಮ್ಮಡಿ ದೇವರಾಯನ ಕಾಲದಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ ಇಟಲಿಯ 'ನಿಕಾಲೋ ಡಿ ಕಾಂಟಿ' ಮತ್ತೊಬ್ಬ ಪ್ರಸಿದ್ಧ ವಿದೇಶ ಪ್ರವಾಸಿಗ ಕ್ರಿ.ಶ 1440ರಲ್ಲಿ ತನ್ನ ದೇಶಕ್ಕೆ ಹಿಂತಿರುಗಿ ಪೋಪನ ಆದೇಶದ ಮೇರೆಗೆ ಅವನ ಕಾರ್ಯದರ್ಶಿಗೆ ತನ್ನ ಪ್ರವಾಸ ಕಥನವನ್ನು ವಿವರಿಸಿದ. ಅದನ್ನು ಲ್ಯಾಟಿನ್ ಭಾಷೆಯಲ್ಲಿ ಬರೆದಿಡಲಾಯಿತು. ದೇವರಾಯನ ಕಾಲದ ಅನೇಕ ಶಾಸನಗಳು ಮತ್ತು ಆಗ ರಚಿತವಾದ ಸಾಹಿತ್ಯ ಗ್ರಂಥಗಳು ಚಕ್ರವರ್ತಿಯ ವ್ಯಕ್ತಿತ್ವ ಮತ್ತು ಸಾಮ್ರಾಜ್ಯದ ಪರಿಸ್ಥಿತಿಯನ್ನು ಅರಿಯಲು ಸಹಕಾರಿಯಾಗಿವೆ.

## ಮಲ್ಲಿಕಾರ್ಜುನ (1446–1465)

ಪ್ರೌಢ ದೇವರಾಯನ ಮರಣನಂತರ ಅವನ ಮಗನಾದ ಮಲ್ಲಿಕಾರ್ಜುನನು ಅಧಿಕಾರ ವಹಿಸಿದನು. ಈತನು ಅಸಮರ್ಥನು, ದುರ್ಬಲನು ಆಗಿದ್ದು, ಇವನ ಕಾಲದಲ್ಲಿ

ವಿಜಯನಗರ ಸಾಮ್ರಾಜ್ಯದ ಪ್ರಾಬಲ್ಯವು ಕ್ಷೀಣಿಸಿತು. ಬಹುಮನಿ ಸುಲ್ತಾನನಾದ ಎರಡನೇ ಅಲ್ಲಾವುದ್ಧೀನನು ಮತ್ತು ಒರಿಸ್ಸಾದ ಕಪಿಲೇಶ್ವರ ಗಜಪತಿಯು ಸಾಮ್ರಾಜ್ಯದ ಮೇಲೆ ಆಕ್ರಮಣ ನಡೆಸಿದರು. ಕಪಿಲೇಶ ಗಜಪತಿಯು ಅನೇಕ ಯುದ್ಧಗಳಲ್ಲಿ ವಿಜಯನಗರ ಸೈನ್ಯವನ್ನು ಸೋಲಿಸಿ ಆಂಧ್ರದ ತೀರಪ್ರದೇಶವನ್ನು ಕೊಂಡವೀಡು ಮತ್ತು ಉದಯಗಿರಿ ರಾಜ್ಯಗಳನ್ನು ವಶಪಡಿಸಿಕೊಂಡನು. ಆಂತರಿಕ, ಅಶಾಂತಿ ಮತ್ತು ಹೊರಗಿನ ಆಕ್ರಮಣಗಳಿಂದ ವಿಜಯನಗರ ಸಾಮ್ರಾಜ್ಯವು ದುರ್ಬಲವಾಯಿತು.

## ವಿರೂಪಾಕ್ಷ (1465–1485)

ಮಲ್ಲಿಕಾರ್ಜುನನ ದಾಯಾದಿಯಾದ ವಿರೂಪಾಕ್ಷನು ಸಿಂಹಾಸನವನ್ನು ಆಕ್ರಮಿಸಿ ಕ್ರಿ.ಶ 1465ರಲ್ಲಿ ಅಧಿಕಾರರೂಢನಾದನು. ವಿರೂಪಾಕ್ಷ ಸಹ ಅಸಮರ್ಥ ರಾಜನಾಗಿದ್ದನು. ಮಿಗಿಲಾಗಿ ಆಡಳಿತಕ್ಕೆ ಗಮನ ನೀಡದೆ ಸುಖಲೋಲುಪ್ತನಾಗಿದ್ದನು. ಬಹುಮನಿಯ ಮೂರನೇ ಮಹಮದ್‌ನ ಪ್ರಧಾನಿಯಾಗಿದ್ದ ಮಹಮ್ಮದ್ ಗವಾನನು ಪಶ್ಚಿಮ ಕರಾವಳಿಯನ್ನು ಆಕ್ರಮಣ ಮಾಡಿ ಗೋವಾ, ಕೊಂಕಣ, ಮೊದಲಾದ ಪ್ರದೇಶಗಳನ್ನು ವಶಪಡಿಸಿಕೊಂಡನು. ಒರಿಸ್ಸಾದ ಕಪಿಲೇಂದ್ರನು ಸಾಮ್ರಾಜ್ಯದ ಭಾಗಗಳ ಮೇಲೆ ಪುನಃ ಪುನಃ ಆಕ್ರಮಣಗಳನ್ನು ಮುಂದುವರೆಸಿದನು. ವಿಜಯನಗರದ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಗಳು ತುಂಬಾ ಶೋಚನೀಯವಾಗಿದ್ದವು. ಕ್ರಿ.ಶ. 1485ರಲ್ಲಿ ಅಂತಃಪುರದ ಕಲಹಗಳಿಂದ ವಿರೂಪಾಕ್ಷನು ಕೊಲೆಯಾದನು. ಆವೇಳೆಗೆ ರಾಜಧಾನಿಯನ್ನು ತಲುಪಿದ ನರಸಿಂಹನು ಪರಿಸ್ಥಿತಿಯನ್ನು ಹತೋಟಿಗೆ ತಂದು ತಾನೇ ಸಿಂಹಾಸನವನ್ನು ಪಡೆದನು. ವಿಜಯನಗರ ಸ್ಥಾಪಿಸಿದ ಸಂಗಮ ಸಂತತಿಯು ಈ ರೀತಿಯಾಗಿ ಪರಿಸಮಾಪ್ತಿ ಹೊಂದಿತು.

## ಸಾಳ್ವ ಸಂತತಿ ನರಸಿಂಹ (1485–1491)

ಇವನನ್ನು ಒಂದನೇ ನರಸಿಂಹ ಎಂದು ಕರೆಯಲಾಗಿದೆ. ಸಾಳ್ವ ನರಸಿಂಹನ ವಂಶದವರು ವಿಜಯನಗರದ ಹಿಂದಿನ ಅರಸರಿಗೆ ಸೇವೆ ಸಲ್ಲಿಸಿ ಅದು ಪ್ರತಿಷ್ಠಿತ ಮನೆತನ ಎನ್ನಿಸಿಕೊಂಡಿತ್ತು. ಕ್ರಿ.ಶ 1456ರ ಸುಮಾರಿನಲ್ಲಿ ನರಸಿಂಹನು ಚಂದ್ರಗಿರಿಯ

ಪ್ರಾಂತ್ಯಾಧಿಕಾರಿಯಾಗಿ ನೇಮಕಗೊಂಡ ಕ್ರಮೇಣ ತನ್ನ ಪ್ರಭಾವವನ್ನು ವಿಸ್ತರಿಸಿಕೊಂಡನು. ಕ್ರಿ.ಶ 1463ರಲ್ಲಿ ತಮಿಳುನಾಡಿನಲ್ಲಿ ತಲೆಯೆತ್ತಿದ್ದ ದಂಗೆಯನ್ನು ಸಂಪೂರ್ಣವಾಗಿ ಅಡಗಿಸಿದನು. ಅವನು ಸಂಗಮ ಸಂತತಿಯ ಕೊನೆಯ ರಾಜರು ದುರ್ಬಲರೆಂಬುದನ್ನು ಮನಗಂಡಿದ್ದನು. ಸಾಮ್ರಾಜ್ಯವನ್ನು ಪತನದಿಂದ ಉಳಿಸಲು ನಿರ್ಧರಿಸಿದನು. ಅಧಿಕಾರವರ್ಗದ ಬೆಂಬಲವನ್ನು ಚಾಣಾಕ್ಷತೆಯಿಂದ ಗಳಿಸಿದನು. ತನ್ನ ಸಮರ್ಥ ದಳಪತಿಯಾದ ನರಸನಾಯಕನನ್ನು ರಾಜಧಾನಿಯ ರಕ್ಷಣೆಗಾಗಿ ಕಳುಹಿಸಿದನು. ಆವೇಳೆಗೆ ಅಂತಃಕಲಹಗಳಿಂದ ವಿರೂಪಾಕ್ಷನು ಕೊಲೆಯಾದುದ್ದರಿಂದ ರಾಜಧಾನಿಗೆ ಧಾವಿಸಿ ನರಸಿಂಹನು ಅಧಿಕಾರವಹಿಸಿದನು. ಅವನು ಸಾಮ್ರಾಜ್ಯದ ಪಾಳೇಗಾರರ ದಂಗೆಗಳನ್ನು ಅಡಗಿಸಿ ಬಹಮನಿ ಮತ್ತು ಒರಿಸ್ಸಾ ರಾಜರನ್ನು ಎದುರಿಸಲು ಸಿದ್ಧತೆಮಾಡಿಕೊಂಡನು. ಗಜಪತಿಯು ಆಕ್ರಮಿಸಿದ್ದ ಅಧಿಕಾರವನ್ನು ಪುನಃ ಸ್ಥಾಪಿಸಿದನು. ಆದರೆ ಕಪಿಲೇಂದ್ರನ ಮಗ ಪುರಷೋತ್ತಮ ಗಜಪತಿಯು ತನ್ನ ಆಕ್ರಮಣಗಳನ್ನು ಮುಂದುವರೆಸಿದನು. ಇಳಿವಯಸ್ಸಿನ ನರಸಿಂಹನು ಸಾಮ್ರಾಜ್ಯದ ಶತ್ರುಗಳನ್ನು ನಿಗ್ರಹಿಸಲು ತನ್ನ ಸಮರ್ಥ ದಳಪತಿಯಾದ ನರಸನಾಯಕನನ್ನು ನಿಯೋಜಿಸಿದನು. ಒಟ್ಟಿನಲ್ಲಿ ಒಂದನೇ ನರಸಿಂಹ ಸಾಳ್ವನು ಸಾಮ್ರಾಜ್ಯಕ್ಕೆ ಕೂಡಲೇ ಒದಗಬಹುದಾಗಿದ್ದ ದುಸ್ಥಿತಿಯನ್ನು ನಿವರಿಸಿದನು. ಅವನು ಕೇವಲ ಆರು ವರ್ಷಗಳ ಕಾಲ ರಾಜ್ಯವಾಳಿ ಕ್ರಿ.ಶ.1491ರಲ್ಲಿ ಮರಣ ಹೊಂದಿದನು. ನರಸಿಂಹನಿಗೆ ಅಪ್ರಾಪ್ತ ವಯಸ್ಕರಾದ ಇಬ್ಬರು ಗಂಡು ಮಕ್ಕಳಿದ್ದರು ನರಸರಾಜನು ರಾಜಕುಮಾರರ ಪ್ರತಿನಿಧಿಯಾಗಿ ಅಧಿಕಾರವಹಿಸಿದನು. ಸ್ವಲ್ಪ ಕಾಲದ ನಂತರ ರಾಜಕುಮಾರಲ್ಲಿ ಹಿರಿಯನಾದ ತಿಮ್ಮ ಎಂಬುವವರಿಗೆ ಪಟ್ಟ ಕಟ್ಟಿದನು. ಆದರೆ ತಿಮ್ಮನು ಮಂತ್ರಿಯಾಗಿದ್ದ ತಿಮ್ಮರಸನಿಂದ ಕೊಲೆಗೀಡಾದನು. ನಂತರ ಎರಡನೇಯವನಾದ ನರಸಿಂಹನನ್ನು ಸಿಂಹಾಸನದ ಮೇಲೆ ಕೂರಿಸಿದನು.

## ಎರಡನೇ ನರಸಿಂಹ (1491 ರಿಂದ 1505)

ಎರಡನೇ ನರಸಿಂಹನು ಗದ್ದುಗೆ ಏರಿದ ಕೂಡಲೇ ನರಸನಾಯಕನನ್ನು ನಿಯೋಜಿಸ ತೊಡಗಿದನು. ಆದುದ್ದರಿಂದ ನರಸಿಂಹನು ಪೆನುಗೊಂಡೆಯ ಗೃಹಬಂಧನದಲ್ಲಿ

ಕಾಲಕಳೆಯಬೇಕಾಯಿತು. ನರಸರಾಜನು ಸರ್ವಾಧಿಕಾರಿಯಾಗಿ ಅಧಿಕಾರ ಸೂತ್ರ ವಹಸಿ ರಾಜ್ಯದಲ್ಲಿದ್ದ ಪ್ರಕ್ಷುಬ್ಧ ಪರಿಸ್ಥಿತಿಯನ್ನು ಅಡಗಿಸಿದನು. ಬಹಮನಿ ರಾಜ್ಯದಲ್ಲಿ ಉಂಟಾಗಿದ್ದ ಒಡಕಿನ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು ರಾಯಚೂರು, ಮುದಗಲ್ ಮುಂತಾದ ಪ್ರದೇಶಗಳನ್ನು ವಶಪಡಿಸಿಕೊಂಡನು.

ಒರಿಸ್ಸಾದ ಗಜಪತಿ ಪ್ರತಾಪ ರುದ್ರದೇವನನ್ನು ಸೋಲಿಸಿ ಅವನು ಹಿಂದೆ ವಶಪಡಿಸಿಕೊಂಡಿದ್ದ ಪ್ರದೇಶದ ಮೇಲೆ ವಿಜಯನಗರದ ಅಧಿಕಾರ ಸ್ಥಾಪಿಸಿದನು. ಸಾಮ್ರಾಜ್ಯವು ಪುನಶ್ಚೇತನಗೊಂಡರೂ ನರಸನಾಯಕನು ಕ್ರಿ.ಶ.೧೫೦೩ರಲ್ಲಿ ಮರಣ ಹೊಂದಿದನು. ಸಾಳ್ವರ ಎರಡನೇ ನರಸಿಂಹನು ಹೆಸರಿಗೆ ಮಾತ್ರ ರಾಜನಾಗಿ ಕ್ರಿ.ಶ ೧೫೦೫ರವರೆಗೆ ಮುಂದುವರೆದನು. ಆದರೆ ಕ್ರಿ.ಶ.೧೫೦೫ರಲ್ಲಿ ಮರಣ ಹೊಂದಿದ್ದನು. ಅನಂತರ ನರಸನಾಯಕನ ಮಗನಾದ ವೀರನರಸಿಂಹನು ಸಿಂಹಾಸನವನ್ನೇರಿ ಸಾರ್ವಭೌಮನಾದನು.

### ತುಳುವ ಸಂತತಿ ವೀರನರಸಿಂಹ (ಕ್ರಿ.ಶ.1505–1509)

ಇವನ ಆಳ್ವಿಕೆಯೊಡನೆ ತುಳುವ ಮನೆತನದ ಆಡಳಿತವು ಪ್ರಾರಂಭವಾಯಿತು. ವೀರನರಸಿಂಹನ ಅಲ್ಪಕಾಲದ ಆಳ್ವಿಕೆಯಲ್ಲಿ ಅನೇಕ ಘಟನೆಗಳು ನಡೆದವು. ರಾಜ್ಯದಲ್ಲಿ ಪುನಃ ಅನಿಶ್ಚಿತ ವಾತಾವರಣ ಮೂಡಿತು. ಅದರ ಲಾಭಪಡೆದುಕೊಳ್ಳಲು ಸಾಮ್ರಾಜ್ಯದ ವೈರಿಗಳು ಮುಂದೆ ಬಂದರೂ ಬಹಮನಿ ಸುಲ್ತಾನ ಆದಿಲ್ ಖಾನನು ರಾಯಚೂರು, ಮುದ್ಗಲ್, ದೋ–ಅಬ್ ಪ್ರದೇಶವನ್ನು ಆಕ್ರಮಿಸಿದನು. ಆದರೆ ವೀರನರಸಿಂಹನು ಸ್ವಲ್ಪಕಾಲಾನಂತರ ಸುಲ್ತಾನನ್ನು ಸೋಲಿಸಿ ಆ ಪ್ರದೇಶಗಳನ್ನು ಪುನಃ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಬಹಮನಿ ಸುಲ್ತಾನರನ್ನು ಎದುರಿಸಲು ವೀರನರಸಿಂಹನು ಪೋರ್ಚುಗೀಸರೊಡನೆ ಸ್ನೇಹದಿಂದಿದ್ದನು. ಅವರಿಂದ ಶ್ರೇಷ್ಠ ಕುದುರೆಗಳನ್ನು ಪಡೆದು ತನ್ನ ಸೈನ್ಯಕ್ಕೆ ಯುದ್ಧ ಕಾಲದಲ್ಲಿ ತರಬೇತಿ ನೀಡಿದನು. ಕ್ರಿ.ಶ ೧೫೦೯ರಲ್ಲಿ ವೀರನರಸಿಂಹನ ಮರಣಹೊಂದಿದನು.

## ಕೃಷ್ಣದೇವರಾಯ (1509–1529)

ವೀರನರಸಿಂಹನ ಮರಣ ನಂತರ ಆತನ ಮಲಸಹೋದರನಾದ ಕೃಷ್ಣದೇವರಾಯನು ಅಧಿಕಾರಕ್ಕೆ ಬಂದನು. ಇವನು ತುಳುವ ಸಂತತಿಯ ಸಾಮ್ರಾಟರರೆಲ್ಲ ಪ್ರಸಿದ್ಧನಾದವನು. ಅಲ್ಲದೆ ವಿಜಯನಗರ ಸಾಮ್ರಾಜ್ಯವನ್ನಾಳಿದ ಚಕ್ರವರ್ತಿಗಳಲ್ಲಿ ಅತ್ಯಂತ ದಕ್ಷ ಮತ್ತು ಶ್ರೇಷ್ಠ. ಇವನ 20 ವರ್ಷಗಳ ಆಳ್ವಿಕೆಯಲ್ಲಿ ವಿಜಯನಗರ ಸಾಮ್ರಾಜ್ಯದ ಯಶಸ್ಸನ್ನು ಉತ್ತುಂಗ ಶಿಖರಕ್ಕೇರಿಸಿದನು. ಭಾರತೀಯ ಸಾಹಿತ್ಯ ಕಲೆ, ಮತ್ತು ಸಂಸ್ಕೃತಿಗೆ ಸ್ಮರಣೀಯವಾದ ಕಾಣಿಕೆ ನೀಡಿದನು.

ಕೃಷ್ಣದೇವರಾಯನ ಸಿಂಹಾಸನ ರೋಹಣವು ವಿಜಯನಗರ ಸಾಮ್ರಾಜ್ಯದ ಇತಿಹಾಸದಲ್ಲಿ ಒಂದು ನವೀನ, ಅಧ್ಯಾಯನವನ್ನೇ ಪ್ರಾರಂಭಿಸಿತು. ಆ ವೇಳೆಗಾಗಲೇ ಶಿಥಲವಾಗತೊಡಗಿ, ಶತ್ರುಗಳ ಅಘಾತ, ಆಂತರಿಕ ಪಿತೂರಿ ಮತ್ತು ದಂಗೆಗಳಂದ ತತ್ತರಿಸಿದ ಸಾಮ್ರಾಜ್ಯವು ಇವನ ಆಳ್ವಿಕೆಯಲ್ಲಿ ಅಜೇಯವು ಅತ್ಯಂತ ಪ್ರಬಲವು ಆಗಿ ಮಾರ್ಪಟ್ಟು ತನ್ನ ಯಶಸ್ಸಿನ ತುತ್ತಾತುದಿಯನ್ನು ಮುಟ್ಟಿತ್ತು. ಕೃಷ್ಣದೇವರಾಯನು ಪಟ್ಟಾಭೀಷಿಕ್ತನಾದ ಕೂಡಲೇ ಬಹುಮನಿ ಸುಲ್ತಾನ ಮಹಮ್ಮದ್ ಷಾನು ಬಿಜಾಪುರದ ಯೂಸುಫ್ ಆದಿಲ್‌ಖಾನ್ ಮತ್ತು ಇತರ ಮಹಮ್ಮದೀಯ ಸಾಮಂತರನ್ನು ಒಂದುಗೂಡಿಸಿ ವಿಜಯನಗರವನ್ನು ಮುತ್ತಲು ಮುಂದುವರಿದನು. ವಿಜಯನಗರ ಸೈನ್ಯವು ಬಹುಮನಿ ಶತ್ರು ಸೈನ್ಯವನ್ನು ಗಡಿಯಲ್ಲೇ ಎದುರಿಸಿ ಹೋರಾಡಿತ್ತು. ಸುಲ್ತಾನನ ಸೈನ್ಯವು ಸೋತುಹೋಯಿತು. ಸ್ವತಃ ಸುಲ್ತಾನನೇ ರಣರಂಗದಲ್ಲಿ ಆಗಾಥಕ್ಕೆ ಒಳಗಾದನು. ಸೋತ ಮಹಮ್ಮದೀಯ ಸೈನ್ಯವು ಪ್ರಾಣ ರಕ್ಷಣೆಗಾಗಿ ಹಿಂದಕ್ಕೆ ಓಡಿತು. ಕೋವಿಲಕೊಂಡ ಎಂಬಲ್ಲಿ ನಡೆದ ಭೀಕರ ಯುದ್ಧದಲ್ಲಿ ಮಹಮ್ಮದೀಯ ಸೈನ್ಯವು ಪುನಃ ಸೋಲನ್ನು ಅಪ್ಪಿತ್ತು. ಆದರೆ ಕೃಷ್ಣದೇವರಾಯನು ಸೈನ್ಯ ಸಮೇತವಾಗಿ ಮುಂದುವರೆದು ದೋ–ಅಬ್ ಪ್ರದೇಶವನ್ನು ವಶಪಡಿಸಿಕೊಂಡನು. ಕ್ರಿ.ಶ. 1512ರಲ್ಲಿ ರಾಯಚೂರು ಪ್ರದೇಶವು ವಿಜಯನಗರದ ವಶವಾಯಿತು. ಆ ವೇಳೆಗೆ ಸರಿಯಾಗಿ ಮಂತ್ರಿಯಾದ ಅಮೀರ್‌ಬರೀದ್ ಎಂಬುವನಿಂದ ಎರಡನೇ ಮಹಮ್ಮದ್‌ಷಾನು ಬಂಧಿಯಾದನು. ಕೃಷ್ಣದೇವರಾಯನು ಅವನನ್ನು ಸೆರೆಯಿಂದ ಬಿಡಿಸಿ. ಪುನಃ ಸಿಂಹಾಸನದ

ಮೇಲೆ ಕೂರಿಸಿದನು. ಈ ಕಾರ್ಯದಿಂದ ಮಹಮ್ಮದೀಯ ಪ್ರಜೆಗಳು ಕೃಷ್ಣದೇವರಾಯನನ್ನು ಮೆಚ್ಚುವಂತಾಯಿತು. ಕೃಷ್ಣದೇವರಾಯನಿಗೆ 'ಯವನರಾಜ್ಯ ಸ್ಥಾಪನಾಚಾರ್ಯ' ಎಂಬ ಬಿರುದನ್ನು ಪ್ರಾಪ್ತವಾದುದಲ್ಲದೆ, ಸುಲ್ತಾನನು ರಾಯನ ಸಾಮಂತನಾದನು.

ಆನಂತರ ಕೃಷ್ಣದೇವರಾಯನು ತನ್ನ ಗಮನವನ್ನು ಉಮ್ಮತ್ತೂರಿನ ಕಡೆಗೆ ಹರಿಸಬೇಕಾಯಿತು. ಗಂಗ ಮನೆತನದ ಅರಸನಾದ ಉಮ್ಮತ್ತೂರಿನ ಗಂಗರಾಜನು ನರಸಿಂಹನ ಆಳ್ವಿಕೆಯ ಕೊನೆಯಲ್ಲಿ ಬಂಡೆದ್ದು ಸ್ವತಂತ್ರವಾಗಿ ಆಳಲು ಶ್ರಮಿಸಿದರು. ಕೃಷ್ಣದೇವರಾಯನು ಗಂಗರಾಜನನ್ನು ಸೋಲಿಸಿ ಅವನ ರಾಜಧಾನಿಯನ್ನು ಮುತ್ತಿದನು. ಈ ಮುತ್ತಿಗೆಯು ಎರಡು ವರ್ಷಗಳ ಕಾಲ ಮುಂದುವರೆಯಿತು. ಕೃಷ್ಣದೇವರಾಯನ ವಿಜಯಗಳಲ್ಲೆಲ್ಲಾ ಒರಿಸ್ಸಾದ ಗಜಪತಿಯ ಮೇಲೆ ಸಾಧಿಸಿದ ವಿಜಯವು ಪ್ರಸಿದ್ಧವಾದುದು. ಕ್ರಿ.ಶ.1513ರಲ್ಲಿ ಉದಯಗಿರಿ ಕೋಟೆಯನ್ನು ಮುತ್ತಿದನು. ಅಲ್ಲಿ ಶತ್ರು ಸೈನ್ಯವು ಹದಿನೆಂಟು ತಿಂಗಳು ಕಾಲ ಪ್ರತಿರೋಧವನ್ನು ಮುಂದುವರಿಸಿತು. ಕೃಷ್ಣದೇವರಾಯನು ಸತತವಾದ ಕಾದಾಟದಲ್ಲಿ ಅನೇಕ ಸಂದರ್ಭಗಳಲ್ಲಿ ತಾನೇ ಸೈನ್ಯವನ್ನು ನಡೆಸಿ ಸಮರ ತಂತ್ರಗಳನ್ನೂ ರೂಪಿಸಿ ಶತ್ರು ಸೈನ್ಯವನ್ನು ಸೋಲಿಸಿ ಉದಯಗಿರಿಯನ್ನು ವಶಪಡಿಸಿಕೊಂಡುನು. ಸೈನ್ಯಸಮೇತ ಮುಂದುವರಿದ ರಾಜನು ಕೊಂಡವೀಡು, ವಿನುಕೊಂಡ, ಕುಂದನೂರು, ನಾಗಾರ್ಜುನಕೊಂಡ ಮತ್ತು ವಿಜಯವಾಡ ಮೊದಲಾದ ಸ್ಥಳಗಳಲ್ಲಿ ಗಜಪತಿಯ ದಳಗಳನ್ನು ಸೋಲಿಸಿ ಮೇಲ್ಕಂಡ ಪ್ರದೇಶಗಳ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಕೃಷ್ಣದೇವರಾಯನು ವಿಜಯಿಯಾಗಿ ಮುಂದುವರಿದು ಸಿಂಹಾಸನವನ್ನು ವಶಪಡಿಸಿಕೊಂಡು ಪೋತನೂರು ಎಂಬಲ್ಲಿ ಒಂದು ವಿಜಯಸ್ತಂಭವನ್ನು ಕಟ್ಟಿಸಿದನು. ಕೊನೆಗೆ ಕೃಷ್ಣದೇವರಾಯನ ರಾಜಧಾನಿಯಾದ ಕಟಕ್ ಪಟ್ಟಣವನ್ನು ಮುತ್ತಿದನು. ಗಜಪತಿ ಸೈನ್ಯಗಳು ಪೂರ್ಣವಾಗಿ ಸೋಲನ್ನಪ್ಪಿದವು. ಕೃಷ್ಣ ನದಿಯ ಉತ್ತರದಲ್ಲಿ ಗೆದ್ದಿದ್ದ ಪ್ರದೇಶಗಳನ್ನು ಗಜಪತಿಗೆ ಹಿಂದಿರುಗಿಸಿ ವಿಜಯಿಯಾದ ಕೃಷ್ಣದೇವರಾಯನು ತನ್ನ ರಾಜಧಾನಿಗೆ ಹಿಂದಿರುಗಿದನು. ಈ ಮಧ್ಯೆ ಸಿಂಹಳದಲ್ಲಿ ರಾಜಕೀಯ ಪ್ರಕ್ಷುಬ್ಧತೆಯುಂಟಾಗಿತ್ತು. ಅಲ್ಲಿ ತಲೆದೋರಿದ್ದ ದಂಗೆಯನ್ನಡಗಿಸಲು ಕೃಷ್ಣದೇವರಾಯನು ತನ್ನ ಸೈನ್ಯವನ್ನು ಕಳುಹಿಸಿದನು. ಅದು ದಂಗೆಯನ್ನಡಗಿಸಿ ವಿಜಯಬಾಹುವಿನ ಮಗನಾದ ಭುವನೈಕ ಬಾಹುವನ್ನು

ಅಧಿಕಾರದಲ್ಲಿ ಸ್ಥಾಪಿಸಿ ಹಿಂದಿರುಗಿತು. ಕೃಷ್ಣದೇವರಾಯನು ಗಜಪತಿಯೊಡನೆ ಹೋರಾಟದಲ್ಲಿ ತೊಡಗಿದ್ದಾಗ ಆದಿಲ್‌ಖಾನನ ಮಗನಾದ ಇಸ್ಮಾಯಿಲ್ ಅಧಿಕಾರಕ್ಕೆ ಬಂದಿದ್ದು ಪುನಃ ರಾಯಚೂರು ಪ್ರದೇಶವನ್ನು ವಶಪಡಿಸಿಕೊಂಡನು. ಕೃಷ್ಣದೇವರಾಯನು ಆ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸಿ ದಂಡೆತ್ತಿ ಹೋದನು. ಕ್ರಿ.ಶ.1520ರಲ್ಲಿ ಉಗ್ರವಾದ ಕದನವು ನಡೆಯಿತು. ಕೃಷ್ಣದೇವರಾಯನು ಪೋರ್ಚುಗೀಸರಿಂದ ಪಡೆದಿದ್ದ ತುಪಾಕಿಗಳನ್ನು ಉಪಯೋಗಿಸಿ ಆದಿಲ್‌ಷಾ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿದನು. ರಾಯಚೂರು ಪ್ರದೇಶವು ಕೃಷ್ಣದೇವರಾಯನ ವಶವಾಯಿತು. ಕೃಷ್ಣದೇವರಾಯನು ಗೋಲ್ಕೊಂಡ, ಬಿಜಾಪುರ ಮತ್ತು ಒರಿಸ್ಸ ರಾಜ್ಯಗಳ ಮೇಲೆ ನಡೆದ ಯುದ್ಧಗಳಲ್ಲಿ ಏಕಪ್ರಕಾರವಾಗಿ ಜಯಗಳಿಸಿ ಅಜೇಯ ಸಾಮ್ರಾಟನೆನಿಸಿಕೊಂಡನು.

ಕೃಷ್ಣದೇವರಾಯನ ಆಳ್ವಿಕೆಯು ವಿಶೇಷವಾಗಿ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿದಂತೆ ಹಾಗೂ ಸಾಮಾನ್ಯವಾಗಿ ದಕ್ಷಿಣ ಇತಿಹಾಸದಲ್ಲಿ ಒಂದು ಜ್ವಲಂತ ಅಧಾಯವಾಗಿದೆ. ತನ್ನ ಪರಾಕ್ರಮದಿಂದ ಶತ್ರುಗಳನ್ನು ಸದೆಬಡಿದನು. ಸಾಮ್ರಾಜ್ಯವು ಈಶಾನ್ಯದಿಂದ ಒರಿಸ್ಸಾದ ಗಡಿಗಳವರೆಗೂ, ಪಶ್ಚಿಮದಲ್ಲಿ ಸಾಲ್ಸೆಟ್ಟಿನವರೆಗೂ ದಕ್ಷಿಣದಲ್ಲಿ ಭೂ ಶಿಖರದವರೆಗೂ ವ್ಯಾಪಿಸಿತ್ತು. ಗೋವೆಯ ಪ್ರದೇಶದಲ್ಲಿದ್ದ ಪೋರ್ಚುಗೀಸ್ ಗೌರ್ನರ್‌ನಾದ ಆಲ್ಬುಕರ್ಕನು ರಾಯನ ಸ್ನೇಹವನ್ನು ಗಳಿಸಲು ಇವರ ಆಸ್ಥಾನಕ್ಕೆ ಒಂದು ನಿಯೋಗವನ್ನು ಕಳುಹಿಸಿದನು. ಆಡಳಿತದಲ್ಲಿ ದಕ್ಷತೆಯನ್ನು ಹೆಚ್ಚಿಸಿದನು. ಪ್ರಜೆಗಳ ಹಿತರಕ್ಷಣೆಗಾಗಿ ಅನೇಕ ಕಾರ್ಯಗಳನ್ನು ಕೈಗೊಂಡನು. ಹಲವು ತೆರಿಗೆಗಳನ್ನು ಮನ್ನ ಮಾಡಿದನು. ವ್ಯವಸಾಯಕ್ಕೆ ಪ್ರೋತ್ಸಾಹ ನೀಡಿದನು. ಪ್ರಸಿಧ್ಧ ದಂಡನಾಯಕನೂ ವಿಚಕ್ಷಣತೆಯಿಂದ ಕೂಡಿದ ಆಡಳಿತಗಾರನೂ ಒಳ್ಳೆಯ ಮುತ್ಸದ್ದಿಯೂ ಮತ್ತು ಪ್ರಜಾನುರಾಗಿಯೂ ಆಗಿದ್ದು ಕೃಷ್ಣದೇವರಾಯನು ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ಪುರೋಭಿವೃದ್ಧಿಯುಂಟಾಗಲು ಸಹಕಾರಿಯಾದನು.ಇವನ ಗುಣಗಳನ್ನು ಆ ಕಾಲದಲ್ಲಿ ರಾಜ್ಯಕ್ಕೆ ಭೇಟಿ ನೀಡಿದ್ದ ವಿದೇಶಿಯರು ವಿಶೇಷವಾಗಿ ವರ್ಣಿಸಿದ್ದಾರೆ. ಮಿಗಿಲಾಗಿ ಕೃಷ್ಣದೇವರಾಯನಿಂದ ರಚಿತವಾದ ಗ್ರಂಥಗಳು, ಇವನ ಕಾಲದಲ್ಲಿ ತೆಲುಗು ಮತ್ತು ಕನ್ನಡದಲ್ಲಿ ಕವಿಗಳಿಂದ ರಚಿತವಾದ ಕೃತಿಗಳೂ ಮತ್ತು ಆತನು ಸ್ಥಾಪಿಸಿದ

ಶಾಸನಗಳು, ಕಟ್ಟಿಸಿದ ಕಲಾಸ್ಮಾಎಗಖ ಇವನ ಸಿದ್ಧಿ ಸಾಧನೆಗಳನ್ನರಿಯಲು ಸಹಕಾರಿಯಗಿದೆ.

ಕೃಷ್ಣದೇವರಾಯನ ಕಾಲದಲ್ಲಿ ಸಾಮ್ರಾಜ್ಯಕ್ಕೆ ಭೇಟಿ ನೀಡಿದ್ದ ವಿದೇಶಿಯರಲ್ಲಿ ಪೋರ್ಚುಗೀಸರಾದ ಬಾರ್ಬೋಸ ಮತ್ತು ಡೊಮಿಂಗೊ ಪಯಾಜ್ ಪ್ರಮುಖರು. ಕೃಷ್ಣದೇವರಾಯನಿಗೆ ಪ್ರಾಪ್ತವಯಸ್ಕರಾದ ಮಕ್ಕಳಿರಲಿಲ್ಲ. ಆರು ವರ್ಷದ ಎಳೆಯ ಬಾಲಕನಾದ ತಿರುಮಲನಿಗೆ ಯುವರಾಜ್ಯಾಭಿಷೇಕ ನೆರವೇರಿಸಿ ಅವನಿಗೆ ಯೋಗ್ಯವಾದ ಶಿಕ್ಷಣ ನೀಡಲು ಯೋಚಿಸಿದನು. ಆದರೆ ತಿರುಮಲನು ಒಂದೇ ವರ್ಷದಲ್ಲಿ ಅಕಾಲ ಮರಣಕ್ಕೀಡಾದನು. ಕೃಷ್ಣದೇವರಾಯನ ಆಪ್ತ ಸಚಿವನಾಗಿದ್ದ ಸಾಳುವ ತಿಮ್ಮರಸನು ತನ್ನ ಮಗನನ್ನು ವಿಷಹಾಕಿ ಕೊಂದನೆಂದು ಗೊತ್ತಾದ ನಂತರ ಕೃಷ್ಣದೇವರಾಯನು ತಿಮ್ಮರಸನ ಮತ್ತು ಅವನ ಮಗ ತಮ್ಮ ದಂಡನಾಯಕ ಅವರ ಕಣ್ಣುಗಳನ್ನು ಕೀಳಿಸಿದನು. ಉತ್ತರಾಧಿಕಾರಿಯು ಮಡಿದ ಹಾಗೂ ಆಪ್ತರ ಕುತಂತ್ರ ಇವುಗಳಿಂದ ಜರ್ಝರಿತನಾದ ಕೃಷ್ಣದೇವರಾಯನು ಕ್ರಿ.ಶ.1529ರಲ್ಲಿ ಮರಣ ಹೊಂದಿದನು. ಇವನ ಮರಣದೊಡನೆ ವಿಜಯನಗರ ಸಾಮ್ರಾಜ್ಯದ ವೈಭವಯುತವಾದ ಕಾಲವು ಮುಗಿಯಿತೆಂದು ಹೇಳಬಹುದು. ಇಪ್ಪತ್ತು ವರ್ಷಗಳ ಕೃಷ್ಣದೇವರಾಯನ ಆಳ್ವಿಕೆಯು ವಿಜಯನಗರ ಸಾಮ್ರಾಜ್ಯದ ಇತಿಹಾಸದಲ್ಲಿ ಒಂದು ಉಜ್ವಲ ಮತ್ತು ಅವಿಸ್ಮರಣೀಯ ಅಧ್ಯಾಯವಾಗಿದೆ.

**ಅಚ್ಯುತರಾಯ (ಕ್ರಿ.ಶ.1530–1542)** ಕೃಷ್ಣದೇವರಾಯನು ಮರಣ ಹೊಂದಿದಾಗ ಅವನ 2ನೇ ಮಗನು ಕೇವಲ 18 ತಿಂಗಳ ಎಳೆಯ ಬಾಲಕನಾಗಿದ್ದನು. ಆದುದರಿಂದ ಕೃಷ್ಣದೇವರಾಯನು ತನ್ನ ಅವಸಾನಕ್ಕೆ ಮೊದಲು ತನ್ನ ಮಲ ಸಹೋದರನಾದ ಅಚ್ಯುತರಾಯನನ್ನು ಉತ್ತರಾಧಿಕಾರಿಯಾಗಿ ನೇಮಿಸಿದ್ದನು. ಅಚ್ಯುತರಾಯನು ತಿರುಪತಿಯಲ್ಲಿ ಕಿರೀಟ ಧಾರಣೆಯನ್ನು ನೆರವೇರಿಸಿಕೊಂಡು ಅಧಿಕಾರ ವಹಿಸಿದನು. ಆದರೆ ರಾಜ್ಯದ ಒಳಗೂ ಮತ್ತು ಹೊರಗೂ ತೊಂದರೆಗಳು ಕಾಣಿಸಿಕೊಂಡವು. ಉತ್ತರದಲ್ಲಿ ಬಿಜಾಪುರದ ಸುಲ್ತಾನನು ಆಕ್ರಮಣ ನಡೆಸಿ ಮುದಗಲ್ಲು ಮತ್ತು ರಾಯಚೂರು ಕೋಟೆಗಳನ್ನು ವಶಪಡಿಸಿಕೊಂಡನು. ಅಳಿಯ ರಾಮರಾಯನು ಆಗ ಅಚ್ಯುತರಾಯನ ಸಹೋದರರ ಮಗನಾದ ಸದಾಶಿವನ

ಹಕ್ಕನ್ನು ಎತ್ತಿ ಹಿಡಿದನು. ಈ ಯಾದವೀ ಕಲಹದ ಮಧ್ಯೆ ಬಿಜಾಪುರದ ಸುಲ್ತಾನ ಇಸ್ಮಾಯಿಲ್ ಮರಣ ಹೊಂದಿದನು. ಕ್ರಿ.ಶ 1535ರ ವೇಳೆಗೆ ಅಚ್ಯುತರಾಯನು ಬಿಜಾಪುರದ ಮೇಲೆ ಯುದ್ಧ ಹೂಡಿ ಮುದಗಲ್ ಮತ್ತು ರಾಯಚೂರು ಪ್ರದೇಶಗಳನ್ನು ವಶಪಡಿಸಿಕೊಂಡನು. ಅಚ್ಯುತ ರಾಯನ ಆಳ್ವಿಕೆಯಲ್ಲಿ ಮಧುರೆ, ತಂಜಾವೂರು ಮತ್ತು ಇಕ್ಕೇರಿಯ ನಾಯಕ ಮನೆತನಗಳು ಅಸ್ತಿತ್ವಕ್ಕೆ ಬಂದವು. ಅವನು ಕ್ರಿ.ಶ 1542ರವರೆಗೆ ಆಳಿದನು.

ಅಚ್ಯುತರಾಯನ ಆಳ್ವಿಕೆಯಲ್ಲಿ ಕ್ರಿ.ಶ 1536ರಲ್ಲಿ ಪೋರ್ಚುಗೀಸ್ ಪ್ರವಾಸಿಯಾದ ನ್ಯೂನಿಜ್ ವಿಜಯನಗರಕ್ಕೆ ಬಂದಿದ್ದನು. ತನ್ನ ಬರವಣಿಗೆಯಲ್ಲಿ ನ್ಯೂನಿಜ್ ಸಾಮ್ರಾಜ್ಯದ ಪುರ್ವೇತಿಹಾಸವನ್ನು ಸ್ವಲ್ಪ ಮಟ್ಟಿಗೆ ಅಸಹಜವೆಂಬಂತೆ ಸೇರಿಸಿದ್ದಾನೆ. ಆದರೆ ಸಮಕಾಲೀನ ಸ್ಥಿತಿಗಳನ್ನು ಯಥಾವತ್ತಾಗಿ ಚಿತ್ರಿಸಿದ್ದಾನೆ. ಕೃಷ್ಣದೇವರಾಯನ ದಂಡೆಯಾತ್ರೆಗಳನ್ನೂ, ಅಚ್ಯುತರಾಯನ ಅದಕ್ಷತೆಯನ್ನೂ ಹಾಗೂ ಸಾಮಾಜಿಕ ಸ್ಥಿತಿಗತಿಗಳನ್ನೂ ನ್ಯೂನಿಜ್ ಬಣ್ಣಿಸಿರುವನು. ಅಚ್ಯುತರಾಯನ ಆಸ್ಥಾನಕವಿಯಾಗಿದ್ದ ರಾಜನಾಥ ಡಿಂಡಿಮನು ತನ್ನ ಗ್ರಂಥವಾದ "ಅಚ್ಯುತ ರಾಯಭ್ಯುದಯ"ದಲ್ಲಿ ರಾಜನನ್ನು ಪ್ರಶಂಶಿಸಿದ್ದಾನೆ.

**ಸದಾಶಿವರಾಯ ಮತ್ತು ರಾಮರಾಯ** (1543–1565) : ಅಚ್ಯುತರಾಯ ಮರಣ ಹೊಂದಿದ ಕೂಡಲೇ ಮತ್ತೊಮ್ಮೆ ಅಧಿಕಾರಕ್ಕಾಗಿ ಕಚ್ಚಾಟಗಳು ಪ್ರಾರಂಭವಾದವು. ಅಚ್ಯುತರಾಯನ ಮಗನಾದ ವೆಂಕಟನು ಇನ್ನೂ ಚಿಕ್ಕವಯಸ್ಸಿನ ಬಾಲಕನಾಗಿದ್ದನು. ಅವನು ಸಿಂಹಾಸನಕ್ಕೆ ಬಂದರೂ ಸ್ವಲ್ಪಕಾಲದಲ್ಲೇ ಪಿತೂರಿಯಿಂದ ಕೊಲೆಯಾದನು. ಅವನನ್ನು ಒಂದನೇ ವೆಂಕಟ ಎಂದು ಹೆಸರಿಸಲಾಗಿದೆ. ಮೊದಲೇ ನಿರ್ಧರಿಸಿದ್ದಂತೆ ರಾಮರಾಯನು ಸದಾಶಿವರಾಯನನ್ನು ರಾಜನೆಂದು ಘೋಷಿಸಿ ತನ್ನ ಸೋದರರಾದ ತಿರುಮಲ ಮತ್ತು ವೆಂಕಟಾದ್ರಿಗಳನ್ನು ಮಂತ್ರಿ ಮತ್ತು ಸೇನಾಧಿಕಾರಿಯಾಗಿ ನೇಮಿಸಿ, ತಾನೇ ಸರ್ವಾಧಿಕಾರಿಯಾಗಿ ಆಳತೊಡಗಿದನು. ಸದಾಶಿವರಾಯನು ಕ್ರಿ.ಶ 1550ರಲ್ಲಿ ಸ್ವತಂತ್ರವಾಗಿ ಆಳಲು ಪರಾಕ್ರಮಿಸಿದಾಗ ರಾಮರಾಯನು ಅವನನ್ನು ಸೆರೆಯಲ್ಲಿಟ್ಟನು. ಆದರೆ ಹೆಸರಿಗೆ ಮಾತ್ರ ಸದಾಶಿವರಾಯನ ಹೆಸರನ್ನು ಆಡಳಿತದಲ್ಲಿ ಉಲ್ಲೇಖಿಸಲಾಗುತ್ತಿತ್ತು. ರಾಮರಾಯನು ಸಮಸ್ತಾಧಿಕಾರವನ್ನು

ತನ್ನಲ್ಲಿ ಕೇಂದ್ರಿಕರಿಸಿಕೊಂಡು 1551ರಿಂದ 1565ರವರೆಗೆ ಆಳಿದನು. ಅಧಿಕಾರ ವಹಿಸಿಕೊಂಡ ಕೂಡಲೇ ಪರಂಪರಾನುಗತವಾಗಿ ಅಧಿಕಾರ ಸ್ಥಾನಗಳಲ್ಲಿದ್ದವರನ್ನು ಪದಚ್ಯುತಗೊಳಿಸಿ ಎಲ್ಲಾ ಸ್ಥಾನಗಳಿಗೂ ತನ್ನ ಬೆಂಬಲಿಗರನ್ನು ನೇಮಿಸಿದನು. ದಕ್ಷ ಆಡಳಿತಗಾರನು ಮತ್ತು ಸೇನಾನಿಯೂ ಆಗಿದ್ದ ರಾಮರಾಯನು ಆಡಳಿತದಲ್ಲಿ ಅನೇಕ ಬದಲಾವಣೆಗಳನ್ನು ಜಾರಿಗೆ ತಂದು ಸಾಮ್ರಾಜ್ಯವನ್ನು ಪುನಃಶ್ಚೇತನಗೊಳಿಸಲು ಯತ್ನಿಸಿದನು. ಪ್ರಜೆಗಳ ಮೇಲಿನ ಕೆಲವು ತೆರಿಗೆಗಳನ್ನು ಮನ್ನ ಮಾಡಿದನು. ಮಹಮ್ಮದೀಯರನ್ನು ಸೈನ್ಯಕ್ಕೆ ಸೇರಿಸಿಕೊಂಡು ರಕ್ಷಣಾ ಬಲವನ್ನು ಬಲಗೊಳಿಸಿದನು. ಆ ವೇಳೆಗೆ ಸಾಮ್ರಾಜ್ಯದ ಪರಮಾಧಿಕಾರವನ್ನು ಧಿಕ್ಕರಿಸಿ ದಕ್ಷಿಣದ ಹಲವು ಸಾಮಂತರನ್ನು ಶಿಕ್ಷಿಸಿ ತನ್ನ ಹತೋಟಿಗೊಳಪಡಿಸಿಕೊಂಡನು. ಪೋರ್ಚುಗೀಸರ ಮುಖ್ಯನೆಲೆಗಳ ಮೇಲೆ ಧಾಳಿ ಮಾಡಿ ಅಪಾರ ಕಪ್ಪಕಾಣಿಕೆಗಳನ್ನು ಪಡೆದನು

ಆ ವೇಳೆಗೆ ಬಹಮನೀ ರಾಜ್ಯವು ಒಡೆದುಹೋಗಿ ಐದು ರಾಜ್ಯಗಳುಂಟಾಗಿದ್ದವು. ಐದು ರಾಜ್ಯಗಳ ಸುಲ್ತಾನರು ಪರಸ್ಪರ ತಮ್ಮ ತಮ್ಮಲ್ಲೇ ಕಚ್ಚಾಡುತ್ತಿದ್ದರು. ಇಂತಹ ಅವಕಾಶವನ್ನು ಉಪಯೋಗಿಸಿಕೊಂಡು ರಾಮರಾಯನು ಕೃಷ್ಣದೇವರಾಯನ ತರುವಾಯ ಸಾಮ್ರಾಜ್ಯವು ಉತ್ತರ ಭಾಗದಲ್ಲಿ ಕಳೆದುಕೊಂಡಿದ್ದ ಪ್ರದೇಶಗಳನ್ನು ವಶಪಡಿಸಿಕೊಂಡನು. ಷಾಹಿಸುಲ್ತಾನರ ಒಳ ಜಗಳದಲ್ಲಿ ರಾಯನು ಪ್ರವೇಶಿಸಿದನು. ಒಂದೊಂದು ಸಾರಿ ಒಬ್ಬೊಬ್ಬರನ್ನು ಸುಲ್ತಾನನ ಪಕ್ಷವನ್ನು ವಹಿಸಿ ಎದುರಾಳಿಯನ್ನು ಸೋಲಿಸಿ ರಾಜ್ಯವಿಸ್ತರಣೆಯಲ್ಲಿ ತೊಡಗಿದನು. ಕಲ್ಯಾಣ, ಕೋವಿಲ್‌ಕೊಂಡ, ಯಾದ್‌ಗೀರ್ ಮುಂತಾದ ಕೋಟೆಗಳನ್ನು ವಶಪಡಿಸಿಕೊಂಡನು. ಕ್ರಿ.ಶ 1543ರಲ್ಲಿ ರಾಮರಾಯನು ಬಿಜಾಪುರದ ಸುಲ್ತಾನನ್ನು ಸೋಲಿಸಿದನು. ಕ್ರಿ.ಶ 1557ರಲ್ಲಿ ರಾಮರಾಯನು ವಿಜಯನಗರ ಬಿಜಾಪುರ ಮತ್ತು ಗೋಲ್ಕೊಂಡಗಳ ಮಿತ್ರಕೂಟವನ್ನು ಏರ್ಪಡಿಸಿ ಅಹಮದ್ ನಗರದ ಮೇಲೆ ಯುದ್ಧ ಹೂಡಿ ಆ ರಾಜ್ಯಕ್ಕೆ ಕಷ್ಟ ಕಾರ್ಪಣ್ಯಗಳನ್ನುಂಟು ಮಾಡಿದನು. ಹೀಗೆ ಕ್ರಿ.ಶ.1542ರಿಂದ 1564ರವರೆಗೆ ಷಾಹಿ ರಾಜ್ಯಗಳ ಮೇಲೆ ಅವನು ಯುದ್ಧ ಹೂಡಿ ಸೋಲಿಸಿ ರಾಜ್ಯ ವಿಸ್ತರಣೆಯಲ್ಲಿ ತೊಡಗಿದ್ದನು. ರಾಮರಾಯನು ಚತುರರು ಮತ್ತು ದಕ್ಷನಾಗಿದ್ದರೂ ತನ್ನ ಮಿತ್ರರನ್ನೂ, ಶತ್ರುಗಳನ್ನೂ ತಿರಸ್ಕಾರ ಮತ್ತು ದುರಭಿಮಾನದಿಂದ

ನಡೆಸಿಕೊಳ್ಳುತ್ತಿದ್ದದನ್ನು ಮನಗಂಡರು. ಮಿಗಿಲಾಗಿ ವಿಜಯನಗರ ಬಿಜಾಪುರ ಮತ್ತು ಗೋಲ್ಕೊಂಡ ರಾಜ್ಯಗಳು ಒಟ್ಟುಗೂಡಿ ಅಹಮದ್ ನಗರವನ್ನು ಸೋಲಿಸಿ ಅಲ್ಲಿ ಅಪಾರ ಹಾನಿಯುಂಟಾಯಿತು. ಈ ದೌರ್ಜನ್ಯವು ಷಾಹಿರಾಜ್ಯಗಳು ಒಗ್ಗಟ್ಟಾಗಲು ಸಹಕಾರಿಯಾಯಿತು.

ಅಹಮದ್‌ನಗರ, ಬಿಜಾಪುರ, ಬೀದರ್ ಮತ್ತು ಗೋಲ್ಕೊಂಡದ ಸುಲ್ತಾನರು ಒಗ್ಗಟ್ಟಾಗಿ ರಾಮರಾಯನನ್ನು ಸದೆಬಡಿಯಲು ನಿಶ್ಚಯಿಸಿದರು.

**ತಾಳಿಕೋಟೆ ಕದನ ಮತ್ತು ವಿಜಯನಗರ ವಿನಾಶ** (1565) : ಷಾಹಿ ಸುಲ್ತಾನರು ತಮ್ಮ ತಮ್ಮ ಸೈನ್ಯಗಳನ್ನು ಕ್ರಿ.ಶ 1564ರ ಕೊನೆಯಲ್ಲಿ ವಿಜಯನಗರದತ್ತ ನಡೆಸಿದರು. ಅವರು ಅಪರಮಿತವಾದ ಸೈನ್ಯವನ್ನು ಕಲೆಹಾಕಿದ್ದರು. ಪೋರ್ಚುಗೀಸರಿಂದ ಪಡೆದಿದ್ದ ತುಪಾಕಿಗಳಂದ ಅವರ ಬಲವು ಸಜ್ಜಾಗಿತ್ತು. ಮಿಗಿಲಾಗಿ ಸುಲ್ತಾನರು ಇಸ್ಲಾಂ ಧರ್ಮದ ಪ್ರಗತಿಗಾಗಿ ವೀರಾವೇಶದಿಂದ ಹೋರಾಡುವಂತೆ ಮಹಮ್ಮದೀಯ ಸೈನಿಕರನ್ನು ಹುರಿದುಂಬಿಸಿದರು. ಸುಲ್ತಾನರ ಸೈನ್ಯವು ಮೂರುಲಕ್ಷ ಸೈನಿಕರನ್ನು ಹೊಂದಿದ್ದು, ವಿಜಯನಗರದ ಸೈನ್ಯವು ಆರುಲಕ್ಷ ಸೈನಿಕರಿಂದ ಕೂಡಿತ್ತು.

ಕ್ರಿ.ಶ 1565ನೇ ಜನವರಿ ಮಾಹೆ 23ರಂದು ರಣರಂಗದಲ್ಲಿ ಸೈನ್ಯಗಳು ಒಂದನ್ನೊಂದು ಎದುರಿಸಿದವು. ರಕ್ಕಸಗಿ ಮತ್ತು ತಂಗಡಗಿ ಗ್ರಾಮಗಳ ಮಧ್ಯದಲ್ಲಿ ಈ ಯುದ್ಧವು ನಡೆಯಿತು. ರಾಮರಾಯನ ಬಖೈರ್‌ನಲ್ಲಿ ಇದನ್ನು ರಕ್ಕಸತಂಗಡಿ ಎಂಬುದಾಗಿ ಹೆಸರಿಸಿದೆ. ಸುಲ್ತಾನರ ಸೈನ್ಯವು ತಾಳಕೋಟೆಯ ಬಳಯಲ್ಲಿ ಶಿಬಿರ ಹೂಡಿ ಮುಂದುವರಿದು ಬಂದದ್ದರಿಂದ ತಾಳಕೋಟೆ ಕದನ ಎಂಬುದಾಗಿ ಈ ಯುದ್ಧಕ್ಕೆ ಹೆಸರಾಗಿದೆ.

ಸುಮಾರು 80 ವರ್ಷ ವಯಸ್ಸಿನ ವೃಧ್ಧ ರಾಮರಾಯನು ಕೆಚ್ಚದೆಯಿಂದ ಶತ್ರುಗಳೊಡನೆ ಹೋರಾಟದಲ್ಲಿ ತೊಡಗಿದನು. ಅವನು ಅಮಹದ್ ನಗರದ ಸೈನ್ಯಕ್ಕೆದುರಾಗಿ ಹೋರಾಟ ಪ್ರಾರಂಭಿಸಿದನು. ವೆಂಕಟಾದ್ರಿಯು ಬಿಜಾಪುರದ ಸೈನ್ಯವನ್ನು, ತಿರುಮಲನು ಗೋಲ್ಕೊಂಡ ಮತ್ತು ಬಿದರೆಯ ಸೈನ್ಯವನ್ನು ಎದುರಿಸಿದನು. ಪ್ರಾರಂಭದಲ್ಲಿ ರಾಮರಾಯನು

ಜಯಗಳಿಸಿದನು. ಆದರೆ ವಿಜಯನಗರ ಸೈನ್ಯದಲ್ಲಿ ಉನ್ನತ ಹುದ್ದೆಯಲ್ಲಿದ್ದ ಇಬ್ಬರು ಮಹಮ್ಮದೀಯ ದಳಪತಿಗಳ ವಿದ್ರೋಹದಿಂದ ಸೈನ್ಯದಲ್ಲಿ ಕೋಲಾಹಲವುಂಟಾಯಿತು. ಆ ವೇಳೆಗೆ ಅಹಮದ್ ನಗರದ ತುಪಾಕಿಗಳನ್ನು ಹೊಂದಿದ್ದ ತುಕಡಿಯು ರಾಮರಾಯನು ಎದುರಿಗೆ ನಡೆದು ಅವನ ಸೈನ್ಯವು ಕಂಗೆಡುವಂತೆ ಮಾಡಿತು. ರಾಮರಾಯನ ಶತ್ರುವಿಗೆ ಸೆರೆಸಿಕ್ಕಿದನು. ಅಹಮದ್ ನಗರದ ನಿಜಾಮ್‌ಷಾನು ರಾಮರಾಯನ ಶಿರಶ್ಚೇದನ ಮಾಡಿ ಅದನ್ನು ಭರ್ಜಿಯ ತುದಿಗೆ ಸಿಕ್ಕಿಸಿ ಹಿಂದೂ ಸೈನ್ಯದಲ್ಲಿ ಭಯಾನಕ ಉ ಂಟಾಗುವಂತೆ ಮಾಡಿದನು. ರಣರಂಗದಲ್ಲಿ ಗೊಂದಲವುಂಟಾಯಿತು. ಲಕ್ಷಾಂತರ ಮಂದಿ ಸೈನಿಕರು ಕೊಲೆಯಾದರು. ಅಳಿದುಳಿದ ವಿಜಯನಗರದ ಸೈನ್ಯವು ದಿಕ್ಕಾಪಾಲಾಗಿ ಓಡಿತು. ಸುಲ್ತಾನರು ಜಯಗಳಿಸಿದರು. ರಕ್ಕಸ ತಂಗಡಿಯ ಯುದ್ಧವು ವಿಜಯನಗರದ ಸರ್ವನಾಶವನ್ನು ಸಾರಿತು.

ಸಾಮ್ರಾಜ್ಯದ ರಾಜಧಾನಿಯತ್ತ ಶತ್ರುಗಳು ಮುನ್ನಡೆದರು. ಶತ್ರುಗಳು ನಗರವನ್ನು ತಲುಪುವ ಮುನ್ನ ತಿರುಮಲನು 1550 ಆನೆಗಳ ಮೇಲೆ ಸಾಮ್ರಾಜ್ಯದ ಸಂಪತ್ತನ್ನು ತುಂಬಿಕೊಂಡು ಚಂದ್ರಗಿರಿಯತ್ತ ನಡೆದನು. ಅವನು ತನ್ನೊಡನೆ ಅಂತಃಪುರದ ಸ್ತ್ರೀಯರನ್ನೂ ಸೆರೆಯಾಳಾಗಿದ್ದ ಸದಾಶಿವರಾಯನನ್ನು ಕರೆದೊಯ್ದು ರಾಜಧಾನಿಯನ್ನು ಅಲೆಮಾರಿಗಳ, ಅನಂತರ ಆಕ್ರಮಣಕಾರರ ನಿಷ್ಕರುಣೆಯ ಧಾಳಿಗೆ ಬಿಟ್ಟು ಹೋದನು. ಅಲೆಮಾರಿಗಳೂ, ಕಳ್ಳಕಾಕರೂ, ರಾಜಧಾನಿಯಲ್ಲಿ ಸಿಕ್ಕಿದಷ್ಟು ದೋಚಿದರು. ಆ ಕೂಡಲೇ ಶತ್ರುಸೇನೆಯು ರಾಜಧಾನಿಗೆ ನುಗ್ಗಿತು. ಸಹಸ್ರಾರು ಸಂಖ್ಯೆಯಲ್ಲಿ ಮಕ್ಕಳು, ಸ್ತ್ರೀಪುರುಷರು ಕಗ್ಗೊಲೆಗೊಳಗಾದರು. ವಿಜಯನಗರದ ಸಂಪತ್ತು ಲೂಟಿಯಾಯಿತು. ಅರಮನೆಗಳೂ, ದೇವಾಲಯಗಳೂ ನಾಶವಾದವು. ಪ್ರಪಂಚದ ಇತಿಹಾಸದಲ್ಲಿ ಇಂತಹ ವೈಭವಪೂರ್ಣ ನಗರದ ಮೇಲೆ ಅಷ್ಟು ತೀವ್ರತರವಾದ ದಾಳಿ ಮತ್ತು ವಿನಾಶವೊದಗಿದುದು ಐತಿಹಾಸಿಕ ಪ್ರಮುಖ ಕದನಗಳಲ್ಲೊಂದಾಗಿದೆ.

## ಪರಾಮರ್ಶನಗಳು


1. ಈ ಅಧ್ಯಾಯನದ ಮೊದಲ ಅಧ್ಯಾಯದಲ್ಲಿ ಈ ಬಗೆಗಿನ ವಿವರಗಳನ್ನು ನೀಡಲಾಗಿದೆ. ದಯಮಾಡಿ ಗಮನಿಸುವುದು.
2. ಕೆ.ಬಿ. ಶಿವತಾರಕ್, – *ಕರ್ನಾಟಕದ ಪುರಾತತ್ವ ನೆಲೆಗಳು,* ಕನ್ನಡ ವಿಶ್ವವಿದ್ಯಾಲಯ ಹಂಪಿ, 2000.
3. ಡಾ.ಎಂ.ಎಸ್.ಕೃಷ್ಣಮೂರ್ತಿ, – *ಕರ್ನಾಟಕದಲ್ಲಿ ಪುರಾತತ್ವ ಅಧ್ಯಯನಗಳು*, *ಇತಿಹಾಸ ದರ್ಪಣ*, ಸಂ–12, ಸಂಪಾದಕರು, ರಾಜೇಶ್ ಮತ್ತು ಅರುಣಿ, 2012, ಪು.ಸಂ.19
4. ಅದೇ
5. ಡಾ.ಡಿ.ವಿ.ದೇವರಾಜು (ಸಂ), *ಶೇಷಚಂದ್ರಿಕಾ,* ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ಇಲಾಖೆ, ಮೈಸೂರು, 1995, ಎಂ. ಶೇಷಾದ್ರಿಯವರ ಸಂಪೂರ್ಣ ಲೇಖನಗಳ ಸಂಗ್ರಹದಲ್ಲಿ ಅವರ ಪ್ರೌಢಪ್ರಬಂಧದ ಭಾಗವನ್ನು ಆಧಾರಿಸಿದೆ, ಪು.ಸಂ. 1 ರಿಂದ 87.
6. ಡಾ.ಎಂ.ಎಸ್.ಕೃಷ್ಣಮೂರ್ತಿ, ಪೂರ್ವೋಕ್ತ, 2012, ಪು.ಸಂ.19
7. ಅದೇ
8. ಎಂ. ಶೇಷಾದ್ರಿ, *A Report on Excavation at T.Narasipura*, Mysore, 1995, Chapter on Findings, Pg.88-158.
9. ಎಂ. ಶೇಷಾದ್ರಿ, *A Report on excavation at Jadigenahalli*, Mysore, 1995, pg.159-176.
10. ಡಾ.ಕೆ.ಕೆ.ಸುಬ್ಬಯ್ಯ, *ಆರ್ಕಿಯೋಲಜಿ ಆಫ್ ಕೂರ್ಗ್*, ಗೀತಾ ಬುಕ್ ಹೌಸ್, ಮೈಸೂರು, ಉಪಸಂಹಾರದ ಅಧ್ಯಯನವನ್ನು ಗಮನಿಸುವುದು
11. *ಎಂ.ಎ.ಆರ್. ರಿಪೋರ್ಟ್,* 1930.

12. ಡಾ.ಎಂ.ಎಸ್.ಕೃಷ್ಣಮೂರ್ತಿ ಮತ್ತು ಇತರರು – ತಲಕಾಡಿನ ಉತ್ಖನನದ ಸಂಕ್ಷಿಪ್ತ ವರದಿ, *ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ.ಆರ್.ಗೋಪಾಲ್, ಮೈಸೂರು 2010 ಲೇಖನವನ್ನು ಗಮನಿಸುವುದು.
13. ಡಾ.ಎಂ.ಎಸ್.ಕೃಷ್ಣಮೂರ್ತಿ, ಪೂರ್ವೋಕ್ತ, 2012, ಪು.ಸಂ. 19ರ ನಂತರ.
14. ಕದಂಬರ ಸಂಕ್ಷಿಪ್ತ ರಾಜಕೀಯ ಇತಿಹಾಸವನ್ನು ಆರ್.ಆರ್.ದಿವಾಕರ್‌ರವರ *Karnataka Through the Age*s (1968) ಕೃತಿಯನ್ನು ಮತ್ತು ಕದಂಬರ ಇತಿಹಾಸ ಲೇಖನವನ್ನು, *ಅವಲೋಕನ* ಕೃತಿಯಲ್ಲಿ ಪ್ರಕಟವಾದ ಡಾ.ಅ.ಸುಂದರರವರ (1985, ಪು.ಸಂ–57) ಲೇಖನದಲ್ಲಿ ಆಧರಿಸಿದೆ.
15. ಡಾ.ಎಂ.ವಿ.ಕೃಷ್ಣರಾವ್ ಮತ್ತು ಕೇಶವಭಟ್ಟ, *ಕರ್ನಾಟಕ ಪರಂಪರೆ,* ಬೆಂಗಳೂರು, 1970, ಬೆಂಗಳೂರು, ಪು.ಸಂ.37–66 ಮತ್ತು ಶ್ರೀನಿವಾಸ ರಿತ್ತಿ ಗಂಗರ ರಾಜಕೀಯ ಇತಿಹಾಸ *ಅವಲೋಕನ* ಎಚ್.ಎಸ್.ಕೆ. (ಸಂ) ಬೆಂಗಳೂರು, 1985, ಪು.ಸಂ.58–63
16. Dr.P.B.Desai - *A History of Karnataka*, Kannada Research Institute Karnataka University, Darwad. 1970
17. ಬಿ.ಷೇಕ್‌ಅಲಿ (ಸಂ) – *ಕರ್ನಾಟಕದ ಚರಿತ್ರೆ,* ಕನ್ನಡ ವಿಶ್ವವಿದ್ಯಾನಿಲಯ (ಹೊಯ್ಸಳರ ಬಗೆಗಿನ ಅಧ್ಯಾಯವನ್ನು ಆಧರಿಸಿದೆ.
18. ಎಂ ವಿ ಕೃಷ್ಣರಾವ್ ಮತ್ತು ಕೇಶವಭಟ್ಟ, *ಕರ್ನಾಟಕದ ಪರಂಪರೆ*ಯಲ್ಲಿನ ಅಧ್ಯಾಯ : ವಿಜಯನಗರ ಸಾಮ್ರಾಜ್ಯ, ಬೆಂಗಳೂರು, 1970. ಪು.ಸಂ.354–430.

## ಅಧ್ಯಾಯ-ನಾಲ್ಕು

# ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆ: ಪ್ರಾಗ್ಇತಿಹಾಸ ಕಾಲದಿಂದ ವಿಜಯನಗರದ ಅಂತ್ಯದವರೆಗೆ

ಕರ್ನಾಟಕದ ದಕ್ಷಿಣದ ಭೂಪ್ರದೇಶವನ್ನು ಆಳ್ವಿಕೆ ಮಾಡಿರುವಂತೆ ರಾಜಮನೆತನಗಳಾದ, ಕದಂಬರು, ಗಂಗರು, ಬಾದಾಮಿಯ ಚಾಲುಕ್ಯರು, ಕಲ್ಯಾಣಿ ಚಾಲುಕ್ಯರು, ಚೋಳರು, ದ್ವಾರಸಮುದ್ರದ ಹೊಯ್ಸಳರು, ತದನಂತರ ಆಡಳಿತ ನಡೆಸಿದ ವಿಜಯನಗರದ ಅರಸರು ತಮ್ಮದೇ ಆದ ಆಡಳಿತದ ಮಾರ್ಪಾಡುಗಳನ್ನು ಮಾಡಿಕೊಂಡು ರಾಜ್ಯಭಾರ ಮಾಡಿದ್ದಾರೆ. ಅವುಗಳು ಇತಿಹಾಸ ಪುಟದಿಂದ ಹಿಂದೆ ಸರಿದಿವೆ. ಆದರೆ ಆ ಕಾಲದಲ್ಲಿ ರಾಜ ಮಹಾರಾಜರು, ರಾಣಿಯರು, ಮಂತ್ರಿಗಳು, ದಂಡನಾಯಕರು, ಶ್ರೀಮಂತ ವರ್ಗದವರು ಹಾಗೂ ಜನಸಾಮಾನ್ಯರು ಸಮಾಜದ ಹಿತಕ್ಕಾಗಿ ಮಾಡಿದಂತಹ ಕೆಲಸ ಕಾರ್ಯಗಳ ಕುರುಹುಗಳಾಗಿ ಇಂದಿಗೂ ನಮ್ಮ ನಾಡಿನಲ್ಲಿ ಅಳಿದುಳಿದಿರುವಂತಹ ಕುರುಹುಗಳು ಲಭ್ಯವಾಗುತ್ತದೆ. ಅವುಗಳೆಂದರೆ ಶಾಸನಗಳು, ನಾಣ್ಯಗಳು, ದೇವಾಲಯಗಳು. ಸಾರ್ವಜನಿಕ ಕಟ್ಟಡಗಳು ರಕ್ಷಣೆಗಾಗಿ ನಿರ್ಮಾಣ ಮಾಡಲಾದಂತಹ ಕೋಟೆ ಕೊತ್ತಲಗಳು ಅದರಲ್ಲೂ ಪ್ರಮುಖವಾಗಿ ಕೆರೆ ಕಟ್ಟೆಗಳನ್ನು ನಿರ್ಮಾಣ ಮಾಡಿರುವುದನ್ನು ಈಗಲೂ ಸಹ ನಾವು ಇತಿಹಾಸದ ಆಧಾರಗಳಿಂದ ನೋಡಬಹುದಾಗಿದೆ.

ಪ್ರಾಚೀನ ಕಾಲದಲ್ಲಿ ರಾಜ್ಯಗಳನ್ನು ಸ್ಥಾಪನೆಮಾಡಿ ಆಳ್ವಿಕೆ ನಡೆಸಿದ ರಾಜಮನೆತನ ಅರಸರು ತಾವು ನೆಲಸಿದನಾಡಿನ ಮತ್ತು ಯುದ್ಧದಲ್ಲಿ ಹೋರಾಟ ಮಾಡಿ ಶತ್ರುಗಳನ್ನು ಸೋಲಿಸಿ ಪಡೆದಂತ ಭೂ ಪ್ರದೇಶಗಳನ್ನು ತಮ್ಮ ಆಡಳಿತಕ್ಕೆ ಒಳಪಡಿಸಿಕೊಂಡು, ಆಯಾ ಕಾಲದಲ್ಲಿ ನೆಲಸಿದ್ದ ಜನ ಸಮುದಾಯಕ್ಕೆ ಬೇಕಾಗಿದ್ದಂತಹ ಸೌಲತ್ತುಗಳನ್ನು ನೀಡುವುದರ ಮೂಲಕ ತಮ್ಮ ಜೀವನವನ್ನು ಸಾರ್ತಕಗೊಳಿಸಿರುವುದು ಆಧಾರಗಳಿಂದ ತಿಳಿದು ಬರುತ್ತದೆ.

ಈ ಮೇಲೆ ತಿಳಿಸಲಾದಂತಹ ಆಳರಸರುಗಳಲ್ಲದೆ ಅದಕ್ಕೂ ಮೊದಲು ನಮ್ಮ ನಾಡಿನಲ್ಲಿ ಪ್ರಾಗೈತಿಹಾಸಿಕ ಕಾಲದ ಜನರು ನೆಲೆಯೂರಿದ್ದ ಬಗ್ಗೆ ಹಾಗೂ ಜನರು ನೀರಿನ

ಆಸರೆಗಾಗಿ ನದಿ ಕಣಿವೆಗಳು ಬೆಟ್ಟ-ಗುಡ್ಡದ ತಪ್ಪಲಲ್ಲಿ ವಾಸ್ತವ್ಯ ಹೂಡಿರುವುದರ ಬಗ್ಗೆ ಇತ್ತೀಚಿನ ಸಂಶೋಧನೆಗಳಿಂದ ಮಾಹಿತಿ ದೊರೆಯುತ್ತದೆ. ಆಹಾರ ಮತ್ತು ನೀರಿನ ಆಸರೆಗಾಗಿ ಅವರು ಬೆಟ್ಟ ಗುಡ್ಡ ಪ್ರದೇಶದಲ್ಲಿ ದೊರೆಯುತ್ತದೆ. ಪ್ರಾಣಿ, ಪಕ್ಷಿ, ಗೆಡ್ಡೆ-ಗೆಣಸು, ಹಣ್ಣು ಹಂಪಲನ್ನು ತಿನ್ನುವಾಗ ಬಾಯಾರಿಕೆಗಾಗಿ ಬಂಡೆಗಳ ಮೇಲೆ ಇದ್ದ ಕೊಳ, ನದಿಗಳನ್ನು ಕಟ್ಟಡಗಳನ್ನು ಹುಡುಕುತ್ತಾ ಲಭ್ಯವಾದ ನೀರನ್ನು ಕುಡಿದು ಬಾಯಾರಿಕೆಯನ್ನು ಹಿಂಗಿಸಿಕೊಳ್ಳುತ್ತಿದ್ದುದರ ಬಗ್ಗೆ ನಮಗೆ ಆಧಾರಗಳು ದೊರೆಯುತ್ತವೆ.

ಪ್ರಾಗೈತಿಹಾಸಿಕ ಕಾಲಘಟ್ಟವನ್ನು ಬಿಟ್ಟು ಐತಿಹಾಸಿಕ ಕಾಲಘಟ್ಟಕ್ಕೆ ಬರುವುದಾದರೆ, ಅದರಲ್ಲೂ ರಾಜಮಹಾರಾಜರ ಆಳ್ವಿಕೆಯ ಕಾಲದಲ್ಲಿ ಜನರಿಗೆ ಅವಶ್ಯಕವಾದ ಆಹಾರ ಮತ್ತು ಪ್ರಾಣ ಜಲಕ್ಕಾಗಿ ಪ್ರಕೃತಿ ದತ್ತವಾಗಿ ಹರಿಯುವ ನದಿ ಕಣಿವೆಗಳಿಗೆ ಅಡ್ಡಲಾಗಿ ಅಣೆ-ಕಟ್ಟೆಗಳನ್ನು ಕಟ್ಟಿ ಮಳೆಗಾಲದಲ್ಲಿ ಹರಿದು ಹಾಳಾಗಿ ಸಮುದ್ರವನ್ನು ಸೇರುತ್ತಿದಂತಹ ನದಿಯ ನೀರನ್ನು ತಡೆ ಹಿಡಿದು ಬೇಸಿಗೆ ಕಾಲದಲ್ಲಿ ಬಳಸಿಕೊಳ್ಳಲು ಅನುವು ಮಾಡಿಕೊಟ್ಟಿರುವುದು ಅಲ್ಲದೆ ಕೆರೆ ಕಟ್ಟೆಗಳನ್ನು ಕಟ್ಟಿಸುವುದರ ಮೂಲಕ ಜನರಿಗೆ ಬೇಕಾದ ಸೌಲಭ್ಯವನ್ನು ಒದಗಿಸುತ್ತಿದ್ದರು. ತಮ್ಮ ಜೀವನದ ಎಲ್ಲಾ ಕಾರ್ಯಗಳಿಗೂ ಬಳಸಿಕೊಂಡು ಉಳಿದ ನೀರನ್ನು ವ್ಯವಸಾಯಕ್ಕೆ ಉಪಯೋಗಿಸಿ ಬೇಸಿಗೆ ಕಾಲದಲ್ಲಿ ಬೆಳೆಯನ್ನು ಬೆಳೆದು ಆರ್ಥಿಕವಾಗಿ ಮುಂದುವರೆಯಲು ಅವಕಾಶವಾಯಿತು. ಅಲ್ಲದೆ ಹೀಗೆ ವ್ಯವಸಾಯಕ್ಕೆ ನದಿ ಕಣಿವೆ ಕಟ್ಟೆಗಳಿಂದ ನೀರನ್ನು ಬಳಸಿಕೊಳ್ಳುವ ಉಪಯೋಗವನ್ನು ಕಂಡುಕೊಂಡ ನಮ್ಮ ಪೂರ್ವಿಕರು. ಆ ಪ್ರದೇಶದಲ್ಲಿ ನೀರಿನ ಆಸರೆ ಇರುವ ಸ್ಥಳ ಪ್ರದೇಶದಲ್ಲಿ ನೀರನ್ನು ತಡೆಹಿಡಿದು ಮರು ಉಪಯೋಗಿಸಿಕೊಳ್ಳುವ ಪ್ರವೃತ್ತಿ, ಪ್ರಾರಂಭವಾಯಿತು. ಹೀಗೆ ಕೆರೆ-ಕಟ್ಟೆಗಳನ್ನು ಕಟ್ಟುವುದು ದೇವರ ಕಾರ್ಯವೆಂದು ಮನಗಂಡ ನಮ್ಮ ಜನ ನಂಬಿಕೆಯಿಂದ ಆ ಕಾರ್ಯದಲ್ಲಿ ಮುಂದುವರೆದರು.

ಕೆರೆ ಕಟ್ಟೆಗಳ ನಿರ್ಮಾಣದಿಂದ ವ್ಯವಸಾಯ ಮಾನವನ ದಿನನಿತ್ಯದ ಬಳಕೆ, ಪ್ರಾಣಿ, ಪಕ್ಷಿಗಳು ಜಲಚರಗಳಿಗೆ ಈ ಕೆರೆ ಕಟ್ಟೆಗಳು ಆಶ್ರಯ ನೀಡಿ ಪ್ರಾಣಿ ಸಂಕುಲದ ಬೆಳವಣಿಗೆಗೆ ನಾಂದಿಯಾಯಿತ್ತೆಂದರೆ ತಪ್ಪಾಗಲಾರದು. ನೀರನ್ನು ಉಪಯೋಗಿಸಿಕೊಂಡು ಬೆಳೆಯನ್ನು

ಬೆಳೆಯಲು ಪ್ರಾರಂಭಿಸಿದ ನಮ್ಮ ಪೂರ್ವಿಕರು ಆರ್ಥಿಕವಾಗಿ ಸಂಪೃದ್ಧಿಯನ್ನು ಹೊಂದಿ ಮಾನಸಿಕ ನೆಮ್ಮದಿಯನ್ನು ಕಂಡುಕೊಂಡು ಅದರಲ್ಲಿಯೇ ಮುಂದುವರೆದು ಶತಶತಮಾನನಗಳ ಕಾಲದಿಂದಲೂ ಮಾರ್ಪಾಡಾಗುತ್ತಾ ತಾಂತ್ರಿಕತೆಯನ್ನು ಮೈಗೂಡಿಸಿಕೊಂಡು ನೀರನ್ನು ಸಂಗ್ರಹಿಸುವಂತಹ ಪ್ರಯತ್ನವನ್ನು ಮಾಡಿರುವುದಕ್ಕೆ ಸಂಬಂಧಿಸಿದಂತೆ ನಮ್ಮ ನಾಡಿನಾದ್ಯಂತ ಈಗಲೂ ಅಳಿದುಳಿದುಕೊಂಡು ಬಂದಿರುವಂತಹ ಕೆರೆ ಕಟ್ಟೆಗಳೇ ಇದಕ್ಕೆ ಸಾಕ್ಷಿಯಾಗಿ ನಿಂತಿವೆ ಎಂದರೆ ತಪ್ಪಾಗಲಾರದು.

ಈ ಪ್ರದೇಶವು ಗಂಗರು ಕದಂಬರ ಆಡಳಿತದ ವ್ಯಾಪ್ತಿಯಲ್ಲಿ ಇತ್ತೆಂಬ ವಿಚಾರವನ್ನು ಈ ಮೊದಲೆ ಉಲ್ಲೇಖಿಸಲಾಗಿದೆ, ಅಲ್ಲದೆ ಪ್ರಾಗೈತಿಹಾಸಿಕ ಕಾಲದಲಿಯೂ ಈ ಪ್ರದೇಶ ಜನವಸತಿಯ ನೆಲಗಳು ನೀರಾವರಿ. ಸೌಕರ್ಯವನ್ನು ಪಡೆದುಕೊಂಡಿದ್ದವೆಂದು ಪ್ರಾಕ್ತನ ಆಧಾರದ ಮೇಲೆ ಮತ್ತು ಸಾಂಸ್ಕೃತಿಕ ಅಧ್ಯಯನಗಳ ಅಭಿಪ್ರಾಯಗಳನ್ನು ಆಧರಿಸಿ ಈ ಮೇಲಿನ  ಪುಟಗಳಲ್ಲಿ ನಾವು ಕಂಡು ಕೊಂಡಿರುವುದರಿಂದ ನಾವು ಐತಿಹಾಸಿಕ ಕಾಲಘಟ್ಟದಲ್ಲಿ ಅದರಲ್ಲೂ ವಿವಿಧ ರಾಜ ಮನೆತನಗಳ ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ಕೆರೆಯ ನಿರ್ಮಾಣದ ಬಗೆಗೆ ಕಂಡುಬರುವ ಐತಿಹಾಸಿಕ ದಾಖಲೆಗಳನ್ನು ದಾಖಲಿಸುವ ಮತ್ತು ಅವುಗಳ ಮಹತ್ವವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವನ್ನು ಈ ಮುಂದಿನ ಪುಟಗಳಲ್ಲಿ ತಿಳಿಸಲಾಗಿದೆ.

## ಪ್ರಾಗಿತಿಹಾಸದ ಕಾಲದಲ್ಲಿ ಕೆರೆಗಳ ನಿರ್ಮಾಣ

ಪ್ರಾಚೀನ ಕಾಲದಲ್ಲ ಅಗ್ರಹಾರಗಳ ನಿರ್ಮಾಣದ ಉದ್ದೇಶಗಳಂತೆ ಕೆರೆಯ ನಿರ್ಮಾಣದ ಉದ್ದೇಶಗಳು ಅವಲಂಬಿತವಾಗಿದ್ದವೆಂದು ಹೇಳಬಹುದು. ಕೆರೆಗಳ ನಿರ್ಮಾಣ ಅತ್ಯಂತ ಪ್ರಾಚೀನವಾದ ತಂತ್ರಗಾರಿಕೆ ಅಲ್ಲವಾದರೂ ಈ ನಿರ್ಮಾಣವನ್ನು ವ್ಯವಸಾಯವನ್ನು ಮೂಲ ವೃತ್ತಿಯನ್ನಾಗಿ ಹೊಂದಿದ್ದ ಬೃಹತ್ ಶಿಲಾಯುಗದ ಜನರು ಪ್ರಾರಂಭಿಸಿದರೆಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯ ಅಷ್ಟಾಗಿ ಕಂಡು ಬರುವುದಿಲ್ಲವಾದರೂ. ಮಾನವನ ಸಂಸ್ಕೃತಿಯ ಪ್ರಮುಖ ಹಂತದ ಬದಲಾವಣೆಗಳು ಕಂಡು ಬಂದಿದ್ದು ನೂತನ ಶಿಲಾಯುಗದ ಕಾಲದಲ್ಲಿ ನೈಸರ್ಗಿಕವಾದ ಗುಹೆಗಳು ಕಲ್ಲಾಶ್ರಯಗಳು ಇತ್ಯಾದಿ ಪ್ರದೇಶಗಳಲ್ಲಿ ಅವು

ನೈಸರ್ಗಿಕ ವಿಕೋಪಗಳಿಂದ ರಕ್ಷಣೆ ಪಡೆದು ಆಹಾರವನ್ನು ಹರಸುತ್ತಾ ಆಹಾರ ಹುಡುಕಾಟವನ್ನೇ ಪ್ರಧಾನ ವೃತ್ತಿಯನ್ನಾಗಿ ಹೊಂದಿದ್ದ ಆದಿ ಶಿಲಾಯುಗದ ಮಾನವನು ಸುಧಾರಣೆಗೊಂಡು ಒಂದೆಡೆ ನಿಂತು ತನ್ನ ಜೀವನವನ್ನು ರೂಪಿಸಿಕೊಳ್ಳಲು ದಾಪುಗಾಲಿಟ್ಟಿದ್ದು ನೂತನ ಶಿಲಾಯುಗದಲ್ಲಿ ಪ್ರಾಣಿಗಳನ್ನು ಪಳಗಿಸಿ ಅವುಗಳನ್ನು ತನ್ನ ಉಪಯೋಗಕ್ಕೆ ಬಳಸಿಕೊಳ್ಳುವುದಲ್ಲದೆ ಮಡಿಕೆ ಮಾಡುವುದನ್ನು ಮತ್ತು ಅವುಗಳನ್ನು ತನ್ನ ವಿವಿಧ ಉಪಯೋಗಗಳಿಗೆ ಬಳಸಿಕೊಳ್ಳುವುದರೊಂದಿಗೆ ಚಿತ್ತನೆಯನ್ನು ಕಲಿತುಕೊಂಡನು. ನೂತನ ಶಿಲಾಯುಗದ ನೆಲೆಗಳು ಸಾಮಾನ್ಯವಾಗಿ ನಿರಂತರವಾಗಿ ನೀರಿನ ಸೌಲಭ್ಯವನ್ನು ಹೊಂದಿದ್ದ ಪ್ರದೇಶಗಳಲ್ಲಿದ್ದುದು ಗಮನಾರ್ಹ. ಆದರೆ ಬೃಹತ್ ಶಿಲಾಯುಗದ ನೆಲೆಗಳು ನೂತನ ಶಿಲಾಯುಗದ ನೆಲೆಗಳಿಗೆ ಹೋಲಿಸಿದಾಗ ನಿರಂತರ ನೀರಿನಾಸರೆಯಿಂದ ದೂರವಿರುವ ಪ್ರದೇಶಗಳಲ್ಲಿ ಕಂಡು ಬಂದಿರುವುದಲ್ಲದೆ ಮಳೆಗಾಲದಲ್ಲಿ ನೀರನ್ನು ಶೇಖರಿಸಿ ಅದನ್ನು ತನಗೆ ಅವಶ್ಯಕತೆ ಇದ್ದಾಗ ಮತ್ತೆ ಬಳಸಿಕೊಳ್ಳುವ ತಂತ್ರಗಾರಿಕೆಯನ್ನು ಅಭಿವೃದ್ಧಿ ಪಡಿಸಿಕೊಂಡಿದ್ದನೆಂಬುದು ಬೃಹತ್ ಶಿಲಾಯುಗದ ಸಂಸ್ಕೃತಿಗಳ ಬಗ್ಗೆ ಅಧ್ಯಯನ ಮಾಡಿರುವ ವಿದ್ವಾಂಸರುಗಳ ಏಕಾಭಿಪ್ರಾಯವಾಗಿದೆ.[1]

ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು ಅಂದರೆ ವ್ಯವಸಾಯಕ್ಕೆ ಹೆಚ್ಚು ಸೂಕ್ತವಲ್ಲದ ಬೆಟ್ಟದ ತಪ್ಪಲುಗಳಲ್ಲಿ ಸಾಮಾನ್ಯವಾಗಿ ಕಂಡುಬಂದಿದ್ದು ಈ ನೆಲೆಗಳ ಸಮೀಪದಲ್ಲಿ ಮೈದಾನ ಪ್ರದೇಶದಲ್ಲಿ ಜನವಸತಿಗೆ ಸಮೀಪದಲ್ಲಿ ವಸತಿ ಪ್ರದೇಶವಿತ್ತೆಂದು ದಾಖಲಿಸುತ್ತಾ ಈ ಎಲ್ಲ ಕಲ್ಲುಗೋರಿಗಳ ನೆಲೆಗಳಲ್ಲಿ ನೀರನ್ನು ಹಿಡಿದಿಡುವ ಕೆರೆಯ ಮಾದರಿಯ ರಚನೆಗಳಿದ್ದವೆಂದು ತಿಳಿದು ಬರುತ್ತವೆ. ಈ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ದಕ್ಷಿಣ ಕರ್ನಾಟಕ ಜಿಲ್ಲೆಗಳಲ್ಲಿ ಕಂಡು ಬಂದಿರುವ ಈವರೆಗೆ ಪ್ರಕಟವಾಗಿರುವ ನೆಲೆಗಳನ್ನು ಆಧರಿಸಿ ಆ ಕಾಲದ ಒಟ್ಟು ನೆಲೆಗಳ ಅಂದಾಜನ್ನು ಈ ಕೆಳಗಿನಂತೆ ಪಟ್ಟಿಮಾಡಬಹುದು.[2]

| ಕೋಲಾರ | 196 |
|---|---|
| ಕೊಡಗು | 16 |
| ಚಾಮರಾಜನಗರ | 78 |
| ಚಿಕ್ಕಮಗಳೂರು | 09 |
| ಚಿತ್ರದುರ್ಗ | 29 |
| ತುಮಕೂರು | 65 |
| ದಕ್ಷಿಣ ಕನ್ನಡ | 07 |
| ಬೆಂಗಳೂರು ನಗರ | 15 |
| ಬೆಂಗಳೂರು ಗ್ರಾಮಾಂತರ | 59 |
| ಮಂಡ್ಯ | 08 |
| ಮೈಸೂರು | 41 |
| ಒಟ್ಟು | **523** |

ಈ ಮೇಲಿನ ಪಟ್ಟಿಯ ಅಂಕಿ-ಅಂಶದಿಂದ ತಿಳಿದುಬರುವುದೇನೆಂದರೆ ಬೃಹತ್ ಶಿಲಾಯುಗದ ಅಂತ್ಯಕಾಲಕ್ಕೆ ಮತ್ತು ಇತಿಹಾಸ ಕಾಲದ ಪ್ರಾರಂಭ ಘಟ್ಟದಲ್ಲಿ 523ಕ್ಕೂ ಹೆಚ್ಚು ಜನವಸತಿ ಕೇಂದ್ರಗಳಿದ್ದವೆಂದು, ಈ ಜನವಸತಿ ಕೇಂದ್ರಗಳಲ್ಲಿ ನೀರನ್ನು ತಡೆದುಹಿಡಿದಿರುವ ಕೆರೆಯ ಮಾದರಿಯ ವ್ಯವಸ್ಥೆ ಚಾಲ್ತಿಯಲ್ಲಿತ್ತೆಂದು ಒಪ್ಪಿಕೊಂಡರು. ಇಂದು ನಮ್ಮ ಗಮನಕ್ಕೆ ಬಾರದ ಎಷ್ಟೋ ಬೃಹತ್ ಶಿಲಾಯುಗದ ನೆಲೆಗಳು ಅಲ್ಲಲ್ಲಿ ಬೆಳಕಿಗೆ ಬರುತ್ತಿವೆ. ಹಾಗಾಗಿ ಈ ಮೇಲಿನ ಸಂಖ್ಯೆಯನ್ನು ಖಚಿತವಾಗಿ ಒಪ್ಪಿಕೊಳ್ಳಲು ಸಾಧ್ಯವಿಲ್ಲದಿದ್ದರು ಅಂದಾಜಿಸಲು, ಕೆರೆ ನೀರಾವರಿಯ ಬಗೆಯ ಸ್ಥಿತಿಗತಿಗಳನ್ನು ಅರ್ಥೈಸಿಕೊಳ್ಳಲು ಬಳಸಿಕೊಳ್ಳಲು ತೊಂದರೆ ಇಲ್ಲ. ಬೃಹತ್ ಶಿಲಾಯುಗದ ಕಾಲದಲ್ಲಿ ನಿತ್ಯ ಜೀವನದಲ್ಲಿ ಅವರು ಬಳಸುತ್ತಿದ್ದ ದವಸ ಧಾನ್ಯಗಳನ್ನು ಅಧ್ಯಯನ ಮಾಡಿ ಅವುಗಳನ್ನು ಬೆಳೆಯಲು ಬೇಕಾದ ತಂತ್ರಗಾರಿಕೆ ಮತ್ತು ವ್ಯವಸ್ಥೆಗಳನ್ನು ಗಮನದಲ್ಲಿಟ್ಟುಕೊಂಡು ಬೃಹತ್ ಶಿಲಾಯುಗದ ಕೆರೆ ನೀರಾವರಿ ಮತ್ತು ನಿರ್ಮಾಣದ ತಂತ್ರಜ್ಞಾನ ಸಾಕಷ್ಟು ಮುಂದುವರಿದಿತ್ತೆಂದು ತಿಳಿದು ಬರುತ್ತದೆ.

## ಇತಿಹಾಸ ಕಾಲದಲ್ಲಿ ಕೆರೆಗಳ ನಿರ್ಮಾಣ

ಕೆರೆಯ ನಿರ್ಮಾಣ ಹಾಗೂ ನಿರ್ವಹಣೆ ಬಗೆಗೆ ಶಾಸನಗಳು ಎಲ್ಲಾ ಕಾಲದಲ್ಲಿ ದೊರೆಯದ ಕಾರಣ ಆ ಕಾಲದಲ್ಲಿ ಕೆರೆಯ ನಿರ್ಮಾಣ ಮತ್ತು ನಿರ್ವಹಣೆ ನಡೆಯಲ್ಲಿಲ್ಲವೆಂದು ಅರ್ಥೈಸಿದ್ದಲ್ಲಿ ಅಂದಿನ ಜನರ ನಿರ್ಮಾಣಕ್ಕೆ ಮತ್ತು ಕ್ರಿಯಾಶೀಲತೆಗೆ ನಾವು ಮಾಡುವ ಅಪಚಾರವೆಂದೇ ಹೇಳಬಹುದು. ಬಿ.ಎಲ್. ರೈಸ್ ಮತ್ತು ಮೈಸೂರು ಗೆಜಟಿಯರ್‌ನಲ್ಲಿ ದಾಖಲಿಸಿದಂತೆ ದಕ್ಷಿಣ ಕರ್ನಾಟಕ ಈ ಪ್ರದೇಶದಲ್ಲಿ ೩೦ ಸಾವಿರಕ್ಕೂ ಅಧಿಕ ಕೆರೆಗಳು ೧೮೦೦ರ ಆಸುಪಾಸಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು. ಹಾಗೆ ನೋಡಿದರೆ ಇವರೆಗೆ ಪ್ರಕಟವಾಗಿರುವ ಎಲ್ಲಾ ಶಾಸನಗಳ ಕೆರೆಗಳ ಬಗೆಗೆ ದಾಖಲೆಯನ್ನು ಹೊಂದಿರಲೇ ಬೇಕಾಗಿದ್ದಿತ್ತು. ಆದರೆ ಹಾಗಾಗಿಲ್ಲ ಕಾರಣ ಕೆರೆಯನ್ನು ನಿರ್ಮಿಸಿದ ಎಲ್ಲಾ ನಿರ್ಮಾತೃಗಳು ತಮ್ಮ ಸಾಧನೆಯನ್ನು ದಾಖಲಿಸುವ ಪ್ರಯತ್ನ ಮಾಡದೇ ಅಜ್ಞಾತರಾಗಿ ಉಳಿದಿದ್ದಾರೆ. ಇದೇ ರೀತಿಯಾಗಿ ಬಗೆಯಹಲವಾರು ಅಗ್ರಹಾರಗಳೂ ಕಂಡುಬರುತ್ತವೆ. ಕರ್ನಾಟಕದಾದ್ಯಂತ ಕಂಡುಬರುವ ಅಗ್ರಹಾರಗಳಲ್ಲಿ ಬಹಳಷ್ಟು ಅಗ್ರಹಾರಗಳನ್ನು ಜನಮೇಜಯಾ ಅಗ್ರಹಾರ, ಅನಾದಿ ಅಗ್ರಹಾರ, ಇತ್ಯಾದಿಯಾಗಿ ಸಂಭೋದಿಸಿರುವುದನ್ನು ಶಾಸನಗಳಲ್ಲಿ ದಾಖಲಿಸಲಾಗಿದೆ. ಈ ಎಲ್ಲಾ ಅಗ್ರಹಾರಗಳ ನಿರ್ಮಾತೃಗಳು ತಮ್ಮ ನಿರ್ಮಾಣವನ್ನು ದಾಖಲಿಸದೇ ಹೋದುದು ಕಾರಣವಷ್ಟೇ ಅಲ್ಲ ಅಥವಾ ಕೇವಲ ಇತ್ತೀಚಿಗೆ ತಮ್ಮ ಹೆಸರುಗಳನ್ನು ದಾಖಲೀಕರಣಗೊಳಿಸುವ ಪ್ರಕ್ರಿಯೆ ಬೆಳೆಯಿತ್ತೆಂದೇನೂ ಭಾವಿಸಬೇಕಿಲ್ಲ. ಇಂದೂ ಸಾರ್ವಜನಿಕ ಕ್ಷೇತ್ರದಲ್ಲಿರುವ ಹಲವಾರು ದಾನಿಗಳೂ ಅಜ್ಞಾತವಾಗಿಯೇ ಉಳಿದಿದ್ದಾರೆ. ಈ ಹಿನ್ನೆಲೆಯಲ್ಲಿ ಶಾಸನಗಳು ಕರ್ತವ್ಯ ನಿರ್ವಹಿಸಿರುವುದರಿಂದ ಕೇವಲ ಲಿಖಿತ ದಾಖಲೆಗಳನ್ನು ಆಧಾರವಾಗಿಟ್ಟು ಮುಂದುವರಿಯಲು ಸಾಧ್ಯವಿಲ್ಲ. ಈ ಮಿತಿಯಲ್ಲಿ ಆಕಾರಗಳ ಒದಗಿಸುವ ಮಾಹಿತಿಯನ್ನು ಇಟ್ಟುಕೊಂಡು ಅಂದಿನ ನೀರಾವರಿ ವ್ಯವಸ್ಥೆಯ ಅದರಲ್ಲೂ ಕೆರೆ ಕಟ್ಟೆಗಳ ಆರ್ಥಿಕ ಅಭಿವೃದ್ಧಿಗೆ ಮತ್ತು ಜನವಸತಿಗೆ ಹೇಗೆ ಪೂರಕವಾಗಿದ್ದವೆಂಬುದನ್ನು ತಿಳಿದುಕೊಳ್ಳಲು ಈ ಒಂದು ಅಧ್ಯಯನವನ್ನು ಮಾಡಲು ಪ್ರಯತ್ನಿಸಿದ್ದೇನೆ.

## ಕದಂಬಯುಗ

ಕರ್ನಾಟಕ ಈ ಭಾಗದಲ್ಲಿ ಕಂಡುಬರುವ ಅತ್ಯಂತ ಪ್ರಾಚೀನ ಕೆರೆಗಳಲ್ಲಿ ಪ್ರಮುಖವಾಗಿ ಎರಡು ಕೆರೆಗಳ ಬಗ್ಗೆ ಉಲ್ಲೇಖ ಮಾಡಲಾಗಿದೆ. ಈ ಎರಡು ಕೆರೆಗಳು ಕದಂಬರ ಕಾಲದಲ್ಲಿ ನಿರ್ಮಾಣವಾಗಿರುವುದಕ್ಕೆ ಶಾಸನಗಳಲ್ಲಿ ಉಲ್ಲೇಖವಿದೆ. ಅತ್ಯಂತ ಪ್ರಾಚೀನವಾದ ಶಾಸನವೆಂದರೆ ಮಯೂರಶರ್ಮನ ಚಂದ್ರವಳ್ಳಿಯ ಶಾಸನ.[3] ಈ ಶಾಸನದಲ್ಲಿ ಕದಂಬ ಮಯೂರ ಶರ್ಮನು ಚಂದ್ರವಳ್ಳಿಯ ಕೆರೆಯ ಏರಿಯನ್ನು ಪುನರ್ ನಿರ್ಮಾಣ ಮಾಡಿದಂತೆ ತಿಳಿಸುತ್ತದೆ. (ನೋಡಿ ಚಿತ್ರ 1–3) ಅಂದರೆ ಈ ಶಾಸನದ ಕಾಲವಾದ ಕ್ರಿ.ಶ.258ಕ್ಕೆ ಪೂರ್ವದಲ್ಲಿಯೇ ಈ ಕೆರೆಕಟ್ಟಲಾಗಿದ್ದಿತ್ತೆಂಬುದು ಖಚಿತವಾಗಿರುತ್ತದೆ. ಅಲ್ಲದೆ ಈ ಕೆರೆಯ ನಿರ್ಮಾತೃವು ಅಜ್ಞಾತವಾಗಿ ಉಳಿದಿದ್ದಾರೆ. ಈ ಕೆರೆಯ ಬಗೆಗೆ ವಿವರಿಸುತ್ತ ಬಿ.ರಾಜಶೇಖರಪ್ಪರವರು[4] ರಾಜ್ಯದ ಅತ್ಯಂತ ಪ್ರಾಚೀನ ಕೆರೆಗಳಲ್ಲಿ ಚಂದ್ರವಳ್ಳಿಯ ಕೆರೆ ಒಂದೆಂದು ಅಭಿಪ್ರಾಯ ಪಡುತ್ತಾರಲ್ಲದೆ, ಈ ಕೆರೆಯು ಶಾತವಾಹನರ ಯುಗದಲ್ಲಿಯೂ ಅಸ್ಥಿತ್ವದಲ್ಲಿತ್ತೆಂದು ಅಭಿಪ್ರಾಯ ಪಡುತ್ತಾರೆ. ಇದಾದ ನಂತರ ಹಾಸನ ಜಿಲ್ಲೆಯ ಬೇಲೂರು ತಾಲೂಕಿನ ಹಲ್ಮಿಡಿಯಲ್ಲಿ ದೊರೆತ ಕನ್ನಡದ ಪ್ರಪ್ರಥಮ ಶಾಸನದಲ್ಲಿ ಕೆರೆಯ ನೀರಾವರಿಯ ಬಗೆಗೆ ಮಾಹಿತಿ ಇರುವುದನ್ನು ಟಿ.ವಿ.ನಾಗರಾಜು ತಮ್ಮ ಲೇಖನವೊಂದರಲ್ಲಿ ಗುರುತಿಸಿ ಈ ಪ್ರದೇಶದಲ್ಲಿ ಅಂದರೆ ಹಲ್ಮಿಡಿಯ ಸಮೀಪದಲ್ಲಿ ಕೆರೆ ಇದ್ದಿತ್ತೆಂದು ಖಚಿತವಾಗಿ ಹೇಳುತ್ತಾರೆ.[5] ಇದಾದ ನಂತರ ಶಿವಮೊಗ್ಗ, ಜಿಲ್ಲೆಯ ತಾಳಗುಂದದ ಪ್ರಣವೇಶ್ವರ ದೇವಾಲಯದ ಮುಂದಿನ ಕೆರೆಯನ್ನು ಕದಂಬ ಕಾಕುಸ್ಥವರ್ಮನು ಪುನರ್ ನಿರ್ಮಿಸಿದನೆಂದು ಶಾಸನ ಹೇಳುತ್ತದೆ.[6] ಕದಂಬ ಕಾಕುಸ್ಥವರ್ಮನ ತಾಳಗುಂದ ಶಾಸನವು ಪ್ರಣವೇಶ್ವರನನ್ನು ಶಾತಕರಣಿಯು ಆರಾಧಿಸುತ್ತಿದ್ದನೆಂದು ಉಲ್ಲೇಖಿಸಿರುವುದರಿಂದ ಈ ಕೆರೆಯನ್ನು ಪುನರ್ ನಿರ್ಮಾಣ ಮಾಡಿರಬಹುದೆಂದು ಈ ಕೆರೆಯು ಕದಂಬರಿಗೂ ಪೂರ್ವಕಾಲದ ಕೆರೆ ಎಂಬುದರಲ್ಲಿ ಅನುಮಾನವಿಲ್ಲವಾದರೂ ಕೆರೆಯ ನಿರ್ಮಾತೃ ಅಜ್ಞಾತನಾಗಿಯೇ ಉಳಿದಿದ್ದಾರೆ. ಈಗಾಗಿ ಶಾತವಾಹನರ ಕಾಲದ ಚಂದ್ರವಳ್ಳಿಯ ಕೆರೆ ತಾಳಗುಂದದ ಕೆರೆ ಮುಂತಾದ ಕೆರೆಗಳು ಕಾಲ ನಂತರದಲ್ಲಿ ಜೀರ್ಣೋದ್ಧಾರಗೊಂಡು ಹಲವಾರು ವರ್ಷಗಳವರೆಗೆ ಪುನರ್ ಬಳಕೆಯಾಗಿರುವುದನ್ನು ಕಾಣಬಹುದು. ಈಗಾಗಿ ಬಹುತೇಕ ಪ್ರಾಚೀನ ಕೆರೆಗಳು ಇಂದಿಗೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ ಎಂದು ಹೇಳಬಹುದು.

ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಮ್ರಪಟದಲ್ಲಿ ಕದಂಬಸಿಂಹವರ್ಮನ ಶಾಸನವೊಂದರಲ್ಲಿ ಭೂದಾನವನ್ನು ಉಲ್ಲೇಖಿಸುವಾಗ ಅಸಂಧಿ ಕೆರೆ ಎಂದು ಹೆಸರಿಸುತ್ತದೆ.[7] **ಆ**ದರೆ ಈ ಪ್ರದೇಶವನ್ನು ಗುರುತಿಸುವುದು ಸಾಧ್ಯವಾಗಿಲ್ಲ ಶಿಕಾರಿಪುರ ತಾಲ್ಲೂಕು ಶಿವಳ್ಳಿ ತಾಮ್ರಪಟ ಶಾಸನದಲ್ಲಿ ಕದಂಬ ಇಮ್ಮಡಿ ಕೃಷ್ಣವರ್ಮನ ಕಾಲದಲ್ಲಿ ಮಹೇಶ್ವರಿ ಕ್ಷೇತ್ರದ ದಕ್ಷಿಣಕ್ಕೆ, ಬಂದಣಿಕೆಯ ಪೂರ್ವಕ್ಕೆ ಶಾಂತ ತಟಾಕವಿತ್ತೆಂದು ದಾಖಲಾಗಿದೆ.[8] ಇಲ್ಲಿ ಶಾತವಾಹನೀಯ ಕುರುಹುಗಳು ಕಂಡುಬಂದಿವೆ. ಹಾಗಾಗಿ ಶಾಂತ ತಟಾಕವು ಶಾತವಾಹನರ ಶಾಂತಿನಾಥ ಬಸದಿಯ ತಟಾಕವೆಂದು ವಿದ್ವಾಂಸರು ಗುರುತಿಸಿದ್ದಾರೆ.[9] ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕು ತಗರೆಯ ತಾಮ್ರಪಟದಲ್ಲಿ ಕಿರಗೂಡಲು ಕೆರೆ ಹಾಗೂ ತಗರೆಯ ಪೆರ್ಗೆರೆಯ ಉಲ್ಲೇಖವಿದೆ.[10] ಈ ಎರಡು ಕೆರೆಗಳು ಕದಂಬರ ಕಾಲಕ್ಕಾಗಲೆ ಪ್ರಚಲಿತದಲ್ಲಿದ್ದವೆಂದು ಗಮನಿಸಿದರೆ ಇವು ಕದಂಬ ಕಾಲದ ಪೂರ್ವದ ಕೆರೆಗಳೆಂದೆ ಹೇಳ ಬೇಕಾಗುತ್ತದೆ. ಕರ್ನಾಟಕದ ಈ ಪ್ರದೇಶದ ಬೃಹತ್ ಶಿಲಾಯುಗದ ಗೋರಿಗಳ ಕಾಲವನ್ನು ಕ್ರಿ.ಪೂ. 1500 ರಿಂದ ಕ್ರಿ.ಪೂರ್ವ 200ರೆಂದು ವಿದ್ವಾಂಸರು ಖಚಿತಪಡಿಸಿದ್ದಾರೆ. ಕ್ರಿ.ಪೂ 200 ರಿಂದ 2ನೇ ಶತಮಾನದ ಶಾತವಾಹನ ಯುಗವೆಂದು ಖಚಿತಪಡಿಸಿದ್ದಾರೆ. ಈಗಾಗಿ ಬೃಹತ್ ಶಿಲಾಯುಗದ ನಗರೀಕರಣದ ವ್ಯವಸ್ಥೆ ಶಾತವಾಹನ ಯುಗದಿಂದ ಮುಂದುವರಿದು ಇತಿಹಾಸ ಕಾಲಘಟ್ಟದವರೆಗೆ ಮುಂದುವರಿದು ಕೊಂಡು ಬಂದಿದೆ ಎಂದು ಅಧ್ಯಯನಗಳಿಂದ ಖಚಿತವಾಗಿ ತಿಳಿದು ಬರುತ್ತದೆ. ಆದರೆ ಕೆಲವು ನಿವೇಶನಗಳು ಇಂದಿನ ಜನವಸತಿಯ ಪ್ರದೇಶದಿಂದ ದೂರ ಉಳಿದಿವೆ ಎಂದ ಮಾತ್ರಕ್ಕೆ ಅವುಗಳ ಪ್ರಾಚೀನತೆಯನ್ನು ಅಲ್ಲಗಳೆಯಲಾಗುವುದಿಲ್ಲ.

## ಬಾದಾಮಿ ಚಾಲುಕ್ಯರು

ಕದಂಬರಿಗೆ ಸಮಕಾಲೀನರಾಗಿ ದಕ್ಷಿಣ ಕರ್ನಾಟಕದಲ್ಲಿ ಗಂಗರು ತಲೆ ಎತ್ತಿದರಾದರೂ ಅವರ ಪ್ರಾರಂಭದ ಶಾಸನಗಳು ಸಾಕಷ್ಟು ಸಂಖ್ಯೆಯಲ್ಲಿ ದೊರೆಯದ ಕಾರಣ ಆ ಕಾಲಘಟ್ಟದ ಶಾಸನಗಳು ಕೆರೆಗಳ ನಿರ್ಮಾಣದ ಬಗೆಗೆ ಹೆಚ್ಚಿನ ಮಾಹಿತಿಯನ್ನು ನೀಡದ ಕಾರಣ ಅವುಗಳ ವಿಚಾರವಾಗಿ ನಾವು ಹೆಚ್ಚಿನ ವಿಷಯಗಳನ್ನು ತಿಳಿಯಲು ಸಾಧ್ಯವಾಗಿಲ್ಲ.

ಆದರೂ ಆದಿ ಗಂಗರ ಕಾಲದಲ್ಲಿ ಕೆರೆ ನೀರಾವರಿ ಚಾಲ್ತಿಯಲ್ಲಿತ್ತೆಂದು ತಿಳಿಯಲು ಸಾಕಷ್ಟು ಶಾಸನಗಳಿವೆ. ಇವು 6ನೇ ಶತಮಾನದ ನಂತರ ಕಂಡುಬರುವುದರಿಂದ ಬಾದಾಮಿ ಚಾಲುಕ್ಯರ ಕಾಲಘಟ್ಟವನ್ನು ಸಮೀಕ್ಷಿಸಿ ನಂತರ ಗಂಗರ ಕಾಲಘಟ್ಟವನ್ನು ಸಮೀಕ್ಷಿಸಲು ಪ್ರಯತ್ನಿಸಲಾಗಿದೆ.

ಬಾದಾಮಿ ಚಾಲುಕ್ಯರ ಶಾಸನಗಳು ದಕ್ಷಿಣ ಕರ್ನಾಟಕದಲ್ಲಿ ದೊರೆತ್ತಿಲ್ಲವೆಂಬುವಷ್ಟರ ಮಟ್ಟಿಗೆ ವಿರಳವಾಗಿವೆ. ಈ ಶಾಸನಗಳಲ್ಲಿ ಕೆರೆ ನೀರಾವರಿಯ ಬಗೆಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಈಗಾಗಿ ದಕ್ಷಿಣ ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯರು ಸಂಪೂರ್ಣವಾಗಿ ತಮ್ಮ ಸಾಮಂತರಾದ ಗಂಗರನ್ನು ಸ್ಥಾನಿಕ ಆಡಳಿತಕ್ಕೆ ಆಶ್ರಯಿಸಿದ್ದುದು ಖಚಿತವಾಗುತ್ತದೆ. ಅಲ್ಲದೆ ಡಾ.ಬಿ.ಶೇಕ್ ಅಲಿ ರವರು ತಮ್ಮ ಕೃತಿ 'The History of Westron Ganga's ನಲ್ಲಿ ಬಾದಾಮಿ ಚಾಲುಕ್ಯರು ಗಂಗರನ್ನು ಸೋಲಿಸಿ ಅಧೀನಪಡಿಸಿ ಕೊಂಡಿದ್ದರು ಸ್ಥಾನಿಕ ಚಟುವಟಿಕೆಗಳಿಗೆ ಮತ್ತು ರಾಜಕೀಯವಾಗಿ ಗಂಗರಿಗೆ ಸಾಕಷ್ಟು ಸ್ವಾತಂತ್ರ್ಯವನ್ನು ನೀಡಿ ಅವರನ್ನು ಪಲ್ಲವರ ವಿರೋಧಿಗಳನ್ನಾಗಿ ರೂಪಿಸಿ ತಮ್ಮ ಸಾಮ್ರಾಜ್ಯ ಸಂರಕ್ಷಣೆಯ ಕಾರ್ಯದಲ್ಲಿ ಉಳಿಸಿಕೊಂಡರೆಂದು ಅಭಿಪ್ರಾಯಪಡುತ್ತಾರೆ.[11] ಹಾಗಾಗಿ ಗಂಗರೇ ಈ ಪ್ರದೇಶದಲ್ಲಿ ಬಾದಾಮಿ ಚಾಲುಕ್ಯರ ಕಾಲದಲ್ಲಿಯೂ ಆರ್ಥಿಕ, ಸಾಮಾಜಿಕ ಧಾರ್ಮಿಕ ಪುರೋಭಿವೃದ್ಧಿಯನ್ನು ಮುಂದುವರಿಸಿಕೊಂಡು ಹೋದರೆಂದು ಹೇಳಬೇಕಾಗುತ್ತದೆ. ಕೆರೆ ಕಟ್ಟೆಗಳ ನಿರ್ಮಾಣ ಕಾರ್ಯವನ್ನು ಗಂಗ ಅರಸರೇ ಮುಂದುವರಿಸಿಕೊಂಡು ಹೋದರೆಂದು ಖಚಿತವಾಗುತ್ತದೆ.

## ಗಂಗ ರಾಷ್ಟಕೂಟಯುಗ

ಮೇಲುಕೋಟೆಯ ಶಾಸನವೊಂದು ಕೆಲವು ಕೆರೆಗಳ ಪ್ರಸ್ತಾಪವನ್ನು ಮಾಡುತ್ತದೆ. ತಡಂಗಲ ಮಾಧವನ ಕಾಲದ ಶಾಸನವೊಂದರಲ್ಲಿ ತಿಳಿಸಿರುವ ಪ್ರಕಾರ ಕೆರೆಗಳ ನಿರ್ಮಾಣ ನೀರಾವರಿ ಸೌಲಭ್ಯ ಮುಂತಾದ ವಿವರಗಳು ದಾಖಲಾಗಿದೆ.[12] ಒಂದು ಪ್ರದೇಶಕ್ಕೆ ಮಳೆಗಾಲ ಮತ್ತು ಬೇಸಿಗೆ ಕಾಲ ಎರಡರಲ್ಲೂ ಒಂದೊಂದು ಕೆರೆಯಿಂದ ನೀರನ್ನು ಪೂರೈಸಿಕೊಂಡು

ವ್ಯವಸಾಯ ಮಾಡುತ್ತಿದ್ದ ಬಗ್ಗೆ ವಿವರಗಳಿವೆ ಹೊಸ ಕೋಟೆಯ ಮತ್ತೊಂದು ಶಾಸನ ಕೆರೆಯ ಕೆಳಗೆ ಕಬ್ಬು ಬೆಳೆಯುವ ತೋಟವಿದ್ದದನ್ನು ಸೂಚಿಸುತ್ತದೆ.[13]

ಗಂಗರ ಶ್ರೀಪುರುಷನ ಕ್ರಿ.ಶ 776-77ರ ತಾಮ್ರ ಶಾಸನ 6 ಕೆರೆಗಳ ಸರಹದ್ದು ಉಳ್ಳ ಹೊನ್ನುವೊಳೆಯನ್ನು ಉಲ್ಲೇಖಿಸುತ್ತದೆ.[14] 8ನೇ ಶತಮಾನದಲ್ಲಿಯೇ ಈ ಒಂದು ಊರಿಗೆ ಆರು ಕೆರೆಗಳು ಇದ್ದುದಕ್ಕೆ ಇದು ಪ್ರಥಮ ಉಲ್ಲೇಖವಾಗುತ್ತದೆ. ಬಾದಾಮಿ ಚಾಲುಕ್ಯರ ಪತನಾನಂತರ ಗಂಗರು ರಾಷ್ಟ್ರಕೂಟರ ಸಾಮಂತರಾದರು. ಈ  ಕಾಲಘಟ್ಟದಲ್ಲಿ ಸಹ ಗಂಗರು ಏಳು ಬೀಳಿನ ರಾಜಕೀಯ ಜೀವನವನ್ನು ನಡೆಸಿದರು ಸಾಕಷ್ಟು ಸಂಖ್ಯೆಯಲ್ಲಿ ಕೆರೆಗಳನ್ನು ನಿರ್ಮಿಸುವ ಮತ್ತು ಅವುಗಳನ್ನು ನಿರ್ವಹಿಸುವುದಕ್ಕೆ ಗಮನ ನೀಡಿದರೆಂದು ತಿಳಿದುಬರುತ್ತದೆ. 9ನೇ ಶತಮಾನದಲ್ಲಿ ಗಂಗರು ತಮ್ಮ ನೀರಾವರಿ ಚಟುವಟಿಕೆಗಳನ್ನು ಮುಂದುವರಿಸಿದುದ್ದಕ್ಕೆ ಜಿಲ್ಲೆಯ ಸಾಲಿಗ್ರಾಮ ಶಾಸನವು ಮಾಹಿತಿಯನ್ನು ನೀಡುತ್ತದೆ.[15] ಈ ಶಾಸನ ಗಂಗರ ಕಾಲದಲ್ಲಿ ಎಡತೊರೆಯ ಬಳಿಯ ಹಳ್ಳಿಯೊಂದರ ಭೂ ವ್ಯವಹಾರಕ್ಕೆ ಸಂಬಂಧಿಸಿದುದಾಗಿದೆ. ಈ ಶಾಸನವು ಬಟ್ಟ ವೃತ್ತಿಗೆ ನೀಡಿದ ಭೂಮಿಯ ವಿವರವನ್ನು ತಿಳಿಸುತ್ತಾ ಗಾಮಗುಡ್ಡನಕೆರೆ, ಅಕ್ಕಸಾಲಿಗರಕೆರೆ, ಸೀಗೆಕೆರೆ, ಮಡಿವಾಳರ ಕೆರೆ, ರಜತ ತಟಾಕ, ಮಹಾಂಕಾರ ತಟಾಕ, ಮಾಧವಾಡಿಕ ಕೆರೆ, ಮೈಕೊನಂತ ತಟಾಕ, ತೋಣ್ಣೆಗೆರೆ ತಟಾಕ, ಸಿರಿಕ್ಕಿಗೆರೆ ತಟಾಕ, ವಲ್ಲಾರು ಕೆರೆ, ನಲ್ಲೂತ ತಟಾಕ, ನಿಡುಗಟ್ಟಕೆರೆ, ಮಾಡವಾಡಿ ತಟಾಕ, ನೌಕಿಕೆರೆ, ತೇನಂದ ಕೆರೆ, ಕೊಮಾರತಟಾಕ ಮುಂತಾದ ತಟಾಕಗಳ ಬಗ್ಗೆ ವಿವರಿಸುತ್ತದೆ. ಇಲ್ಲಿ ಈ ಶಾಸನದಲ್ಲಿ ಕಂಡುಬರುವ ವೃತ್ತಿಗಾರರ ಹೆಸರಿನ ಕೆರೆಗಳಾದ ಚಿನಿವಾರಕೆರೆ, ಅಗಸರಕೆರೆ ಮುಂತಾದವು ಪ್ರತಿಯೊಂದು ವರ್ಗವು ಪ್ರತ್ಯೇಕವಾದ ಕೆರೆಗಳನ್ನು ಹೊಂದಿದ್ದವೆಂದು ಸಾಬೀತುಪಡಿಸಿದೆ.

ಎಡತೊರೆಯ ಗಳಿಗೆಕೆರೆ ಶಾಸನವು ಆರು ಕೆರೆಗಳಿದ್ದುದನ್ನು ದಾಖಲಿಸುತ್ತದೆ. ಮಠಕೆರೆ, ತೆವೆನ್ದಾನಕೆರೆ, ಪೆರ್ಮನಗೆರೆ, ಪಂಳಮವೆದಿರ ಕೆರೆ, ಕೊಣಿನ್ದಗೆರೆ,[16] ಗಂಗ ದಳವಾಯಿ ಸತ್ಯವಾಕ್ಯ ಪೆರ್ಮಾಡಿಯ ಕ್ರಿ.ಶ 908ರ ಬಸವಣ್ಣ ಹಳ್ಳಿಯ ಶಾಸನದಲ್ಲಿ ದೇವಾಲಯ ಒಂದಕ್ಕೆ ಭಾವಿ ಮತ್ತು ಕೆರೆಯಿಂದ ನೀರು ಪಡೆಯುವ ಸಲುವಾಗಿ

ಭೂಮಿಯನ್ನು ಧಾನ ಮಾಡಿರುವುದು ದಾಖಲಾಗಿದೆ.[17] ಬಂಕಾಪುರದ ಕ್ರಿ.ಶ 929-30ರ ಶಾಸನವು ಕೊಂಡಲೆಗೆರೆ ಎಂಬ ಸ್ಥಳೀಯ ಕೆರೆಯ ಮೇಲೆ ತೆಂಡ ಹಾಗೂ ತೆರಿಗೆ ವಿಧಿಸುತ್ತಿದುದ್ದನ್ನು ಪ್ರಸ್ತಾಪಿಸುತ್ತದೆ ಅಲ್ಲದೆ, ಕಾಳವೂರನ್ನು ಭವ್ಯವಾದ ಕೆರೆಗಳ ಊರೆಂದು ದಾಖಲಿಸುತ್ತದೆ.[18]

ಬಂಗಾರಪೇಟೆ ತಾಲ್ಲೂಕಿನ ಬೇತಮಂಗಲದ ಶಾಸನವು ಕ್ರಿ.ಶ 950ರಲ್ಲಿ ನಿರ್ಮಾಣಗೊಂಡ ಕೆರೆಯನ್ನು ಜೀರ್ಣೋದ್ಧಾರ ಮಾಡಿದ ಬಗೆಗೆ ವಿವರಗಳು ದಾಖಲಾಗಿವೆ.[19] ತುಮಕೂರಿನ ಕ್ರಿ.ಶ 955ರ ಶಾಸನದಲ್ಲಿ ತುಮಕೂರು ಕೆರೆಯ ಕೆಳಗಿನ ಜಮೀನನ್ನು ದಾನ ಮಾಡಿದುದನ್ನು ಶಾಸನವು ದಾಖಲಿಸುತ್ತದೆ.[20] ನಂಜನಗೂಡು ತಾಲೂಕಿನ ಕಾರ್ಯ ಶಾಸನವು ದೇಶಿಕೆರೆ ಹಾಗೂ ಪೆರಿಯ ಕೆರೆ ಎಂಬ ಎರಡು ಕೆರೆಗಳ ನಿರ್ಮಾಣವನ್ನು ದಾಖಲಿಸುತ್ತದೆ.[21] ರಾಷ್ಟ್ರಕೂಟ 3ನೇ ಕೃಷ್ಣನ ಕುಡತಿನಿ ಶಾಸನ ಈ ಪ್ರದೇಶದ ಕೆರೆಯನ್ನು ದಾಖಲಿಸುತ್ತದೆ.[22] ಇವುಗಳಲ್ಲದೆ ಈ ಕಾಲಘಟ್ಟದ ಹಲವಾರು ಕೆರೆಗಳು ಇದ್ದುದಕ್ಕೆ ಆಕರಗಳು ಲಭ್ಯವಿದೆ ಅವುಗಳನ್ನು ಈ ಕೆಳಗಿನಂತೆ ದಾಖಲಿಸಬಹುದು.

ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನ ಗುಂಡಹಳ್ಳಿಯಲ್ಲಿ ಕ್ರಿ.ಶ.754 ಶಾಸನ ಜೀವಣ್ಣನ ಮಗ ನಿಟ್ಟಿರಾಮಣ್ಣ 20 ಜನರಿಗೆ ಭೂದಾನ ನೀಡಿದ್ದನ್ನು ದಾಖಲಿಸುತ್ತಾ ಅಲ್ಲಿನ ದೊಡ್ಡ ಕೆರೆಯನ್ನು ಅಕಲೀಟಿ ನಿರ್ಮಿಸಿದನೆಂದು ಉಲ್ಲೇಖಿಸುತ್ತದೆ.[23] ಶಿರಾ ತಾಲೂಕಿನ ಅಲ್ಲೂರಿನ ಕ್ರಿ.ಶ.788ರ  ಗಂಗ ಅರಸರ ಶ್ರೀಪುರುಷನ ಕಾಲದಲ್ಲಿ ಆದ್ಯ ಪೆರನೆಂಬುದನು ಕೆರೆಯನ್ನು ನಿರ್ಮಿಸಿದ್ದನ್ನು ದಾಖಲಿಸುತ್ತದೆ.[24] ಅಲ್ಲದೆ ಗ್ರಾಮದ ಜನರು ಕೆರೆಯನ್ನು ನಿರ್ಮಿಸಿ ತೆರಿಗೆಗಳನ್ನು ಮನ್ನಾ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಕುಣಿಗಲ್ ಕ್ರಿ.ಶ 785ಕ್ಕೆ, ಪೂರ್ವದಲ್ಲಿಯೇ ಪ್ರಶಿದ್ಧವಾದ ಜನವಸತಿಯ ಕೇಂದ್ರವಾಗಿತ್ತು. ಈ ಕಾಲಕ್ಕಾಗಲೇ ಕುಣಿಗಲ್ ನಾಡಿನ ಕೇಂದ್ರವಾಗಿದ್ದು, ಶಾಸನದಲ್ಲಿ 'ಕುಣಿಗಲು ನಾಡು' ಎಂದು ಉಲ್ಲೇಖಿಸಲ್ಪಟ್ಟಿದೆ. ಇಲ್ಲಿನ ಕೆರೆಯು ಅತೀ ಪ್ರಾಚೀನ ಕೆರೆಯಾಗಿದ್ದು ಇದನ್ನು ರಾಷ್ಟ್ರಕೂಟ ಅರಸ ಕೃಷ್ಣನು ರಿಪೇರಿ ಮಾಡಿದಂತೆ ತಿಳಿದು ಬರುತ್ತದೆ. ಅಂದ ಮೇಲೆ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನಿಗಿಂತ ಪೂರ್ವದಲ್ಲಿಯೇ ಇಲ್ಲಿ ಕೆರೆಯಿದ್ದಿತ್ತು. ಅದು ಇಂದಿಗೂ ಉಳಿದುಕೊಂಡು ಬಂದಿದೆ.[24ಅ]

(ನೋಡಿ ಚಿತ್ರ 4.5) ಶಿರಾ ತಾಲೂಕಿನ ಕ್ರಿ.ಶ.920ರ ಶಾಸನ ಅಯ್ಯಪ್ಪ ದೇವನ 2ನೇ ರಾಣಿ ನಾಗಿಯಬ್ಬೆಯ ತಾಯಿ ನಾರಾಯಣಬ್ಬೆಯು ತನ್ನ ಮಕ್ಕಳಾದ ನಾಗಿಯಬ್ಬೆ, ಹಳೆಯಬ್ಬೆಯರ ಹೆಸರಿನಲ್ಲಿ ಕೆರೆಯನ್ನು ನಿರ್ಮಿಸಿ ಕೆರೆಯ ಏರಿಯಾ ಮೇಲೆ ದೇವಾಲಯಗಳನ್ನು ನಿರ್ಮಿಸಿ ಆ ದೇವಾಲಯಕ್ಕೆ ಕೆರೆಯ ಕೆಳಗಿನ ಭೂಮಿಯನ್ನು ದಾನ ಮಾಡಿದುದನ್ನು ದಾಖಲಿಸುತ್ತದೆ.[25] ತುಮಕೂರು ಜಿಲ್ಲೆಯ ಮಧುಗಿರಿ ತಾಲೂಕಿನ ಬಾಡಲೂರಿನ ಕ್ರಿ.ಶ 900 ರ ಶಾಸನದಲ್ಲಿ 3 ಖಂಡುಗದ ಭೂಮಿಯನ್ನು ಕೆರೆ ಕೊಡುಗೈ ರಾಜ್ಯಮಾನ್ಯವಾಗಿ ಮಾಳು ಎರೆಯಣ್ಣನಿಗೆ ದಾನ ನೀಡಿದುದನ್ನು ದಾಖಲಿಸುತ್ತದೆ.[26] ಕ್ರಿ.ಶ 907ರ ಮಂಡ್ಯ ತಾಲೂಕಿನ ತಾಯಲೂರಿನ ಶಾಸನ ಕಟ್ಟುವರ ಕೊಳಲಶೆಟ್ಟಿ ಎಂಬುವವನು ಕೆರೆ ನಿರ್ಮಿಸಿದ್ದಕ್ಕಾಗಿ ಕಡೂರಿನ ರೈತರು ಮತ್ತು ಗಾವುಂಡರು 35 ಖಂಡುಗ ಭೂಮಿಯನ್ನು ದಾನವಾಗಿ ನೀಡಿದುದ್ದನ್ನು ದಾಖಲಿಸುತ್ತದೆ.[27] ಇದೇ ತಾಲೂಕಿನ ಬೇಲೂರಿನ ಕ್ರಿ.ಶ.997ರ ಶಾಸನವು ನಾಳಯ್ಯ ಎಂಬುವನು ಕೆರೆತೊಡಿಸಿ ತೂಬನ್ನು ಇರಿಸಿದುದನ್ನು ದಾಖಲಿಸುತ್ತದೆ.[28] ಮಂಡ್ಯ ತಾಲೂಕಿನ ಹಳೆಬೂದನೂರಿನ ಶಾಸನವೊಂದು ಊರಿನ ಗಾವುಂಡರಾದ ಚಾರಯ್ಯ ಮತ್ತು ಜಯಣ್ಣರು ಕೆರೆ ನಿರ್ಮಿಸಿದುದಕ್ಕಾಗಿ ಭೂಮಿಯನ್ನು ದಾನ ಮಾಡಿದುದನ್ನು ದಾಖಲಿಸುತ್ತದೆ.[29] ಮಳವಳ್ಳಿ ತಾಲೋಕಿನ ಪೂರಿಗಾಲಿಯು ತೇದಿಯಿಲ್ಲದ ಶ್ರೀಪುರುಷನ ಶಾಸನವು ಪನ್ನೀರ್‌ವರ್ ಕೊಂಗಣಿ ಕೆರೆಯನ್ನು ನಿರ್ಮಿಸಿದರೆಂದು ದಾಖಲಿಸುತ್ತದೆ.[30] ನಾಗಮಂಗಲ ತಾಲೂಕಿನ 9ನೇ ಶತಮಾನದ ಬೆಳಗುಂದದ ಶಾಸನವು ಬಿಯಿಲಯ್ಯ ಕೀರಿಯ ಬೆಳಗುಂದದ ಕೆರೆಯ ನಿರ್ವಹಣೆಗೆ, ಆ ಕೆರೆಯ ಅಚ್ಚುಕಟ್ಟಿನ ಭೂಮಿಯನ್ನು ಬಿಟ್ಟುವಟ್ಟವಾಗಿ ನೀಡಿರುವುದನ್ನು ಕಾಣಬಹುದಾಗಿದೆ.[31]

ಮೈಸೂರು ಜಿಲ್ಲೆಯ ನಂಜನಗೂಡು ತಾಲೂಕಿನ ಗಟ್ಟವಾಡಿಯಾ ಕ್ರಿ.ಶ.972ರ ಶಾಸನದಲ್ಲಿ ಕೆರೆಯ ನಿರ್ಮಾಣದ ಪ್ರಸ್ತಾಪ ಕಂಡು ಬರುತ್ತದೆ.[32] ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲೋಕಿನ ಚಂದ್ರವಳ್ಳಿಯ ಕೆರೆಯನ್ನು ಕದಂಬ ಮಯೂರಶರ್ಮನು ಕೆರೆಯ ಏರಿಯನ್ನು ಬಲಪಡಿಸಿದಂತೆ ತಿಳಿದುಬರುತ್ತದೆ.[33] ಆದರೆ ಬಿ.ರಾಜಶೇಖರಪ್ಪರವರು ಕರ್ನಾಟಕದ ಅತ್ಯಂತ ಪ್ರಾಚೀನ ಕೆರೆಗಳಲ್ಲಿ ಚಂದ್ರವಳ್ಳಿ ಕೆರೆಯು ಸಹ ಒಂದು ಎಂದು ಗುರುತಿಸುತ್ತಾರೆ. ಇದಾದ ತರುವಾಯ ಚಿತ್ರದುರ್ಗದ ಕೆರೆಗಳ ಐತಿಹಾಸಿಕ ಅಂಶಗಳು

ಲಭ್ಯವಾಗುವುದು ಹೊಯ್ಸಳರ ನಂತರ. 60ಕ್ಕೂ ಹೆಚ್ಚು ಪ್ರಾಚೀನ ಕೆರೆಗಳನ್ನು ಜಿಲ್ಲೆಯ ಶಾಸನಗಳ ಹಿನ್ನೆಲೆಯಲ್ಲಿ ರಾಜಶೇಖರಪ್ಪರವರು ಗುರುತಿಸಿದ್ದರಾದರೂ ಅವುಗಳನ್ನು ಯಾವ ಕಾಲಘಟ್ಟದಲ್ಲಿ ನಿರ್ಮಿಸಲಾಯಿತು ಎಂದು ದಾಖಲಿಸಲು ಸಾಧ್ಯವಿಲ್ಲವೆಂದು ಅಭಿಪ್ರಾಯಪಡುತ್ತಾರೆ.[34]

ಕ್ರಿ.ಶ 902ರ ಹಾರೋಮಚಡಿಯ ಶಾಸನ ಎರಯ ಪೆರುಮಾಡಿಯಾ ಮಗ ಸಾಂತ ಕೆಂಪ ಮಾರದ ಕೆರೆಯನ್ನು ನಿರ್ಮಿಸಿ ಏರಿಯ ಮೇಲೆ ದೇವಾಲಯವನ್ನು ನಿರ್ಮಿಸಿದನೆಂದು ತಿಳಿಸುತ್ತದೆ.[35] ಸೊರಬ ತಾಲ್ಲೋಕಿನ ಕ್ರಿ.ಶ.903ರ ಕೆರೆಯಳ್ಳದ ಶಾಸನ ಸಾಮಂತ ನೋರ್ವನು ಕೆರೆಯನ್ನು ನಿರ್ಮಿಸಿ ಹೊಸ ಗ್ರಾಮವನ್ನು ನಿರ್ಮಿಸಿದಂತೆ ತಿಳಿಸುತ್ತದೆ.[36] ಶಿಕಾರಿಪುರ ತಾಲೂಕಿನ ತಾಳಗುಂದದ ಕ್ರಿ.ಶ 935ರ ಶಾಸನ ಮಹಾಮಂತ್ರ ಪೆರ್ಗಡೆ, ಪುಳಿಯಮಾದ ತೆನೆಗುಂದದ ಕೆರೆಯನ್ನು ಮತ್ತು ದೇವಾಲಯವನ್ನೂ ಕಟ್ಟಿಸಿ, ದೇವರ ದೀಪಾದಾರತಿಗೆ, ಕೆರೆಯ ಕೆಳಗಿನ ಭೂಮಿಯನ್ನು ದಾನ ನೀಡಿರುವುದನ್ನು ದಾಖಲಿಸುತ್ತದೆ.[37] ಇದೇ ತಾಲೂಕಿನ ಚಿಕ್ಕಮಾಗಡಿಯ ಕ್ರಿ.ಶ 935 ರ ಶಾಸನ ಶಾಂತಳಿಗೆಯ ಪೆರ್ಗಡೆ ಮಂತ್ರಿಯಾದುದಕ್ಕೆ ಪೆರ್ಗಡೆ ಪುರಿಯಣ್ಣನು ಅನುಗಂಡರ್ ಕೆರೆಯನ್ನು ನಿರ್ಮಿಸಿ ಕೆರೆಯ ಅಚ್ಚುಕಟ್ಟಿನ ಒಂದು ಭಾಗವನ್ನು, ಆ ಕೆರೆಯ ನಿರ್ವಹಣೆಗೆ ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ.[38]

ಸೊರಬ ತಾಲೋಕಿನ ಉಲುವಳ್ಳಿಯ ಕ್ರಿ.ಶ 964ರ ಶಾಸನ ನನ್ನೆಯ್ಯನ ಮುದುಗ, ಕನ್ನಯ್ಯನ ಸಹೋದರ ನಾಳಗೌಂಡನು ಬ್ರಾಹ್ಮಣರ ಆಶೀರ್ವಾದ ಪಡೆದು ಕೆರೆ ನಿರ್ಮಿಸಿದುದರ ದಾಖಲೆ ಸಿಗುತ್ತದೆ.[39] ಇದೇ ತಾಲೂಕಿನ ಜಂಬೆಹಳ್ಳಿಯ ಕ್ರಿ.ಶ.971ರ ಶಾಸನವು ಶಾಂತಿವರನರಸನ ಆಳ್ವಿಕೆಯಲ್ಲಿ ಕನ್ನಯ್ಯನು ಎರಡು ದೇವಾಲಯಗಳನ್ನು ಹಾಗೂ ಕೆರೆಗಳನ್ನು ನಿರ್ಮಿಸಿ ಅದನ್ನು ನೋಡಲು ಅರಸನು ಬಂದ ಸಂದರ್ಭದಲ್ಲಿ ದೇವಾಲಯದ ಪುರೋಹಿತರಿಗೆ ಒಂದು ಮತ್ತರು ಬತ್ತ ಬೆಳೆಯುವ ಭೂಮಿಯನ್ನು ದಾನ ಮಾಡಿದುದನ್ನು ದಾಖಲಿಸುತ್ತದೆ.[40]

ಶಿವಮೊಗ್ಗ ತಾಲೋಕಿನ 10ನೇ ಶತಮಾನದ ಶಾಸನವೊಂದು ಬ್ರಾಹ್ಮಣರು ಜನ್ನಾಗಪುರದಲ್ಲಿ ಕೆರೆಯನ್ನು ನಿರ್ಮಿಸಿ ಅದರ ಕೆಳಗಿನ ಭೂಮಿಯನ್ನು ಶೋತ್ರಿಯರಿಗಾಗಿ ನೀಡಿರುವುದನ್ನು ದಾಖಲಿಸಿದೆ.[41] ಶಿವಮೊಗ್ಗ ತಾಲೂಕಿನ ಆಲಹಳ್ಳಿಯ ಕ್ರಿ.ಶ 915ರ ಶಾಸನ ಬದರಿ ಮರದ ಹಿಂದಿನ ಗಜ ಕೆರೆಯನ್ನು ರಾಣಿ ಚಿಕ್ಕಬ್ಬೆಗೆ ದಾನ ನೀಡುದುದನ್ನು ದಾಖಲಿಸುತ್ತದೆ.[42]

ಕೋಲಾರ ಜಿಲ್ಲೆಯ ಕೆರೆಗಳ ಬಗೆಗೆ ಶಾಸನಗಳಲ್ಲಿ ಕಂಡುಬರುವ ಉಲ್ಲೇಖಗಳು 10ನೇ ಶತಮಾನದಿಂದೀಚೆಗೆ ಅವಣಿಯ ಕ್ರಿ.ಶ 931ರ ಶಾಸನ 40 ವರ್ಷಗಳ ಅವಣಿ ಸ್ಥಾನ ಆಳ್ವಿಕೆಯಲ್ಲಿ 50 ದೇವಾಲಯ ಮತ್ತು 2 ಕೆರೆಗಳ ನಿರ್ಮಾಣವೆಂದು ದಾಖಲಿಸುತ್ತದೆ.[43] ಜಿಲ್ಲೆಯಲ್ಲಿ ಇದಾದ ನಂತರ ಕಂಡುಬರುವ ಕೆರೆಗಳ ನಿರ್ಮಾಣದ ಉಲ್ಲೇಖ ಚೋಳರ ಕಾಲದ್ದಾಗಿದೆ.

ಕ್ರಿ.ಶ 870ರ ಸತ್ಯವಾಕ್ಯ ಪೆರ್ಮನಡಿಯ ಸಾಮಂತನಾದ ನಾಗತ್ತರನ ಆಳು ಇರ್ವ್ವಲಿಯೂರಿನ ಒಡೆಯ ಸಿರಿಯಮಯ್ಯ ಎಂಬುವವನು ಬೆಂಗಳೂರು ದಕ್ಷಿಣ ತಾಲೂಕು ಅಗರದ ಬಳಿ ಮೂಡಣ ಕೆರೆಯೊಂದನ್ನು ಕಟ್ಟಿಸಿದ ವಿವರಣೆ ಹಾಗೂ ಅದಕ್ಕೆ ಎರಡು ತೂಬುಗಳನ್ನು ಇರಿಸಿದ ವಿವರಣೆಯನ್ನು ದಾಖಲಿಸುತ್ತದೆ.[44]

## ಚೋಳರು

ರಾಷ್ಟ್ರಕೂಟರ ನಂತರ ದಕ್ಷಿಣ ಕರ್ನಾಟಕದ ಬಹುತೇಕ ಪ್ರದೇಶ ಚೋಳರ ವಶವಾಯಿತು. ಚೋಳರು ಗಂಗವಾಡಿಯ ಪ್ರದೇಶವನ್ನು ತಮ್ಮ ಆಡಳಿತ ಕ್ಷೇತ್ರವನ್ನಾಗಿ ಪರಿವರ್ತಿಸಿಕೊಂಡು ಈ ಪ್ರದೇಶದಲ್ಲಿ ತನ್ನದೆಯಾದ ಸಾಂಸ್ಕೃತಿಕ, ಆರ್ಥಿಕ ವ್ಯವಸ್ಥೆಗಳನ್ನು ರಾಜಕೀಯ ಪರಂಪರೆಯೊಂದಿಗೆ ಮುಂದುವರಿಸಿಕೊಂಡು ಹೋದರು. ತಮಿಳು ಸಾಹಿತ್ಯ ಕೃತಿಗಳಲ್ಲಿ ಅಂದರೆ ಸಂಗಂ ಸಾಹಿತ್ಯ ಕೃತಿಗಳಲ್ಲದೆ ಆನಂತರದ ಕೃತಿಗಳಲ್ಲಿಯೂ ಸಾಕಷ್ಟು ಮಾಹಿತಿ ವ್ಯವಸಾಯ ಮತ್ತು ನೀರಾವರಿಗೆ ಸಂಬಂಧಿಸಿದಂತೆ ದಾಖಲಾಗಿವೆ ನಾಡಿನ ಮತ್ತು

ತನ್ನ ಸಾಮ್ರಾಜ್ಯದಾದ್ಯಂತ ಹಲವಾರು ನೀರಾವರಿ ನಿರ್ಮಾಣಕ್ಕೆ ಹೆಸರಾದವರು ಗಂಗವಾಡಿಯಲ್ಲೂ ವೈ.ಎಸ್.ಕೃಷ್ಣನ್‌ರವರು ತಮಿಳುನಾಡು ಅಥವಾ ತಮಿಳು ಸಾಮ್ರಾಜ್ಯಗಳ ಎಲ್ಲೆಯಲ್ಲಿ ಕ್ರಿ.ಪೂರ್ವದ ಕಾಲದಿಂದ ಕ್ರಿ.ಶ10ನೇ ಶತಮಾನದವರೆಗೆ ನೀರಾವರಿ ಚಟುವಟಿಕೆಗಳ ಮಹತ್ವವಾದ ಎಲ್ಲಾ ನಿರ್ಮಾಣ ಕಾರ್ಯವನ್ನು ತಮ್ಮ ಲೇಖನ ಒಂದರಲ್ಲಿ ಪ್ರಕಟಿಸಿದ್ದಾರೆ. ಇವು ಪಲ್ಲವರ, ಚೋಳರ ನಿರ್ಮಿತಿಗಳನ್ನು ಒಳಗೊಂಡಿದೆ.[45] ದಕ್ಷಿಣ ಕರ್ನಾಟಕದಲ್ಲಿ ಪಲ್ಲವರು ಮತ್ತು ಚೋಳರ ಆದಿಪತ್ಯಕ್ಕೆ ಒಳಗಾಗಿರಲಿಲ್ಲ ಎಂಬುದು ಕೃಷ್ಣನ್ ಲೇಖನದ ಅಧ್ಯಯನದಿಂದ ಖಚಿತವಾಗುತ್ತದೆ. ಅದರಲ್ಲಿ ತಿಳಿಸಿರುವಂತೆ ರಾಜೇಂದ್ರ ಚೋಳನು ಕ್ರಿ.ಶ 1012 ರಲ್ಲಿ ಬೃಹತ್ ಕೆರೆಯನ್ನು ನಿರ್ಮಾಣಮಾಡಿ ಕಾವೇರಿ ಪಾತ್ರದ ಕಣಿವೆಗಳ ಮೇಲೆ ತಾನು ಸಾಧಿಸಿದ ಹಿರಿಮೆಯನ್ನು ಸಾರಲು ಗಂಗೈಕೊಂಡನೆಂಬ ಬಿರುದನ್ನು ಹೊಂದಿದನಲ್ಲದೆ ತನ್ನ ರಾಜಧಾನಿಯನ್ನು ಗಂಗೈಕೊಂಡ ಚೋಳಪುರಂ ಎಂದು ನಾಮಕರಣ ಮಾಡಿ ಅಲ್ಲಿ ಜಲಮಯ ವಿಜಯಸ್ತಂಭವನ್ನು ಸ್ಥಾಪಿಸಿದನು.[46] ದಕ್ಷಿಣದ ಬಹುತೇಕ ಕೆರೆಗಳನ್ನು ಚೋಳಕೆರೆ ಎಂದು ಪ್ರಸ್ತಾಪಿಸುವ ಸಂಪ್ರದಾಯವನ್ನು ಕಾಣಬಹುದು. ಮೈಸೂರಿನ ದೊಡ್ಡ ಕೆರೆಯನ್ನು ಮೈಸೂರು ರಾಜಮನೆತನದ ಪ್ರಮುಖ ದಾಖಲೆ ವಂಶಾವಳಿಗಳು ಚೋಳ ಕೆರೆ ಎಂದು ಗುರುತಿಸುತ್ತದೆ. ಅಂದರೆ ಚೋಳರ ಕಾಲದಲ್ಲಿ ಚಾಮುಂಡಿ ಬೆಟ್ಟದ ತಪ್ಪಲಿನಲ್ಲಿ ನಿರ್ಮಾಣವಾಗಿದ್ದ ಕೆರೆಯನ್ನು ಬಹುಶಃ ಹೊಯ್ಸಳರ ಕಾಲದಲ್ಲಿ ಮತ್ತಷ್ಟು ಅಭಿವೃದ್ಧಿಪಡಿಸಿದ್ದರಬೇಕು. ಕಾರಣ ಚಾಮುಂಡಿ ಬೆಟ್ಟದ ಮಹಾಬಲ ದೇವರಿಗೆ ಹೊಯ್ಸಳರು ಈ ಪ್ರದೇಶದ ಹುಟ್ಟುವಳಿಯನ್ನು ದಾನ ಮಾಡಿರುವುದನ್ನು ಗಮನಿಸಿದಾಗ ಈ ಪ್ರದೇಶದಲ್ಲಿ ಹೊಯ್ಸಳ ಚಟುವಟಿಕೆ ಇದ್ದುದು ಖಚಿತವಾಗುತ್ತದೆ.

ಮೈಸೂರಿನ ಸಮೀಪದಲ್ಲಿರುವ ಕಳಸ್ತವಾಡಿಯ ಸಮೀಪದಲ್ಲಿದ್ದ ಕೆರೆಯೊಂದನ್ನು ಚೋಳ ದಂಡನಾಯಕನೊಬ್ಬನು ಅಭಿವೃದ್ಧಿ ಪಡಿಸಿ ಅದನ್ನು ನೀರಾವರಿ ಯೋಗ್ಯವನ್ನಾಗಿಸಿದ್ದನ್ನು ಶಾಸನವೊಂದು ಖಚಿತಪಡಿಸುತ್ತದೆ.[47] ಇದೇ ರೀತಿ ಚೋಳರ ಕಾಲದಲ್ಲಿ ಮೈಸೂರು ಚಾಮರಾಜನಗರ ಮಂಡ್ಯ ಮುಂತಾದ ಪ್ರದೇಶಗಳಲ್ಲಿ ನಂತರ ಜನವಸತಿಯ ಹಲವು ಪ್ರದೇಶಗಳ ಅಸ್ತಿತ್ವಕ್ಕೆ ಬಂದವು. ಹೀಗೆ ಅಸ್ತಿತ್ವಕ್ಕೆ ಬಂದ ಎಲ್ಲಾ ಪ್ರದೇಶಗಳು ತಮ್ಮ ನೀರಿನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಕರೆಗಳನ್ನು

ನಿರ್ಮಿಸಿಕೊಂಡವು. ಹೀಗಾಗಿ ಕೇವಲ ಕಾವೇರಿ ನದಿಯ ನೀರಿನ ಆಸರೆಯಿಂದ ವ್ಯವಸಾಯವನ್ನು ಅಭಿವೃದ್ಧಿ ಪಡಿಸುವುದರ ಜೊತೆಗೆ ಈ ಪ್ರದೇಶದ ಕೆರೆಗಳನ್ನು ನಿರ್ಮಿಸಿ ಅವುಗಳ ಆಸರೆಯಲ್ಲಿ ಹಲವಾರು ಗ್ರಾಮಗಳನ್ನು ವ್ಯವಸಾಯಕ್ಕಾಗಿ ಅಭಿವೃದ್ಧಿ ಪಡಿಸಿರುವುದು ಕಂಡುಬರುತ್ತದೆ.[48] ಈ ಕಾಲದ ಶಾಸನಗಳು ಕೆರೆಗಳ ನಿರ್ಮಾಣವಾದ ಬಗ್ಗೆ ಹೆಚ್ಚು ಮಾಹಿತಿಯನ್ನು ನೀಡುವುದಿಲ್ಲ.

ಚೋಳ ದೊರೆ ಪರಾಂತಕನ ಕಾಲದ ಎರಡು ಶಾಸನಗಳು ಚೋಳರ ಗ್ರಾಮಾಡಳಿತದಲ್ಲಿ ಕೆರೆ ಕಟ್ಟೆಗಳ ನಿರ್ವಹಣೆಯ ಬಗ್ಗೆ ಕೈಗೊಳ್ಳುತ್ತಿದ್ದ ಸಂಪೂರ್ಣವಾದ ವಿವರಗಳನ್ನು ಒದಗಿಸುತ್ತವೆ.[49] ಸಭಾ ಮತ್ತು ಸಮಿತಿಗಳು ಆಯಾ ಗ್ರಾಮದ ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆಯ ಜವಾಬ್ದಾರಿಯನ್ನು ಹೊಂದಿದ್ದವು ಎಂದು ಈ ಶಾಸನಗಳಿಂದ ಖಚಿತವಾಗುತ್ತದೆ.

ಮಧ್ಯಯುಗದ ಶಾಸನಗಳನ್ನು ಅಧ್ಯಯನ ಮಾಡಿದಾಗಲೂ ರಾಜರು, ಮಾಂಡಲಿಕರು, ರಾಣಿಯರು, ಅಧಿಕಾರಿವರ್ಗ ಇತರರು ಪುಣ್ಯ ಪ್ರಾಪ್ತಿ ಮತ್ತು ಇತರ ಉದ್ದೇಶಗಳಿಗಾಗಿ ಕೆರೆಗಳನ್ನು ನಿರ್ಮಿಸಿ ಅವುಗಳ ನೀರಾವರಿ ಪ್ರದೇಶಗಳನ್ನು ದಾನಮಾಡುವ ಸಂದರ್ಭದಲ್ಲಿ ಕೆರೆಗಳ ನಿರ್ವಹಣೆಗಾಗಿಯೆ ದತ್ತಿಗಳನ್ನು ಮೀಸಲಿಡುತ್ತಿದ್ದುದು ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಕೆರೆಗಳ ನಿರ್ಮಾಣ ಯಾರಿಂದ ನಡೆದರು ಆ ಕೆರೆಗಳನ್ನು ನಿರ್ವಹಿಸುವ ಸುಸ್ಥಿತಿಯಲ್ಲಿಡುವ ಮತ್ತು ಮುಂದಿನ ತಲೆಮಾರಿನ ವರೆಗೆ ಅವುಗಳನ್ನು ಕಾಪಾಡುವ ಜವಾಬ್ದಾರಿ ಸ್ಥಳೀಯರದ್ದಾಗಿರುತ್ತಿತ್ತು.[50] ಈ ಅಂಶವನ್ನು ಚೋಳ ಶಾಸನಗಳು ಖಚಿತ ಪಡಿಸುತ್ತವೆ.

ಗ್ರಾಮ ಸಭೆಯ ಉಪಸಮಿತಿಯೊಂದಾದ ಏರಿವಾರಿಯಂ ಗ್ರಾಮಸಭೆಗೆ ಆಯ್ಕೆಯಾದ ಆರು ಮಂದಿ ಸದಸ್ಯರನ್ನು ಒಳಗೊಂಡಿದ್ದು ಅವರು ಒಂದು ವರ್ಷದ ಅವಧಿಯಲ್ಲಿ ಕೆರೆಯನ್ನು ನಿರ್ವಹಿಸಬೇಕಾದ ಜವಾಬ್ದಾರಿಯನ್ನು ಹೊಂದಿರುತ್ತಿದ್ದರು. ಈ ಸಮಿತಿಯು ಕೆರೆಯ ನಿರ್ವಹಣೆಗೆ ನೀಡಿದ ದಾನಗಳನ್ನು ಯತೋಚಿತವಾಗಿ ಬಳಕೆ ಮಾಡುವುದಲ್ಲದೆ. ಅದನ್ನು ಸಮರ್ಪಕವಾಗಿ ಕಾಪಾಡುವ ಇತರ ಜವಾಬ್ದಾರಿಗಳನ್ನು ಹೊಂದಿತ್ತು, ಕೆರೆಯನ್ನು

ಸುಸ್ಥಿತಿಯಲ್ಲಿಡುವ, ಕೆರೆಯ ಹೂಳನ್ನು ತೆಗೆಯುವ ಕೆರೆಯ ನೀರಿನ ಸಂಗ್ರಹಣವನ್ನು ಕಾಪಾಡುವ, ಕೆರೆಯ ಏರಿಯನ್ನು ಸಂರಕ್ಷಿಸುವ ದೃಢಪಡಿಸುವ ಕೆರೆಯ ನೀರನ್ನು ತನ್ನ ಎಲ್ಲ ಬಳಕೆದಾರರಿಗೆ ಸಮರ್ಪಕವಾಗಿ ನಿರ್ವಹಿಸುವ ಕರ್ತವ್ಯಗಳನ್ನು ಹೊಂದಿತ್ತು.[51] ಈ ವಿವರಗಳನ್ನು ಗಮನಿಸಿದರೆ ಚೋಳರು ತಮ್ಮ ಪ್ರಭುತ್ವವಿದ್ದೆಡೆಯಲ್ಲಿ ಇದೇ ಮಾದರಿಯನ್ನು ಅನುಸರಿಸಿದ್ದರೆಂದು ಹೇಳಬಹುದು. ಗಂಗವಾಡಿಯ ರಾಜಧಾನಿ ತಲಕಾಡು ಚೋಳರ ಅಧಿಪತ್ಯದಲ್ಲಿದ್ದಿತು. ಇಲ್ಲಿನ ಒಂದು ಚೋಳ ಶಾಸನ ಗ್ರಾಮ ಸಭೆಯನ್ನು ಉಲ್ಲೇಖಿಸುತ್ತದೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಗಂಗವಾಡಿ ಪ್ರದೇಶದಲ್ಲಿ ಅದರಲ್ಲೂ ರಾಜಧಾನಿಗಳು ಮತ್ತು ಚರ್ತುವೇದಿ ಮಂಗಲಗಳಲ್ಲಿ ಚೋಳ ಮಾದರಿಯ ಸಭಾ ಸಮಿತಿಗಳ ಕರ್ತವ್ಯ ನಿರ್ವಹಿಸುತ್ತಿದ್ದವೆಂಬುದು ಯಾವುದೇ ಅನುಮಾನವಿಲ್ಲದೆ ಹೇಳಬಹುದು.[52] ಈ ಹಿನ್ನೆಲೆಯಲ್ಲಿ ಗಮನಿಸಿದಾಗ ತೊಂಡನೂರಿನ ಕೆರೆಯ ನಿರ್ಮಾಣದ ಹಿನ್ನೆಲೆಯನ್ನು ಗಮದಲ್ಲಿಟ್ಟುಕೊಂಡು ನೋಡುವುದಾದರೆ ಈ ಕಾಲದಲ್ಲಿ ನಿರ್ಮಾಣವಾದ ಎಲ್ಲಾ ಚತುರ್ವೇದಿ ಮಂಗಲಗಳು ಪರಾಂತಕನ ಉತ್ತರ ಮೇರೂರು ಶಾಸನದಲ್ಲಿ ಉಲ್ಲೇಖಿತವಾಗಿರುವ ಈ ಮೇಲೆ ದಾಖಲಿಸಿರುವ ಸ್ಥಾನಿಕ ಆಡಳಿತ ವ್ಯವಸ್ಥೆಯನ್ನು ಹೊಂದಿತ್ತೆಂದು ಅವುಗಳು ಕೆರೆಗಳ ನಿರ್ಮಾಣಮಾಡಿ ನಿರ್ವಹಣೆ ಮಾಡುತ್ತಿದ್ದವೆಂದು ಖಚಿತವಾಗಿ ಹೇಳಬಹುದು.

ಮೈಸೂರಿನ ದೊಡ್ಡಕೆರೆ: ಮೈಸೂರು ನಗರದಲ್ಲಿ ಇಂದು ವಸ್ತು ಪ್ರದರ್ಶನದ ಆವರಣವಾಗಿ ಪರಿವರ್ತಿವಾಗಿರುವ ಪ್ರದೇಶವನ್ನು ಸ್ಥಳಿಯರು ದೊಡ್ಡ ಕೆರೆ ಎಂದು ಕರೆದರೆ, ಮೈಸೂರು ಅರಸರ ಇತಿಹಾಸ ರಚನೆಗೆ ಸಹಾಯಕವಾಗಿರುವ ಮನೆತನದ ಚರಿತ್ರೆಯಲ್ಲಿ ಇದನ್ನು ಚೋಳ ಕೆರೆ ಎಂದು ದಾಖಲಿಸಲಾಗಿದೆ. (ನೋಡಿ ಚಿತ್ರ 9–11) ಆನಂತರ ಇದನ್ನು ವಿಜಯನಗರದ ಅರಸರ ಕಾಲದಲ್ಲಿ ಮತ್ತು ಮೈಸೂರು ಅರಸರ ಕಾಲದಲ್ಲಿ ಹಲವುರ ಬಾರಿ ಪುನಃ ನಿರ್ಮಾಣ ಮಾಡಲಾಯಿತು. 1930ರ ಆಸುಪಾಸಿನಲ್ಲಿ ಮೈಸೂರಿಗೆ ಕಾವೇರಿ ನೀರನ್ನು ಕೊಳಾಯಿಗಳ ಮೂಲಕ ಹರಿಸಿದ ನಂತರ ಕೆರೆಯನ್ನು ಬರಿದು ಮಾಡಲಾಯಿತ್ತೆಂದು ದಾಖಲಾಗಿದೆ. ತೊಂಡನೂರಿನ ಮಾತಿತಲಾಬ್, ನಾಗಮಂಗಲದ ಹಿರಿಯ ಕೆರೆ, ನಾಗಮಂಗಲ ತಾಲೂಕಿನ ಬೆಳ್ಳೂರು ಕೆರೆ, ಪ್ರಾಚೀನ ಅಗ್ರಹಾರಗಳ ಅದರಲ್ಲೂ ಚತುರ್ವೇದಿ ಮಂಗಲಗಳ ನೀರಾವರಿ ಕೆರೆಗಳು ಚೋಳರ ಕಾಲದಲ್ಲಿ ರಚನೆಯಾಗಿ ಆನಂತರ ಇತರ ಮನೆತನಗಳ ಕಾಲದಲ್ಲಿಯೂ

ಅಭಿವೃದ್ಧಿಗೊಂಡವೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಈ ಹಂತದಲ್ಲಿ ತೊಂಡನೂರು ಕೆರೆಯ ನಿರ್ಮಾಣದ ಬಗೆಗೆ ಸಂದೇಹ ಉಂಟಾಗುತ್ತಿದ್ದು, ತೊಂಡನೂರಿನ ಸ್ಥಾನಿಕ ಐತಿಹ್ಯ ರಾಮಾನುಜರು ಕೆರೆಯ ನಿರ್ಮಾತೃವೆಂದು ಒಂದೆಡೆ ತಿಳಿಸಿದರೆ ಮತ್ತೊಂದೆಡೆ ರಾಮಾನುಜರ ಆಗಮನದ ಪೂರ್ವದಲ್ಲಿ ತೊಂಡನೂರಿನಲ್ಲಿ ಸಹಸ್ರ ಸಂಖ್ಯೆಯಲ್ಲಿ ಜೈನರು ಮತ್ತು ಶೈವರು ವಾಸಿಸುತ್ತಿದ್ದರೆಂದು ಅವರೆಲ್ಲರೂ ನಂತರ ವೈಷ್ಣವರಾದರೆಂದು ತಿಳಿದುಬರುತ್ತದೆ. ಈ ವ್ಯತ್ಯಯಗಳು ತೊಂಡನೂರಿನಲ್ಲಿ ರಾಮಾನುಜರ ಆಗಮನದ ಪೂರ್ವದಲ್ಲಿಯೇ ಜನವಸತಿ ಕೆರೆ ಮತ್ತು ಖಚಿತ ಪಡಿಸುತ್ತದೆ.[53] ಹಾಗಾಗಿ ಚೋಳರ ಕಾಲದಲ್ಲಿಯೇ ಅಂದರೆ ಗಂಗವಾಡಿ ಚೋಳರ ಆಕ್ರಮಣದ ನಂತರ ಇಲ್ಲಿನ ನೀರಾವರಿ ವ್ಯವಸ್ಥೆ ಹೆಚ್ಚು ಅಭಿವೃದ್ಧಿಗೊಂಡಿತ್ತೆಂದು ಹೇಳಬಹುದು. (ನೋಡಿ ಚಿತ್ರ 6-8) ಈ ಪ್ರದೇಶದಲ್ಲಿ ದೊರೆತಿರುವ ಹೆಚ್ಚಿನ ಶಾಸನಗಳ ಚೋಳರ ಕಾಲದಲ್ಲಿ ನಡೆದ ಕೆರೆಯ ನಿರ್ಮಾಣದ ಬಗ್ಗೆ ಬೆಳಕು ಚೆಲ್ಲದ ಕಾರಣ ಈ ಕಾಲಘಟ್ಟದ ಬಗ್ಗೆ ಹೆಚ್ಚಿನ ವಿವರಗಳನ್ನು ದಾಖಲಿಸುವುದು ಸಾಧ್ಯವಿಲ್ಲ. ಹಾಗಾಗಿ ಈ ಕಾಲದ ಬೆಳವಣಿಗೆ ಒಂದು ರೀತಿಯಲ್ಲಿ ಕತ್ತಲೆಯ ಯುಗವೆಂದೇ ಕಂಡುಬರುತ್ತದೆ.

## ಚಾಲುಕ್ಯ ಹೊಯ್ಸಳ ಯುಗ

ಕರ್ನಾಟಕದ ಇತಿಹಾಸವನ್ನು ಅವಲೋಕಿಸಿದಾಗ ಕಲ್ಯಾಣದ ಚಾಲುಕ್ಯರ ಕಾಲ ಆರ್ಥಿಕ ಹಾಗೂ ವ್ಯವಸಾಯ ಅಭಿವೃದ್ಧಿಯ ಅತ್ಯಂತ ಮಹತ್ವದ ಕಾಲವಾಗಿ ಕಂಡುಬರುತ್ತದೆ. ಈ ಕಾಲಘಟ್ಟದಲ್ಲಿಯೇ ಅಂದರೆ ಕಲ್ಯಾಣ ಚಾಲುಕ್ಯರು ಪುರೋಭಿವೃದ್ಧಿಗೆ ಬಂದ ಕೆಲ ದಿನಗಳ ನಂತರ ದಕ್ಷಿಣದಲ್ಲಿ ಹೊಯ್ಸಳರು ಪ್ರಬಲರಾದರು, ಸಳನಿಂದ ಪ್ರಾರಂಭವಾದ ಹೊಯ್ಸಳ ಮನೆತನ ಗಂಗವಾಡಿಯ ಬಹುತೇಕ ಪ್ರದೇಶಗಳನ್ನು ಚೋಳರ ವಿರುದ್ಧದ ವಿಜಯದ ನಂತರ ತನ್ನದಾಗಿಸಿಕೊಂಡಿತ್ತು. ಚೋಳರಿಗೂ ಹೊಯ್ಸಳರಿಗೂ ಗಂಗವಾಡಿಯ ಕುರಿತಾದ ಯುದ್ಧಗಳು ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿಯೇ ಪ್ರಾರಂಭವಾಗಲಿಲ್ಲ. ಗಂಗರು ಚೋಳರಿಗೆ ಅಧೀನವಾದ ಕೆಲವೇ ವರ್ಷಗಳ ತರುವಾಯ ಅಂದರೆ ಕ್ರಿ.ಶ 1006ರಲ್ಲಿ ಹೊಯ್ಸಳ ವಂಶಸ್ಥರು ಚೋಳ ಮಾಂಡಲಿಕ ಅಪ್ರಮೇಯನ ವಿರುದ್ಧ ಈ ಪ್ರದೇಶದ

ಪ್ರಭುತ್ವಕ್ಕಾಗಿ ಹೋರಾಡಿದುದನ್ನು ಕಲಿಯೂರಿನನ ಶಾಸನ ಖಚಿತ ಪಡಿಸುತ್ತದೆ. ಅಂದರೆ ಗಂಗರ ಸಹಾಯಕರಾಗಿದ್ದ ಅಥವಾ ಗಂಗರ ಸಮಕಾಲೀನರಾಗಿದ್ದ ಕರ್ನಾಟಕದ ಇತರ ಸಣ್ಣ ಮನೆತನಗಳು ಚೋಳರನ್ನು ಸಮಕಾಲೀನರಾಗಿದ್ದ ಕರ್ನಾಟಕದ ಇತರ ಸಣ್ಣ ಮನೆತನಗಳು ಚೋಳರನ್ನು ಗಂಗವಾಡಿಯಿಂದ ಹೊರಕೂಡಿಸಲು ಪ್ರಯತ್ನಿಸಿದರಾದರೂ ವಿಫಲರಾದರು. ಹೊಯ್ಸಳ ವಿನಾಯಾದಿತ್ಯ ಮತ್ತು ಎರೆಯಂಗರು, ಒಂದನೇ ಬಲ್ಲಾಳನ ಕಾಲದಲ್ಲಿ ಕಲ್ಯಾಣದ ಚಾಲುಕ್ಯರ ನಿಷ್ಠವಂತ ಮಾಂಡಲಿಕರಾಗಿ 6ನೇ ವಿಕ್ರಮಾದಿತ್ಯನ ಎಲ್ಲಾ ದಕ್ಷಿಣದ ದಂಡೆಯಾತ್ರೆಗಳಲ್ಲಿ ಸಹಕರಿಸಿದ್ದರು. ವಿಷ್ಣುವರ್ಧನನು ಇದಕ್ಕೆ ಹೊರತಾಗಲಿಲ್ಲ ತನ್ನ ಸ್ವಾತಂತ್ರ್ಯಕ್ಕಾಗಿ ಪ್ರಯತ್ನಿಸಿದರಾದರೂ 6ನೇ ವಿಕ್ರಮಾದಿತ್ಯನಿಂದ ಸೋತು ಆತನ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳಬೇಕಾಯಿತು. ಹೀಗಾಗಿ 6ನೇ ವಿಕ್ರಮಾದಿತ್ಯನ ಮರಣದವರೆಗೆ ಹೊಯ್ಸಳರು ಕಲ್ಯಾಣದ ಚಾಲುಕ್ಯರ ಸಾಮಂತರಾಗಿಯೇ ಮುಂದುವರಿದರು. ಹೀಗಾಗಿ ಹೊಯ್ಸಳರ ಪ್ರಾರಂಭದ ಕಾಲಘಟ್ಟವನ್ನು ಕಲ್ಯಾಣದ ಚಾಲುಕ್ಯರ ಕಾಲಘಟ್ಟದ ಇತಿಹಾಸದೊಂದಿಗೆ ಅಧ್ಯಯನ ಮಾಡಬೇಕಾಗುತ್ತದೆ. 2ನೇ ಬಲ್ಲಾಳನ ಕಾಲದಲ್ಲಿ ಹೊಯ್ಸಳರು ಸ್ವಾತಂತ್ರ್ಯರಾದರೇ ಹೊರತು ಅದರ ಪೂರ್ವದಲ್ಲಿ ಅಲ್ಲ ಆದರೂ ದಕ್ಷಿಣ ಕರ್ನಾಟಕ ಈ ಪ್ರದೇಶಗಳು ಬಹುತೇಕ ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿದ್ದವೆಂದು ಹೇಳಬಹುದು.

ಕಲ್ಯಾಣದ ಚಾಲುಕ್ಯರ ಕಾಲ ದಖ್ಖನಿನ ಇತಿಹಾಸದಲ್ಲಿ ಸಾಂಸ್ಕೃತಿಕ ಸುವರ್ಣಯುಗ, ಕಲೆ, ಸಂಸ್ಕೃತಿ, ಇತಿಹಾಸ, ಶಿಕ್ಷಣ ಮುಂತಾದ ಕ್ಷೇತ್ರಗಳಿಗೆ ಅಪಾರವಾದ ರಾಜಾಶ್ರಯ ಕಂಡುಬಂದಿತು. 10ನೇ ಶತಮಾನದ ಕೊನೆಯ 25 ವರ್ಷಗಳನ್ನೊಳಗೊಂಡಂತೆ 14 ನೇ ಶತಮಾನದ ಮೊದಲ ನಾಲ್ಕು ದಶಕಗಳವರೆಗೆ ಈ ಪರಂಪರೆ ಮುಂದುವರೆಯಿತು. ಜನರ ವಸತಿಗಳನ್ನು ಹೊಸದಾಗಿ ನಿರ್ಮಿಸುವ ಅಂದರೆ ಅಗ್ರಹಾರಗಳ ರಚನೆ ಅನ್ನಛತ್ರಗಳು, ಪ್ರಾಯಾಣಿಕರ ವಿಶ್ರಾಂತಿ ಗೃಹಗಳು ಹಾಗೂ ದೇವಾಲಯಗಳ ನಿರ್ಮಾಣ ಅಧಿಕವಾಗಿ ಕಂಡುಬಂದಿತು. ಅಗ್ರಹಾರಗಳು ದೇವಾಲಯಗಳ ನಿರ್ಮಾಣ, ಅನ್ನಛತ್ರಗಳು ಮತ್ತು ವಿಶ್ರಾಂತಿ ಗೃಹಗಳ ನಿರ್ಮಾಣ ಕೆರೆಕಟ್ಟೆಗಳ ನಿರ್ಮಾಣದೊಂದಿಗೆ ಸಂಬಂಧವನ್ನು ಹೊಂದಿದ್ದವು ಈ ಎಲ್ಲಾ ನಿರ್ಮಾಣಗಳ ನೀರಿನ ಆಶ್ರಯವನ್ನು ಅವಲಂಭಿಸಿವೆ.

ದೇವಾಲಯಗಳು ದೇವಾಲಯದ ದೈವ ಕೈಂಕರ್ಯಗಳಿಗೆ, ಅಗ್ರಹಾರಗಳು ಜನವಸತಿಯ ನೀರಿನ ಬಳಕೆಗೆ ಛತ್ರಗಳು ಮತ್ತು ವಿಶ್ರಾಂತಿ ಗೃಹಗಳು ತಂಗುವವರ ಮತ್ತು ಅವರೊಂದಿಗಿನ ಪ್ರಾಣಿ ಸಂಕುಲಕ್ಕೆ ನೀರಿನ ಆಸರೆಗಳನ್ನು ಅವಲಂಭಿಸಿದ್ದವು. ಹಾಗಾಗಿ ಈ ಯಾವುದೇ ನಿರ್ಮಾಣದ ಹಂತದಲ್ಲಿ ಪ್ರಾತಿನಿಧಿಕವಾಗಿ ನೀರಿನ ಆಸರೆಯನ್ನು ಒದಗಿಸುವುದು ಆದ್ಯ ಕರ್ತವ್ಯವಾಯಿತು. ಹಾಗಾಗಿ ಎಲ್ಲೆಲ್ಲಿ ದೇವಾಲಯಗಳು, ಅಗ್ರಹಾರಗಳು, ಅನ್ನಛತ್ರಗಳು, ವಿಶ್ರಾಂತಿ ಗೃಹಗಳು ರಚನೆಯಾದವೊ ಅಲ್ಲೆಲ್ಲಾ ನೀರಿನ ಆಸರೆಗಳಾದ ಕೆರೆ, ಕುಂಟೆ, ಕೊಳ, ಭಾವಿ ಅಥವಾ ನೀರಾವರಿ ನಾಲೆಗಳು ನಿರ್ಮಾಣಗೊಂಡವು ಹೀಗಾಗಿ ಈ ಎಲ್ಲಾ ನಿರ್ಮಾಣಗಳ ನೀರಿನ ಆಸರೆಗಳ ನಿರ್ಮಾಣದಿಂದ ಪ್ರಾರಂಭವಾದವು.

ಜಿ.ಎಸ್.ದೀಕ್ಷಿತ್‌ರವರು[54] ತಮ್ಮ ಅಧ್ಯಯನದ ಆಧಾರದ ಮೇಲೆ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಒಟ್ಟು ಕೆರೆಗಳಲ್ಲಿ ಶೇ.50ರಷ್ಟು ಕೆರೆಗಳು ತೈಲಪ, ಇಮ್ಮಡಿ ಜಯಸಿಂಹ ಮೊದಲನೆಯ ಸೋಮೇಶ್ವರನ ಕಾಲದಲ್ಲಿ ರಚನೆಗೊಂಡರೆ, ಉಳಿದವು ಅಂದರೆ ಶೇ 50 ರಷ್ಟು ಕಲ್ಯಾಣಿ ಚಾಲುಕ್ಯರ ಕಾಲದ ಕೆರೆಗಳ ನಿರ್ಮಾಣ 6ನೇ ವಿಕ್ರಮಾದಿತ್ಯನ ಕಾಲದಲ್ಲೇ ನಡೆಯಿತ್ತೆಂದು ತಿಳಿಸುತ್ತಾರೆ, ಈ ಯುಗದ ಕೆರೆಯ ನಿರ್ಮಾಣದಲ್ಲಿ ಬಹುದೊಡ್ಡ ಪಾಲನ್ನು ಧಾರವಾಡ, ಬಳ್ಳಾರಿ, ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳು ಪಡೆದು ಕೊಂಡವೆಂದು ದಾಖಲಿಸುತ್ತಾರೆ.

ಈ ಕಾಲಘಟ್ಟದಲ್ಲಿ ದಕ್ಷಿಣ ಕರ್ನಾಟಕವು ಸಂಪೂರ್ಣವಾಗಿ ಹೊಯ್ಸಳರ ಆಡಳಿತಕ್ಕೆ ಒಳಪಟ್ಟಿದ್ದರಿಂದ ಬಹುತೇಕ ಕೆರೆಗಳ ಅವರ ಸುಪರ್ದಿಯಲ್ಲಿ ನಡೆದವು. ಶಿವಮೊಗ್ಗ ಜಿಲ್ಲೆಯ ಶಾಂತ ಅರಸರು ಚಾಲುಕ್ಯರ ಅಧೀನರಾಗಿದ್ದು ಚಾಲುಕ್ಯ ಸಾಮ್ರಾಜ್ಯದ ಭಾಗವಾಗಿ ಆಳ್ವಿಕೆ ನಡೆಸುತ್ತಿದ್ದರು ಕ್ರಿ.ಶ 1062ರ ಮಾಹೂರಿನ ಶಾಸನ ಪಟ್ಟಣಸ್ವಾಮಿ ನೊಕ್ಕಯ್ಯ ಶಾಂತಗೆರೆಯನ್ನು ಕಟ್ಟಿಸಿದುದನ್ನು ಪ್ರಸ್ತಾಪಿಸುತ್ತದೆ.[55] ಶಾಂತಗೆರೆಯಲ್ಲದೆ, ಮೊಳಗೆರೆ, ಪಟ್ಟಣಸ್ವಾಮಿಗೆರೆ ಹಾಗೂ ತಾಳವಿಂದ ಕೆರೆಗಳನ್ನು ಆತನು ಕಟ್ಟಿಸಿದುದಾಗಿ ತಿಳಿದುಬರುತ್ತದೆ.

ಇದೇ ಕಾಲಘಟ್ಟದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಚೋಳರು ಕಲ್ಯಾಣ ಚಾಲುಕ್ಯರ ಸಮಕಾಲೀನರಾಗಿದ್ದರು. ಅವರ ಸಾಧನೆಯ ವಿವರಗಳನ್ನು ಇದೆ ಅಧ್ಯಯನದ ಒಂದು ಭಾಗವಾಗಿ ಚರ್ಚಿಸಲಾಗಿದೆ. ಚನ್ನಪಟ್ಟಣದ ಸಮೀಪ ಮಾಳೂರು ಪಟ್ಟಣದ ಶಾಸನ ಈ

ವಿವರವನ್ನು ಖಚಿತಪಡಿಸುತ್ತದೆ.[56] ಕೋಲಾರ ಜಿಲ್ಲೆಯ ಹೆಬ್ಬಣಿ ಶಾಸನ ಕೆರೆಯೊಂದರ ನಿರ್ಮಾಣವನ್ನು ಪ್ರಸ್ತಾಪಿಸುತ್ತದೆ.[57] ಸೊರಬ ತಾಲೂಕಿನ ಲಕ್ಕವಳ್ಳಿಯ ಕ್ರಿ.ಶ 1071ರ ಶಾಸನವು ಮಹಾಮಂಡಲೇಶ್ವರ ಗಾಣದೇವ ಶೆಟ್ಟಿ ಹೊಸಕೆರೆಯನ್ನು ನಿರ್ಮಿಸಿ ಕಾಡನ್ನು ಕಡಿದು ಭೂಮಿಯನ್ನು ಸಾಗುವಳಿಗೆ ಅಣಿಗೊಳಿಸಿದ್ದನು ಎಂದು ದಾಖಲಿಸಿದೆ.[58] ಶಿಕಾರಿಪುರ ತಾಲ್ಲೂಕು ಬೇಗೂರು ಅಗ್ರಹಾರದ ಕ್ರಿ.ಶ 1066 ಶಾಸನದಲ್ಲಿ ಜೋಗಯ್ಯ ಮಹಾದಂಡ ನಾಯಕನು ಸರ್ವಜ್ಞ ಘಟ್ಟ ಮತ್ತು ಇತರ ಕೆರೆಗಳನ್ನು ನಿರ್ಮಿಸಿದನೆಂದು ಉಲ್ಲೇಖಿಸುತ್ತದೆ.[59] ಕ್ರಿ.ಶ 1062ರ ಮಾಹೂರಿನ ಶಾಸನದಲ್ಲಿ ಪಟ್ಟಣಸ್ವಾಮಿ ನೊಕ್ಕಯ್ಯನು ಶಾಂತಗೆರೆಯನ್ನು ಕಟ್ಟಿಸಿದ್ದನಲ್ಲದೆ ಇತರ ಕೆರೆಗಳನ್ನು ಕಟ್ಟಿಸಿದುದನ್ನು ಈಗಾಗಲೇ ದಾಖಲಿಸಿದೆ. ಕ್ರಿ.ಶ 1096ರ ಸಾಗರ ತಾಲೂಕು ಹಾವಿನಹಳ್ಳಿಯ ಶಾಸನ ಪಡಗಲ ನಿಂಗಣ್ಣ ಶಾಂತರಿಗೆ ಸಾವಿರ ಬಡಕನಾಡನಲ್ಲಿ ಕೆರೆಯನ್ನು ಕಟ್ಟಿಸದನೆಂದು ತಿಳಿಸುತ್ತದೆ.[60] ಬಾರೂಲ್ಲಿ ಕ್ರಿ.ಶ 1077ರ ಶಾಸನದಲ್ಲಿ ಮಾಣಿಕ್ಯಪುರದ ದಂಡನಾಯಕ ಮತ್ತು ಅವರ ಮಗ ಜಂಟಿಯಾಗಿ ಗೋಸಾಯಿಯ ದಕ್ಷಿಣಕ್ಕೆ ಕೆರೆಯನ್ನು ಕಟ್ಟಿಸಿದುದನ್ನು ಶಾಸನವು ದಾಖಲಿಸುತ್ತದೆ.[61]

ಶಿವಮೊಗ್ಗ ತಾಲ್ಲೋಕಿನ ತಟ್ಟೆಕೆರೆಯ ಕ್ರಿ.ಶ 1085ರ ಶಾಸನವು ಮಹಾಮಂತ್ರಿ ನೊಕ್ಕಯ್ಯ ಎಂಬುವವನು ಕೆರೆಯನ್ನು ವಿಸ್ತಿರಿಸಿ ಅಚ್ಚುಕಟ್ಟು ಪ್ರದೇಶವನ್ನು ಅಭಿವೃದ್ಧಿಪಡಿಸಿ ತಾನು ನಿರ್ಮಿಸಿದ ಬಸದಿಗೆ ತಟ್ಟೆಕೆರೆ, ದೊಡ್ಡೆಕೆರೆಗಳ ಉತ್ಪತ್ತಿಯನ್ನು ದಾನಮಾಡಿದ ವಿವರಗಳನ್ನು ಒಳಗೊಂಡಿದೆ.[62] ಕ್ರಿ.ಶ 1112 ರ ಸೊರಬ ತಾಲ್ಲೂಕಿನ ಕುಂಟಾಗಳಲೆಯ ಶಾಸನ ಕೆರೆಯ ನಿರ್ಮಾಣದಲ್ಲಿ ಮಹಿಳೆಯರು ತೊಡಗಿಸಿಕೊಂಡದ್ದನ್ನು ಮಹಾದಂಡನಾಯಕನು ಹತನಾದಾಗ ತಂಗಿ ಬೆಟ್ಟಕಬ್ಬೆ ಮಗಳು ಉದ್ದಾರೆ ಹೆಂಡತಿ ಚೆಲ್ಲಬ್ಬೆ ಬಾಡಾಡೆ ಕೆರೆಯನ್ನು ನಿರ್ಮಿಸಿ ಸಂಸ್ಕಾರ ವಿಧಿಗಳನ್ನು ಆಚರಿಸಿದರೆಂದು ತಿಳಿಸುತ್ತದೆ.[63] ಕ್ರಿ.ಶ 1172ರ ಶಿವಮೊಗ್ಗ ತಾಲೂಕಿನ ಹಿರಿಯೂರಿನ ಶಾಸನವು ಅಕ್ಕಸಾಲಿಗ ಜಟ್ಟಜಾನನ ಕಿರಿಯ ಸಹೋದರ ಮಲ್ಲೋಜಾ ಗೋಮಿಡಿಶೆಟ್ಟಿಯ ಆದೇಶದಂತೆ ನಗರದ ಉತ್ತರದ ದಿಕ್ಕಿನಲ್ಲಿ ಕೆರೆಯನ್ನು ಮತ್ತು ದೇವಾಲಯವನ್ನು ನಿರ್ಮಿಸಿದುದನ್ನು ದಾಖಲಿಸುತ್ತದೆ.[64] ಕ್ರಿ.ಶ.1171ರ ಸೊರಬ ತಾಲೂಕಿನ ತೊರೆವೊಂದರ ಶಾಸನ ದಾಸಿರಾಜ ಸಂತ ಕಾಮನು ಕೆರೆಯನ್ನು ಕಟ್ಟಿಸಿ ತೂಬನ್ನು ಇರಿಸಿ ಕೆರೆಯನ್ನು ಜೀರ್ಣೋದ್ಧಾರ ಮಾಡಿದನೆಂದು ದಾಖಲಿಸುತ್ತದೆ.[65] ಪ್ರಾಯಶಃ

ಇಲ್ಲಿ ಕೆರೆಯ ಏರಿಯು ಒಡೆದು ಹೋಗಿದ್ದರಿಂದ ಅದನ್ನು ನಿರ್ಮಿಸಿ ಹೊಸ ತೂಬನ್ನು ನಿರ್ಮಾಣ ಮಾಡಿ ಇಡಿ ಕೆರೆಯನ್ನು ಜೀರ್ಣೋದ್ಧಾರ ಮಾಡಿದನೆಂದು ಭಾವಿಸ ಬೇಕಾಗುತ್ತದೆ.

ಸೊರಬ ತಾಲೋಕಿನ ಕ್ರಿ.ಶ 1171 ರ ಶಾಸನ ಬೀಚಪ್ಪ ಗಾವುಂಡನು ಜೈನ ಬಸದಿ ಕೆರೆ ಭಾವಿ ಅನ್ನಛತ್ರಗಳನ್ನು ನಿರ್ಮಿಸಿ ಅವುಗಳಿಗೆ ಭೂಮಿಯನ್ನು ದಾನವಾಗಿ ನೀಡುದುದನ್ನು ದಾಖಲಿಸಿದೆ.[66] ಚಿತ್ರದುರ್ಗದ ಹತ್ತಿರದಲ್ಲಿರುವ ಬರೆಗೆರೆ ಒಂದು ಪ್ರಾಚೀನ ಕೆರೆಯಾಗಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ 1286ರ ಒಂದು ಶಾಸನದಿಂದ ಈ ಕೆರೆಯು ಮೊದಲಿಗೆ ಕುರುಬರ ಕಾಳಯ್ಯನ ಕೆರೆ ಎಂದಿದ್ದು, ಹೊಯ್ಸಳ ಚಕ್ರವರ್ತಿ ಮೂರನೇ ವೀರ ನರಸಿಂಹನ ಪ್ರಧಾನನಾಗಿದ್ದ ಪೆರುಮಾಳ ದೇವ ದಂಡನಾಯಕನು ಚಿತ್ರದುರ್ಗವನ್ನು ಆಳುತ್ತಿದ್ದಾಗ ಕುರುಬರ ಕಾಳಯ್ಯನು ಕೆರೆಯನ್ನು ಕೊಂಡುಕೊಂಡು ಆ ಕೆರೆಯನ್ನು ಜೀರ್ಣೋದ್ಧಾರ ಮಾಡಿ ಅಂದರೆ ಒಡ್ಡನ್ನು ಎತ್ತರಿಸಿ ನೀರಿನ ಹರವನ್ನು ಹೆಚ್ಚಿಸಿ ಪೆರುಮಾಳೇ ಸಮುದ್ರವೆಂದು ಹೆಸರಿಸಿ ಆ ಕೆರೆಯ ಕೆಳಗಿನ ಒಂದು ಭಾಗ ಭೂಮಿಯನ್ನು ಹಿಡಂಬೇಶ್ವರ ದೇವರಿಗೆ ದಾನ ಮಾಡಿದನು. ಈ ಕೆರೆ ಆನಂತರದ ದಿನಗಳಲ್ಲಿ ಬರೆಗೆರೆ ಎಂದು ಪುನರ್ ನಾಮಕರಣಗೊಂಡಿತ್ತು.[67] ತಿಮ್ಮಣನಾಯಕನ ಕೆರೆಯನ್ನು **ಡಾ**.ಬಿ.ರಾಜಶೇಖರಪ್ಪರವರು ಪೆರುಮಾಳೆ ಸಮುದ್ರದ ಕಾಲಘಟ್ಟಕ್ಕೆ ಕೊಂಡ್ಯೊಯುತ್ತಾರೆ.[68] ಚಿತ್ರದುರ್ಗ ಸಮೀಪವಿರುವ ಗೋನೂರು ಮಲ್ಲಾಪುರದ ಕೆರೆಗಳನ್ನು ಹತ್ತನೇ ಶತಮಾನಗಳಿಂದ ದಾಖಲಿಸುತ್ತಾರೆ. ಹೊಸದುರ್ಗ ತಾಲ್ಲೂಕಿನ ನೀರಗುಂದದ ಕೆರೆಯನ್ನು ನೀರಗುಂದದ ನಲ್ಲಶೆಟ್ಟಿ ಎಂಬುವವನು ಜೀರ್ಣೋದ್ಧಾರ ಮಾಡಿದಂತೆ ಹೊಯ್ಸಳ ಚಕ್ರವರ್ತಿಯ ಶಾಸನವೊಂದು ತಿಳಿಸುತ್ತದೆ.[69] ಚಿತ್ರದುರ್ಗದ ಸಮೀಪದ ಭೀಮ ಸಮುದ್ರದ ಕೆರೆ ಮತ್ತು ಹೊನಗುಂದದ ಹಿರಿಯಕೆರೆ ಎಂದು ಪುನರ್ ನಾಮಕರಣವಾಗಿದೆ ಎಂದು ತಿಳಿದು ಬರುತ್ತದೆ. ಈ ಕೆರೆಯು 11ನೇ ಶತಮಾನದಷ್ಟು ಹಿಂದಿನ ಕರೆಯಾಗಿದೆ ಎಂಬುದಾಗಿ ತಿಳಿದುಬರುತ್ತದೆ.[70]

ಚಿತ್ರದುರ್ಗ ಜಿಲ್ಲೆಯಲ್ಲಿ ಸುಮಾರು 60ಕ್ಕೂ ಹೆಚ್ಚು ಕಂಡುಬರುತ್ತದೆ ಎಂದು ಗುರುತಿಸಿ ಅವುಗಳ ಹೆಸರುಗಳನ್ನು ಹೀಗೆ ದಾಖಲಿಸಬಹುದು. ಪೆರ್‌ಗೆರೆ, ಏಗ್ಗೆರೆ, ಪೆರಿಯಕೆರೆ, ಹಿರಿಯಕೆರೆ, ಕಿರಿಯಕೆರೆ, ಹರಕೆರೆ, ಹಿರಿಯಹರಕೆರೆ, ಜೋಡಿಕೆರೆ, ಹೊಳಗೆರೆ, ಆಲಗೆರೆ,

ಹೊಸೆಕೆರೆ, ನಿಡುಗೆರೆ, ಮಂಡಗೆರೆ, ಗಂಜಿಗೆರೆ, ಮಲ್ಲಿಗೆಗೆರೆ, ಹುಲಿಯಾಗೆರೆ, ಬಡಗೆರೆ, ಬಡಿಲಗೆರೆ, ಕಾಣಾಚಿಕೆರೆ, ಗೊಳೆಯಾದಗೆರೆ, ಹೊನನಕೆರೆ, ಗದಿಗಿನಕರೆ, ಗಮ್ಮನಕೆರೆ, ಚರ್ವನಕೆರೆ, ಅರಸನಕೆರೆ, ಮುದುಗೆರೆ, ಬೆಲಕೆರೆ, ಕೆಂಡನಕೆರೆ, ಕಾಮಸಮುದ್ರ, ಕಿರಿಯಸಮುದ್ರ, ಗೌಡುಕೆರೆ, ಭೀಮನಕೆರೆ, ಕುಂಬಾರರಕೆರೆ, ತೆಲ್ಲಿಗನಕೆರೆ, ಮೇವನಕೆರೆ, ಭೂವಸಮುದ್ರ, ಶೆಟ್ಟಿಯಕೆರೆ, ದೇವರಕೆರೆ, ಭಾವನಕೆರೆ, ಭಾವನಗೆರೆ, ಕಾಳಮ್ಮನಗೆರೆ, ಮಾರೇಗೌಡನಕಟ್ಟೆ, ಕಲ್ಲೇಗೌಡನಕೆರೆ, ಎಡಗೂರುಕೆರೆ, ಆರತಿಕೆರೆ, ಸಿರಿಹೊಳಲಗೆರೆ, ಮುತ್ತಕುರಕೆರೆ, ಬೊಬ್ಬೂರಿನಕೆರೆ, ಲಕ್ಕಿಯಹಳ್ಳಕೆರೆ, ಪೀರೆನಹಳ್ಳಕೆರೆ, ಮೊಸಕಲ್‌ಕೆರೆ, ಹಾಲೂರುಕೆರೆ, ಭೈರೇಸಮುದ್ರ, ಬಸವಾಪಟ್ಟಣ ಸಮುದ್ರ, ಅರಳ ಹಳ್ಳಿಯಕೆರೆ, ಇಟ್ಟಿಗೆಹಳ್ಳಕೆರೆ, ಗೌಡನಹಳ್ಳಕೆರೆ, ಕಗ್ಗಲುಕಟ್ಟೆಕೆರೆ, ಹನುಮನಾಯಕನಕೆರೆ, ಕೆರೆಯೂರಕೆರೆ, ಮುಗುಳಿಯಕೆರೆ, ಬೇವಿನಹಳ್ಳಿಯಕೆರೆ, ಜೋಮಪುರದಕೆರೆ ಇಷ್ಟು ಕೆರೆಗಳ ಹೆಸರು ಶಾಸನಗಳಲ್ಲಿ ಕಂಡುಬರುತ್ತದೆಯಾದರೂ ಅವುಗಳನ್ನು ನಿರ್ಮಿಸಿದ ಕಾಲವಾಗಲೀ ಅಥವಾ ನಿರ್ಮಾಣ ಮಾಡಿದ ವ್ಯಕ್ತಿಯ ಹೆಸರು ಖಚಿತವಾಗಿ ತಿಳಿದುಬರುವುದಿಲ್ಲ. ಹೀಗಾಗಿ ಚಿತ್ರದುರ್ಗ ಪ್ರದೇಶದ ಬಹುತೇಕ ಕೆರೆಗಳಲ್ಲಿ ಕೆರೆಯ ನಿರ್ಮಾತೃಗಳು ಅಜ್ಞಾತವಾಗಿ ಉಳಿದಿರುವುದು ಕಂಡುಬರುತ್ತದೆ.[71]

ಚಿಕ್ಕಮಗಳೂರು ಜಿಲ್ಲೆಯ ಕ್ರಿ.ಶ 1025ರ ಶಾಸನವು ಎರೆಯಂಗನು ಎರಡು ಹೊಸಕೆರೆಯನ್ನು ನಿರ್ಮಿಸಿದುದ್ದನ್ನು ದಾಖಲಿಸುತ್ತದೆ.[72] ಕ್ರಿ.ಶ 1063ರ ಮತ್ತೊಂದು ಶಾಸನವು ತನ್ನ ಆಡಳಿತವನ್ನು ರೂಪಿಸಿಕೊಳ್ಳಲು ಹಿರಿಯ ದಂಡನಾಯಕ ಪೊಚಿಮಯ್ಯನು ಬೀರೂರು ಮುಂತಾದವುಗಳಲ್ಲಿ ಕೆರೆಗಳನ್ನು ಮತ್ತು ಕೆರೆಗಳ ತೂಬುಗಳನ್ನು ಹಾಗೂ ಗ್ರಾಮಗಳನ್ನು ನಿರ್ಮಿಸಿ ಆ ಗ್ರಾಮಗಳ ಅಧಿಕಾರವನ್ನು ಪಡೆದುಕೊಂಡ ದಾಖಲೆಗಳು ಸಿಗುತ್ತದೆ.[73] ಹೀಗೆ ಬೀರೂರು, ಎರೆಕೆರೆ, ಮಾಚೇರು, ತೆಲ್ಲಿಗೆಯಕೆರೆಗಳು ಮುಂತಾದವುಗಳ ಹಲವು ಕೆರೆಗಳನ್ನು ನಿರ್ಮಾಣಮಾಡಿದ ವಿವರಗಳು ಇವೆ. ತರಿಕೆರೆ ತಾಲೂಕಿನ ಬಂಕನಕಟ್ಟೆ ಶಾಸನವು ಚಟ್ಟೆಗೋವಿಂದ, ಬಾಂಧವಿಗೌಡ, ಬಂಕೇಶ್ವರ ದೇವಾಲಯ ಮತ್ತು ಕೆರೆಯನ್ನು ನಿರ್ಮಿಸಿ ಕೆರೆ ಕೆಳಗಿನ ಭೂಮಿಯನ್ನು ದೇವರಿಗೆ ದಾನ ಮಾಡಿದುದ್ದನ್ನು ದಾಖಲಿಸುತ್ತದೆ.[74] ಕ್ರಿ.ಶ 1104ರ ಚಿಕ್ಕಮಗಳೂರು ತಾಲ್ಲೂಕಿನ ಹಾನೂರು ಶಾಸನ ಬಾಚೇಗೌಡನು ಕೆರೆಯನ್ನು ನಿರ್ಮಿಸಿ

ಮೋಕ್ಷಪಡೆದನ್ನೆಂದು ದಾಖಲಿಸಿದೆ.[75] ತರೀಕೆರೆ ತಾಲೂಕಿನ ಬುಕ್ಕಾಂಬದಿಯ ಕ್ರಿ.ಶ 1130ರ ಶಾಸನವು ಹರವಗಟ್ಟದ ಕೆರೆಯನ್ನು ಮಾಂಡಲೀಕ, ಬೊಮ್ಮರಿಕ ನಿರ್ಮಿಸಿ ಕೆರೆಯನ್ನು ರಾಮತೀರ್ಥವೆಂದು ಹೆಸರಿಸಿದನೆಂದು ದಾಖಲಿಸುತ್ತದೆ.[76] ಮಹಾಸಾಮಂತನಾದ ಗೋವಿದೇವನ ಕ್ರಿ.ಶ 1148ರ ಶಾಸನವು ಅವನ ಸೇವಕರಾದ ಪೆರ್ಗಡೆ ಚಿಕ್ಕಮಯ್ಯನ ಮಗ ಮತ್ತು ಸಹೋದರರು ಕೆರೆಯನ್ನು ನಿರ್ಮಿಸಿ ತಮ್ಮ ತಂದೆಯ ಸ್ಮರಣೆಗಾಗಿ ದೇವಾಲಯವನ್ನು ನಿರ್ಮಿಸಿ ಆತನ ಮುಕ್ತಿಗಾಗಿ ಭೂದಾನ ಮಾಡಿದುದು ದಾಖಲಾಗಿದೆ.[77] ಕ್ರಿ.ಶ 1153 ಕಡೂರು ತಾಲ್ಲೂಕಿನ ಮೂಗಳಿಕಟ್ಟೆಯ ಕೆರೆ[78] ಕ್ರಿ.ಶ.1213ರ ತರೀಕೆರೆ ತ್ಲೂಕಿನ ದುಗಲಾಪುರದ ಕೆರೆ.[79] ಬುಕ್ಕಾಂಬದಿಯ ವೇದಸಮುದ್ರ ಹಿರೆಮಗಳೂರಿನಕೆರೆ[80] ಕ್ರಿ.ಶ. 1213ರ ಕಡೂರು ತಾಲ್ಲೂಕಿನ ಒಕ್ಕಲಗೆರೆ[81] ಕ್ರಿ.ಶ.1208ರ ಕಡೂರು ತಾಲ್ಲೂಕಿನ ಬೆಟ್ಟನಹಳ್ಳಿಯ ಕಲಿ ಕಟ್ಟೆಯ ಕೆರೆ[82] ತರೀಕೆರೆ ತಾಲ್ಲೂಕು ಕಂಠವೆಂಟೆಯೂ ಕೆರೆ,[83] ಇದೇ ತಾಲ್ಲೂಕಿನ ಕೆರೆ ಸಂತೆಯ ಕೆರೆ. ಕ್ರಿ.ಶ 1253ರ ಕಡೂರು ತಾಲ್ಲೂಕಿನ ಕೆಂಚಗಲ್ಲಿಯ ದೊಡ್ಡಗೆರೆ,[84] ಕ್ರಿ.ಶ. 1210ರ ಚಿಕ್ಕಬಳ್ಳಾ ಗ್ರಾಮದ ಕೆರೆ ಅಮೃತಪುರದ ಕೆರೆ[85] ಕಂಟವೇಡ್ನಿಯ ಮತ್ತು ಉಬ್ಬರವೇಂಟೆ ಕೀರ್ತಿನಕೆರೆ ಮಾವಿನ ಕೆರೆ,ಕ್ರಿ.ಶ.1291ರ ಒಕ್ಕಂದದಕೆರೆ,[86] ಚಿಕ್ಕಮಗಳೂರು ತಾಲೋಕಿನ ಕೋಟೆ ಊರಿನಕೆರೆ[87] ಮುಂತಾದ ಹಲವಾರು ಕೆರೆಗಳು ಹೊಯ್ಸಳರ ಕಾಲದಲ್ಲಿ ಕಾರ್ಯ ನಿರ್ವಹಿಸುತ್ತಿದ್ದವೆಂದು ಶಾಸನಗಳು ಉಲ್ಲೇಖಿಸುತ್ತವೆ.

ಕ್ರಿ.ಶ. 1056ರ ಚಿಕ್ಕಕಡಲೂರಿನ ಶಾಸನವು ಪೊನ್ನಾಜಿಯ ಎಂಬುವವರು ಕೆರೆಯನ್ನು ಮತ್ತು ದೇವಾಲಯವನ್ನು ನಿರ್ಮಿಸಿ ದೇವ ಬ್ರಾಹ್ಮಣರಿಗೆ ಭೂದಾನ ಮಾಡಿದುದನ್ನು ದಾಖಲಿಸುತ್ತದೆ.[88] ರನ್ನಘಟ್ಟದ ಕ್ರಿ.ಶ 1096ರ ಶಾಸನವು ಬಾಪೇಶ್ವರ ದೇವಾಲಯ ಮತ್ತು ಬಳ್ಳ ಕೆರೆಯನ್ನು ರೇಣುರಟ್ಟ ಎಂಬುವವನು ನಿರ್ಮಿಸಿದನೆಂದು ದಾಖಲಿಸುತ್ತದೆ.[89] ಕೆಂಬಾಳುವಿನ ಕ್ರಿ.ಶ 1098ರ ಶಾಸನವು ಕಲಿಗಾವುಂಡನು ಕೆಬ್ಬಾಳುವಿನಲ್ಲಿ ಕೆರೆ ಮತ್ತು ದೇವಾಲಯವನ್ನು ನಿರ್ಮಿಸಿ ಭೂದಾನ ಮಾಡಿದುದನ್ನು ತಿಳಿಸುತ್ತದೆ.[90] ಕ್ರಿ.ಶ 1093ರ ದೇವಿಹಳ್ಳಿಯ ಶಾಸನದಲ್ಲಿ[91] ಮಹಾಪ್ರಧಾನ ಕುಂದಣಜಿಯಾ ಶಿವಾಲಯವನ್ನು ಮತ್ತು ಕೆರೆಯನ್ನು ನಿರ್ಮಿಸಿದ್ದನ್ನು ದಾಖಲಿಸುತ್ತದೆ. 11ನೇ ಶತಮಾನದೆಂದು ಹೇಳಲಾದ ಅರಸಿಕೆರೆಯ ಶಾಸನವೊಂದು ಬಿತ್ತುವಾಟ ನೀಡಿ ಕೆರೆಯನ್ನು ನಿರ್ಮಿಸಿದಂತೆ

ತಿಳಿದುಬರುತ್ತದೆ. ಕಟ್ಟೆಪೆರ್ಗಡೆ, ಸೋಮದೇವ, ಆದಿತ್ಯದೇವ ಮಾಯಶವೆರ್ಗಡೆ ಮತ್ತು ಬ್ರಹ್ಮನ ನೇತೃತ್ವದಲ್ಲಿ ಕೆರೆಯ ಕಾಮಗಾರಿ ನಡೆಯುತ್ತೆಂದು ಕೇತೋಜಿ ಮತ್ತು ಇಜೋಜಿಯರ್ ಕೆರೆಯ ತೂಬನ್ನು ನಿರ್ಮಿಸಿದರೆಂದು ತಿಳಿದು ಬರುತ್ತದೆ.[92]

ಇದೇ ಕಾಲದ ಶಾಂತಿ ಗ್ರಾಮದ ಶಾಸನದಲ್ಲಿ ದರಸಿ ಕೆರೆಯ ನಿರ್ಮಾಣದ ಬಗ್ಗೆ ಪ್ರಸ್ತಾಪ ಕಂಡುಬರುತ್ತದೆ.[93] ಕ್ರಿ.ಶ. 1101ರ ಬೇಲೂರು ತಾಲ್ಲೂಕಿನ ದಬ್ಬೆ ಅಗ್ರಹಾರದ ಶಾಸನವು ದಿಲಾಗೋಚೆ ಗಾವುಂಡ ಗ್ರಾಮ ದೇವಾಲಯದ ಮುಂಭಾಗದಲ್ಲಿ ತನ್ನ ತಂದೆಗೆ ಪುಣ್ಯವಾಗಲೆಂದು ಕೆರೆಯೊಂದನ್ನು ತೋಡಿಸಿ ಗ್ರಾಮದ ದೇವಾಲಯಕ್ಕೆ ಸಮರ್ಪಿಸಿದಂತೆ ದಾಖಲಿಸುತ್ತದೆ.[94] ಕ್ರಿ.ಶ 1100ರ ಕೋಡಿಹಳ್ಳಿಯ ಶಾಸನ ಬಿನ್ನಗಾವುಂಡ, ಕಾಳಶೆಟ್ಟಿಗಾವುಂಡ ಮತ್ತು ಅಹಿಂತದನಕಶೆಟ್ಟಿ, ಊರ ಕೆರೆಯನ್ನು ಕಟ್ಟಿಸಿದರೆಂದು ದಾಖಲಿಸುತ್ತದೆ.[95] ಹೆಬ್ಬಾಳುವಿನ 12ನೇ ಶತಮಾನದ ಶಾಸನವೊಂದರಲ್ಲಿ ಜಿವನೆಯ ಹೆಗ್ಗಡೆ ಎಂಬುವವರು ಕೆರೆಯನ್ನು ನಿರ್ಮಿಸಿ ಹೊಸ ದೇವರನ್ನು ಪ್ರತಿಷ್ಠಾಪನೆ ಮಾಡಿದರೆಂದು ದಾಖಲಿಸುತ್ತದೆ.[96] ಲಿಪಿ ಶಾಸ್ತ್ರದ ಆಧಾರದ ಮೇಲೆ 12 ಶತಮಾನದೆಂದು ಗುರುತಿಸುವ ಶ್ರವಣಬೆಳಗೊಳ ಶಾಸನವು ನಯಕೀರ್ತಿ ಸಿದ್ಧಾಂತ ದೇವನ ಆದೇಶದ ಮೇರೆಗೆ ಆತನ ಅನುಯಾಯಿಗಳು ಕೆರೆಯನ್ನು ನಿರ್ಮಿಸಿ ಸಿಂಗ ಸಮುದ್ರವೆಂಬ ಕೆರೆಗೆ ಅವಶ್ಯಕವಾದ ಭೂಮಿಯನ್ನು ಮಹಾ ಪ್ರಧಾನ ಹಿರಿಯ ಬಂಡಾರಿ, ರಾಮದೇವನಾಯಕ್ ಬಂಡಾರಿ ಸಿಂಗಯ್ಯ ಮತ್ತು ಮಹಾಒಡ್ಡವ್ಯವಹಾರಿ ಶೆಟ್ಟಿಯವರು ಒದಗಿಸಿದರೆಂದು ನಮೂದಿಸಿದೆ.[97] ಇದೇ ಕಾಲಘಟ್ಟದ ಅರಕಲಗೂಡಿನ ಬಸವಪಟ್ಟಣ ತಾಲೂಕಿನ ಸೇನಜೀವ ಬೊಮ್ಮಣ್ಣ ಮತ್ತು ಸೇಂದ್ರಾದಿಪತಿ ಕೆರೆಯನ್ನು ನಿರ್ಮಿಸಿದಂತೆ ದಾಖಲಿಸುತ್ತದೆ.[98] ಇದೇ ತಾಲೂಕಿನ ಕಾಟಗೆರೆಯ ಕ್ರಿ.ಶ 1100ರ ಶಾಸನ ಎರೆಯಂಗನ ಮಡದಿ ಮಹಾದೇವಿಯು ಮುತ್ತಣ್ಣ ಹೊಸವೂರಿನಲ್ಲಿ ಕೆರೆಕಟ್ಟಿಸಿದನ್ನು ದಾಖಲಿಸುತ್ತದೆ.[99] ಹಾಸನ ತಾಲೂಕಿನ ಕೋರಮಂಗಲದ 12ನೇ ಶತಮಾನದ ಶಾಸನ ಮೂಕ ಸಮುದ್ರವನ್ನು ಹೆಗ್ಗಡತಿ ಮಾಕಣ್ಣವ್ವೆ ನಿರ್ಮಿಸಿದಳೆಂದು ದಾಖಲಿಸುತ್ತದೆ.[100] ಬೇಲೂರು ತಾಲೋಕಿನ ಬಸ್ತಿಹಳ್ಳಿಯ ಕೆರೆಯನ್ನು ಹೆಗ್ಗಡೆ ಮಲ್ಲಯ್ಯನ ನಿರ್ಮಿಸಿ ಮಲ್ಲಿನಾಥದೇವರಿಗೆ ಕೆರೆಯ ಉತ್ಪತ್ತಿಯನ್ನು ದಾನ ಮಾಡಿದಂತೆ ದಾಖಲಿಸುತ್ತದೆ.[101] ಚೆನ್ನರಾಯಪಟ್ಟಣ ತಾಲೂಕು ಸಂತೆ ಶಿವರದ ಹೊಸಕೆರೆಯನ್ನು ಬಾಚರಸನು ನಿರ್ಮಿಸಿದನೆಂದು ಇಲ್ಲಿನ ಶಾಸನ

ವಿವರಿಸುತ್ತದೆ.[102] ಕ್ರಿ.ಶ 1117ರ ಶಾಸನವು ಬೇಲೂರಿನ ವಾಸುದೇವ ತೀರ್ಥವನ್ನು ಹೊಯ್ಸಳ ದೊರೆ ವಿಷ್ಣುವರ್ಧನನು ನಿರ್ಮಿಸಿದನೆಂದು ದಾಖಲಿಸುತ್ತದೆ.[103] ಇವುಗಳಲ್ಲದೆ ಜಿಲ್ಲೆಯ ಶಾಸನಗಳ ಹಲವಾರು ಕೆರೆಗಳು ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡವೆಂದು ದಾಖಲಿಸುತ್ತದೆ. ಅವುಗಳನ್ನು ಈ ಕೆಳಗಿನಂತಿವೆ ಉಲ್ಲೇಖಿಸಬಹುದು.

ಕ್ರಿ.ಶ.1132–34ರ ಚೆನ್ನರಾಯಪಟ್ಟಣ ತಾಲೂಕಿನ ಬಳಗಂಬಿಯಕೆರೆ,[104] ಕ್ರಿ.ಶ 1138ರ ಶ್ರವಣಬೆಳಗೊಳದ ಬೊಮ್ಮನಹಳ್ಳಿಕೆರೆ,[105] ಕ್ರಿ.ಶ.1147ರ ಹಾಸನ ತಾಲೂಕಿನ ಮುಗಳಿಯ ಅಗ್ರಹಾರದ ಕೆರೆ,[106] ಬೇಲೂರು ತಾಲೂಕಿನ ಕಡಲೂರಿನ ತ್ರೈಲೋಕ್ಯ ಸಮುದ್ರವೆಂಬ ಕೆರೆ ಕ್ರಿ.ಶ 1178.[107] ಕ್ರಿ.ಶ 1178ರ ಬೇಲೂರು ತಾಲೂಕಿನ ಹುಲಿಕೆರೆಯ ಚಟ್ಟಯನ ಕೆರೆ ಮತ್ತು ಚಟ್ಟ ಸಮುದ್ರ.[108] ಹಾಸನ ತಾಲೂಕಿನ ಗೌಡಗೆರೆಯ ಪಿಣ್ಣಾವನೆ ಕೆರೆ,[109] ಅರಸಿಕೆರೆ ತಾಲೂಕು ಗೀಜನ ಹಳ್ಳಿಯ ಕೆರೆ,[110] ಇದೇ ತಾಲೂಕಿನ ಕ್ರಿ.ಶ 1170ರ ಹುಲಿಕೂರಿನ ಕೆರೆ.[111] ಕ್ರಿ.ಶ. 1177ರ ಕೀರ್ತಿಗಾವುಂಡ ನಿರ್ಮಿಸಿದ ಎಡದಹಳ್ಳಿಯ ಕೆರೆ,[112] ಕ್ರಿ.ಶ 1178ರ ಚನ್ನರಾಯಪಟ್ಟಣ ತಾಲೂಕು ಬಾಳಕಟ್ಟೆಯ ಕೆರೆ[113]ಇತ್ಯಾದಿ.

ಅರಸೀಕೆರೆ ತಾಲೂಕು ಬಾಣವಾರು ಕಮಲಚಟ್ಟೋಪಾಧ್ಯಾಯ ನಿರ್ಮಿಸಿದ ಕೆರೆ, ಬಾಣವಾರದ ಕೆರೆ, ಬೊಮ್ಮಚಣರು ಕೆರೆ, ಕಲ್ಲಿನ ಕೆರೆ, ಮತ್ತು ಮಾಹಿಕೆರೆಗಳು.[114] ದೂರ ಸಮುದ್ರವನ್ನು ಹಳೇಬೀಡೆಂದು ಕರೆಯಲಾಗುತ್ತದೆ. ಇಲ್ಲಿನ ದೇವಾಲಯ ನಿರ್ಮಾಣಕ್ಕೆ ಪೂರ್ವದಲ್ಲಿಯೇ ಇಲ್ಲಿ ಕೆರೆ ನಿರ್ಮಾಣವಾಗಿದ್ದಕ್ಕೆ ದಾಖಲೆಗಳಿವೆ ಹಾಗಾಗಿ ದೂರ ಸಮುದ್ರದ ಕೆರೆಯು ಹೊಯ್ಸಳರ ಅತಿ ದೊಡ್ಡ ಕೆರೆಗಳಲ್ಲಿ ಒಂದಾಗಿದೆ. (ನೋಡಿ ಚಿತ್ರ 12–15) ಕ್ರಿ.ಶ.1181ರ ಚನ್ನರಾಯಪಟ್ಟಣದ ಕೊಳತೂರಿನ ಶಾಂತಿ ಸಮುದ್ರಕೆರೆ[115] ಬೇಲೂರು ತಾಲ್ಲೂಕಿನ ಕ್ರಿ.ಶ 1182ರ ಹೀರೆಹಳ್ಳಿಯ ತಾಳವಾರ ಬೂತೀನಾಯಕ ಮತ್ತು ಅವನ ಮಗ ನಿರ್ಮಿಸಿದ ಜಿಕ್ಕನಕೆರೆ ಮತ್ತು ಕಣಬಕೆರೆ.[116] ಚನ್ನರಾಯಪಟ್ಟಣ ತಾಲೂಕಿನ ಕ್ರಿ.ಶ.1186ರ ಕಬ್ಬಳ್ಳಿಯಲ್ಲಿ ಪೊನ್ನಜಿಯ ನಿರ್ಮಿಸಿದ ಹೊಸಕೆರೆ[117] ಬೇಲೂರು ತಾಲೂಕಿನ ಕ್ರಿ.ಶ 1186ರ ನೀರೆದೇವನಹಳ್ಳಿಯ ರುದ್ರಸಮುದ್ರಗಂಗ, ಅಚ್ಚುತ ಸಮುದ್ರ ಮತ್ತು ವೀರಸಮುದ್ರ ಎಂಬ ಕೆರೆಗಳು[118] ಅರಸೀಕೆರೆ ತಾಲೂಕು ಕ್ರಿ.ಶ.1195 ಮುದುಡಿಯ ಕೆರೆ[119] ಕ್ರಿ.ಶ.1196ರ

ಮಾದನಹಳ್ಳಿಯ ಕೆರೆ,[120] ಅರಕಲಗೂಡು ತಾಲೂಕು ತೇದಿಯಲ್ಲದ ರಾವೇನಹಳ್ಳಿಯ ರಾಮಸಮುದ್ರ,[121] ಚನ್ನರಾಯಪಟ್ಟಣ ತಾಲೂಕು ನುಗ್ಗೇನಹಳ್ಳಿಯ ಗೋಟ್ಟಿಗೆರೆಯ ಬ್ರಹ್ಮ ಸಮುದ್ರ.[122]

ಅರಸೀಕೆರೆ ತಾಲೂಕು ಕ್ರಿ.ಶ 1196-97ರ ಹೊನ್ನಾಕಟ್ಟೆಯ ಮಾಜಿ ಸಮುದ್ರ, ಬೇಲೂರಿನ ಸಾಮಂತ ಸಮುದ್ರ, ಬ್ರಹ್ಮ ಸಮುದ್ರ ಎಂಬ ಎರಡು ಕೆರೆಗಳು.[123] ಅರಸೀಕೆರೆಯು ಹೊಯ್ಸಳರ ನಿರ್ಮಾಣವೆಂದು ಅದು ಹೊಯ್ಸಳರ ರಾಜಕುಮಾರಿಯ ಹೆಸರಿನಲ್ಲಿ ನಿರ್ಮಾಣವಾದದ್ದು, ಹಾಗಾಗಿ ಆ ಕೆರೆ ಇಂದಿಗೂ ಚಾಲ್ತಿಯಲ್ಲಿರುವುದು ಅದರ ರಚನಾ ಕಾಲದ ಪ್ರೌಢಿಮೆಯನ್ನು ಸಾದರಪಡಿಸುತ್ತದೆ. (ನೋಡಿ ಚಿತ್ರ 16-19) ಹಾಸನ ತಾಲ್ಲೂಕಿನ ಮೊಸಳೆಯ ಕೆರೆಯು ಹೊಯ್ಸಳರ ರಚನೆ (ನೋಡಿ ಚಿತ್ರ 20) ಅರಸೀಕೆರೆ ತಾಲೂಕಿನ ಕ್ರಿ.ಶ.1196ರ ನಡಗರಹಳ್ಳಿಯ ಕೆರೆ ಮತ್ತು ಹಿರಿದೇವಳೂರಿನ ಕೆರೆಗಳೂ ದಾಖಲಿಸುತ್ತದೆ.[124] ಈ ಕೆರೆಗಳಲ್ಲದೆ ಇನ್ನೂ ಹಲವಾರು ಕೆರೆಗಳು ಹೊಯ್ಸಳರ ಕಾಲದ ಶಾಸನಗಳಲ್ಲಿ ಉಲ್ಲೇಖವಾಗಿವೆಯಾದರು, ಆ ಕೆರೆಗಳನ್ನು ಹಾಸನ ಜಿಲ್ಲೆಯ ಗ್ರಾಮನುಗ್ರಾಮಗಳೊಂದಿಗೆ ತಳಕು ಹಾಕಿ ಗುರುತಿಸುವುದು ಸಾಧ್ಯವಾಗದ ಕಾರಣ ಆ ಉಲ್ಲೇಖಗಳನ್ನು ಇಲ್ಲಿ ದಾಖಲಿಸಿಲ್ಲ.

ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಸುಮಾರು 94 ಶಾಸನಗಳು ಕೆರೆ ಕಾಲುವೆ, ಕೊಳ ಮತ್ತಿತರ ನೀರಾವರಿ ಸಂಬಂಧಿತ ದಾನಗಳನ್ನು ಉಲ್ಲೇಖಿಸುತ್ತವೆಯಾದರು, ಜಿಲ್ಲೆಯ ಕೆರೆಯ ನಿರ್ಮಾತೃಗಳ ಹೆಸರುಗಳನ್ನು ಉಲ್ಲೇಖಿಸುವಲ್ಲಿ ಶಾಸನಗಳು ಹಿಂದೆ ಸರಿಯುತ್ತವೆ.[125] ಬಹುತೇಕ ಶಾಸನಗಳಲ್ಲಿ ರಾಜ ಮತ್ತು ಆಡಳಿತಾಧಿಕಾರಿಗಳ ಹೆಸರು ಅತಿ ಹೆಚ್ಚಾಗಿ ಪ್ರಸ್ತಾಪಿತವಾದರು ಅವು ರಾಜನನ್ನು ಮತ್ತು ಅಧಿಕಾರಿಗಳನ್ನು ಕೇವಲ ರಾಜತ್ವದ ಹಿನ್ನೆಲೆಯಲ್ಲಿ ಗುರುತಿಸುತ್ತದೆಯೋ ಹೊರತು ದಾನಿಯಾಗಲು ಅಥವಾ ನೀರಾವರಿ ಕೈಂಕರ್ಯದ ಪ್ರೇರಕವಾಗಿ ದಾಖಲಾಗಿರುವ ಉದಾಹರಣೆಗಳು ಇಲ್ಲವೇ ಇಲ್ಲವೆಂದೇ ಹೇಳಬೇಕು. ಇದೇ ಭಾವನೆ ಮತ್ತು ಅಭಿಪ್ರಾಯ ಮೈಸೂರು ಜಿಲ್ಲೆಯ ಶಾಸನಗಳನ್ನು ಅಧ್ಯಯನ ಮಾಡಿದಾಗ ಸಹ ಮೂಡಿಬರುತ್ತವೆ. ದಕ್ಷಿಣ ಕರ್ನಾಟಕವನ್ನು ಆಳಿದ ರಾಜಮನೆತನಗಳ ಇತಿಹಾಸವನ್ನು ಅಧ್ಯಯನ ಮಾಡುತ್ತಾ ಹೋದರೆ ರಾಜಧಾನಿಗೆ

ಸಮೀಪವಿರುವ ಅಥವಾ ರಾಜಧಾನಿಯನ್ನು ಕೇಂದ್ರವಾಗಿರಿಸಿಕೊಂಡು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ರಾಜನು ನೇರವಾಗಿ ಧರ್ಮ ಕಾರ್ಯದಲ್ಲಿ ಮತ್ತು ನಿರ್ಮಾಣ ಕಾರ್ಯದಲ್ಲಿ ತೊಡಗಿರುವುದು ಸಾಮಾನ್ಯವಾಗಿ ಕಂಡುಬರುತ್ತದೆಯಾದರೂ ರಾಜಧಾನಿಯಿಂದ ದೂರ ಸರಿದಂತೆ ಕೇವಲ ವಿಶೇಷ ಸಂದರ್ಭಗಳಲ್ಲಿ ಮಾತ್ರ ರಾಜನು ಈ ಬಗೆಯ ಚಟುವಟಿಕೆಗಳಲ್ಲಿ ಭಾಗಿಯಾಗಿರುವುದು ಕಂಡುಬರುತ್ತದೆ.

ಬೆಂಗಳೂರು ನಗರದ ಆಸುಪಾಸಿನಲ್ಲಿರುವ ಕೋಲಾರ ಜಿಲ್ಲೆಯಲ್ಲಿಯೂ ಇದೇ ಬಗೆಯ ಅಭಿಪ್ರಾಯಗಳು ದಾಖಲಾಗಿವೆ.[126] ಕೋಲಾರ ಜಿಲ್ಲೆಯ ನೀರಾವರಿಯ ಬಗ್ಗೆ ಸಮಗ್ರ ಅಧ್ಯಯನ ಮಾಡಿರುವ ಟಿ.ವಿ.ನಾಗರಾಜು ತಮ್ಮ ಕೃತಿ ಮೈಸೂರು ಸಂಸ್ಥಾನದಲ್ಲಿ ನೀರಾವರಿ, ಕೋಲಾರ ಜಿಲ್ಲೆಯ ಒಂದು ಅಧ್ಯಯನದಲ್ಲಿ ಕ್ರಿ.ಶ.727 ರ ಶಾಸನಗಳ ನಂತರ ಬುಕ್ಕರಾಯನ ಶಾಸನವನ್ನು ದಾಖಲಿಸುತ್ತಾರೆ.[127] ಹೊಯ್ಸಳ ಕಾಲಕ್ಕೆ ಸೇರಿದ ಶಾಸನಗಳ ಬಗೆಗೆ ಯಾವುದೇ ಉಲ್ಲೇಖಗಳನ್ನು ನೀಡುವುದಿಲ್ಲ. ಒಟ್ಟಿನಲ್ಲಿ ಹೊಯ್ಸಳರ ಕಾಲದ ಕೆರೆ ನಿರ್ಮಾಣದ ಚಟುವಟಿಕೆಯು ಹಾಸನ, ಚಿಕ್ಕಮಗಳೂರು ಶಿವಮೊಗ್ಗ ಮತ್ತು ಚಿತ್ರದುರ್ಗ ಜಿಲ್ಲೆಯಲ್ಲಿ ಹೆಚ್ಚಿನ ಸಾಂದ್ರತೆಯಲ್ಲಿ ಕಂಡುಬಂದರೆ ಮಂಡ್ಯ, ಮೈಸೂರು, ಬೆಂಗಳೂರು ನಗರ, ಗ್ರಾಮಾಂತರ, ತುಮಕೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಕಡಿಮೆಯಾಗುತ್ತಾ ಬರುವುದನ್ನು ಕಾಣಬಹುದು.

## ವಿಜಯನಗರದ ಕಾಲ

ಹೊಯ್ಸಳರ ನಂತರ ದಕ್ಷಿಣ ಕರ್ನಾಟಕ ವಿಜಯನಗರ ಸಾಮ್ರಾಜ್ಯದ ಆಡಳಿತದ ಭಾಗವಾಗಿ ಮಾರ್ಪಟ್ಟಿತ್ತು. ಈ ಕಾಲಘಟ್ಟದಲ್ಲಿ ಸಾಮ್ರಾಜ್ಯದಾದ್ಯಂತ ಕೆರೆಗಳ ರಚನೆಯನ್ನು ಮುಂದುವರೆಸಿದರು. ಈ ಕಾಲದಲ್ಲಿ ಹೆಚ್ಚಾಗಿ ಹೊಸ ನಿರ್ಮಾಣಗಳಿಗೆ ತೊಡಗಿಸಿಕೊಳ್ಳುತ್ತಿದ್ದರು. ಪ್ರಾಚೀನ ಕೆರೆಗಳನ್ನು ಪುನಃ ಅಭಿವೃದ್ಧಿಪಡಿಸಿಕೊಳ್ಳುವ ಅಥವಾ ವಿನಾಶವಾಗಿದುವುಗಳನ್ನು ಅಭಿವೃದ್ಧಿಪಡಿಸುವ ಅಥವಾ ಕಾಲನ ದಾಳಿಗೆ ಸಿಲುಕಿ ಸರಿಯಾಗಿ ನಿರ್ವಹಣೆಯಾಗದ ಕೆರೆಗಳನ್ನು ಪುನರ್ ನಿರ್ಮಾಣ ಮಾಡುವ ಕೆಲಸ ಅತೀ ಹೆಚ್ಚಾಗಿ ನೆರವೇರಿತ್ತೆಂದರೆ ತಪ್ಪಾಗುವುದಿಲ್ಲ. ವಿಜಯನಗರ ಸಾಮ್ರಾಜ್ಯದ ಅತೀ ಪ್ರಾಚೀನವಾದ

ರಚನೆಯೆಂದರೆ ಹಾಸನ ಜಿಲ್ಲೆಯ ಗಂಡಸಿ ಗ್ರಾಮದಲ್ಲಿ ಒಂದನೇ ಹರಿಹರನ ಅಧಿಕಾರಿ ಬಾಯಣ್ಣನು ನಿರ್ಮಿಸಿದ ಮಂಗ ಸಮುದ್ರ ಪ್ರಮುಖವಾದುದು.[128] ಇದನ್ನು ಆತನ ತಾಯಿಯ ಹೆಸರಲ್ಲಿ ನಿರ್ಮಿಸಿದನಾದರೂ ಶಾಸನದಲ್ಲಿ ಉಕ್ತವಾಗುವ ಹಳೆಯಕೆರೆ ಬಾಯಣ್ಣನಿಗೂ ಪೂರ್ವದಲ್ಲಿ ಅಲ್ಲಿ ಕೆರೆ ಇತ್ತೆಂಬ ಅಂಶ ಸ್ಪಷ್ಟವಾಗುತ್ತದೆ. ಪ್ರಾಯಶಃ ಹೂಳು ತುಂಬಿ ನಿರ್ವಹಣೆಯ ತೊಂದರೆಯಿಂದ ಅನುಪಯುಕ್ತವಾಗಿದ್ದನ್ನು ಪುನಃ ಹೊಸದಾಗಿ ನಿರ್ಮಿಸಿದ್ದು ಈ ಕಾಲದಲ್ಲಿ ಎಂದು ಭಾವಿಸಬೇಕಾಗುತ್ತದೆ.

ಒಂದನೇ ಹರಿಹರನ ಕಾಲದ ಹಾಸನ ಜಿಲ್ಲೆಯ ಚಂಗವಾಡಿಯಲ್ಲಿ ಚಂಗವಾಡಿ ಸೀಮೆಗೆ ಸೇರಿದಿ ರುದ್ರಪಟ್ಟಣದ ಕ್ರಿ.ಶ 1357ರ ಶಾಸನ ಮಹಾವಡ್ಡ ವ್ಯವಹಾರಿ ಮಹದೇವಣ್ಣ ದೊರೆಯ ಅನುಮತಿ ಪಡೆದು ಲಕ್ಷ್ಮಿಪುರ ಎಂಬ ಅಗ್ರಹಾರವನ್ನು ಮತ್ತು ಕೆರೆಯನ್ನು ನಿರ್ಮಿಸಿದನೆಂದು ತಿಳಸುತ್ತದೆ. ಈ ಕೆರೆಯ ರಾಜ ಕಾಲುವೆಯು ಚಂಗನಾಡಿನ ಹಲವಾರು ಹಳ್ಳಿಗಳ ಭೂಮಿಗೆ ನೀರು ಉಣಿಸುತ್ತಿತ್ತೆಂದು ತಿಳಿದುಬರುತ್ತದೆ.[129] ಈ ಕಾಲುವೆಯ ಎರಡು ದಡಗಳಲ್ಲಿ ಕಲ್ಲು ಕಟ್ಟಡ ಮಾಡಿಸುವಂತೆ ದೊರೆಯು ರಾಜಕುಮಾರ ಬುಕ್ಕನಿಗೆ ಆಜ್ಞೆ ಮಾಡಿದ್ದರಿಂದ ಬುಕ್ಕನು ತನ್ನ ಅಧಿಕಾರಿ ಸೋಮಪ್ಪ ಅರಸನಿಂದ ಈ ಕಾರ್ಯವನ್ನು ಪೂರ್ಣಗೊಳಸಿದನು.

ಅರಸೀಕೆರೆ ತಾಲೂಕಿನ ಕೆಲ್ಲನಗೆರೆ ಶಾಸನ ಕ್ರಿ.ಶ 1367ರ ಶಾಸನ ಕೆರೆ ಸಂರಕ್ಷಣೆ ಬಗೆಗೆ ಮಾಡಿದ ವ್ಯವಸ್ಥೆಯನ್ನು ತಿಳಸುತ್ತದೆ.[130] ಇದೇ ಬಗೆಯ ವಿವರವು ಕ್ರಿ.ಶ.1371ರ ಅರಕಲಗೂಡು ತಾಲೂಕಿನ ಜೋಳಕ್ಯಾತನಹಳ್ಳಿ ಶಾಸನದಿಂದ ಸ್ಪಷ್ಟವಾಗುತ್ತದೆ.[131] ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲೂಕಿನ ರಾಮಸಾಗರದ ಶಾಸನ "ರಾಮಸಾಗರವೆಂದು ಕರೆಯಲ್ಪಡುವ ಬುಕ್ಕಸಾಗರ"ವೆಂಬ ಕೆರೆಯನ್ನು ಬುಕ್ಕರಾಯನು ಕಟ್ಟಿಸಿದನೆಂದು ದಾಖಲಿಸಲಾಗಿದೆ.[132] ಈ ಶಾಸನವು ಒಂದನೇ ದೇವರಾಯನ ಕಾಲಕ್ಕೆ ಸೇರಿದ್ದಾದರೂ ಬುಕ್ಕರಾಯನು ನಿರ್ಮಿಸಿದನೆಂದು ತಿಳಸಿರುವುದು ಪ್ರಮುಖವಾಗುತ್ತದೆ. ಈ ಕೆರೆಯ ಬಗೆಗೆ ಬರೆಯುತ್ತಾ ದೀಕ್ಷೀತರು ಚೋಳರ ಕಾಲದಲ್ಲಿ ನಿರ್ಮಿತವಾಯಿತ್ತೆಂದು ದಾಖಲಿಸಿ, ಶಾಸನದ ಪಾಠವನ್ನು ಅನುಸರಿಸಿ ಅದು ಬುಕ್ಕರಾಯನ ಕಾಲದಲ್ಲಿಯೇ ನಿರ್ಮಾಣವಾಗಿರಬೇಕೆಂಬ

ಅಭಿಪ್ರಾಯವನ್ನು ಮುಂದಿಡುತ್ತಾರೆ.[133] ಆದರೆ ಈ ಪ್ರದೇಶದಲ್ಲಿರುವ ಪ್ರಚಲಿತ ಮೌಖಿಕ ದಾಖಲೆಗಳು ಇದನ್ನು ಚೋಳರ ಕಾಲಕ್ಕೆ ಕೊಂಡ್ಯೊಯುತ್ತವೆ.

ಮೌಖಿಕ ದಾಖಲೆಗಳನ್ನು ಆಧರಿಸಿ ಹೇಳುವುದಾದರೆ ಚೋಳರ ಕಾಲದಲ್ಲಿ ನಿರ್ಮಾಣವಾದ ಈ ಕೆರೆ ವಿಜಯನಗರದ ಹೊತ್ತಿಗೆ ಹೂಳು ತುಂಬಿ ಜಲಸಂಗ್ರಹಣ ಶಕ್ತಿಯನ್ನು ಕಳೆದುಕೊಂಡಿದ್ದಿರಬೇಕು. ಹಾಗಾಗಿ ಬುಕ್ಕರಾಯನು ಈ ಕೆರೆಯ ಹೂಳನ್ನು ತೆಗೆಸಿ ಏರಿಯನ್ನು ಬಲಪಡಿಸಿ ಪುನಃ ರಚಿಸಿರುವ ಸಾಧ್ಯತೆ ಇದೆ. ಈ ಕೆರೆ ಕ್ರಿ.ಶ 1751 – 1782ರ ಅವಧಿಯಲ್ಲಿ ಗೋರ್ಪಡೆಯ ಆಳ್ವಿಕೆಯಲ್ಲಿ ಒಡೆದು ಪುನರ್ ನಿರ್ಮಾಣಗೊಂಡು ಪುನಃ ಪೂರ್ಣಯ್ಯನವರ ಕಾಲದಲ್ಲಿ ಪುನರ್ ನಿರ್ಮಾಣಗೊಂಡಿದೆ. ಪಾಲರ್ ನದಿಯಿಂದ ನೀರನ್ನು ಪಡೆಯುವ ಈ ಕೆರೆ ಅತಿವೃಷ್ಟಿಯ ಕಾಲದಲ್ಲಿ ಪದೇ ಪದೇ ಒಡೆದು ಪುನರ್ ನಿರ್ಮಾಣಗೊಂಡಿದೆ ಎಂದು ತಿಳಿದುಬಂದಿದೆ.

ಕ್ರಿ.ಶ 1388ರ ಗೌರಿಬಿದನೂರು ತಾಲ್ಲೂಕು ಕಲ್ಲೂಡಿ ಶಾಸನ ವೀರಹರಿಹರರಾಯನ ಮಗ ಶ್ರೀ ಪ್ರತಾಪ ಬುಕ್ಕರಾಯನು ಪ್ರಜೆ ಮತ್ತು ಪ್ರಾಣಿಗಳ ಯೋಗಕ್ಷೇಮಕ್ಕಾಗಿ, ಎಲ್ಲಾ ಪ್ರಾಣಿಗಳ ಜೀವರಸವಾದ ಪೆನ್ನಾರು ನದಿಯ ನೀರನ್ನು ಪೇನುಗೊಂಡಗೆ ಹರಿಸಲು ದಶಶಾಸ್ತ್ರ ಪಂಡಿತನಾಗಿದ್ದ ಜಲಸೂತ್ರದ ಸಿಂಗಯ್ಯಭಟ್ಟನಿಗೆ ಬಹಿರಂಗ ಸಭೆಯಲ್ಲಿ ಅಪ್ಪಣೆ ಮಾಡಿದನು.[134] ಅದರಂತೆ ಸಿಂಗಯ್ಯಭಟ್ಟ ಶಿರುವಾರದ ಕೆರೆಗೆ ಒಂದು ಕಾಲುವೆಯನ್ನು ತೋಡಿಸಿ ಅದಕ್ಕೆ ಪ್ರತಾಪ ಬುಕ್ಕರಾಯ ಮಂಡಲದ ಕಾಲುವೆ ಎಂದು ಹೆಸರಿಟ್ಟನು. ಸಿಂಗಯ್ಯಭಟ್ಟನು ಜಲಸೂತ್ರವೆಂದು ಹೆಸರು ಪಡೆದಿರುವ ಹಿನ್ನೆಲೆಯಲ್ಲಿ ಆತನು ಬಹುಶಃ ಕೆರೆಗಳ ನಿರ್ಮಾಣ, ಬಾವಿಗಳ ನಿರ್ಮಾಣ ಮುಂತಾದ ವಿದ್ಯೆಯಲ್ಲಿ ಪರಿಣಿತನಾಗಿದ್ದನೆಂದು ಖಚಿತಪಡಿಸುತ್ತದೆ.

ಮದ್ದೂರು ತಾಲ್ಲೂಕಿನ ಅರುವನಹಳ್ಳಿಯ ಕ್ರಿ.ಶ 1381ರ ಶಾಸನವು ಭಟ್ಟರ ಬಾಚೀಯಪ್ಪ ಬುಕ್ಕರಾಯ ಸಮುದ್ರ ಕೀರ್ತಿ ಸಮುದ್ರ, ಮಾಳುವೆಯ ಕೆರೆ, ನಾಗವ್ವೆಯಕೆರೆ, ಭಾಚಪ್ಪನ ಕೆರೆ ಮುಂತಾದ ಕೆರೆಗಳನ್ನು ನಿರ್ಮಿಸಿದನೆಂದು ತಿಳಿಸುತ್ತದೆ. ಭಟ್ಟರ ಭಾಚಿಯಪ್ಪನ ಬುಕ್ಕರಾಯನ ಹೆಸರಿನಲ್ಲಿ ಒಂದು ಕೆರೆಯನ್ನು ತನ್ನ ಕೀರ್ತಿಗಾಗಿ ಹಾಗೂ ತನ್ನ ತಂದೆ–

ತಾಯಿಯ ಹೆಸರಿನಲ್ಲಿ 2 ಕೆರೆ ಹಾಗೂ ತನ್ನ ಹೆಸರಿನಲ್ಲಿ ಒಂದು ಕೆರೆಯನ್ನು ನಿರ್ಮಿಸಿದ್ದನೆಂದು ತಿಳಿದುಬರುತ್ತದೆ.[135] ಈ ಕೆರೆಗಳ ಸುತ್ತಲು ಮರಗಳನ್ನು ನೆಡಿಸಿ ಅವುಗಳು ದೀರ್ಘಕಾಲ ಹೂಳು ತುಂಬಿರುವಂತೆ ವ್ಯವಸ್ಥೆ ಮಾಡಿದನು.

ಕ್ರಿ.ಶ 1397ರ ಕೋಲಾರ ಜಿಲ್ಲೆ ಬಾಗೇಪಲ್ಲಿ ತಾಲ್ಲೋಕಿನ ತಿರುಮಣಿ ಶಾಸನ ಗ್ರಾಮದ ಮುಂದೆ ನಾಲೆಯನ್ನು ಹರಿಸುವಂತೆ ಬುಕ್ಕರಾಯನ ಮೊಮ್ಮಗಳು ಚೋಮ್ಮದೇವಿ ನಿರ್ವಹಿಸಿದಳೆಂದು ಆ ಕಾರ್ಯವನ್ನು ಪೆದ್ದಬಾಯಿಯರ ವೋಜ ಹಾಗ ಚಿನ್ನಬಾಯಿಯ ವೋಜ ಎಂಬ ಇಬ್ಬರು ಕಲ್ಲುಕುಟಿಕರಿಗೆ ವಹಿಸಲಾಯಿತು.[136] ಅವರು ನಿರ್ಮಿಸಿದ ನಾಲೆಯಿಂದ ಕೆರೆ ತುಂಬಿತು. ಕೆರೆಗೆ ತೂಬನ್ನು ರಚಿಸಲಾಯಿತು. ಶಾಸನವು ಷರತ್ತಿನೊಂದಿಗೆ ನಾಲೆ ನಿರ್ಮಾಣ ಕಾರ್ಯವನ್ನು ನೀಡಿದ್ದಿತು. ಅದರಿಂದ ಯಶಸ್ವಿಯಾಗಿ ಕೆರೆ ತುಂಬಿದ್ದರಿಂದ ವಿನಿಯೋಗವಾದ ಹಣವನ್ನು ಹಿಂದಿರುಗಿಸುವ ಪ್ರಮೇಯ ಕಲ್ಲು ಕುಟಿಕರಿಗೆ ಒದಗಿ ಬರಲಿಲ್ಲ. ಈ ನಾಲೆಯು ತಿರುಮಣಿ ಕೆರೆಯನ್ನು ತುಂಬಿಸಿತ್ತೆಂದು ತಿಳಿದು ಬರುತ್ತದೆ.

ಚಿತ್ರದುರ್ಗ ಜಿಲ್ಲೆಯ ಹರಿಹರದ ಹರಿಹರೇಶ್ವರ ದೇವಸ್ಥಾನದ ಎರಡು ಶಾಸನಗಳು ನಮ್ಮ ಗಮನವನ್ನು ಸೆಳೆಯುತ್ತದೆ. ಹರಿಹರೇಶ್ವರ ದೇವಾಲಯದ ಅಧಿಕಾರಿಗಳು ಮತ್ತು ಮಹಾಜನಗಳು ಒಪ್ಪಂದ ಒಂದಕ್ಕೆ ಬಂದು, ತುಂಗಭದ್ರನದಿಯ ಉಪನದಿಯಾಗಿ ಹರಿದ್ರಾನದಿಗೆ ಒಡ್ಡನೂ ನಿರ್ಮಿಸುವ ಯೋಜನೆಯನ್ನು ರೂಪಿಸಿದರು. ಈ ಜಲಾಶಯದ ನೀರನ್ನು ಉಪಯೋಗಿಸಿಕೊಳ್ಳಲು 8 ಕಿ.ಮೀ ನಾಲೆಯನ್ನು ರಚಿಸಲಾಯಿತು. ಕ್ರಿ.ಶ 1410ರಲ್ಲಿ ಒಂದನೇ ದೇವರಾಯನ ಅನುಮತಿಯೊಂದಿಗೆ ಈ ಯೋಜನೆ ಪೂರ್ಣಗೊಂಡಿತು.[137] ಎರಡನೇ ಶಾಸನ ಕ್ರಿ.ಶ 1424ರಲ್ಲಿ ಒಡ್ಡು ಒಡೆದು ಮಹಾಜನಗಳು ಮತ್ತು ಗ್ರಾಮದ ಜನ ಸಂಕಷ್ಟಕ್ಕೆ ಗುರಿಯಾದಾಗ ಮಂತ್ರಿ ಚಾಮರಾಜ ಒಡ್ಡಿನ ರಿಪೇರಿಗಾಗಿ ಹಣವನ್ನು ಮುಂಗಡವಾಗಿ ಕೊಟ್ಟು ನಾಲೆಯನ್ನು ಕಟ್ಟಿದ ಗುಳ್ಳಪ್ಪನೇ ರೀಪೇರಿ ಮಾಡಿದನೆಂದು ದಾಖಲಿಸುತ್ತದೆ. ಇಂದು ಆ ಕಟ್ಟೆಯಾಗಲಿ, ನಾಲೆಯನ್ನಾಗಲಿ ನೋಡಲು ಸಾಧ್ಯವಿಲ್ಲ. ಪ್ರಾಯಶಃ ಕಟ್ಟೆ ಕಾಲ ನಂತರದಲ್ಲಿ ನೀರಿನ ಸೆಳೆತಕ್ಕೆ ಆಹುತಿಯಾಗಿರ ಬೇಕು.

ಮುಳಬಾಗಿಲು ತಾಲೂಕಿನ ವಣಿಗಾನಹಳ್ಳಿ ಶಾಸನ ಕೆರೆಯನ್ನು ನಿರ್ಮಿಸಿದಾತನಿಗೆ ಕಟ್ಟು ಗುತ್ತಿಗೆಯಾಗಿ ಅಥವಾ ದಶ ಬಂಧವಾಗಿ ಅಥವಾ ಕಟ್ಟು ಕೊಡುಗೆಯಾಗಿ ಭೂಮಿಯನ್ನು ನೀಡುತ್ತಿದ್ದರು ಇದು ಕಾಲದಿಂದ ಕಾಲಕ್ಕೆ ವ್ಯತ್ಯಾಸವಾಗುತ್ತಿತ್ತು. ಈ ಬಗೆಯ

ವಿವರಗಳನ್ನೊಳಗೊಂಡ ಶಾಸನ ಮುಳಬಾಗಿಲು ತಾಲೂಕಿನ ವಣಿಗಾನ ಹಳ್ಳಿಯ ಕ್ರಿ.ಶ 1407ರ ಶಾಸನವಾಗಿದೆ.[138]

ಗೌರಿ ಗುಡಿಯ ಪುರೋಹಿತ ಮಂಗರಸನು ಕೆರೆಯನ್ನು ನಿರ್ಮಿಸಿದ್ದುದರಿಂದ ಆತನಿಗೆ ಪ್ರಜೆಗಳು ಕೆರೆಯ ಕೆಳಗೆ ಹಾಗುವ ಉತ್ಪತ್ತಿಯಲ್ಲಿ $^{2}/_{10}$ ಭಾಗವನ್ನು ನೀಡಿರುವುದಾಗಿ ದಾಖಲಿಸಿದೆ.[139]

ಮುಳಬಾಗಿಲು ತಾಲೂಕು ಕತಾರಿನಹಳ್ಳಿಯ ಒಡೆದು ಹೋದ ಕೆರೆಯನ್ನು ದೇವಾಲಯದ ಅರ್ಚಕರು ಮತ್ತು ಬ್ರಾಹ್ಮಣರು ಕಟ್ಟೆಯ ಹತ್ತಿರದ ಭೂಮಿಯನ್ನು ಷರತ್ತಿನೊಂದಿಗೆ ಪಡೆದುಕೊಳ್ಳತ್ತಾರೆ, ಆ ಷರತ್ತೇನೆಂದರೆ ನಿರ್ಮಿತವಾದ ಕೆರೆಯ ಕೆಳಗಿನ ಅಚ್ಚುಕಟ್ಟಿನ ಭಾಗವನ್ನು ನಾಲ್ಕು ಭಾಗವನ್ನಾಗಿಮಾಡಿ ಒಂದು ಭಾಗವನ್ನು ದೇವಾಲಯಕ್ಕೆ ಉಳದ 3 ಭಾಗವನ್ನು ಮಹಾಜನರಿಗೆ ನೀಡುವುದಾಗಿ ಒಪ್ಪಿಕೊಳ್ಳುತ್ತಾರೆ.[140]

ಕ್ರಿ.ಶ 1417ರ ಗುಂಡ್ಲುಪೇಟೆ ತಾಲೂಕಿನ ತ್ರಯಂಬಕಪುರದ ಶಾಸನ 8 ಕೆರೆಗಳನ್ನು ಉಲ್ಲೇಖಿಸುತ್ತದೆ ಅವುಳೆಂದರೆ ಹಾಗಳಕೋಟೆ, ಮಾರಗ, ಅರೆಕೊಠಾರ, ಅರಕಲವಾಡಿ, ನರಸಮಂಗಳ, ರಾಘವಪುರ, ಎಡತಲೆ, ಕೆಲಸೂರು, ವೊಡೆಯಾಣ ಮತ್ತು ಸಗಡಿ.[141]

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲದ ಶಿವಗಂಗೆಯ ಬೆಟ್ಟದಿಂದ ಪ್ರಾರಂಭವಾಗುವ ಎಣ್ಣೆ ಹೊಳೆಯು ವಿಜಯನಗರ ಕಾಲದಲ್ಲಿ ಇಲ್ಲಿನ ಮಾಂಡಲೀಕರಾಗಿದ್ದ ಒಂದನೇ ಕೆಂಪೇಗೌಡರು ನಿರ್ಮಿಸಿದ ಸರಪಳಿ ಕಾಲುವೆ ಕೆರೆಗಳ ನಿರ್ಮಾಣವನ್ನು ಎಂ.ಜಿ. ಮಂಜುನಾಥ ತಮ್ಮ ಲೇಖನದಲ್ಲಿ ಆಧಾರ ಸಹಿತವಾಗಿ ನಿರೂಪಿಸಿದ್ದಾರೆ.[142] ಒಂದನೇ ಕೆಂಪೇಗೌಡನು ಶಿವಗಂಗೆ ಬೆಟ್ಟದ ಮಳೆ ನೀರನ್ನು ವ್ಯವಸ್ಥಿತ ಕಾಲುವೆಗಳ ಮೂಲಕ ಬೆಟ್ಟದ ಬುಡಕ್ಕೆ ತಂದು ಬೆಟ್ಟದ ಮೇಲೆಯೇ ಭೂಗರ್ಭ ಕಾಲುವೆಗಳ ಮೂಲಕ ನೀರನ್ನು ತಾವರೆ ಕಟ್ಟೆ ಕೆರೆಗೆ ಸೇರುವಂತೆ ಮಾಡಿದ್ದಾರೆ, ಅದಾದ ನಂತರ ತಾವರೆಕಟ್ಟೆ ಕೋಡಿಯ ನೀರು ಚೋಗಿ ಕಟ್ಟೆಗೆ ಸೇರುತ್ತದೆ. ಇದರ ಕೋಡಿಯ ನೀರು ಎಣ್ಣೆಹೊಳೆ ಪ್ರವಾಹಕ್ಕೆ ಸೇರುತ್ತದೆ. ಮುಂದುವರಿದು ದೇವರ ಕೆರೆಗೆ ಸೇರಿ ಅದರ ಹೆಚ್ಚುವರಿ ನೀರು ದೊಡ್ಡ ಮಸ್ಕಲ್ ಕೆರೆಗೆ ಸೇರುತ್ತದೆ. ದೊಡ್ಡ ಮಸ್ಕಲ್ ಕೆರೆ ನೀರು ತುಂಬಿದ ನಂತರ ಹೆಬ್ಬೂರು ಕೆರೆ ಆನಂತರ ಕುಣಿಗಲ್ ಕೆರೆಗೆ ಈ ಧಾರೆ ಸೇರುತ್ತದೆ.

ಈ ಕೆರೆಗಳಲ್ಲದೆ ಮಲ್ಲಿಸಂದ್ರದ ಕೆರೆಯನ್ನು ಮಹಾಪ್ರಧಾನ ಮಲ್ಲಿಯ ಅರಸ ನಿರ್ಮಿಸಿದನು.[143] ಮಾಲೂರು ತಾಲೂಕಿನ ಟೇಕಲ್ ನಾಯಕರ್ ಕೆರೆ [144] ಚಿಕ್ಕ ಬಳ್ಳಾಪುರ ತಾಲೂಕಿನ ಎಲಗನ ಹಳ್ಳಿಯ ಪೆರಿಯ ಸಮುದ್ರ.[145] ಕೋಲಾರ ತಾಲೂಕು ಅಜ್ಜಟ್ಟನ ಹಳ್ಳಿಯ ಧನ ಪಾವನಿ ದೇವಿಕೆರೆ,[146] ಬಾಗೇಪಲ್ಲಿ ತಾಲೂಕು ಮಗಳ ಬಲೆಯಾ ಕೆರೆ[147] ಗೌರಿ ಬಿದನೂರು ತಾಲೂಕು ಹಂಪಸಮುದ್ರ ಕೆರೆ,[148] ಶಿವಮೊಗ್ಗ ತಾಲೂಕಿನ ಬೆಂಕಿಪುರದ ಕೆರೆ[149] ಕ್ರಿ.ಶ.1648ರ ದೊಡ್ಡೇರಿಯ ಕೆರೆ ಮತ್ತು ಶಿಕಾರಿಪುರ ತಾಲೂಕು ಬಂದಳಿಕೆಯ ಕೆರೆ,[150] ಕಡೂರು ತಾಲೂಕಿನ ಕೆರೆ ಸಂತೆಯ ಕೆರೆ.[151] ಕೆರೆ ಸಂತತಿಯ ವಿಷ್ಣು ಸಮುದ್ರದ ಕೆರೆ.[152] ಕಡೂರು ತಾಲೂಕಿನ ಕಂಚಿಗಲ್ಲಿನ ಕೆರೆ.[153] ಚಿಕ್ಕಮಗಳೂರು ತಾಲೂಕಿನ ಕೋಟೆ ಊರಿನ ಕೆರೆ[154]

ಅರಸೀಕೆರೆ ತಾಲೂಕಿನ ಗಂಡಸಿಯ ಕೆರೆ[155] ಅರಸಿಕೆರೆ ಭಾಗವಾಳನ ಕೆರೆ.[156] ಹಾಸನ ತಾಲೂಕಿನ ಬ್ಯಾಡರಹಳ್ಳಿಯ ಮಾಚ ಸಮುದ್ರ.[157] ಅರಸಿಕೆರೆ ಗಂಡಸಿಯ ಮಂಗ ಸಮುದ್ರ[158] ಜಾವಗಲ್‌ನ ಜಯರ ಸಮುದ್ರ[159] ಹೆಚ್.ಡಿ.ಕೋಟೆ ತಾಲೂಕಿನ ಕ್ಯಾತನ ಹಳ್ಳಿಯ ಹೊಸಕೆರೆ[160] ದೇವಲಿಂಗ ಸಮುದ್ರ[161] ಹುಣಸೂರು ತಾಲೋಕು ತೊಂಡವಾಳು ಕೆರೆ.[162] ಟಿ.ನರಸೀಪುರದ ವ್ಯಾಸರಾಯ ಮಠದ ಕೆರೆ[163] ಮಳವಳ್ಳಿ ತಾಲೂಕಿನ ಕಲ್ಕುಣಿಯ ಬಾಲ ಸಮುದ್ರ ಕೆರೆ[164] ಶ್ರೀರಂಗಪಟ್ಟಣದ ಕಾರ್ಯ ಬಾಲ ಸಮುದ್ರ ಕೆರೆ[165] ಮಂಡ್ಯ ತಾಲೂಕು ಕಿರುಗೂರು ಕೆರೆ[166] ನಾಗಮಂಗಲ ತಾಲೂಕು ದೊಂದೆಮಾದ ಹಳ್ಳಿಯ ಮಾಹಿದೇವಿಯ ಕೆರೆ.[167] ನಾಗಮಂಗಲದ ಕೆರೆಗಳಾದ ಹಿರಿಯ ಕೆರೆ, ಹಂಪೆ ಅರಸನ ಕೊಳ, ಸೂಳೆಕೆರೆ, ಅಮ್ಮನಕೆರೆ, ಚಕ್ರಕೀರ್ತಿ ಕೆರೆಗಳು ವಿಜಯನಗರ ಅರಸರ ಕಾಲದಲ್ಲಿ ಪುನಃ ನಿರ್ಮಾಣವಾದವೆಂದು ತಿಳಿದುಬರುತ್ತದೆ. (ನೋಡಿ ಚಿತ್ರ 21-25) ನಾಗಮಂಗಲದ ಆಡಳಿತಕ್ಕೆ ಒಳಗಾಗಿದ್ದ ಮೇಲುಕೋಟೆಯಲ್ಲಿ ವಿಜಯನಗರದ ಅರಸರ ಕಾಲದಲ್ಲಿ ವಿಶಾಲವಾದ ಕಲ್ಯಾಣಿಗಳು, ಕೊಳಗಳು ನೀರಿನ ಆಶ್ರಯಗಳಾಗಿ ನಿರ್ಮಾಣವಾದವು. (ನೋಡಿ ಚಿತ್ರ 26-29) ನಾಗಮಂಗಲ ತಾಲೋಕು ಕೆಳಗೆರೆಯ ವರದರಾಜ ಸಮುದ್ರ[168] ನಾಗಮಂಗಲ ತಾಲೂಕು ರಾಮಚಂದ್ರಪುರದ ಕೆರೆ[169] ಮೇಲುಕೋಟೆ ಪುರದ ಹೊಸಕೆರೆ[170] ತುಮಕೂರು ಜಿಲ್ಲೆಯ ಪಾವಗಡ ತಾಲೋಕಿನ ವಿರುಪ ಸಮುದ್ರ[171] ಗುಬ್ಬಿ ತಾಲೂಕು ಕಡಬದ

ಮಾದನಾಯಕನ ಕೆರೆ.[172] ತುಮಕೂರು ತಾಲೂಕಿನ ರಾಯದುರ್ಗಕೆರೆ[173] ಗುಬ್ಬಿ ತಾಲೂಕಿನ ಸಂಪಿಗೆಯ ಹಿರಿಯ ಕೆರೆ.[174]

ಗುಬ್ಬಿ ತಾಲೂಕಿನ ಮಾದೇನಾಯಕನ ಕೆರೆ[175] ಪಾವಗಡ ತಾಲೂಕು ನಿಡುಗಲ್‌ನ ಲಕ್ಷ್ಮೀಕೆರೆ[176] ತಿಪಟೂರು ತಾಲೂಕಿನ ಕೋಡಿಹಳ್ಳಿಯ ಕೆರೆ[177] ಮಧುಗಿರಿ ತಾಲೂಕಿನ ರಾಮತೆವೊಳಲು ಕೆರೆ[178] ಶಿರಾ ತಾಲೂಕಿನ ಚಿಕ್ಕಾಡೆಯ ಕೆರೆ[179] ಗುಬ್ಬಿ ತಾಲೂಕಿನ ದಂಡಿನ ಶಿವರದ ಕೆರೆ ಬೆಂಗಳೂರು ನಗರ ಜಿಲ್ಲೆಯಲ್ಲಿ ಕಂಡುಬರುವ ವಿಜಯನಗರದ ಕಾಲದಲ್ಲಿ ನಿರ್ಮಾಣಗೊಂಡ ಕೆರಗಳೆಂದರೆ. ಬನ್ನೇರುಘಟ್ಟ ಮಾಯಸಂದ್ರ, ಚಿಂತಲ ಮಡಿವಾಳ, ಆನೆಕಲ್, ಸರ್ಜಾಪುರ, ಬೆತ್ತನಗೆರೆ, ಬಾಗಿವಾರದ ಕೆರೆ, ಹಿರಿಯಕೆರೆ, ದೊಡ್ಡಕೆರೆ, ಬೆಂಗಳೂರು ಉತ್ತರ ತಾಲೂಕಿನ ಶೆಟ್ಟಿಹಳ್ಳಿಕೆರೆ, ಕೊಡುಗೆಹಳ್ಳಿಕೆರೆ, ಗೊಂಗಡಿಪುರದಕೆರೆ, ಹೆಸರುಘಟ್ಟ, ಹೆಬ್ಬಾಳದ ಕೆರೆಗಳು, ಅಲ್ಲದೆ ಹೊನ್ನ ಸಮುದ್ರದ ಕೆರೆ, ಶಿವನ ಸಮುದ್ರದ ಕೆರೆ, ಕೆಂಪ ಬಸವಣ್ಣ ಕೆರೆ, ಹಬ್ಬಾಳು ಹಿರಿಯ ಕೆರೆ, ರೂಪಸಮುದ್ರ, ಅಲ್ಲದೆ, ಬೆಂಗಳೂರು ಪೂರ್ವ ತಾಲೂಕಿನ ಜ್ಯೋತಿಪುರ ಗುಬ್ಬಿ ಹೊಸಳ್ಳಿ ಮತ್ತು ದೊಮ್ಮಲೂರಿನ ಕೆರೆಗಳು ಅಲ್ಲದ ಚೊಕ್ಕನಾದಸಾಮಿಯ ಹಿರಿಯಕೆರೆ, ಬಾಳೆಯಕೆರೆ ಮುಂತಾದ ಕೆರೆಗಳ ಉಲ್ಲೇಖಿಸಲ್ಪಟ್ಟಿವೆ. ಬೆಂಗಳೂರು ನಗರ ಪರಿಸರದ ಕೆರೆಗಳಲ್ಲಿ ಕಲ್ಕೆರೆಯ ಕೆರೆ, ಬೇಗೂರಿನ ಕೆರೆ, ಜಾಲಹಳ್ಳಿಯ ಕೆರೆ, ಚಿನ್ನಮಂಗಲದ ಕೆರೆ, ಹೆಸರುಘಟ್ಟದಕೆರೆ, ಶಿವಸಂದ್ರದ ಕೆರೆ, ಕೆಂಪಾಬೂದಿಕೆರೆ, ಕಾರಂಜಿಯ ಕೆರೆ, ಕಾಡುಗೋಡಿಯ ಕೆರೆ ಮುಂತಾದ ಕೆರೆಗಳು ಉಲ್ಲೇಖಗೊಂಡಿರುವುದನ್ನು ಕಾಣಬಹುದು.[180]

ವಿಜಯನಗರದ ಅರಸರು ನೇರವಾಗಿ ಕೆರೆ ನಿರ್ಮಾಣದಲ್ಲಿ ತೊಡಗಿ ಕೊಂಡಿದುದನ್ನು ಮತ್ತು ಅರಸು ಮನೆತನದ ಇತರ ವ್ಯಕ್ತಿಗಳು ದಂಡನಾಯಕರು ನಗರದ ಶ್ರೇಷ್ಠಿಗಳು ಮಹಾಜನಗರು ದೇವಾಲಯದ ಆಡಳಿತ ವರ್ಗದ ಅಧಿಕಾರಿಗಳು ಸಮಾಜದ ಎಲ್ಲ ವರ್ಗದ ಜನ, ದಕ್ಷಿಣ ಕರ್ನಾಟಕದ ಕೆರೆಗಳನ್ನು ಇತಿಹಾಸ ಕಾಲಘಟ್ಟದ ಪ್ರಾರಂಭದಿಂದ ನಮ್ಮ ಅಧ್ಯಯನ ಅಂತ್ಯವರೆಗೆ ನಿರ್ಮಾಣ ಮಾಡಿಕೊಂಡು ಬಂದಿರುವುದನ್ನು ದಾಖಲಿಸಿದೆ. ಇದು ಸಮಾಜದ ಎಲ್ಲಾ ವರ್ಗದ ಜನರು ಕೆರೆಯ ನಿರ್ಮಾಣದಲ್ಲಿ ತೊಡಗಿಕೊಳ್ಳುತ್ತಿದ್ದುದನ್ನು ದಾಖಲಿಸುತ್ತದೆ. ಈ ಎಲ್ಲಾ ಚಟುವಟಿಕೆಗಳ ನಮ್ಮನ್ನು ಕೆರೆಯ ಇತಿಹಾಸವನ್ನು ಅಧ್ಯಯನ

ಮಾಡಲು ಸಾಕಷ್ಟು ಸಾಮಗ್ರಿಯನ್ನು ನಮ್ಮ ಮುಂದೆ ಇಡುತ್ತವೆ. ಹಾಗಾಗಿ ಈ ಎಲ್ಲಾ ಕೆರೆಗಳ ರಚನೆಯ ಉದ್ದೇಶ ಮತ್ತು ಅದರಲ್ಲಿ ಭಾಗಿಗಳಾದ ವ್ಯಕ್ತಿಗಳ ಮತ್ತು ಇತರ ವಿವರಗಳನ್ನು ಮುಂದಿನ ಅಧ್ಯಾಯದಲ್ಲಿ ನೀಡಲಾಗಿದೆ.

## ಕೆರೆ ನಿರ್ವಹಣೆಗೆ ಸಂಬಂಧಿಸಿದ ಮಾಹಿತಿ

ನೀರಾವರಿ ವ್ಯವಸ್ಥೆ ನಿರ್ಮಾಣದಷ್ಟೆ ಪ್ರಾಮುಖ್ಯತೆ ದುರಸ್ತಿ ಮತ್ತು ನಿರ್ವಹಣಾ ಕಾರ್ಯಗಳನ್ನು ಹೊಂದಿದ್ದವು. ನಂಜನಗೂಡು ತಾಲೂಕಿನ ಕಾರ್ಯದ 968ರ ಶಾಸನ ನಾಗವರ್ಮ ನಿರ್ಮಿಸಿದ ದೇವಿಗೆರೆ ಮತ್ತು ಪಿರಿಯಗೆರೆಗಳ ನಿರ್ವಹಣೆಗಾಗಿ 4 ಖಂಡುಗ 'ಬಿಟ್ಟುವಟ್ಟು' ನೀಡಿರುವುದು ದಾಖಲಾಗಿದೆ. ಬೆಳನೂರಿನ 10ನೇ ಶತಮಾನದ ಒಂದು ಶಾಸನದಲ್ಲಿ ಭೂತುಗಕೊಂಗಣಿ ನಿರ್ಮಿಸಿದ ಕೆರೆಯ ನಿರ್ವಹಣೆಗಾಗಿ 10 ಖಂಡುಗ ಭೂಮಿಯನ್ನು 'ಒತ್ತುವಟ್ಟು' ನೀಡಿದ್ದನ್ನು ದಾಖಲಿಸಲಾಗಿದೆ. ಸೋಮನಾಥಪುರದ ಕ್ರಿ.ಶ 1326ರ ಶಾಸನದಲ್ಲಿ ಒಂದು ಒಡಂಬಡಿಕೆ ಏರ್ಪಟ್ಟು, ಮಹಾಜನರು ವಾರ್ಷಿಕ 6 ಗದ್ಯಾಣ ಹಣವನ್ನು ಕೆರೆ ಹಾಗೂ ನಾಲೆಗಳ ನಿರ್ವಹಣೆಗಾಗಿ ನೀಡಬೇಕು ಎಂದು ದಾಖಲಿಸಿದೆ. ಪಿರಿಯಾಪಟ್ಟಣ ತಾಲೂಕಿನ ತೊರಗಲ್ಲು ಶಾಸನ (ಕ್ರಿ.ಶ 1459ರ) ದೇವಾಲಯದ ಆವರಣದಲ್ಲಿ ಅರವಟ್ಟಿಗೆಯ ನಿರ್ವಹಣೆಗಾಗಿ ಹುವೇಯನಾಯಕ ಎಂಬುವವನು ಹಲವು ತರಿ, ಖುಷ್ಕಿ, ಭೂಮಿಗಳನ್ನಲ್ಲದೆ ಮನೆ ಹಾಗೂ ತೋಟವನ್ನು ನೀಡಿರುವುದು ದಾಖಲಾಗಿದೆ. ಮೈಸೂರ ಜಿಲ್ಲೆಯ ನೀರಾವರಿ ಚೌಕಟ್ಟಿಗೆ ಹಲವು ಕೊಳ-ಬಾವಿಗಳು ಕೊಡುಗೆ ರೂಪದಲ್ಲಿ ನಿರ್ಮಾಣಗೊಂಡಿರುವುದು ಹಲವು ಶಾಸನಗಳಲ್ಲಿ ಪ್ರಸ್ತಾಪಗೊಂಡಿದೆ.

ನಂಜನಗೂಡು ತಾಲ್ಲೂಕಿನ ದೊಡ್ಡಹೊನ್ನಿನನ ಕ್ರಿ.ಶ 1296ರ ಶಾಸನದಲ್ಲಿ ಹೂ ಬೆಳೆಯಲು ಬಾವಿ ತೊಡಿಸಿ, ತೋಟ ನಿರ್ಮಿಸಿದ್ದನ್ನು ದಾಖಲಿಸಿದೆ. ಪಿರಿಯಾಪಟ್ಟಣ ತಾಲೂಕಿನಲ್ಲಿ 17ನೇ ಶತಮಾನದ ಶಾಸನದಲ್ಲಿ ಬೆಟ್ಟದಪುರ ಸೇನಭೋವ ನಂಜಪ್ಪಯ್ಯ ಬಾವಿ ನಿರ್ಮಿಸಿದ್ದನ್ನು ದಾಖಲಿಸಿದೆ.[181]

ಕೆರೆಗಳ ನಿರ್ಮಾಣದಷ್ಟೆ ಆದ್ಯತೆ ನಿರ್ವಹಣೆಗೂ ದೊರಕಿರುವುದಕ್ಕೆ ಹಲವಾರು ಶಾಸನಗಳೂ ಬೆಳಕು ಚೆಲ್ಲುತ್ತಿವೆ. ಶಿವಮೊಗ್ಗ ತಾಲೂಕಿನ ತಿನ್ನದಪುರದ ಶಾಸನದಲ್ಲಿ

ಕೆರೆಯಲ್ಲಿ ಒಂದು ಆಳಿನ ಎತ್ತರದ ನೀರು ನಿಲ್ಲಬೇಕು ಮತ್ತು ಆ ಪ್ರಮಾಣದ ನೀರು ತಿನ್ನಪುರಕ್ಕೆ ಸೇರಿರುತ್ತೆ ಎಂದು ತಿಳಿಸುತ್ತದೆ.[182] ಪ್ರಾಯಶಃ ಅಚ್ಚುಕಟ್ಟುದಾರರಲ್ಲಿ ನೀರಿನ ಹಂಚಿಕೆ ಕುರಿತಂತೆ ಒಡಂಬಡಿಕೆಯಾಗಿರಬೇಕು ಎಂದು ಅಭಿಪ್ರಾಯಪಡಬಹುದಾಗಿದೆ. ಒಂದು ಊರಿನ ಕೆರೆಯ ನೀರನ್ನು ಮತ್ತೊಂದು ಊರಿನ ಹೊಲಗಳಿಗೆ ಹರಿಸಬೇಕಾದಲ್ಲಿ ನಾಡಿನ ಎಲ್ಲಾ ಪ್ರಭು ಗಾವುಂಡರುಗಳ ಒಪ್ಪಿಗೆ ಪಡೆಯಬೇಕಾಗಿದ್ದಿತ್ತು. ಶಿಕಾರಿಪುರ ತಾಲೂಕಿನ ಶಾಸನದಲ್ಲಿ ಶ್ರೀ ಕೃಷ್ಣದೇವರಾಯನ ಕಾಲದ ಅತ್ಯಂತ ಹಳೆಯ ಶಾಸನದಲ್ಲಿ ಚಂದ್ರಗುತ್ತಿಯನು ಅಮರಂ ಅಥವಾ ಉಂಬಳಿಯಾಗಿ ನೀಡುವಾಗ ಒಂದು ಕರಾರನ್ನು ವಿಧಿಸಲಾಗಿದೆ. ಅದರಂತೆ ಸ್ಥಳೀಯ ಕೆರೆಯಿಂದ ಪ್ರತಿವರ್ಷವೂ ಹೂಳು ತೆಗೆಯಬೇಕು. ಈ ಮುಖ್ಯ ಕಾರ್ಯದ ಹೊಣೆ ಗೌಡ ಸೇನಭೋವ ಮತ್ತು ಗ್ರಾಮಸ್ಥರ ಮೇಲೆ ಇರತಕ್ಕದ್ದು ಎಂದು ನಿರ್ವಹಣೆಯ ಜವಾಬ್ದಾರಿಯನ್ನು ಸ್ಥಳೀಯ ಸಮುದಾಯಗಳಿಗೆ ಹೊಣೆ ಹಾಕಿರುವುದು ಮಹತ್ವವೆನಿಸುತ್ತದೆ.[183]

ಸೊರಬ ತಾಲೂಕಿನ ಹಿರೇಚಾಟದ ಕ್ರಿ.ಶ. 1221 ರ ಶಾಸನ ತಾವತಿಗೌಡರು ದೇವಾಲಯ ಜೀರ್ಣೋದ್ಧಾರ ಮಾಡುವುದರೊಂದಿಗೆ ಕೆರೆಯನ್ನು ಆಗಲಿಸಿದರು ಎಂದು ಉಲ್ಲೇಖವಿದೆ. ಇದೇ ತಾಲೂಕಿನ ಚಿಕ್ಕಚವುಟದ ಕ್ರಿ.ಶ. 1444ರ ಶಾಸನದಲ್ಲಿ ಬೊಮ್ಮಡ ಮತ್ತಿತರರು ಕೆರೆಹರಿವಿಗೆ ತೂಬನ್ನು ನಿರ್ಮಿಸಿದರು ಎಂದು ದಾಖಲಿಸಿದೆ. ಶಿಕಾರಿಪುರ ತಾಲೂಕಿನ ಸಾಲೂರಿನ ಕ್ರಿ.ಶ 903ರ ಶಾಸನ ಕೆರೆಯನ್ನು ಕಟ್ಟಿಸಿರುವುದನ್ನು ಪ್ರಸ್ತಾಪಿಸುತ್ತಾ, ನಿರ್ವಹಣೆಗಾಗಿ, ನೀರಾವರಿ ಶುಲ್ಕದ ಆದಾಯವನ್ನು ನೀಡುತ್ತಾ, ನೀರಾವರಿ ಶುಲ್ಕದ ಪ್ರಮಾಣವನ್ನು ಸಹ ನಿಗದಿಪಡಿಸುತ್ತದೆ. ಅದರಂತೆ ಮತ್ತರ್ ಭೂಮಿಗೆ ಒಂದು ಖಂಡುಗ ಎಂದು ನಿಗದಿಪಡಿಸುತ್ತದೆ.[184]

ಶಿಕಾರಿಪುರ ತಾಲೂಕಿನ ಹೀರೇಚಾಟದ ಕ್ರಿ.ಶ 1221 ರ ಶಾಸನದಲ್ಲಿ ಪಾವತಿಗೌಡರು ದೇವಾಲಯ ಜೀರ್ಣೋದ್ಧಾರ ಮಾಡುವುದರೊಂದಿಗೆ ಕೆರೆಯನ್ನು ಅಗಲಿಸಿದರು. ಇದೇ ತಾಲೂಕಿನ ಚಿಕ್ಕಚವುಟದ ಕ್ರಿ.ಶ 1444ರ ಶಾಸನದಲ್ಲಿ ಬೊಮ್ಮಡ ಮತ್ತಿತರರು ರೆಹರಿವಗೆ ತೂಬನ್ನು ನಿರ್ಮಿಸಿದರು ಎಂದು ದಾಖಲಿಸಿದೆ. ಶಿಕಾರಿಪುರ ತಾಲ್ಲೂಕಿನ ಕ್ರಿ.ಶ 903ರ

ಶಾಸನ ಕೆರೆಯನ್ನು ಕಟ್ಟಿಸಿರುವುದನ್ನು ಪ್ರಸ್ತಾಪಿಸುತ್ತಾ. ನಿರ್ವಹಣೆಗಾಗಿ, ನೀರಾವರಿ ಶುಲ್ಕದ ಪ್ರಮಾಣವನ್ನು ಸಹ ನಿಗದಿಪಡಿಸುತ್ತದೆ. ಅದರಂತೆ ಮತ್ತರ್ ಭೂಮಿಗೆ ಒಂದು ಖಂಡುಗ ಎಂದು ನಿಗದಿಪಡಿಸುತ್ತದೆ.[185]

ಶಿಕಾರಿಪುರ ತಾಲೂಕಿನ ಬಂದಳಿಕೆಯ ಕ್ರಿ.ಶ. 1510ರ ಶಾಸನದಲ್ಲಿ ನಂಜಪ್ಪ ಒಡೆಯರ್..... ರವರ ಆದೇಶದಂತೆ...... ಶಿವಯ್ಯ ನಾಯಕನು ಪ್ರತಿವರ್ಷ ಕೆರೆಯ ಹೂಳು ತೆಗೆಂದದಕ್ಕೂ..... ಪುಣ್ಯಬರಲಿ ಎಂದು ಹಾರೈಸಿದ್ದು 1000 ಅಡಿಕೆ ಮರಗಳ ನೋಟವನ್ನು ದಾನವಾಗಿ ನೀಡಿರುವುದನ್ನು ಉಲ್ಲೇಖಿಸುತ್ತದೆ. ಇದೇ ರೀತಿ ಸೊರಬ ತಾಲೂಕಿನ ಬಂದಳಿಕೆ ನಾಗರಕೆರೆಯಲ್ಲಿರುವ ಕ್ರಿ.ಶ 1071ರ ಶಾಸನವೊಂದು ಕಾಲಕಾಲಕ್ಕೆ ಕೆರೆಯು ಹೂಳು ತೆಗೆಸುವ ಹಾಗೆ ನಂಜಪ್ಪ ಒಡೆಯರು ಅಲ್ಲಿನ ಗೌಡ ಪ್ರಜೆಗಳು ಮತ್ತು ಸೇನಭೋವರಿಗೆ ಕಟ್ಟುಮಾಡಿ, ಮೂವರು ಗೇಯುವ ಸಾವಿರ ತೋಟಸ್ಥಳವನ್ನು ದಾನವಾಗಿ ಕೊಟ್ಟಿರುವುದನ್ನು ಪ್ರಸ್ತಾಪಿಸಿದೆ. ಕೆರೆಗಳನ್ನು ಕಟ್ಟಿಸಿದಂತೆ ಅವುಗಳ ನಿರ್ವಹಣಾ ವ್ಯವಸ್ಥೆ ನೋಡಿಕೊಳ್ಳುವುದು ಅಷ್ಟೆ ಮಹತ್ವದ್ದಾಗಿತ್ತು. ಇದಕ್ಕಾಗಿ 'ಬಾರಿಕರ' ಎಂಬ ಸೇವಾವರ್ಗ ಇದ್ದಿತು. ಕುಪ್ಪಟೂರಿನ ಶಾಸನದಲ್ಲಿ 'ಬಾರಿಕರ' ಉಲ್ಲೇಖನವಿದೆ.[186]

ನೀರಾವರಿ ಕಾಮಗಾರಿಗಳ ನಿರ್ಮಾಣಕ್ಕೆ ನೀಡಿದ ಪ್ರಾಶ್ಯಸ್ತೆವನ್ನು ದುರಸ್ತಿ ಮತ್ತು ನಿರ್ವಹಣೆಗಾಗಿ ನೀಡಿರುವುದು ಕಂಡು ಬರುತ್ತದೆ. ಕೆರೆಗಳನ್ನು ಹರಿಯುವ ನದಿ ಸರಣಿಗಳಲ್ಲಿ ನಿರ್ಮಿಸಲಾಗಿತ್ತು. ಮಳೆಯ ವೈಪರೀತ್ಯಗಳಿಂದಾಗಿ, ಕೆಲವೊಮ್ಮೆ ಹೆಚ್ಚು ಮಳೆಯ ಪರಿಣಾಮವಾಗಿ ಕೆರೆ ಕಟ್ಟೆಗಳು ಒಡೆದು ಹೋಗುತ್ತಿದ್ದು ದುರಸ್ತಿ ಕಾರ್ಯಗಳು ಸ್ವಾಭಾವಿಕವಾಗಿ ಹೆಚ್ಚಾಗಿರಬೇಕು. ಪಾಲಾರ್ ನದಿಯ ಸರಣಿಯಲ್ಲಿ ಹೊಯ್ಸಳ ದಂಡನಾಯಕ ಚೊಕ್ಕಮಯ್ಯ ಒಂದಕ್ಕಿಂತ ಹೆಚ್ಚು ಬಾರಿ ಒಡೆದು ಹೋಗಿದ್ದ ಕೆರೆ ಕಟ್ಟೆಯನ್ನು ದುರಸ್ತಿಗೊಳಿಸಿದನು ಎಂದು ಶಾಸನದಲ್ಲಿ ದಾಖಲಾಗಿದೆ.[187]

ನಿರ್ಮಾಣ ಕಾರ್ಯಗಳಲ್ಲಿ ರಾಜರಿಂದ, ಸಾಮಂತರಿಂದ, ಅಧಿಕಾರಿಗಳಿಂದ ಮತ್ತು ಜಮೀನುದಾರರಿಂದ ಪ್ರಾಯೋಜಕತ್ವ ಪಡೆದಂತೆ, ದುರಸ್ತಿ ಹಾಗೂ ನಿರ್ವಹಣಾ ಕಾರ್ಯಗಳಿಗೂ ಪೋಷಕತ್ತ್ವ ಪಡೆದಿರುವುದನ್ನು ಕಂಡುಬರುತ್ತದೆ.

ಹಬ್ಬಣೀಯ ಶಾಸನದ ಪ್ರಕಾರ ಕೆರೆಯ ಏರಿ ಒಡೆದಿದ್ದು ಗ್ರಾಮದ ಗಾವುಂಡನಿಂದ ದುರಸ್ತಿಕಾರ್ಯ ನಡೆದುದುಕ್ಕಾಗಿ ನೊಳಂಬ ವಂಶದವರಿಂದ ಖಾಸಗಿ ವ್ಯಕ್ತಿಯೊಬ್ಬನಿಗೆ 'ಕಟ್ಟುಕೊಡುಗೆ' ನೀಡಲಾಗಿದೆ. ದುರಸ್ತಿಕಾರ್ಯದ ಅಗಾಧತೆಯಿಂದಾಗಿ ಒಂಟಿಯಾಗಿ ಕಾರ್ಯನಿರ್ವಹಿಸಿರುವುದು ಕಂಡು ಬಂದಿದೆ. ಮಾಲೂರು ತಾಲೂಕಿನ ಶಾಸನವೊಂದು ಕದ್ರಿಪತಿ ಮತ್ತು ದಾಸೇಗೌಡ ದುರಸ್ತಿಕಾರ್ಯದ ಅರ್ಧಕಾರ್ಯವನ್ನು ಮತ್ತು ಅಗಸ ಚಿನ್ನ ಉಳಿದ ಅರ್ಧಕಾರ್ಯವನ್ನು ಪೂರೈಸಿರುವುದನ್ನು ದಾಖಲಿಸುತ್ತದೆ.[188]

ಬಾಗೇಪಲ್ಲಿ ತಾಲೂಕಿನ ಮಿಟ್ಟೆಮರಿ ಹತ್ತಿರ ಅಂಗಂವೊಡ್ಡು ಹೊಡೆದು ಹೋಗಿದ್ದು ದುರಸ್ತಿ ಪಡಿಸುವುದಕ್ಕಾಗಿ ಮೇಕಲಬೊಮ್ಮನಿಗೆ ತರಿ ಜಮೀನಿನ $^1/_4$ ಭಾಗವನ್ನು 'ದಸವಂದ' ರೂಪದಲ್ಲಿ ನೀಡಲಾಗಿದೆ. ಸಮಾಜದ ವಿವಿಧ ವರ್ಗದ ಜಾತಿ (ಉದಾ ಗೌಡ, ಬೋವಿ, ಅಗಸ ಇತ್ಯಾದಿ) ಗಳ ಸಹಕಾರ ಮನೋಭಾವದಿಂದಾಗಿ ತಮ್ಮ ಪಾಲಿನ ಕಾಮಗಾರಿಗಳ ನಿರ್ವಹಣೆಗೆ ಸಾಮಾಜಿಕ ಬದ್ಧತೆಗೆ ಸಾಕ್ಷಿಯಾಗಿದೆ.[189]

ಕೆರೆಗಳಲ್ಲಿ ಹೂಳು ತುಂಬಿಕೊಂಡು ಕೆರೆಯ ನೀರಿನ ಪ್ರಮಾಣ ಕಡಿಮೆಯಾಗುವುದು ಕ್ರಮೇಣ ಕೆರೆಯ ಅಸ್ತಿತ್ವಕ್ಕೆ ಧಕ್ಕೆ ಬರುವುದು ಸಾಮಾನ್ಯ ಕೆರೆಗಳಿಗೆ ಹೂಳು ತುಂಬಿಕೊಳ್ಳುವುದು ಹತ್ತಿರದ ಬೊಡಂಪಲ್ಲಿ ದೊಡ್ಡಕೆರೆಯ ಹೂಳು ತೆಗೆದು, ತೂಬನ್ನು ದುರಸ್ತಿಗೊಳಿಸಿದ್ದಕ್ಕಾಗಿ, ಆವಂತಿನಾಡಿನ ಪ್ರತಿನಿಧಿಗಳಾದ ಸಿಂದುಣಿ ಮಲ್ಲ, ಹನುಮನಾಯಕ ಮತ್ತು ಕೋನಮನಾಯಕರಿಗೆ ದಸವಂದ ನೀಡಲಾಗಿದೆ.[190]

1293 ರಲ್ಲಿ ತೂಬಿನ ಸೋರಿಕೆಗೆ ಮರಳನ್ನು ಬಳಸಿ ಯಶಸ್ವಿ ದುರಸ್ತಿ ನಡೆಸಿದ್ದಕ್ಕಾಗಿ ಅಚ್ಚುಕಟ್ಟಿನ ಭೂಮಿಯನ್ನು ದತ್ತಿ ನೀಡಿರುವುದನ್ನು ಮಡಿವಾಳ ಶಾಸನ ಉಲ್ಲೇಖಿಸುತ್ತದೆ.[191]

ನೀರಾವರಿ ಚೌಕಟ್ಟಿನ ನಿರ್ಮಾಣ ಮಾತ್ರವಲ್ಲದೆ ಭೂಮಿಯನ್ನು ಕೃಷಿಗಾಗಿ ವಿಸ್ತರಿಸುವ ಕ್ರಿಯೆ ಮಹತ್ವಪೂರ್ಣವಾದದ್ದು. 1128ರಲ್ಲಿ ಪುದನಾಡುವಿನ ಗೌಡ 300 ಕುಳಿ ಭೂಮಿಯನ್ನು ಕಾಡು ಕಡಿದು, ಕುರುಚಲು ತೆಗೆದು, ಸಮತಟ್ಟು ಮಾಡಿ ಸಾಗುವಳಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿದ್ದನ್ನು ತಳಸನೂರು ಶಾಸನ ದಾಖಲಿಸಿದೆ.[192]

## ನೀರಿನ ನಿರ್ವಹಣೆ

ನೀರಾವರಿ ಚೌಕಟ್ಟಿನಲ್ಲಿ ಕೃಷಿಗಾಗಿ ನೀರನ್ನು ಬಳಸಿಕೊಳ್ಳುವ ವ್ಯವಸ್ಥೆ ಪ್ರಧಾನವಾಗಿರುತ್ತದೆ. 1496ರ ರಾಜಗೊಂಡ್ಲಹಳ್ಳಿ ಶಾಸನದ ಪ್ರಕಾರ ದತ್ತಿ ನೀಡಿರುವ ತರಿ ಭೂಮಿಯನ್ನು ವಿಸ್ತರಿಸುವ ಅವಕಾಶ ಕಲ್ಪಿಸಲಾಗಿತ್ತು. ಹಾಗೂ ನೀರಿನ ಪೂರೈಕೆ ಇದ್ದಲ್ಲಿ ಕಟ್ಟುಕೊಡಗೈ ಭೂಮಿಯಲ್ಲಿ ಅಡಕೆ-ತೆಂಗು ಮತ್ತೀತರ ದೀರ್ಘಾವಧಿ ಬೆಳೆಯನ್ನು ಬೆಳೆಯಲು ಅವಕಾಶ ಕಲ್ಪಿಸಿತ್ತು. ಕೆರೆ ಪೂರ್ಣ ತುಂಬದಿದ್ದಲ್ಲಿ ದಸವಂದದ 3/10 ಭಾಗದ ಭತ್ತದ ಭೂಮಿಗೆ ಸರದಿಯಂತೆ ಕೆರೆಯ ನೀರನ್ನು ಪಡೆಯಬಹುದಾಗಿತ್ತು.[193]

ಕೆರೆ ಅಂಚಿನ ಸಾಗುವಳಿ ವಿಸ್ತೀರ್ಣ ಕೆರೆಯ ನೀರಿನ ಪ್ರಮಾಣಕ್ಕೆ ಅನುಗುಣವಾಗಿ ಇರಬೇಕಾದುದು ಅವಶ್ಯಕ ಇಲ್ಲವಾದಲ್ಲಿ ಕೆರೆ ನಿರ್ಮಾಣದ ಉದ್ದೇಶವೇ ವಿಫಲವಾಗುತ್ತದೆ. ಕೆರೆಯ ಪ್ರಮಾಣಕ್ಕೆ ತಕ್ಕ ಅಚ್ಚುಕಟ್ಟನ್ನು ನಿಗಧಿಗೊಳಿಸಿ ಸಾಗುವಳಿಗೆ ನೀರನ್ನು ಒದಗಿಸುವುದು ನೀರಾವರಿ ಪ್ರಕೃತಿಯ ಪ್ರಮುಖ ಲಕ್ಷಣಗಳಲ್ಲಿ ಒಂದಾಗಿದೆ.[194]

ನೀರಾವರಿ ಕಾಮಗಾರಿಗಳ ನಿರ್ವಹಣೆಯಲ್ಲಿ ವಿಶೇಷ ಆದ್ಯತೆ ನೀಡಿದುದ್ದು ಕಂಡಬರುತ್ತದೆ. ಕಡೂರು ತಾಲೂಕಿನ ಕ್ರಿ.ಶ 1529ರ ಶಾಸನದಲ್ಲಿ ದೊಡ್ಡ ವ್ಯಾಪಾರಿ ಮಾದವಭಟ್ಟಯ್ಯನ ಮಗ ಅಳ್ಳಾಲದೇವ ಅಗ್ರಹಾರದ ವಿಷ್ಣುಸಮುದ್ರದ ಕೆರೆಗೆ 200 ಗದ್ಯಾಣದ ಆದಾಯದ ಭೂದಾನನೀಡಿ, ಇದರ ಬಡ್ಡಿಯ ಆದಾಯದಲ್ಲಿ 30 ಗದ್ಯಾಣ ಪ್ರತಿವರ್ಷಕ್ಕೆ ಬ್ರಾಹ್ಮಣರ ಕೆರೆಗೆ, ತೂಬಿಗೆ ಮತ್ತು ಕಾಲುವೆಯ ದುರಸ್ಥಿ ಕಾಮಗಾರಿಗಳನ್ನು ನಿರ್ವಹಿಸಲು ಸಲ್ಲಿಸಬೇಕೆಂದು ದಾಖಲಿಸಿದೆ.[195]

ಕಡೂರು ತಾಲೂಕಿನ ಕಂಚಗಲ್ಲಿನ ಕ್ರಿ.ಶ 1253ರ ಶಾಸನ ಮಹಾಸಾಮಂತ ಆಳ್ವಿಕೆಯಲ್ಲಿ ಗರವ ಮಾಚಯ್ಯ ಗೌಡನ ಮೊಮ್ಮಗ ನೊಣಂಬಯ್ಯ ದೊಡ್ಡ ಕೆರೆಗೆ ತೂಬನ್ನು ಕಟ್ಟಿಸಿದ್ದನ್ನು ಉಲ್ಲೇಖಿಸಿದೆ.[196] ಇದೇ ತಾಲೂಕಿನ ಚಿಕ್ಕಬಳ್ಳಕೆರೆಯ ಕ್ರಿ.ಶ 1542ರ ಶಾಸನದಲ್ಲಿ ವೆಂಗಲರಾಜ ತಂದೆ ಜ್ಞಾಪಕಾರ್ಥವಾಗಿ ಮಕ್ಕೆ ಸಮುದ್ರ ಎಂಬ ಕೆರೆಯನ್ನು ಕಟ್ಟಿಸಿದುದ್ದನ್ನು ದಾಖಲಿಸುತ್ತದೆ.[197]

ಕೊಪ್ಪ ತಾಲೂಕಿನ ನಾಗಲಪುರದ ಕ್ರಿ.ಶ 1377ರ ಶಾಸನವೊಂದರಲ್ಲಿ ವೀರದೇವನು ಅಲ್ಲಿನ ಬ್ರಾಹ್ಮಣರಿಗೆ ನಗೂರು ಅಗ್ರಹಾರದ ನೂರು ಹೊನ್ನನ್ನು ಅಗ್ರಹಾರ, ಕೆರೆ, ದೇವಾಲಯಗಳ ದುರಸ್ತಿಗಾಗಿ ನೀಡಿರುವುದನ್ನು ದಾಖಲಿಸುತ್ತದೆ.[198]

ದಾನಗಳ ಚರಿತ್ರೆಯ ಕಾಲಗಳಲ್ಲಿ ಕೆರೆಗಳು ಮಹತ್ತರವಾದ ಪಾತ್ರವಹಿಸಿದೆ. ಬಹುತೇಕ ದಾನಗಳು ಕೆರೆಯ ಅಚ್ಚುಕಟ್ಟಿನ ನೀರಾವರಿ ಪ್ರದೇಶಗಳ ಭೂಮಿಗಳೇ ಆಗಿರುವುದು, ಅವು ಉತ್ಪನ್ನದಾಯಕ ಸ್ವರೂಪವನ್ನು ಹೊಂದಿರುವುದರಿಂದಲೇ ಎಂಬುದು ಸರ್ವವಿದಿತ. ಹಾಗಾಗಿ ಕೆರೆ ನೀರಾವರಿ ಚೌಕಟ್ಟಿನ ಪ್ರಧಾನ ಲಕ್ಷಣಗಳೆಂದರೆ ಭೂದಾನಗಳು ವ್ಯವಸ್ಥೆಯ ವಿಕಸನ, ನಿರ್ವಹಣೆ ಅಭಿವೃದ್ಧಿಯಲ್ಲಿ ನಿರ್ಣಾಯಕ ಪಾತ್ರವಹಿಸುತ್ತಾ ಬಂದಿರುವುದು.[199]

ಕೊಪ್ಪ ತಾಲೂಕಿನ ಬೊಮ್ಮದೇಪುರದ ವಿತ್ತಪ ಒಡೆಯನಿಗೆ ಕ್ರಿ.ಶ 1403ರ ಶಾಸನದಲ್ಲಿ ಅರಗ ಪ್ರಾಂತ್ಯದ ಕಂಪಣ ನಾಡುವಿನ ಮಾದುನಗರಗಳ ಸಾಗುವಳಿದಾರರು 100 ಗ್ರಾಮಗಳ ನೀರಾವರಿ ಭೂಮಿಯ ಹಕ್ಕುಗಳನ್ನು ಮೂಲ ಮಾಲೀಕರಿಂದ ಬಿಡುಗಡೆಗೊಳಿಸಿ ಕೊಟ್ಟ ಕ್ರಯಪತ್ರ ಪ್ರಸ್ತಾಪವಿಲ್ಲದೆ.[200]

ತರೀಕೆರೆ ತಾಲೂಕಿನ ಅಮೃತಪುರದ ಕ್ರಿ.ಶ 1210ರ ಶಾಸನ ಬ್ರಹ್ಮಪುರಿಯ ಅಮಾತ್ಯ ದಣ್ಣಾಯಕ ಅಮೃತೇಶ್ವರ ದೇವಾಲಯ ನಿರ್ಮಾಣದ ಸಂದರ್ಭದಲ್ಲಿ 12 ಪಾಲು ಹಳೆಯ ಕೆರೆಯ ಅಚ್ಚುಕಟ್ಟಿನ ಭೂಮಿಯಲ್ಲಿ ದಾನ ನೀಡಿದ್ದನ್ನು ಉಲ್ಲೇಖಿಸಿದೆ.[201]

ತರೀಕೆರೆ ತಾಲೂಕು ಕಂಟವೇಡ್ನಿಯರ ಕ್ರಿ.ಶ 1291ರ ಶಾಸನದಲ್ಲಿ ಹರಿಹರ ದಂಡನಾಯಕನ ನೇತೃತ್ವದಲ್ಲಿ ಸಭೆ ನಡೆಸಿದ ಬ್ರಾಹ್ಮಣರ ಉಬ್ಬರವೇಂಟೆ ಮತ್ತು ಕೀರ್ತನಕೆರೆ ಎರಡು ಸಹ ಈ ಹಿಂದೆ ಹಂಚಿಕೆಯಾಗಿದ್ದ ಗ್ರಾಮಗಳಿಗಿಂತ ಹೊರಗಿದ್ದು, ಅವುಗಳನ್ನು ಯಾರು ಸರಿಯಾಗಿ ನಿರ್ವಹಣೆ ಮಾಡಿಲ್ಲವಾದ ಕಾರಣ ಹೊಸದಾಗಿ ಹಂಚಿಕೆಯಾಗಿ, ಅದು ಶಾಶ್ವತ ಒಪ್ಪಂದ ರೂಪ ಪಡೆಯಿತ್ತು. ಈ ಒಪ್ಪಂದದ ಪ್ರಕಾರ ಸುನ್ಯಾರಿ ನಟ್ಟವಂದನ ಮತ್ತು ಇತರರಿಂದ ವೊಕ್ಕಂದ, ಮಾವಿನಕೆರೆ ಮತ್ತು ಕೀರ್ತನ ಕೆರೆಯಲ್ಲಿ ಉಳಿದಿರುವ ಪಾಲಿಗೆ 61 ಪಾಲು ನೀಡಬೇಕು. ಹಾಗೂ ಬ್ರಾಹ್ಮಣರು ಬಸವಯ್ಯ ಕೆರೆಯ ತೂಬನ್ನು ತೆಗೆಯಬಾರದು ಹಾಗೂ ನೀರನ್ನು ನಿಲ್ಲಿಸಬೇಕು ಎಂದು ತೀರ್ಮಾನಿಸಲಾಯಿತು. ಹೀಗಾಗಿ ನೀರಿನ ಹಂಚಿಕೆ

ಮತ್ತು ಅಚ್ಚುಕಟ್ಟಿನ ಪಾಲನ್ನು ಹಂಚಿಕೆ ಮಾಡಿಕೊಳ್ಳುವ ಒಪ್ಪಂದ ನೀರಾವರಿ ವ್ಯವಸ್ಥೆಯ ಕಾರ್ಯವಿಧಾನದ ಮೇಲೆ ಬೆಳಕು ಚೆಲ್ಲುತ್ತದೆ.[202]

ಪ್ರಾಚೀನ ಕಾಲಘಟ್ಟದಿಂದ ಬೆಳೆದುಬಂದ ಪಾರಂಪರಿಕೆ ನೀರಾವರಿ ಚೌಕಟ್ಟಿನಲ್ಲಿ, ಅವುಗಳ ನಿರ್ವಹಣೆ ಮಹತ್ವಪಡೆದ್ದಿತ್ತು. ಬೇಲೂರು ತಾಲ್ಲೂಕಿನ ಅಗಸರಹಳ್ಳಿಯ ಕ್ರಿ.ಶ 1280ರ ಶಾಸನದಲ್ಲಿ ವಸುದೇವ ದಣ್ಣಾಯಕರು ಅಗಸರಹಳ್ಳಿ ಮತ್ತು ಅದರ ಗಡಿಯ ಗ್ರಾಮಗಳನ್ನು ಎಲ್ಲಾ ಬಗೆಯ ತೆರಿಗೆಯನ್ನು ಮುಕ್ತಾಯಗೊಳಿಸಿ, 16 ಗದ್ಯಾಣಕ್ಕೆ ನಿಗದಿತ ಕಂದಾಯವಾಗಿ ಐರಾವಳಯಗೌಡ ಪ್ರಜೆಗೆ ನೀಡುತ್ತಾರೆ. ಅವನ ಮಗ ಪರಮೇಶ್ವರ ನಾಯಕ, ಮಹಾವಡ್ಡವ್ಯವಹಾರಿ ಮತ್ತು ಮಳೆಯಾಲದ ಉಭಯ ನಾನಾ ದೇಶಿಗಳ ಮುಖ್ಯಸ್ಥರು ಸೇರಿದಂತೆ ಒಪ್ಪಂದ ಏರ್ಪಡಿಸಿಕೊಳ್ಳುತ್ತಾರೆ. ಅದರಂತೆ ಅರಸೀಕೆರೆಯ ನೀರನ್ನು ಆ ಎರಡು ಗ್ರಾಮಗಳಿಗೆ ಬಿಡಬೇಕು ಹಾಗೂ ಪ್ರಚಲಿತ ಬೆಲೆಗಳಲ್ಲಿ ಆ ಗ್ರಾಮಗಳನ್ನು ಪಡೆದು ಆ ಗ್ರಾಮದ ಮುಖಂಡರ ಒಪ್ಪಿಗೆ ಮೇರೆಗೆ ಲಕ್ಷ್ಮೀ ನಾರಾಯಣ ದೇವರಿಗೆ ದಾನವಾಗಿ ಬಿಡಬೇಕು. ಇಲ್ಲಿನ ನೀರಿನ ಹಂಚಿಕೆಯನ್ನು ಕುರಿತಂತೆ ಹಲವು ಗ್ರಾಮಗಳ ಒಡಂಬಡಿಕೆ ಮಹತ್ವವೇನಿಸಿದೆ.[203]

ಅರಸೀಕೆರೆ ತಾಲೂಕಿನ ಕ್ರಿ.ಶ 1181ರ ಶಾಸನವು ನಖರರು ಮತ್ತು ಸಾವಿರ ಕುಟುಂಬಗಳು ದೇವಾಲಯ ಮತ್ತು ಕೆರೆಯ ನಿರ್ವಹಣೆಗಾಗಿ ಸಾಮೂಹಿಕವಾಗಿ ತೊಡಗಿಸಿಕೊಂಡಿದ್ದರು ಎಂದು ಪ್ರಸ್ತಾಪಿಸಲಾಗಿದೆ. ಬೇಲೂರು ತಾಲೂಕು ಮಾರೇನಹಳ್ಳಿಯ ಕ್ರಿ.ಶ 1188 ರ ಶಾಸನದಲ್ಲಿ ಮಾರವ್ವೆ ಕುಂದಲಿಯ ಮಹಾಜನರಿಗೆ ಎಂಟು "ಹೊನ್ನು" ಸಿದ್ದಾಯ ನೀಡಿದ್ದಲ್ಲದೆ ಕಂದಲಿಯ ಬ್ರಾಹ್ಮಣರಿಗೆ ಕೆರೆ, ದೇವಾಲಯ ಮತ್ತು ಕಾವಲುಗಾರ ನಿರ್ವಹಣೆಗಾಗಿ 562 'ಗದ್ಯಾಣ' ಮತ್ತು 3 'ಪಣ' ನೀಡಿದ್ದನ್ನು ದಾಖಲಿಸಿದೆ. ಇದೇ ತಾಲೂಕಿನ ಚಟಚಟಹಳ್ಳಿಯ ಕ್ರಿ.ಶ 1221ರ ಶಾಸನದಲ್ಲಿ ಚೆಟ್ಟಯ್ಯ ಪೆರುಮಾಳುದೇವ ನೂರು 'ಹೊನ್ನು' ಬಸದಿ ನಿರ್ಮಾಣ ಮತ್ತು ಅಗ್ರಹಾರಕ್ಕಾಗಿ ವಿನಿಯೋಗಿಸಲು ಘೋಷಿಸಿದಾಗ ಅಲ್ಲಿನ ಮಹಾಜನರು ದಾಸಶೆಟ್ಟಿಕೆರೆಗೆ ಮೆಟ್ಟಿಲುಗಳನ್ನು ಇರಿಸಲು ಬೇಡಿಕೆ ಸಲ್ಲಿಸಿದ್ದಾಗ ನೂರು 'ಹೊನ್ನು' ಕೆರೆಯ ಮೆಟ್ಟಿಲುಗಳಿಗೆ ಕಾಮಗಾರಿಗೆ ವಿನಿಯೋಗಿಸಲಾಯಿತು. ಕ್ರಿ.ಶ 1190ರ

ಅರಸೀಕೆರೆಯ ಶಾಸನದಲ್ಲಿ ಹಲವು ವ್ಯಾಪಾರಿ ಶುಂಕಗಳ (ಅಡಿಕೆ, ಮೆಣಸು, ಅರಸಿನ ವೀಳ್ಯದ ಎಲೆ ಮುಂತಾದ) ಬಾಕಿ ಹಣ ಮತ್ತು 150 ಕಂಬ ಭೂಮಿಗಳನ್ನು ಅರಸೀಕೆರೆಯ ಕೋಡಿಯ ದುರಸ್ತಿಗಾಗಿ ನೀಡಿರುವುದು ದಾಖಲಾಗಿದೆ.[204]

ಕ್ರಿ.ಶ 1219ರ ಅರಸೀಕೆರೆಯ ಮತ್ತೊಂದು ಶಾಸನದಲ್ಲಿ 120 ಗದ್ಯಾಣ ಹಣವನ್ನು ಕೆರೆಯ ನಿರ್ವಹಣೆಗಾಗಿ ಹಿರಿಯಣ್ಣನಿಗೆ ನೀಡಿರುವುದು ದಾಖಲಾಗಿದೆ. 10ನೇ ಶತಮಾನದ ಚನ್ನರಾಯಪಟ್ಟಣ ತಾಲ್ಲೂಕಿನ ಬಸವಣ್ಣಪುರದ ಶಾಸನವು ಉತ್ತಮಗಾವುಂಡ ನಿರ್ಮಿಸಿದ ಕೆರೆಯ ನಿರ್ವಹಣೆಗಾಗಿ ಆರು ಖಡುಂಗ ಭೂಮಿಯನ್ನು ನಿರ್ವಹಣೆಗಾಗಿ ಗೋವಿಂದರಸ ದಾನವಾಗಿ ನೀಡಿರುವುದು ಉಲ್ಲೇಖಗೊಂಡಿದೆ.[205] ಇದೇ ತಾಲೂಕಿನ ಸಂತೆ ಶಿವರಾದ 12ನೇ ಶತಮಾನದ ಶಾಸನಗಳಲ್ಲಿ ನಾರಾಯಣಮಯ್ಯ ಮತ್ತು ಮುನಿಯಗಾವುಂಡ ಸೇರಿದಂತೆ ಎಲ್ಲಾ ಪ್ರಜೆಗಳು ದೊಡ್ಡ ಕೆರೆಯಿಂದ ಸಾಗುವಳ್ಳಿಯಾಗುವ ಒಂದು ಖಂಡುಗ ಭೂಮಿಗೆ ಒಂದು ಖಂಡುಗ ಬಿತ್ತುವೆಟ್ಟದ ಪ್ರಕಾರ ದರ ನಿಗದಿಮಾಡುತ್ತಾರೆ.[206] ಅಲ್ಲದೆ ಕೆರೆ ನಿರ್ವಹಣೆಗಾಗಿ ಹಲವು ಭೂಮಿಗಳನ್ನು ನಿಗದಿಪಡಿಸಿ ಹೊಣೆಗಾರಿಕೆಯನ್ನು ಹೋಲಿಸುತ್ತಾರೆ. ಹಾಗಾಗಿ ನಿರ್ವಹಣೆಯ ಜವಾಬ್ದಾರಿಗೆ ಹಲವು ರೀತಿಯ ಸೌಲಭ್ಯಗಳನ್ನು ನೀಡುತ್ತಾ ಪ್ರೋತ್ಸಾಹಿಸಿರುವುದು ಕಂಡುಬರುತ್ತದೆ. ಹಾಸನ ತಾಲೂಕಿನ ಸಾಲಿಗ್ರಾಮದ ಕ್ರಿ.ಶ 1258ರ ಶಾಸನದಲ್ಲಿ ಕೆರೆಯೊಂದ ಹೊಡೆದು ಹೋಗಿ ದೇವಾಲಯ ಬಿದ್ದುಹೋಗಿದ್ದು, ಅವುಗಳ ದುರಸ್ತಿಗಾಗಿ ಮಾಯಣ್ಣನಾಯಕ ಕಂಡುಕೊಂಡ ಕಾಮಗಾರಿ ಉಲ್ಲೇಖಿತಗೊಂಡಿದೆ.[207]

ಚನ್ನರಾಯಪಟ್ಟಣದ ಕ್ರಿ.ಶ 1180ರ ಶಾಸನದಲ್ಲಿ ಮಾರೀಗೌಡ ಮತ್ತು ಇತರರಿಗೆ ಕೆರೆಯ ನಿರ್ವಹಣೆಗಾಗಿ ಒಂದು ಖಂಡುಗ ಐದು ಕೊಳಗ ಭೂಮಿಯನ್ನು ದಾನವಾಗಿ ನೀಡಿರುವುದ ದಾಖಲಾಗಿದೆ.[208]

ಹಾಸನ ತಾಲೂಕು ಮಾಯಸಂದ್ರ ಶಾಸನವೊಂದರಲ್ಲಿ ಕಾಮಕ್ಕೂರಿನ ಊರಿನ ಕೆರೆಗಾಗಿ ಕೆರೆಯ ಬಂಡಿಯ ನಿರ್ವಹಣೆಗಾಗಿ, ಮಸಣಯ್ಯ ಎಂಬುವನಿಗೆ ನೀಡಿದ ಭೂಮಿ ಸೌಲಭ್ಯ ಉಲ್ಲೇಖಿತಗೊಂಡಿದೆ. ಚನ್ನರಾಯಪಟ್ಟಣದ ಕ್ರಿ.ಶ 1276ರ ಬಾಲಗಂಚಿ ಶಾಸನದಲ್ಲಿ ಪೆರುಮಾಳ್ ದಣ್ಣಾನಾಯಕನಿಂದ ನೀಡಲ್ಪಟ್ಟ ಭೂಮಿಯ ದಾನವನ್ನು ದಾಖಲಿಸುತ್ತಾ ಅಲ್ಲಿನ

ಮಹಾಜನರು ಕೆರೆಯನ್ನು ಸಮರ್ಪಕವಾಗಿ ನಿರ್ವಹಿಸಿದ್ದಲ್ಲಿ ದಾನದ ಭೂಮಿಗೆ ನೀರಾವರಿ ಒಳಪಡಿಸುವ ಕಾಲುವೆ ಮುಂತಾದವುಗಳನ್ನು ಚೆನ್ನಾಗಿ ನಿರ್ವಹಿಸಿದ್ದಲ್ಲಿ ಎಲ್ಲಾ ಬಗೆಯ ತೆರಿಗೆ ವಿನಾಯತಿಗಳನ್ನು ವಿಸ್ತರಿಸುವ ವಿಶಿಷ್ಠ ರಿಯಾಯಿತಿ ಸೌಲಭ್ಯ ದಾಖಲಾಗಿದೆ.

ಅರಕಲಗೂಡು ತಾಲೂಕು ಬೋಳಕ್ಯಾತನಹಳ್ಳಿಯ ಕ್ರಿ.ಶ 1371 ರ ಶಾಸನದಲ್ಲಿ ಹೆಬ್ಬಾಳೆಯ ಉಪಗ್ರಾಮವಾದ ಬೋಳೇಕ್ಯಾತನಹಳ್ಳಿಗೆ ಸೇರಿದ ಭೂಮಿ ಹಾಗೂ ಹಲವು ಬಗೆಯ ತೆರಿಗೆಗಳನ್ನು ಹೆಬ್ಬಾಳೆಯ ಮಹಾಜನರು ಚನ್ನೆಗೌಡ ಮತ್ತು ಇತರರಿಗೆ ದಾನ ನೀಡುತ್ತಾ ಕೆರೆಯ ನಿರ್ವಹಣೆಗಾಗಿ ನಾಲ್ಕು ಬಂಡಿಗಳನ್ನು ನಿರ್ವಹಿಸಲು ನೀಡಿರುವುದಾಗಿ ದಾನ ಪಡೆದವರು ಕೋಣ, ಮರಮಟ್ಟು, ಕಬ್ಬಿಣ ಮತ್ತು ಗಾಡಿಗೆ ಎಣ್ಣೆಗಳನ್ನು ನಿರ್ವಹಿಸಿಕೊಳ್ಳಬೇಕು ಎಂದು ಉಲ್ಲೇಖಿಸಿದೆ. ಅರಕಲಗೂಡಿನ ಕ್ರಿ.ಶ 1422ರ ಶಾಸನದಲ್ಲಿ ಕೊಂಗನಾಡಿ ತೆರಿಗೆ ಅಧಿಕಾರಿ ಗೌಡ ಪ್ರಜೆಯೊಬ್ಬನಿಗೆ ಕೆರೆಯ ಬಂಡಿಗಳ ನಿರ್ವಹಣೆಗಾಗಿ ಬೋಳೇಕ್ಯಾತನಹಳ್ಳಿಗೆ ಸೇರಿದ ಹಲವು ತೆರಿಗೆಗಳ ಆದಾಯವನ್ನು ದಾನ ನೀಡುವ ಮೂಲಕ ಕೆರೆ ಮತ್ತು ಕೊಳದ ನಿರ್ವಹಣೆ ದಾನ ನೀಡಿರುವುದು ದಾಖಲಾಗಿದೆ. ಹೊಳೇನರಸೀಪುರ ತಾಲೂಕಿನ ನಿಡುವಾಣಿಯ 16ನೇ ಶತಮಾನದಲ್ಲಿ ನಿಡುವಣೆಕೆರೆಯ ನಿರ್ವಹಣೆಗಾಗಿ ಬಂಡಿಯೊಂದನ್ನು ನಿರ್ವಹಿಸಲು ರಾಚಯ್ಯ ಎಂಬುವನಿಗೆ ಕೆರೆಯ ಅಚ್ಚುಕಟ್ಟಿನ ಐದು ಗುಳ ತರಿ ಭೂಮಿಯನ್ನು ಮತ್ತು ಇಪ್ಪತ್ತು ಪಣ ನೀಡಿದ್ದನ್ನು ದಾಖಲಿಸಿದೆ.[209]

ಹಾಸನ ತಾಲೂಕಿನ ಚಿಕ್ಕಮೇನಹಳ್ಳಿಯ 15ನೇ ಶತಮಾನದ ಶಾಸನದಲ್ಲಿ ಮೂರು ಸಲಗೆ ಭೂಮಿಯನ್ನು ಕೆರೆ ಬಂಡಿಗಾಗಿ ದಾನ ನೀಡಿದ್ದು ಈ ಶಾಸನದಲ್ಲಿ ಬಂಡಿ ಚಿತ್ರ ಕೆತ್ತಲಾಗಿರುವುದು ವಿಶಿಷ್ಟ ಗಮನ ಸೆಳೆಯುತ್ತದೆ. ಅರಸೀಕೆರೆ ತಾಲೂಕಿನ ನೇರ್ಲಗೆಯ ಕ್ರಿ.ಶ 1429ರ ಶಾಸನದಲ್ಲಿ ನೇರ್ಲಗೆಯ ದೊಡ್ಡ ಕೆರೆಯ ನಿರ್ವಹಣೆಗಾಗಿ ಕೆರೆಯ ಬಾವಿ ನಿರ್ವಹಿಸಲು ವಿರುಪಣ್ಣನಾಯಕ ದಾನ ನೀಡಿರುವುದು ದಾಖಲಾಗಿದೆ. ಇದೇ ತಾಲೂಕಿನ ತಿಮ್ಮನಹಳ್ಳಿಯ ಕ್ರಿ.ಶ 1432ರ ಶಾಸನದಲ್ಲಿ ಬಸವಶಂಕರಶೆಟ್ಟಿ ಎಂಬುವನು ನೀರ್ಲಗೆಯ ದೊಡ್ಡಕೆರೆಯ ಕೆರೆ ಬಂಡಿಯ ನಿರ್ವಹಣೆಗಾಗಿ ಭೂಮಿ ದಾನ ನೀಡಿರುವುದು ದಾಖಲಾಗಿದೆ.

ಹೀಗಾಗಿ ಒಂದು ಕೆರೆಯ ನಿರ್ವಹಣೆಗಾಗಿ ಹಲವಾರು ಮಂದಿಗೆ ಕೆರೆಯ ಬಂಡಿ ದಾನಿಗಳು ನೀಡಿರುವುದು ಕಂಡುಬಂದಿದೆ.[210]

ಒಟ್ಟಾರೆ ನೀರಾವರಿ ಕಾಮಗಾರಿಗಳ ನಿರ್ವಹಣೆಗಾಗಿ ಹಣ. ಭೂಮಿ, ಸಲಕರಣಿಗಳನ್ನು ಸ್ಥಳೀಯ ಹಂತದಲ್ಲೇ ನೀಡಿ ಪ್ರೋತ್ಸಾಹಿಸುತ್ತಾ, ನೀರಾವರಿ ಕಾಮಗಾರಿಗಳ ಸುಸ್ಥಿತಿಯಲ್ಲಿರುವಂತೆ ಯಶಸ್ವಿ ಕಾರ್ಯಾಚರಣೆ ಪ್ರಕ್ರಿಯೆ ನಿರಂತರವಾಗಿರುವಂತೆ ಪಾರಂಪರಿಕ ವ್ಯವಸ್ಥೆ ಇದ್ದಿತ್ತು.

## ಪರಾಮರ್ಶನಗಳು

1. Dr. B.K.Gururaja Rao - *The Megalithic Culture in South India*- University of Mysore, Mysore, *1972*, P-No. 297.
2. ಈ ಬಗೆಗಿನ ವಿವರಗಳನ್ನು ದಕ್ಷಿಣ ಕರ್ನಾಟಕದಲ್ಲಿ ಇವರಿಗೆ ಪ್ರಕಟವಾಗಿರುವ ಬೃಹತ್ ಶಿಲಾಯುಗದ ಗೋರಿ ಮತ್ತು ವಾಸದ ನಿವಾಸದ ಸಂಖ್ಯೆಯನ್ನು ಆಧರಿಸಿ ನಿರ್ಧರಿಸಲಾಗಿದೆ. ಈ ಅಂಕಿ ಅಂಶಗಳು ಡಾ.ಕೆ.ಬಿ.ಶಿವತಾರಕ್ ರಚಿಸಿರುವ *ಕರ್ನಾಟಕದ ಪುರಾತತ್ತ್ವ ನೆಲೆಗಳು* ಕೃತಿಯ ಜಿಲ್ಲಾವಾರು ಅಂಕಿ ಅಂಶಗಳ ಕೋಷ್ಟಕಗಳನ್ನು ಆಧರಿಸಿ ಅಂದಾಜಿಸಲಾಗಿದೆ. ವಿವರಗಳಿಗೆ ಉಲ್ಲೇಖಿತ ಗ್ರಂಥವನ್ನು ಪರಾಮರ್ಶಿಸುವುದು.
3. *ಎಂ.ಎ.ಆರ್* – 1929, ಪು.ಸಂ.50, 211.
4. ಡಾ.ಬಿ.ರಾಜಶೇಖರಪ್ಪ– ಚಿತ್ರದುರ್ಗ ಪ್ರದೇಶದ ಕೆರೆಗಳ ನಿರ್ವಹಣೆಯ ಐತಿಹಾಸಿಕ ಅವಲೋಕನ, *ಕೆರೆಗಳ ನೀರಾವರಿ, ನಿರ್ವಹಣೆ ಚಾರಿತ್ರಿಕ ಅಧ್ಯಯನ,* ಸಂ–

ರಾಜರಾಮ್ ಹೆಗಡೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002, ಪು.ಸಂ.106-128.

5. ಟಿ.ವಿ.ನಾಗರಾಜು - ಹಾಸನ ಜಿಲ್ಲೆಯಲ್ಲಿ ಪ್ರಾಚೀನ ನೀರಾವರಿ ವ್ಯವಸ್ಥೆ ಒಂದು ಅಧ್ಯಯನ, *ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ-ಆರ್.ಗೋಪಾಲ್, ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 2011, ಪು.ಸಂ. 135-148.
6. *ಇ.ಸಿ.*7, ಶಿಕಾರಿಪುರ 176, (ರೈಸ್‌ರವರ ಆವೃತ್ತಿ)
7. ಹೆಚ್.ಆರ್.ರಘುನಾಥಭಟ್ಟ - ಪ್ರಾಚೀನ ಕರ್ನಾಟಕದ ಕೆರೆಗಳ ಒಂದು ಟಿಪ್ಪಣಿ, ಶಾತವಾಹನ-ಆದಿಕದಂಬ ಶಾಸನಗಳಲ್ಲಿ ಉಲ್ಲೇಖಿತ, *ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ* ಸಂ-ರಾಜರಾಮ್ ಹೆಗಡೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002, ಪು.ಸಂ.49-52.
8. ಅದೇ
9. ಅದೇ
10. ಅದೇ
11. ಡಾ.ಬಿ.ಷೇಕ್ ಆಲಿ - *ಹಿಸ್ಟರಿ ಆಫ್ ದಿ ವೆಸ್ಟರ್ನ್ ಗಂಗಾಸ್,* ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1976, ಪು.ಸಂ.40-62.
12. *ಎಂಎಆರ್* 1930, ಪು.ಸಂ.10.
13. *ಎಂಎಆರ್* 1938, ಪು.ಸಂ.88
14. *ಇ.ಸಿ* 07, ನಾಗಮಂಗಲ 49.
15. *ಇ.ಸಿ* 05, ಕೃಷ್ಣರಾಜನಗರ 49.
16. *ಇ.ಸಿ* 05, ಕೃಷ್ಣರಾಜನಗರ 105.
17. ಜಿ.ಎಸ್. ದೀಕ್ಷಿತ್ ಮತ್ತು ಇತರರು, *ಕರ್ನಾಟಕದಲ್ಲಿ ಕೆರೆ ನೀರಾವರಿ,* ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002, ಪು.ಸಂ.32.
18. ಅದೇ ಪು.ಸಂ.33.

19. *ಎಂಎಆರ್* 1935, ಪು.ಸಂ.187
20. *ಇ.ಸಿ* 12, ತುಮಕೂರು 05.
21. *ಇ.ಸಿ* 06, ನಂಜನಗೂಡು 282.
22. *ಎಸ್‌ಐಐ* IX (1) ನಂ.65.
23. *ಎಂಎಆರ್* 1918, ಪು.ಸಂ.42.
24. *ಇ.ಸಿ* 12, ಶಿರಾ 24.

*24ಅ. ಪಿ.ವಿ.ಕೃಷ್ಣಮೂರ್ತಿ ರಾಷ್ಟ್ರಕೂಟ ಅಕಾಲವರ್ಷ ಮುಮ್ಮಡಿ ಕೃಷ್ಣನ ಕುಣಿಕಲ್ ಕೆರೆ ಶಾಸನ. ಇತಿಹಾಸ ದರ್ಶನ, 19, ಬೆಂಗಳೂರು, 2004, ಪು.47-50.*

25. *ಇ.ಸಿ* 12, ಶಿರಾ 33.
26. *ಇ.ಸಿ* 12, ಮಧುಗಿರಿ 102.
27. *ಇ.ಸಿ* 06, ಮಂಡ್ಯ 56.
28. *ಇ.ಸಿ* 06, ಮಂಡ್ಯ 67.
29. *ಇ.ಸಿ* 06, ಮಂಡ್ಯ 54.
30. *ಇ.ಸಿ* 07, ಮಳವಳ್ಳಿ 122.
31. ಡಾ.ಟಿ.ವಿ.ನಾಗರಾಜು – ಮಂಡ್ಯ ಜಿಲ್ಲೆಯ ಪ್ರಾಚೀನ ನೀರಾವರಿ ಚೌಕಟ್ಟು ಒಂದು ಪರಿಶೀಲನೆ, *ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ- ಡಾ.ಆರ್.ಗೋಪಾಲ್, ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 2008, ಪು.ಸಂ.159-166.
32. ಡಾ.ಟಿ.ವಿ.ನಾಗರಾಜು – ಮೈಸೂರು ಜಿಲ್ಲೆಯ ಪ್ರಾಚೀನ ನೀರಾವರಿ ಒಂದು ಸಮೀಕ್ಷೆ, *ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ- ಡಾ.ಆರ್.ಗೋಪಾಲ್, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು, 2010, ಪು.ಸಂ.186-89.
33. ಬಿ.ರಾಜಶೇಖರಪ್ಪ- ಪೂರ್ವೋಕ್ತ, 2002, ಪು.ಸಂ, 106-128.

34. ಅದೇ
35. *ಇ.ಸಿ* 07, ಶಿಕಾರಿಪುರ 284.
36. *ಇ.ಸಿ* 07, ಶಿಕಾರಿಪುರ 216.
37. *ಇ.ಸಿ* 07, ಶಿಕಾರಿಪುರ 322.
38. ಅದೇ
39. *ಇ.ಸಿ* 07, ಸೊರಬ 532.
40. *ಇ.ಸಿ* 07, ಸೊರಬ 44.
41. ಡಾ.ಟಿ.ವಿ.ನಾಗರಾಜ – ಮಂಡ್ಯ ಪೂರ್ವೋಕ್ತ, 2010, ಪು.ಸಂ.159–166.
42. ಅದೇ
43. *ಇ.ಸಿ* 12, ಮುಳಬಾಗಿಲು 65.
44. ಡಾ.ಪಿ.ವಿ.ಕೃಷ್ಣಮೂರ್ತಿ, ಬೆಂಗಳೂರು ಜಿಲ್ಲಾ ಪರಿಸರದ, ಶಾಸನೋಕ್ತ ಕೆರೆಗಳು, *ಬೆಂಗಳೂರು ಜಿಲ್ಲೆ ಇತಿಹಾಸ ಮತ್ತು ಪುರಾತತ್ವ*, ಸಂ–ಡಾ.ಆರ್.ಗೋಪಾಲ್, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು, 2013, ಪು.ಸಂ. 204–208.
45. ಸಿ.ಟಿ.ಎಂ.ಕೊಟ್ರಯ್ಯ – *ಇರಿಗೇಷನ್ ಸಿಸ್ಟಮ್ಸ್ ಅಂಡರ್ ವಿಜಯನಗರ ಎಂಪೈರ್,* ಡೈರೆಕ್ಟರ್ ಆಫ್, ಆರ್ಕಿಯೋಲಜಿ ಮತ್ತು ಮ್ಯೂಸಿಯಮ್ಸ್, ಮೈಸೂರು, 1995, ಪು.ಸಂ.10–15.
46. ಅದೇ
47. *ಇ.ಸಿ* 06, ಶ್ರೀರಂಗಪಟ್ಟಣ 67.
48. ಡಾ.ಲ.ನ.ಸ್ವಾಮಿ – ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಕಂಡಂತೆ ಪ್ರಾಚೀನ ಶಿಕ್ಷಣ, *ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆ, ಮೈಸೂರು, 2007, ಪು.ಸಂ.54–64.

ಡಾ.ಲ.ನ.ಸ್ವಾಮಿ – ಮೈಸೂರು ಜಿಲ್ಲೆಯ ಪ್ರಾಚೀನ ಶಿಕ್ಷಣ ಕೇಂದ್ರಗಳ ರಚನೆ, ಉದ್ದೇಶ ಮತ್ತು ಮಹತ್ವ, *ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ, ಮೈಸೂರು, 2010, ಪು.ಸಂ.197.

49. ಕೆ.ನೀಲಕಂಠಶಾಸ್ತ್ರಿ – *ದಿ ಚೋಳಸ್,* ಮದರಾಸು, 1984, ಪು.ಸಂ.486.
50. ಅದೇ
51. *ARSIEp*, 1903-04 D, No,210
52. ಡಾ.ಲ.ನ.ಸ್ವಾಮಿ – ಪೂರ್ವೋಕ್ತ, ಮಂಡ್ಯ, 2008, ಪು.ಸಂ.54–64.

    ಡಾ.ಲ.ನ.ಸ್ವಾಮಿ – ಪೂರ್ವೋಕ್ತ, ಮೈಸೂರು, 2010, ಪು.ಸಂ.197
53. ಡಾ.ಲ.ನ.ಸ್ವಾಮಿ – ಕೆರೆಕಟ್ಟೆಗಳು, *ನಾಗಮಂಗಲ,* ಸಂ–ಡಾ.ಸಿ.ಮಹದೇವ, ಸ್ಥಳೀಯ ಚರಿತ್ರೆ ಮತ್ತು ಪುರಾತತ್ವಮಾಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2011, ಪು.ಸಂ.115.

    ಡಾ.ಲ.ನ.ಸ್ವಾಮಿ – ಕೆರೆಕಟ್ಟೆಗಳು, ತೊಣ್ಣೂರು, ಸಂ–ಡಾ.ಸಿ.ಮಹದೇವ, ಸ್ಥಳೀಯ ಚರಿತ್ರೆ ಮತ್ತು ಪುರಾತತ್ವಮಾಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2009, ಪು.ಸಂ.129.
54. ಜಿ.ಎಸ್.ದೀಕ್ಷಿತ್– ಪೂರ್ವೋಕ್ತ, 2000, ಪು.ಸಂ.34.
55. *ಇ.ಸಿ* 08, ಸಾಗರ 58.
56. *ಇ.ಸಿ* 09, ಚನ್ನಪಟ್ಟಣ 127.
57. *ಇ.ಸಿ* 10, ಮುಳಬಾಗಿಲು 208.
58. *ಇ.ಸಿ* ಸೊರಬ 317.
59. *ಇ.ಸಿ* ಶಿಕಾರಿಪುರ 19.
60. *ಇ.ಸಿ* ಸಾಗರ 80.
61. *ಇ.ಸಿ* ಶಿಕಾರಿಪುರ 414.
62. *ಇ.ಸಿ* ಶಿವಮೊಗ್ಗ 10.

63. *ಇ.ಸಿ* ಸೊರಬ 418.
64. *ಇ.ಸಿ* ಶಿವಮೊಗ್ಗ 43.
65. ಅದೇ
66. *ಇ.ಸಿ* ಸೊರಬ 354.
67. *ಇ.ಸಿ* 11, ಚಿತ್ರದುರ್ಗ 12.
68. ಡಾ.ಬಿ.ರಾಜಶೇಖರಪ್ಪ –ಪೂರ್ವೋಕ್ತ, 2002, ಪು.ಸಂ.106–128.
69. *ಇ.ಸಿ* 11, ಹೊಳಲ್ಕೆರೆ 121.
70. ಡಾ.ಬಿ.ರಾಜಶೇಖರಪ್ಪ –ಪೂರ್ವೋಕ್ತ, 2002, ಪು.ಸಂ.106–128.
71. ಅದೇ
72. ಡಾ.ಟಿ.ವಿ.ನಾಗರಾಜು – ಚಿಕ್ಕಮಗಳೂರು ಜಿಲ್ಲೆಯ ನೀರಾವರಿ ವ್ಯವಸ್ಥೆ ಒಂದು ಚಾರಿತ್ರಿಕ ವಿಶ್ಲೇಷಣೆ, *ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ– ಡಾ.ಆರ್.ಗೋಪಾಲ್, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು, 2008, ಪು.ಸಂ.366–370.
73. *ಇ.ಸಿ* 06, ಕಡೂರು 161. (ಬಿ.ಎಲ್.ರೈಸ್ ಆವೃತ್ತಿ)
74. *ಇ.ಸಿ* 06, ತರೀಕೆರೆ 62.
75. *ಇ.ಸಿ* 06, ಚಿಕ್ಕಮಗಳೂರು 73.
76. *ಇ.ಸಿ* 06, ತರೀಕೆರೆ 66.
77. *ಇ.ಸಿ* 06, ಕಡೂರು 34.
78. *ಇ.ಸಿ* 06, ಕಡೂರು 28. (ಬಿ.ಎಲ್.ರೈಸ್ ಆವೃತ್ತಿ)
79. *ಇ.ಸಿ* 06, ತರೀಕೆರೆ 66.
80. *ಇ.ಸಿ* 06, ತರೀಕೆರೆ 68.
81. *ಇ.ಸಿ* 06, ಕಡೂರು 36.
82. *ಇ.ಸಿ* 06, ಕಡೂರು 117.

83. *ಇ.ಸಿ* 06, ತರೀಕೆರೆ 53.
84. *ಇ.ಸಿ* 06, ಕಡೂರು 91.
85. *ಇ.ಸಿ* 06, ತರೀಕೆರೆ 43.
86. *ಇ.ಸಿ* 06, ತರೀಕೆರೆ 55.
87. *ಇ.ಸಿ* 06, ಚಿಕ್ಕಮಗಳೂರು 62.
88. *ಇ.ಸಿ* 08, ಹಾಸನ 113.
89. *ಇ.ಸಿ* 09, ಬೇಲೂರು 484.
90. *ಇ.ಸಿ* 10, ಚನ್ನರಾಯಪಟ್ಟಣ 74.
91. *ಇ.ಸಿ* 09, ಬೇಲೂರು 190.
92. *ಇ.ಸಿ* 10, ಅರಸೀಕೆರೆ 38.
93. *ಇ.ಸಿ* 08, ಹಾಸನ 165.
94. *ಇ.ಸಿ* 09, ಬೇಲೂರು 194.
95. *ಇ.ಸಿ* 10, ಚೆನ್ನರಾಯಪಟ್ಟಣ 130.
96. ಡಾ.ಟಿ.ವಿ.ನಾಗರಾಜು – ಹಾಸನ ಜಿಲ್ಲೆಯ ನೀರಾವರಿ ವ್ಯವಸ್ಥೆ ಒಂದು ಅಧ್ಯಯನ, *ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ–ಡಾ.ಆರ್.ಗೋಪಾಲ್, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು, 2010, ಪು.ಸಂ.135–145.
97. *ಇ.ಸಿ* 03, ಶ್ರವಣಬೆಳಗೊಳ 564.
98. *ಇ.ಸಿ* 08, ಅರಕಲಗೂಡು 88.
99. *ಇ.ಸಿ* 10, ಅರಸೀಕೆರೆ 321.
100. ಟಿ.ವಿ.ನಾಗರಾಜು – ಹಾಸನ, ಪೂರ್ವೋಕ್ತ, 2010, ಪು.ಸಂ.135–145.
101. *ಇ.ಸಿ* 08, ಹಾಸನ 132.
102. *ಇ.ಸಿ* 10, ಚನ್ನರಾಯಪಟ್ಟಣ 85.

103. ಇ.ಸಿ 09, ಬೇಲೂರು 168.

104. ಇ.ಸಿ 10, ಚನ್ನರಾಯಪಟ್ಟಣ 136.

105. ಇ.ಸಿ 02, ಶ್ರವಣಬೆಳಗೊಳ 26.

106. ಇ.ಸಿ 03, ಹಾಸನ 26.

107. ಇ.ಸಿ 09, ಬೇಲೂರು 225.

108. ಇ.ಸಿ 09, ಬೇಲೂರು 410.

109. ಇ.ಸಿ 09, ಹಾಸನ 21.

110. ಇ.ಸಿ 09, ಅರಸೀಕೆರೆ 224.

111. ಇ.ಸಿ 09, ಅರಸೀಕೆರೆ 32.

112. ಅದೇ

113. ಇ.ಸಿ 09, ಚನ್ನರಾಯಪಟ್ಟಣ 75.

114. ಇ.ಸಿ 09, ಅರಸೀಕೆರೆ 55.

115. ಇ.ಸಿ 09, ಚನ್ನರಾಯಪಟ್ಟಣ 09.

116. ಇ.ಸಿ 09, ಬೇಲೂರು 240.

117. ಇ.ಸಿ 10, ಚನ್ನರಾಯಪಟ್ಟಣ 122.

118. ಇ.ಸಿ 09, ಬೇಲೂರು 438.

119. ಇ.ಸಿ 10, ಅರಸೀಕೆರೆ 214.

120. ಅದೇ

121. ಇ.ಸಿ 08, ಅರಕಲಗೂಡು 158.

122. ಇ.ಸಿ 10, ಚನ್ನರಾಯಪಟ್ಟಣ 169.

123. ಇ.ಸಿ 09, ಬೇಲೂರು 134.

124. ಇ.ಸಿ 10, ಅರಸೀಕೆರೆ 196.

125. ಡಾ.ಟಿ.ವಿ.ನಾಗರಾಜು – ಮಂಡ್ಯ ಜಿಲ್ಲೆಯ ಪ್ರಾಚೀನ ನೀರಾವರಿ ಚೌಕಟ್ಟು ಒಂದು ಪರಿಶೀಲನೆ, *ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ–ಡಾ.ಆರ್.ಗೋಪಾಲ್, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು, 2008, ಪು.ಸಂ.159–166.

126. ಪಿ.ವಿ.ಕೃಷ್ಣಮೂರ್ತಿ – ಬೆಂಗಳೂರು ಪರಿಸರದ ಶಾಸನೋಕ್ತ ಕೆರೆಗಳು, *ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ–ಡಾ.ಆರ್.ಗೋಪಾಲ್, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು, 2013, ಪು.ಸಂ.199–203.

ಮತ್ತು

ಡಾ.ಟಿ.ವಿ.ನಾಗರಾಜು – ಬೆಂಗಳೂರಿನ ಕೆರೆಗಳು, *ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ–ಡಾ.ಆರ್.ಗೋಪಾಲ್, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು, 2013, ಪು.ಸಂ.204–208

127. ಡಾ.ಟಿ.ವಿ.ನಾಗರಾಜು – *ಮೈಸೂರು ಸಂಸ್ಥಾನದ ನೀರಾವರಿ, (ಕೋಲಾರ ಜಿಲ್ಲೆಯ ಒಂದು ಅಧ್ಯಯನ 1800 – 1956),* ಬೆಂಗಳೂರು, 2008, ಪು.ಸಂ.35–45.

128. *ಇ.ಸಿ* 08, ಅರಕಲಗೂಡು 107.

129. *ಇ.ಸಿ* 05, ಅರಸೀಕೆರೆ 115. (ಹಳೆಯ ಪ್ರಕಟಣೆ)

130. *ಇ.ಸಿ* 08, ಅರಕಲಗೂಡು 11.

131. *ಇ.ಸಿ* 10, ಬಂಗಾರಪೇಟೆ 11. (ಹಳೆಯ ಪ್ರಕಟಣೆ)

132. ಜಿ.ಎಸ್. ದೀಕ್ಷಿತ್ – ಪೂರ್ವೋಕ್ತ, 2000, ಪು.ಸಂ.54ರ ನಂತರ

133. *ಇ.ಸಿ* 10, ಗೌರಿಬಿದನೂರು 06. (ಹಳೆಯ ಪ್ರಕಟಣೆ)

134. *ಇ.ಸಿ* 7, ಮದ್ದೂರು 87, 83.

135. *ಇ.ಸಿ* 10, ಬಾಗೇಪಲ್ಲಿ 10. (ಹಳೆಯ ಪ್ರಕಟಣೆ)

136. *ಇ.ಸಿ* 11, ದಾವಣಗೆರೆ 23, 29.

137. *ಇ.ಸಿ* 10, ಮುಳಬಾಗಿಲು 131.
138. ಜಿ.ಎಸ್. ದೀಕ್ಷೀತ್ – ಪೂರ್ವೋಕ್ತ, 2000, ಪು.ಸಂ. 54ರ ನಂತರ.
139. *ಇ.ಸಿ* 10, ಮುಳಬಾಗಿಲು 07.
140. *ಇ.ಸಿ* 03, ಗುಂಡ್ಲುಪೇಟೆ 149.
141. ಡಾ.ಎಂ.ಜಿ. ಮಂಜುನಾಥ್ – ವಿಜಯನಗರದ ಅರಸರ ಕಾಲದ ಮಳೆಕೂಯ್ಲು, ತಂತ್ರಜ್ಞಾನ, ಅಪೂರ್ವ ನಿದರ್ಶನ, *ವಿಜಯನಗರ ಅಧ್ಯಯನ, ಸಂ-12,* ಸಂ- ಡಾ.ಆರ್.ಗೋಪಾಲ್, ಬಿ.ಎಂ.ಚಿಕ್ಕಮಾರೇಗೌಡ, ಟಿ.ಎಸ್.ಗಂಗಾಧರ, ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, (2006), ಪು.ಸಂ.375-378.
142. *ಎಂ.ಎ.ಆರ್* 1929, ಪು.ಸಂ.49.
143. *ಇ.ಸಿ* 10, ಮಾಲೂರು 23.
144. *ಇ.ಸಿ* 10, ಚಿಕ್ಕಬಳ್ಳಾಪುರ 63.
145. *ಎಂ.ಎ.ಆರ್* 1923, ಪು.ಸಂ.44.
146. *ಇ.ಸಿ* 10, ಬಾಗೇಪಲ್ಲಿ 77.
147. *ಇ.ಸಿ* 10, ಗೌರಿಬಿದನೂರು 72.
148. *ಇ.ಸಿ* 07, ಶಿವಮೊಗ್ಗ 30.
149. *ಇ.ಸಿ* 07, ಶಿವಮೊಗ್ಗ 46.
150. *ಇ.ಸಿ* 06, ಕಡೂರು 91.
151. *ಇ.ಸಿ* 06, ಕಡೂರು 92.
152. *ಇ.ಸಿ* 06, ಕಡೂರು 114.
153. *ಇ.ಸಿ* 06, ಕಡೂರು 160.
154. *ಇ.ಸಿ* 10, ಅರಸೀಕೆರೆ 197.
155. *ಇ.ಸಿ* 10, ಅರಸೀಕೆರೆ 195.
156. *ಇ.ಸಿ* 10, ಅರಸೀಕೆರೆ 198.
157. ಅದೇ

158. *ಇ.ಸಿ* 10, ಅರಸೀಕೆರೆ 475.
159. ಟಿ.ವಿ.ನಾಗರಾಜು – ಮೈಸೂರು, ಪೂರ್ವೋಕ್ತ, 2010, ಪು.ಸಂ.186–189.
160. ಅದೇ
161. ಅದೇ
162. ಅದೇ
163. *ಇ.ಸಿ* 06, ಮಳವಳ್ಳಿ 143.
164. *ಇ.ಸಿ* 06, ಶ್ರೀರಂಗಪಟ್ಟಣ 84.
165. *ಇ.ಸಿ* 06, ಮಂಡ್ಯ 86.
166. *ಇ.ಸಿ* 06, ನಾಗಮಂಗಲ 151.
167. *ಇ.ಸಿ* 06, ನಾಗಮಂಗಲ 58.
168. ಟಿ.ವಿ.ನಾಗರಾಜು – ಮಂಡ್ಯ, ಪೂರ್ವೋಕ್ತ, 2008, ಪು.ಸಂ.159–166.
169. *ಇ.ಸಿ* 06, ಶ್ರೀರಂಗಪಟ್ಟಣ 135.
170. *ಇ.ಸಿ* 12, ಪಾವಗಡ 96. (ಹಳೆಯ ಪ್ರಕಟಣೆ)
171. *ಇ.ಸಿ* 12, ಗುಬ್ಬಿ 18.
172. *ಇ.ಸಿ* 12, ಗುಬ್ಬಿ 32.
173. *ಇ.ಸಿ* 12, ಗುಬ್ಬಿ 31.
174. *ಇ.ಸಿ* 12, ಗುಬ್ಬಿ 18. (ಸಪ್ಲಮೆಂಟರಿ)
175. *ಇ.ಸಿ* 12, ಪಾವಗಡ 54.
176. *ಇ.ಸಿ* 12, ತಿಪಟೂರು 60.
177. *ಇ.ಸಿ* 12, ಮಧುಗಿರಿ 01.
178. *ಇ.ಸಿ* 12, ಶಿರಾ 13.
179. *ಇ.ಸಿ* 12, ಗುಬ್ಬಿ 43.
180. ಡಾ.ಪಿ.ವಿ.ಕೃಷ್ಣಮೂರ್ತಿ – ಬೆಂಗಳೂರು ಜಿಲ್ಲಾ ಪರಿಸರ ಶಾಸನೋಕ್ತ ಕೆರೆಗಳು, *ಇತಿಹಾಸ ದರ್ಶನ*, 21, 2006, ಪು.ಸಂ.117–121.

181. ಟಿ.ವಿ.ನಾಗರಾಜು – ಮೈಸೂರು, ಪೂರ್ವೋಕ್ತ, 2010, ಪು.ಸಂ.186–189.
182. ಟಿ.ವಿ.ನಾಗರಾಜು– ಶಿವಮೊಗ್ಗ ಜಿಲ್ಲೆಯ ನೀರಾವರಿ ಒಂದು ಚಾರಿತ್ರಿಕ ಪರಿಶೀಲನೆ, *ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಡಾ.ಆರ್.ಗೋಪಾಲ್ (ಸಂ), ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 2008, ಪು.ಸಂ. 423–430.
183. ಅದೇ
184. ಅದೇ
185. ಅದೇ
186. ಅದೇ
187. ಟಿ.ವಿ.ನಾಗರಾಜು– ಶಾಸನಗಳ ಹಿನ್ನೆಲೆಯಲ್ಲಿ ನೀರಾವರಿ, *ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಡಾ.ಆರ್.ಗೋಪಾಲ್ (ಸಂ), ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 2004, ಪು.ಸಂ. 205–211.
188. ಅದೇ
189. ಅದೇ
190. ಅದೇ
191. ಅದೇ
192. ಅದೇ
193. ಅದೇ
194. ಅದೇ
195. ಟಿ.ವಿ.ನಾಗರಾಜು– ಚಿಕ್ಕಮಗಳೂರು ಜಿಲ್ಲೆಯ ನೀರಾವರಿ ವ್ಯವಸ್ಥೆ ಒಂದು ಚಾರಿತ್ರಿಕ ವಿಶ್ಲೇಷಣೆ, *ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಡಾ.ಆರ್.ಗೋಪಾಲ್ (ಸಂ), ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 2008, ಪು.ಸಂ. 366–371.

196. ಅದೇ
197. ಅದೇ
198. ಅದೇ
199. ಅದೇ
200. ಅದೇ
201. ಅದೇ
202. ಅದೇ
203. ಟಿ.ವಿ.ನಾಗರಾಜು – ಹಾಸನ ಜಿಲ್ಲೆಯಲ್ಲಿ ಪ್ರಾಚೀನ ನೀರಾವರಿ ವ್ಯವಸ್ಥೆ – ಒಂದು ಅಧ್ಯಯನ, *ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಡಾ.ಆರ್.ಗೋಪಾಲ್ (ಸಂ), ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 2010, ಪು.ಸಂ. 135–148.
204. ಅದೇ
205. ಅದೇ
206. ಅದೇ
207. ಅದೇ
208. ಅದೇ
209. ಅದೇ
210. ಅದೇ

## ಅಧ್ಯಾಯ-ಐದು

# ಕೆರೆ ನಿರ್ಮಾಣದ ಅವಶ್ಯಕತೆ, ಅಂಗಗಳು: ಉದ್ದೇಶಗಳು ಮತ್ತು ನಿರ್ಮಾತೃಗಳು

ದಕ್ಷಿಣ ಕರ್ನಾಟಕದಲ್ಲಿ ಕೆರೆಕಟ್ಟೆಗಳ ನಿರ್ಮಾಣ ಮತ್ತು ನಿರ್ವಹಣೆ ಕುರಿತಾದ ಅಧ್ಯಾಯನದಲ್ಲಿ ಈವರೆಗೆ ಪ್ರಾಗೈತಿಹಾಸಿಕ ಕಾಲದಿಂದ ವಿಜಯನಗರ ಸಾಮ್ರಾಜ್ಯದ ಪತನದನವರೆಗೆ ನಿರ್ಮಾಣಗೊಂಡ ಕೆರೆಗಳ ವಿವರಗಳನ್ನು ದಾಖಲಿಸಲಾಗಿದೆ. ಈ ನಿರ್ಮಾಣಗಳ ಪರಂಪರೆ ಅತ್ಯಂತ ಪ್ರಾಚೀನವಾದರು ಎಲ್ಲಾ ಪ್ರದೇಶಗಳಲ್ಲಿಯು ಒಂದೇ ರೀತಿಯಾದ ಸಾಂದ್ರತೆಯಲ್ಲಿ ಕೆರೆಗಳು ನಿರ್ಮಾಣವಾಗದಿರುವುದು ಕಂಡುಬರುತ್ತದೆ. ಹಿಂದಿನ ಅಧ್ಯಯನಗಳಲ್ಲಿ ನೀಡಿರುವ ಅಂಕಿ ಅಂಶಗಳು ನಮ್ಮ ಈ ಅಭಿಪ್ರಾಯಗಳು ಖಚಿತಪಡಿಸುತ್ತದೆ. ಕೆಲವೊಮ್ಮೆ ಕೆರೆಗಳು ಹಲವು ಬಾರಿ ಪುನರ್ ನಿರ್ಮಾಣಗೊಂಡಿವೆ. ಮತ್ತೆ ಕೆಲವು ಕೆರೆಗಳ ನಿರ್ಮಾತೃಗಳಾಗಲಿ ನಿರ್ಮಾಣದ ಕಾಲಘಟ್ಟವಾಗಲಿ ತಿಳಿದು ಬರುವುದಿಲ್ಲವಾದರೂ ಕೆರೆಗಳು ಇದ್ದ ಮಾಹಿತಿ ಖಚಿತವಾಗುತ್ತದೆ. ಹೀಗಾಗಿ ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ಕೆರೆಯನ್ನು ನಿರ್ಮಾಣ ಮಾಡಬೇಕಾದ ಅವಶ್ಯಕತೆ ಉಂಟಾದ ಪರಿಸ್ಥಿತಿಯನ್ನು ಅವಲೋಕಿಸುವುದು ಸೂಕ್ತ.

ದಕ್ಷಿಣ ಕರ್ನಾಟಕವು ತುಂಗಭದ್ರ ನದಿ ಮತ್ತು ಕಾವೇರಿ ನದಿಯ ಜಲಾನಯನ ಪ್ರದೇಶಗಳಲ್ಲಿ ಅಡಕವಾಗಿದೆ.

ಈ ಜಲಾನಯನ ನದಿಗಳ ಪ್ರದೇಶಗಳು ಪ್ರಕೃತಿ ನಿರ್ಮಿತವಾದ ಪಾತಳಗಳಲ್ಲಿ ಹರಿಯುವುದರಿಂದ ಮತ್ತು ನದಿಗಳು ಯೌವನ ವ್ಯವಸ್ಥೆಯಲ್ಲಿರುವುದರಿಂದ ಇವುಗಳಿಗೆ ಅಡ್ಡಲಾಗಿ ಕಟ್ಟೆಗಳನ್ನು ನಿರ್ಮಿಸಿದರು ಅವು ಇತಿಹಾಸದ ಕಾಲದಲ್ಲಿ ಬಹಳ ಕಾಲದವರೆಗೆ ಸುಸ್ಥಿತಿಯಲ್ಲಿ ಕಾಪಾಡುವುದು ಸಾಧ್ಯವಾಗಿರಲಿಲ್ಲ. ಸ್ಥಳೀಯವಾಗಿ ತಯಾರಿಸಿದ ಸುಣ್ಣದ ಗಾರೆಯನ್ನು ಬಳಸಿ ಕಟ್ಟಿದ ಕೆಲವೊಂದು ಕಲ್ಲಿನ ಅಣೆಗಳು ಉದಾಹರಣೆಗೆ ಹಂಪಿಯು

ಸಮೀಪ ನಿರ್ಮಿಸಿದ ವಿಜಯನಗರ ಕಾಲದ ಆಣೆಗಳು ಮತ್ತು ಕಾವೇರಿ ಪಾತ್ರದಲ್ಲಿ ನಿರ್ಮಾಣಗೊಂಡ ಅಣೆಗಳು ಇಂದಿಗೂ ಈ ನಾಲೆಗಳು ನೀರಾವರಿ ಮತ್ತು ವ್ಯವಸಾಯಕ್ಕೆ ಉಪಯೋಗವಾಗುತ್ತಿವೆ. ಮೇಲುಕೋಟೆಯ ಶಾಸನವು ಉಲ್ಲೇಖಿಸುವ ಸೀತಾಯಪುರದ (ಸೀತಾಪುರ) ಕಾಲುವೆ, ಮೈಸೂರು ಜಿಲ್ಲೆಯ ರುದ್ರಪಟ್ಟಣ ಕಾಲುವೆ, ಹರಿಹರಪುರದ ಕಾಲುವೆ ಮತ್ತು ಅಣೆಕಟ್ಟು ಇತ್ಯಾದಿ ಹಲವು ಕಾಲವೆಗಳನ್ನು ಇಂದು ಶಾಸನಗಳಲ್ಲಿ ಗುರುತಿಸಬಹುದೆ ಹೊರತು ವಸ್ತುಸ್ಥಿತಿಯಲ್ಲಿ ಅಲ್ಲ. ಇದಕ್ಕೆ ಕಾರಣವನ್ನು ಹುಡುಕುವುದಾದರೆ ತುಂಗಭದ್ರ ನದಿಯ ಜಲಾನಯನ ಪ್ರದೇಶ ನದಿಗಳು ಆಳವಾದ ಕಮರಿ ಮಾದರಿಯ ಪಾತ್ರಗಳಲ್ಲಿ ಹರಿಯುವುದಲ್ಲದೆ ಮಳೆಗಾಲದಲ್ಲಿ ಅತಿಹೆಚ್ಚು ಪ್ರಮಾಣದ ಹರಿವನ್ನು ಹೊಂದಿರುತ್ತದೆ. ಪ್ರಾಚೀನ ಕಟ್ಟಡಗಳು ಈ ರಬಸವನ್ನು ತಡೆಯಲು ಶಕ್ತವಾಗಿಲ್ಲ ಕಾರಣ ಅವುಗಳನ್ನು ಕಲ್ಲುಗಳು ಮತ್ತು ಮಣ್ಣನ್ನು ಬಳಸಿ ನಿರ್ಮಿಸಿದ್ದ ಆಣೆಗಳಾಗಿದ್ದವು. ನಿಗದಿತ ಸಮಯದಲ್ಲಿ ಸರಿಯಾಗಿ ನಿರ್ವಹಿಸದ ಕಾರಣ ಅವು ಶಕ್ತಿಗುಂದಿ ನೀರಿನ ರಬಸಕ್ಕೆ ಕೊಚ್ಚಿಕೊಂಡು ಹೋಗಿರಬಹುದೆಂದು ಅಂದಾಜಿಸಬಹುದು.

ನದಿ ಪಾತ್ರವಿರದ ಇತರ ಪ್ರದೇಶದಲ್ಲಿ ತಗ್ಗಾದ ಪ್ರದೇಶದಲ್ಲಿ ಮಳೆಗಾಲದಲ್ಲಿ ನೀರನ್ನು ಸಂಗ್ರಹಿಸುವ ಸಲುವಾಗಿ ದೊಡ್ಡದಾದ ಏರಿಗಳನ್ನು ನಿರ್ಮಿಸಿ ಅವುಗಳಿಗೆ ತೂಬನ್ನು ಒದಗಿಸಿ ಹೆಚ್ಚಿನ ಹರಿವು ಮಳೆಗಾಲದ ನೀರ್ಗಾಲುವೆಗಳಲ್ಲಿ ಹರಿದು ಹೋಗವಂತೆ ಕೋಡಿಗಳನ್ನು ನಿರ್ಮಿಸಿ, ಏರಿಗಳನ್ನು ಸಂರಕ್ಷಿಸುವ ಅತ್ಯುನ್ನತ ತಂತ್ರಗಾರಿಕೆಯನ್ನು ಪ್ರತಿಯೊಂದು ಗ್ರಾಮದಲ್ಲಿ ಕಾಣಬಹುದು. ಪ್ರಾಚೀನ ಗ್ರಾಮದಲ್ಲಿ ಕನಿಷ್ಠ ಒಂದು ಕೆರೆಯನ್ನು ಕಾಣಬಹುದಾಗಿತ್ತು. ಪ್ರಾಕೃತಿಕ ಲಕ್ಷಣವನ್ನು ಆದರಿಸಿ ಕೆರೆಗಳ ನಿರ್ಮಾಣದ ಅವಶ್ಯಕತೆಯನ್ನು ಸಮೀಕ್ಷಿಸಲಾಗುವುದು.

ದಕ್ಷಿಣ ಕರ್ನಾಟಕವು ಅರೆ ಮಲೆನಾಡು ಮತ್ತು ಬಯಲು ಸೀಮೆಯ ವ್ಯಾಪ್ತಿಯಲ್ಲಿ ಹರಡಿರುವುದರಿಂದ ಈ ಪ್ರದೇಶದಲ್ಲಿ ಮಧ್ಯಮ ಪ್ರಮಾಣದಿಂದ ಸಾಧಾರಣವನ್ನುವಷ್ಟರ ಮಟ್ಟಿಗೆ ವಾರ್ಷಿಕ ಸರಾಸರಿಯ ಮಳೆಯು ಹಂಚಿಕೆಯಾಗಿದೆ.

ದಕ್ಷಿಣ ಕರ್ನಾಟಕ ಒಳನಾಡನ್ನು ಅರೆಮಲೆನಾಡು ಮತ್ತು ಮಳೆಯ ನೆರಳಿನ ಭಾಗವೆಂದು ವರ್ಗೀಕರಿಸಲಾಗಿದೆ. ಈ ಪ್ರದೇಶವು ಬಹುತೇಕವಾಗಿ ನೈರುತ್ಯ ಮಾನ್ಸೂನ್ ಮಾರುತುಗಳಿಂದ ಮಳೆಯನ್ನು ಪಡೆಯುತ್ತೇವೆ. ಪಶ್ಚಿಮ ಘಟ್ಟದ ಪೂರ್ವದ ಅಂಚಿನಿಂದ ಅಥವಾ ಇಳಿಜಾರಿನಿಂದ ಪ್ರಾರಂಭಮಾಡಿ ಬಂಗಾಳಕೊಲ್ಲಿಯ ಕಡೆಗೆ ಸಾಗಿದಂತೆ ಮಳೆಯ ಪ್ರಮಾಣ ಕಡಿಮೆಯಾಗುತ್ತದೆ. ಅಂದರೆ ಪಶ್ಚಿಮ ಘಟ್ಟಗಳಿಂದ ಪೂರ್ವಕ್ಕೆ ಸರಿದಂತೆ ಮಳೆಯ ಪ್ರಮಾಣ ಕಡಿಮೆಯಾಗುತ್ತದೆ. (ಅಂದರೆ ಪಶ್ಚಿಮ ಘಟ್ಟಗಳಿಂದ ಪೂರ್ವಕ್ಕೆ ಸರಿದಂತೆ ಮಳೆಯ ಪ್ರಮಾಣದ ಇಳಿಕೆಯಾಗಿರುವುದು ಕಂಡುಬರುತ್ತದೆ.) ಅಲ್ಲದೆ, ಈ ಪ್ರದೇಶದಲ್ಲಿ ಕೇವಲ ಮೂರರಿಂದ ನಾಲ್ಕು ತಿಂಗಳ ಅವಧಿಯಲ್ಲಿ ವಾರ್ಷಿಕ ಸರಾಸರಿಯ ಮಳೆಯ ಪ್ರಮಾಣ ಹಂಚಿಕೆಯಾಗಿದೆ.[1] ಹಾಗಾಗಿ ಈ ಪ್ರದೇಶದಲ್ಲಿ ಮಳೆಗಾಲದಲ್ಲಿ ಬೀಳುವ ಮಳೆಯನ್ನು ಆಧರಿಸಿ ಉಂಟಾಗುವ ಮಳೆಗಾಲದ ಪ್ರವಾಹವನ್ನು ತಡೆಗಟ್ಟಿ ಕೆರೆಗಳನ್ನು ನಿರ್ಮಿಸುವ ಪದ್ಧತಿ ಅತೀ ಪ್ರಾಚೀನ ಕಾಲದಿಂದಲೂ ಮುಂದುವರೆದುಕೊಂಡು ಬಂದಿದೆ. ನದಿಗಳು ಆಳವಾದ ಕಮರಿಗಳಲ್ಲಿ ಹರಿಯುವುದರಿಂದ ಅವುಗಳ ನೀರನ್ನು ಎತ್ತರದ ಸ್ಥಳಗಳಿಗೆ ಸ್ವಾಭಾವಿಕವಾಗಿ ಹರಿಸಲು ಸಾಧ್ಯವಾಗದ ಕಾರಣ ಸ್ಥಳೀಯವಾಗಿ ಭೂಮಿಯ ಇಳಿಜಾರಿಗೆ ತಕ್ಕಂತೆ ಎತ್ತರದ ಪ್ರದೇಶಗಳಲ್ಲಿ ಒಡ್ಡುಗಳನ್ನು ನಿರ್ಮಾಣ ಮಾಡಿ ಸ್ಥಳೀಯ ನೀರನ್ನು ಸ್ಥಳೀಯವಾಗಿ ವ್ಯವಸಾಯ ಮತ್ತು ಇತರ ಉದ್ದೇಶಗಳಿಗೆ ಬಳಸಲು ನಮ್ಮ ಪ್ರಾಚೀನರು ತಮ್ಮ ಜಾಣ್ಮೆ, ಕೌಶಲ ಮತ್ತು ಜ್ಞಾನವನ್ನು ಬಳಸಿ ತಮ್ಮ ಜೀವನವನ್ನು ಸಂಪತ್ಭರಿತವನ್ನಾಗಿ ಮಾಡಿಕೊಂಡರು.[2] ಕರ್ನಾಟಕದ ಸಾಂಸ್ಕೃತಿಕ ಇತಿಹಾಸವನ್ನು ಕುರಿತಾಗಿ ರಚಿಸಿರುವ ಹಲವಾರು ಗ್ರಂಥಗಳಲ್ಲಿ ಮತ್ತು ಆರ್ಥಿಕ ಅಧ್ಯಯನಗಳಲ್ಲಿ ಶಾಸನೋಕ್ತವಾದ ಕೆರೆಗಳ ನಿರ್ಮಾಣದ ಪ್ರಕ್ರಿಯೆಯನ್ನು ಕುರಿತು ಸ್ಥೂಲವಾಗಿ ವಿವರಿಸಿದ್ದಾರೆ.[3] ಅವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸಿದೆ.

ಈ ದಿಶೆಯಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ಪ್ರಕಟಿಸಿರುವ ಅಪ್ಪದೊರೆಯ ಗ್ರಂಥವನ್ನು ಉಲ್ಲೇಖಿಸಬಹುದು.[4] ಇವರು ತಮ್ಮ ಗ್ರಂಥದಲ್ಲಿ ವ್ಯವಸಾಯ ಮತ್ತು

ಕೈಗಾರಿಕೆಗೆ ಬಗೆಗೆ 6ನೇ ಅಧ್ಯಯನದಲ್ಲಿ ಚರ್ಚಿಸುತ್ತಾರೆ. ಆದರೆ ಹೆಚ್ಚಿನ ವಿವರಗಳ ಬೆಳೆಗಳು ಮತ್ತು ಅವುಗಳ ಮೇಲೆ ತೆರಿಗೆಗೆ ಮೀಸಲಾಗಿದೆ.

ಕರ್ನಾಟಕದ ಆರ್ಥಿಕ ಇತಿಹಾಸದ ಬಗೆಗೆ ಕುಪ್ಪಸ್ವಾಮಿಯವರ ಗ್ರಂಥಕೂಡ ಉಲ್ಲೇಖನಿಯೂ ಇವರು ಮೂರನೇ ಅಧ್ಯಯನದಲ್ಲಿ ಕೆರೆಗಳು ಅವುಗಳ ಹೆಸರು ಮತ್ತು ಅವುಗಳ ನಿರ್ಮಾಣದ ಬಗೆಗೆ ಸೂಕ್ಷ್ಮವಾಗಿ ವಿವರಿಸಿದ್ದಾರೆ.[5]

ಇವರ ನಂತರ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾದ ಎಸ್.ಗುರುರಾಜಚಾರ್[6] ರಚಿಸಿರುವ ಗ್ರಂಥದಲ್ಲಿ ನೀರಾವರಿಯ ಬಗೆಗೆ ಸೂಕ್ಷ್ಮವಾದ ಅಧ್ಯಯನ ಒಂದರ ಉಪವಿಭಾಗವನ್ನು ಮಾಡಿದ್ದಾರೆ. ಇಲ್ಲೂ ಕೂಡ ಕೆರೆಗಳ ನೀರಾವರಿಯ ಬಗೆಗೆ ಹೆಚ್ಚು ವಿವರಗಳು ದೊರೆಯುವುದಿಲ್ಲ. ಭಾರತೀಯರ ಅತೀ ಪ್ರಾಚೀನ ಕಾಲದಿಂದ ಕ್ರಿ.ಶ 1336ರವರೆಗೆ ನೀರಾವರಿ ಕಾಮಾಗಾರಿಗಳು ನಡೆದು ಬಂದ ವಿವರವನ್ನು ಸ್ಥೂಲವಾಗಿ ದಾಖಲಿಸಿದ್ದಾರೆ. ಆದರೆ ಯಾವ ಅಧ್ಯಯನಗಳು ಸಮಗ್ರ ಅಧ್ಯಯನಗಳಲ್ಲ.

ಜಿ.ಎಸ್.ದೀಕ್ಷಿತರ ಅಧ್ಯಯನ ಈ ದಿಶೆಯಲ್ಲಿನ ದಿಕ್ಸೂಚಿ ಅಧ್ಯಯನವಾಗಿದೆ.[7] ಇದರ ತರುವಾಯದ ಕೃತಿಗಳಾದ ರಾಜರಾಮ್ ಹೆಗಡೆಯವರ ಕೃತಿ,[8] ವಾಸುದೇವನ್‌ರವರ ಕೃತಿ.[9] ಸಿ.ಟಿ.ಎಂ.ಕೊಟ್ರಯ್ಯನವರ ಕೃತಿ,[10] ಟಿ.ವಿ.ನಾಗರಾಜು,[11] ಪಿ.ವಿ.ಕೃಷ್ಣಮೂರ್ತಿ,[12] ಹರಿಹರ ಶ್ರೀನಿವಾಸ್‌ರಾವ್[13] ಮುಂತಾದವರ ಗ್ರಂಥಗಳು ಮತ್ತು ಲೇಖನಗಳ ಈ ಸಾಲಿನಲ್ಲಿ ಉಲ್ಲೇಖಿಸಬಹುದಾದ ಕೃತಿಗಳು. ಆದರೆ, ಕೆರೆಯ ನಿರ್ಮಾಣದ ಅವಶ್ಯಕತೆಯನ್ನು ಭೌಗೋಳಿಕ ಹಿನ್ನೆಲೆಯಲ್ಲಿ ಬಹುಶಃ ಇವು ಯಾವ ಕೃತಿಗಳ ಅವಲೋಕಿಸಲ್ಲವೆಂದು ಹೇಳಬಹುದು.

ಪ್ರಾಚೀನ ಕರ್ನಾಟಕದಲ್ಲಿ ಕೆರೆಗಳನ್ನು ವಿವಿಧ ಹೆಸರುಗಳಿಂದ ಕರೆಯಲಾಗುತ್ತಿದೆಂದು ಕುಪ್ಪಸ್ವಾಮಿಯವರು ದಾಖಲಿಸುತ್ತಾರೆ.[14] ಕೆರೆ, ಸಮುದ್ರ, ಏರಿ, ಕಟ್ಟೆ, ಕೊಳ, ಕುಟ್ಟಣೆ, ಸರೋವರ, ತೀರ್ಥ, ತಟಾಕ, ದೊಣೆಗಳೆಂದು

ಕರೆಯಲಾಗುತ್ತಿತ್ತೆಂದು ಶಾಸನಗಳು ದಾಖಲಿಸುತ್ತವೆ. ಇದನ್ನು ಮುಂದುವರೆಸಿ ಹೇಳುವುದಾದರೆ ಶಿಕಾರಿಪುರ ತಾಲ್ಲೂಕಿನ ಅರಸಿಯಕೆರೆಯನ್ನು ಹೆಸರಿಸುತ್ತವೆ.[15] ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನ ಶಾಸನವೊಂದು ಸೋಮನಾಥ ಸಮುದ್ರವನ್ನು ಹೆಸರಿಸುತ್ತದೆ. ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನ ಶಾಸನವು ಮೂಲಸ್ಥಾನದ ಕೆರೆಯ ಮೊದಲ ಏರಿಯೆಂದು ದಾಖಲಿಸುತ್ತದೆ.[16] ಹಾಸನ ಜಿಲ್ಲೆಯ ಬೇಲೂರಿನ ಅಗಸರಕಟ್ಟೆ ಮುಂತಾದ ಕಟ್ಟೆಗಳನ್ನು ಉಲ್ಲೇಖಿಸುತ್ತದೆ.[17] ನಾಗಮಂಗಲದ ಹಿರಿಯ ಕೆರೆಯ ಕೆಳಭಾಗದಲ್ಲಿ ನಿರ್ಮಾಣಗೊಂಡಿರುವ ಕಲ್ಯಾಣಿಯನ್ನು ಹಂಪಿ ಅರಸನ ಕೆರೆಯೆಂದು ಕರೆಯಲಾಗುತ್ತದೆ.[18] ಬೆಂಗಳೂರು ತಲೂಕಿನ ಶಾಸನವೊಂದರಲ್ಲಿ ಕುಂಟೆಯ ಪ್ರಸ್ತಾಪವಿದೆ.[19] ಶ್ರವಣಬೆಳಗೊಳದ ಶಾಸನದಲ್ಲಿ ಲಲಿತ ಸರೋವರವರ ಉಲ್ಲೇಖವಿದೆ.[20] ಇದೆ ಸ್ಥಳದ ಮತ್ತೊಂದು ಶಾಸನ ಕೊಪಣ ತೀರ್ಥವನ್ನು ಉಲ್ಲೇಖಿಸುತ್ತದೆ.[21] ಇದು ಸ್ಥಳವಾಚಕವು ಹೌದು ನೀರಿನ ಆಸರೆಯವಾಚಕವೂ ಹೌದು.

ಅರಸೀಕೆರೆಯ ಶಾಸನವೊಂದರಲ್ಲಿ ಮಹಾಶಾಂತಿ ತಟಾಕವೆಂಬ ಉಲ್ಲೇಖ ದೊರೆಯುತ್ತದೆ. ಅರಸಿಯ ಕೆರೆ ಸಿರಿಗಾಲಬ್ಬೆಯ ಕೆರೆ, ಪೆರುಮಾಳಸಮುದ್ರ, ಬಿಂಬಿಶೆಟ್ಟಿಯ ಕೆರೆ, ಪಟ್ಟಣಶೆಟ್ಟಿಯ ಕೆರೆ, ಕಾಚಿ ಸಮುದ್ರದ ಕೆರೆ, ಸಿರಿವಾರದ ಕೆರೆ, ಬಿದರಕೆರೆ, ತಾರೆಯಗೆರೆ ಮುಂತಾದ ಉಲ್ಲೇಖಗಳು ಗ್ರಾಮನಾಮದ ಹೆಸರನ್ನು ಉಲ್ಲೇಖಿಸುತ್ತದೆ.[22] ಹಾಗಾಗಿ ಗ್ರಾಮನಾಮದ ಪೂರ್ವಪದ ಎಲ್ಲೆಲ್ಲಿ ನೀರಿನ ಆಶ್ರಯ ನಾಮವಾಚಕ ವಾಗಿದೆಯೋ ಅಲ್ಲೆಲ್ಲ ಮಾನವ ನಿರ್ಮಿತ ಕೆರೆಗಳು ರಚನೆಯಾಗಿದ್ದವೆಂದು ತಿಳಿದುಬರುತ್ತವೆ.

## ಕೆರೆಗಳ ವರ್ಗೀಕರಣ ಮತ್ತು ಅಂಗಗಳು

ಕೆರೆಗಳು ರಚನೆಯಾದುದ್ದೇ ಮಾನವನ ನೀರಿನ ಅವಶ್ಯಕತೆಯನ್ನು ಪೂರೈಸುವ ಸಲುವಾಗಿ ಈ ಕೆರೆಗಳು ಅತೀ ಪ್ರಾಚೀನ ಕಾಲದಿಂದ ನಿರ್ಮಾಣವಾಗಿರುವುದನ್ನು ಸಾಕಷ್ಟು ವಿಸ್ತಾರವಾಗಿ ಈ ಮೊದಲಿನ ಅಧ್ಯಯಗಳಲ್ಲಿ ತಿಳಿಯಲು ಪ್ರಯತ್ನಿಸಲಾಗಿದೆ.

ಹಾಗಾಗಿ ಕೆರೆಗಳನ್ನು ನಿರ್ಮಿಸುವ ಕಾರ್ಯ ಸಾಮಾಜಿಕವು, ಸಾಂಸ್ಕೃತಿಕವು, ಧಾರ್ಮಿಕವು ಆದ ವಿಸ್ತಾರವಾದ ಉದ್ದೇಶವುಳ್ಳದ್ದೆಂದು ತಿಳಿದುಬರುತ್ತದೆ.

ಶಾಸನಗಳಲ್ಲಿ ಕೆರೆಗಳನ್ನು ವಿವಿಧ ಹೆಸರುಗಳಿಂದ ಕರೆದಿರುವುದನ್ನು ಈಗಾಗಲೇ ಅಧ್ಯಯನ ಮಾಡಲಾಗಿದೆ. ಹೀಗಾಗಿ ಕೆರೆಗಳ ವರ್ಗೀಕರಣವನ್ನು ಕುರಿತು ಕಲೆಯಾಕುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಶಾಸನಗಳು ಕೆರೆಗಳನ್ನು ಕೆರೆ, ಕಟ್ಟೆ, ಸಾಗರ, ಸಮುದ್ರ ತಟಾಕವೆಂದು ವರ್ಣಿಸುತ್ತವೆ.[23] ಅಲ್ಲದೆ ಹಿರಿಯಕೆರೆ, ಪಿರಿಯಕೆರೆ, ಹೆಗ್ಗೆರೆ ಎಂದು ವರ್ಣಿಸುತ್ತವೆ.[24] ಕೆರೆಯ ಹೆಸರುಗಳನ್ನು ಅನುಸರಿಸಿ ಅವುಗಳನ್ನು ನಾವು ವರ್ಗೀಕರಿಸಿಕೊಳ್ಳಬೇಕಾಗುತ್ತದೆ. ಈ ಹಂತದಲ್ಲಿ ನಾವು ಪ್ರಾಣಿ ಮತ್ತು ಮಾನವನ ನೀರಿನ ಅವಶ್ಯಕತೆಗಳಿಗೆ ನಿರ್ಮಿಸಿದ ಸಣ್ಣ ಪ್ರಮಾಣದ ನೀರಿನ ಆಸರೆಗಳನ್ನು ಕುಂಟಿ, ಎಂದು ಅದಕ್ಕಿಂತ ಸಣ್ಣದಾದವುಗಳನ್ನೇ ಕೊಳಗಳೆಂದು ಕರೆಯುತ್ತಾರೆ.[25] ಕೆಲವೊಮ್ಮೆ ಕಲ್ಲುಕಟ್ಟಡಗಳನ್ನು ಹೊಂದಿ ನಿರ್ಮಿಸಿಲ್ಪಟ್ಟಿರುತ್ತವೆ. ಕೆಲವೊಮ್ಮೆ ಕೇವಲ ಒಂದು ಏರಿಯಾಗಿರುತ್ತದೆ. ನೀರನ್ನು ನೀರಾವರಿಗಾಗಿ ಬೇರೆ ಯಾವುದೇ ಯಾವುದೇ ಕಾರ್ಯಗಳಿಗೆ ಬಳಸದ ಕೇವಲ ಪ್ರಾಣಿಗಳ ಕುಡಿಯುವ ನೀರಿನ ಅವಶ್ಯಕತೆಗಳಿಗಾಗಿ ಮತ್ತು ಮಾನವನ ಇತರ ಅವಶ್ಯಕತೆಗಾಗಿ ಬಳಸುತ್ತಾರೆ. ಇದಕ್ಕಿಂತ ಹಿರಿದಾದವುಗಳನ್ನು ಅಂದರೆ ಏರಿ, ತೂಬು, ಕೋಡಿಗಳನ್ನು ಹೊಂದಿರುವ ಕುಂಟೆಗಳಿಗಿಂತ ದೊಡ್ಡ ಪ್ರಮಾಣದ ನೀರಿನ ಆಸರೆಗಳನ್ನು ಕೆರೆಗಳೆಂದು ಕರೆಯಲಾಗುತ್ತದೆ.[26] ಕೆರೆ ಎಂದಾಕ್ಷಣ ಅದು ನೀರನ್ನು ಸಂಗ್ರಹಿಸಿರುವ ಕೆರೆಯ ಸಂಗ್ರಹಣ ಪ್ರದೇಶ ಏರಿ ಅಥವಾ ಏರಿಗಳು ಮತ್ತು ಗುಡ್ಡಗಳ ನಡುವಿನ ಏರಿ ಮುಂತಾದವುಗಳಿಗೆ ಅಳವಡಿಸಲಾದ ತೂಬು ಹಾಗೂ ಕೋಡಿಯನ್ನು ಹೊಂದಿರುವ ಜಲಸಂಗ್ರಹಣಗಾರವನ್ನು ಕೆರೆ ಎಂದು ಕರೆಯಲಾಗುತ್ತದೆ. ಕಲ್ಯಾಣ ಚಾಲುಕ್ಯರ ಮನೆತನದ ಮೂರನೇ ಸೋಮೇಶ್ವರನು ರಚಿಸಿರುವ ಮಾನಸೋಲ್ಲಾಸದಲ್ಲಿ ನದಿಗಳನ್ನು ಪ್ರವಾಹ ಕ್ಷೇತ್ರದಲ್ಲಿ ನಿರ್ಮಿಸಿದ ದೊಡ್ಡದಾದ ಜಲ ಸಂಗ್ರಹಣ ಕೆರೆಗಳನ್ನು ತಟಾಕವೆಂದು ಗುರುತಿಸುತ್ತಾನೆ.[27]

ಕದಂಬರು ಚಂದ್ರವಳ್ಳಿಯಲ್ಲಿ ನಿರ್ಮಿಸಿದ ಕೆರೆ ಇದೇ ಮಾದರಿಯದು.[28] ಮಂಡ್ಯ ಜಿಲ್ಲೆಯ ತೊಂಡನೂರಿನ ಕೆರೆಕೂಡ ಇದೇ ಮಾದರಿಯದು.[29]

ಇವು ಮಳೆಗಾಲದ ನದಿಯ ಹರಿವಿನ ಪ್ರದೇಶದಲ್ಲಿ ನದಿಯ ಪಾತ್ರಕ್ಕೆ ಅಡ್ಡಲಾಗಿ ನಿರ್ಮಾಣಗೊಂಡ ಏರಿಗಳಿಂದಾಗಿ ಜಲಸಂಗ್ರಹಣಗಾರಗಳಾಗಿವೆ. ಕೋಲಾರ ಜಿಲ್ಲೆಯ ರಾಮಸಾಗರ, ಶಾಂತಿಸಾಗರ, ಕುಣಿಗಲ್‌ಕೆರೆ, ಮಧಗ, ದರೋಜಿಕೆರೆ ಮುಂತಾದವು ಇದೆ ಬಗೆಯಲ್ಲಿ ನಿರ್ಮಾಣಗೊಂಡ ಕೆರೆಗಳಾಗಿವೆ.[30] ಅಂದಿನ ಕಾಲದಲ್ಲಿ ನೀರಿನ ಅವಶ್ಯಕತೆಯ ಪ್ರಮಾಣವನ್ನು ಅಂದಾಜಿಸಿ ಅದಕ್ಕೆ ಸೂಕ್ತ ನಿವೇಶವನ್ನು ಆರಿಸಿ ಅಂತಹ ಪ್ರದೇಶಗಳಲ್ಲಿ ಸೂಕ್ತ ತಂತ್ರಜ್ಞಾನದ ಬಳಕೆಯೊಂದಿಗೆ ಕೆರೆಗಳನ್ನು ನಿರ್ಮಿಸುತ್ತಿದ್ದರು.

ನೀರಿನ ಹರವಿನ ಆಗಾಧತೆಯನ್ನು ಅನುಸರಿಸಿ ಅವುಗಳನ್ನು ತಟಾಕಗಳು, ಸಮುದ್ರಗಳು, ಹಿರಿಯಕೆರೆ, ಪೆರ್ಗೆರೆ, ಹೆಗ್ಗೆರೆ, ಕೆರೆಗಳೆಂದು ಶಾಸನಗಳು ವರ್ಗೀಕರಿಸಿವೆ ಎಂದೆ ದಾಖಲಿಸಬಹುದು. ಆದರೆ ಇವರೆಗಿನ ಶಾಸನದ ಅಧ್ಯಯನವು ಈ ವರ್ಗೀಕರಣಕ್ಕೆ ಯಾವುದೇ ಸೂತ್ರವನ್ನಾಗಲೀ ಅಥವಾ ಪ್ರತಿ ಹಂತದ ವರ್ಗೀಕರಣಕ್ಕೆ ಕೆರೆಗಳ ನೀರಿನ ಸಾಮರ್ಥ್ಯದ ಸಂಗ್ರಹಣೆಯನ್ನಾಗಲಿ ವಿಸ್ತೀರ್ಣವನ್ನಾಗಲೀ ಖಚಿತಪಡಿಸಿಲ್ಲ. ಕೆರೆಯನ್ನು ವರ್ಗೀಕರಿಸುವ ವಿಧಾನ ತುಂಬ ಇತ್ತೀಚನದು. 19ನೇ ಶತಮಾನದಲ್ಲಿ ಈ ಪ್ರಕ್ರಿಯೆಯು ಪ್ರಾರಂಭವಾಯಿತು.[31] ಕೆರೆಗಳನ್ನು ದಾಖಲಿಸಿದ ಮತ್ತು ಸರ್ವೇಕ್ಷಿಸಿದ ಮೆಕಂಜಿಯಾಗಲಿ, ಫ್ರಾನ್ಸಿಸ್ ಬುಕನನ್ ಆಗಲಿ ಅವುಗಳನ್ನು ನಿಗಧಿತ ವರ್ಗೀಕರಣಕ್ಕೆ ಈಡುಮಾಡುವುದಿಲ್ಲವಾದರು ಧನಕರುಗಳಿಗೆ ನೀರು ಒದಗಿಸುವ ಸಣ್ಣ ಕಟ್ಟೆಗಳೇ ಅಥವಾ ಸಣ್ಣ ಜಲಾಶಯಗಳೇ ಕಟ್ಟೆಯೆಂದು ನೀರಾವರಿಗೆ ಬಳಸಿ ದೊಡ್ಡ ಜಲ ಸಂಗ್ರಹಣಗಾರಗಳನ್ನು ಕೆರೆಗಳೆಂದು ಕೇವಲ ಎರಡು ವರ್ಗವಾಗಿ ವಿಭಾಗಿಸುತ್ತಾನೆ.[32] ಬಿ.ಎಲ್.ರೈಸ್ ಮತ್ತು ಹಯವಧನರಾವ್‌ರ ಗೆಜೆಟಿಯರ್‌ನಲ್ಲಿ ಕೆರೆಗಳು ಉತ್ಪತ್ತಿ ಮಾಡುವ ಕಂದಾಯದ ಆಧಾರದ ಮೇಲೆ ವರ್ಗೀಕರಣಗೊಂಡಿದೆ.[33] ಕೆರೆಗಳನ್ನು ವರ್ಗೀಕರಿಸುವ ಹಂತದಲ್ಲಿ ನದಿಗಳಿಂದ ನೀರನ್ನು ಸಂಗ್ರಹಿಸುವ ಮತ್ತು ಜಲ ಸಂಗ್ರಹಣೆಗೆ ಮಳೆಯನ್ನು

ಆದರಿಸಿದ ಕೆರೆಗಳೆಂದು ವರ್ಗೀಕರಿಸಿದೆ.[34] ಮಳೆಗಾಲದ ನದಿಗಳಿಗೆ ಅಡ್ಡ ಕಟ್ಟೆಯನ್ನು ಕಟ್ಟಿ ಕಾಲುವೆಗಳ ಮೂಲಕ ಇತರ ಕೆರೆಗಳನ್ನು ತುಂಬಿಸುವ ವಿಧಾನವು ಇಲ್ಲಿ ಬಳಕೆಯಲ್ಲಿದೆ.[35]

ಈ ಬಗೆಯ ಕೆರೆಗಳನ್ನು ನದಿಯ ನೀರಿನಿಂದ ತುಂಬವ ಕೆರೆಗಳೆಂದು ವರ್ಗೀಕರಿಸಿದೆ. ಬಹುತೇಕ ಕರ್ನಾಟಕದ ಎಲ್ಲಾ ಕೆರೆಗಳು ಎರಡನೇ ವರ್ಗದ ಕೆರೆಗಳಾಗಿವೆ.[36] ಆ ಪ್ರದೇಶದಲ್ಲಿ ಬೀಳುವ ಮಳೆಯನ್ನು ಆಧರಿಸಿ ಜಲ ಸಂಗ್ರಹಣೆಯಾಗುವ ಮತ್ತು ಅದನ್ನು ಪುನರ್ ಬಳಕೆಯಾಗಲು ಸಹಾಯವಾಗುವ ಆಯಾಕಟ್ಟಿನ ಸ್ಥಳಗಳಲ್ಲಿನ ಮಳೆಯ ನೀರನ್ನು ಸಂಗ್ರಹಿಸಲು ಪ್ರಯತ್ನ ಪೂರ್ವಕವಾಗಿ ನಿರ್ಮಾಣವಾದ ಜಲಾಶಯಗಳೇ ಈ ಕೆರೆಗಳಾಗಿವೆ.

ಮೇಜರ್, ಸ್ಯಾಂಕಿ ತನ್ನ ಸಮೀಕ್ಷೆಯಲ್ಲಿ ಕೆರೆಗಳನ್ನು ಎರಡು ವಿಧವಾಗಿ ವರ್ಗೀಕರಿಸಿದ್ದಾರೆ ಅದೆಂದರೆ ಊರಿನ ಕೆರೆಗಳು ಮತ್ತು ಊರಂಚಿನ ಕೆರೆಗಳು. ಊರಿನ ಕೆರೆಗಳು ಸಣ್ಣ ಕೆರೆಗಳಾಗಿದ್ದು ಆ ಗ್ರಾಮದ ಅಥವಾ ಆ ಊರಿನ ಅವಶ್ಯಕತೆಯನ್ನು ಪೂರೈಸುತ್ತಿದ್ದವು. ಊರಂಚಿನ ಕೆರೆಗಳು ಮಳೆಗಾಲದ ನದಿಗಳ ಹರಿವಿಗೆ ಅಡ್ಡಲಾಗಿ ನಿರ್ಮಿಸಿದ ಬಹು ಉಪಯೋಗಿ ಜಲಾಶಯಳಾಗಿದ್ದವೆಂದು ದಾಖಲಿಸಲಾಗಿದೆ. ಈ ಯಾವ ವರ್ಗೀಕರಣಗಳಿಗೂ ನಿಖರವಾದ ನಿಯಮ ಮತ್ತು ಗಾತ್ರದ ಕಟ್ಟು ಪಾಡುಗಳಿದ್ದಂತೆ ತಿಳಿದುಬರುವುದಿಲ್ಲ.[37]

ಡಾ.ಎಸ್.ವಾಸುದೇವನ್ ರವರು ಕೆರೆಗಳ ವರ್ಗೀಕರಣವನ್ನು ಅವುಗಳ ಗುಣವಾಚಕಗಳ ಆಧಾರದ ಮೇಲೆ ಅವುಗಳ ವಿಸ್ತೀರ್ಣವನನ್ನು ಆದರಿಸಿಯೇ ವ್ಯವಸಾಯಕ್ಕಾಗಿ ನೀರು ಒದಗಿಸುತ್ತದೆ ಎಂಬ ಆಧಾರದ ಮೇಲೆ ಕೆರೆಯ ನೀರು ಸಂಗ್ರಹಣ ಸಾಮರ್ಥ್ಯವನ್ನು ಅದರ ಅಚ್ಚುಕಟ್ಟು ಪ್ರದೇಶವನ್ನು ಮುಖ್ಯ ಅಳತೆಗೋಲನ್ನಿಟ್ಟುಕೊಂಡು ನಮ್ಮ ಪ್ರಾಚೀನರು ಅವುಗಳ ಹೆಸರುಗಳನ್ನು ಹಿರಿಯಕೆರೆ, ಸಾಗರ, ಸಮುದ್ರ, ಕೆರೆ ಇತ್ಯಾದಿಯಾಗಿ ಹೆಸರಿಸಿದ್ದಾರೆಂದು ಅಭಿಪ್ರಾಯ ಪಡುತ್ತಾರೆ.[38]

ಮುಂದುವರಿದು ಕೆರೆ, ಕಟ್ಟೆ, ಕುಂಟೆಗಳ ನಡುವಿನ ವ್ಯತ್ಯಾಸವನ್ನು ಕಂಡುಹಿಡಿಯಲು ಸಾಧ್ಯವೆಂದು ತಿಳಿಸುತ್ತಾರೆ. ಕರ್ನಾಟಕದಲ್ಲಿ ಅದರಲ್ಲೂ ದಕ್ಷಿಣ

ಕರ್ನಾಟಕದಲ್ಲಿ ಪ್ರಚಲಿತದಲ್ಲಿರುವ ಸಾಂಪ್ರದಾಯದಂತೆ ಕಟ್ಟೆಗಳು ಸಾಮಾನ್ಯ ಕೆರೆಗಳಿಗಿಂತ ಚಿಕ್ಕದಾದವುಗಳು ಕುಂಟೆ ಕಟ್ಟೆಗಿಂತ ಚಿಕ್ಕದು ಹಾಗಾಗಿ ಯಾವ ಯಾವ ನೀರಿನ ಆಸರೆಗಳು ವ್ಯವಸಾಯಕ್ಕೆ ಬಳಸಲ್ಪಟ್ಟಿದೆಯೋ ಅವುಗಳನ್ನು ಕೆರೆಗಳೆಂದು. ಉಳಿದ ಕೆರೆಯ ಮಾದರಿ ನೀರಿನ ಆಸರೆಗಳನ್ನು ಕಟ್ಟೆ ಮತ್ತು ಕುಂಟೆಗಳೆಂದು ಕರೆದಿದ್ದಾರೆ.[39] ಶಾಸನಗಳಲ್ಲಿ ಉಲ್ಲೇಖಿತವಾಗಿರುವ, ಬಸುರಿಕಟ್ಟೆ, ಅಗಸರಕಟ್ಟೆ ಮುಂತಾದ ಉಲ್ಲೇಖಗಳು ಅವುಗಳ ವಿಸ್ತಾರವನ್ನು ಮತ್ತು ಅವು ಇತರ ಉದ್ದೇಶಗಳಿಗೆ ಬಳಕೆಯಾಗುತ್ತಿದ್ದ ಉದ್ದೇಶಗಳನ್ನು ಖಚಿತಪಡಿಸುತ್ತವೆ. ಉದಾಹರಣೆಗೆ ನಾಗಮಂಗಲದ ಮತ್ತು ತೊಂಡನೂರಿನ ಕೆರೆಗಳನ್ನು ಉಲ್ಲೇಖಿಸಬಹುದು. ನಾಗಮಂಗಲದ ಹಿರಿಯಕೆರೆ ದೊಡ್ಡ ಕೆರೆಯಾದರೆ. ಅಮ್ಮನಕೆರೆ ಅದಕ್ಕಿಂತ ಚಿಕ್ಕದು. ನಾಗಮಂಗಲದ ಸೂಳೆಯಕೆರೆ ಗಾತ್ರದಲ್ಲಿ ಹಿರಿಯಕೆರೆಯಷ್ಟೆ ಇದ್ದರು ಅದರ ಹೆಚ್ಚುವರಿ ನೀರು ನಾಗಮಂಗಲದ ಇತರ ಕೆರೆಗಳ ಪೂರಣಕ್ಕೆ ಬಳಕೆಯಾಗುತ್ತದೆ.

ಈ ವರ್ಗೀಕರಣದಲ್ಲಿಯು ಯಾವುದೇ ಖಚಿತವಾದ ವರ್ಗೀಕರಣದ ನೀಲಿನಕ್ಷೆ ಕಂಡುಬರುವುದಿಲ್ಲ. ಹಾಗಾಗಿ ಈ ದಿಶೆಯಲ್ಲಿ ಕೆರೆಗಳನ್ನು ವರ್ಗೀರಿಸಲು ಭೌಗೋಳಿಕ ವಿಸ್ತಾರದ ಸಮೀಕ್ಷೆಯೊಂದೇ ಮಾರ್ಗ. ಪ್ರಸ್ತುತ ಅಧ್ಯಾಯನವು ಈ ಉದ್ದೇಶವನ್ನು ಹೊಂದಿಲ್ಲವಾದ್ದರಿಂದ ಆ ಬಗೆಯ ಅಧ್ಯಯನವನ್ನು ಕೈಬಿಡಲಾಗಿದೆ.

## ಕೆರೆಯ ಅಂಗಗಳು

ಕೆರೆಗೆ ಸಂಬಂಧಿಸಿದ ಅಂಗಗಳೆಂದರೆ ಕೆರೆಗಳ ಜಲಾನಯನ ಪ್ರದೇಶ, ಕೆರೆಯ ಅಂಗಳ ಅಥವಾ ಕೆರೆಯ ತಳ, ಕೆರೆಯ ಏರಿ, ಆಯಾ ಕಟ್ಟು ಅಥವಾ ಅಚ್ಚುಕಟ್ಟು ಪ್ರದೇಶ, ತೂಬುಗಳು, ಕೆರೆಗೆ ನೀರು ಉಣಿಸುವ ಕಾಲುವೆಗಳು, ಕೆರೆಯ ನೀರು ಹರಿಸುವ ಕಾಲುವೆಗಳು, ಕೋಡಿಗಳು, ಮುಂದಿನ ಪುಟಗಳಲ್ಲಿ ಕೆರೆಯ ಈ ಅಂಗಗಳ ವಿವರಣೆಯನ್ನು ಗಮನಿಸೋಣ.

### 1. ಜಲಾನಯನ ಪ್ರದೇಶ

ನೀರಾವರಿಗೆ ಬಳಸುವ ಎಲ್ಲಾ ನೀರಿಗೂ ಮಳೆಯೇ ಆಧಾರ ನೆಲೆದ ಮೇಲೆ ಬೀಳುವ ಮಳೆಯ ನೀರು ಒಡನಯೇ ಹರಿದು ಹೋಗುವುದಿಲ್ಲ. ಅಲ್ಲಿರುವ ಸಸ್ಯವರ್ಗ ಆ ನೀರನ್ನು ನಿಧಾನವಾಗಿ ಹರಿಯಲು ಬಿಡುತ್ತದೆ. ಹೀಗೆ ಹರಿಯವು ನೀರು ಭೂಮಿಯ ಇಳಿಜಾರನ್ನು ಅನುಸರಿಸಿ ಇಳಿಜಾರಿಗೆ ಅನುಗುಣವಾಗಿ ಹರಿದು ಹೋಗುತ್ತದೆ. ಸಾಮಾನ್ಯವಾಗಿ ಈ ಪ್ರದೇಶದಲ್ಲಿ ಬೀಳುವ ಮಳೆಯ ಮಳೆಯ ಪ್ರಮಾಣವನ್ನು ಅನುಸರಿಸಿ ಅದರ ಅಂದಾಜಿನ ಮೇಲೆ ಮಳೆಗಾಲದ ನೀರ್ಗಾಲುವೆಗಳ ಹರಿವನ್ನು ಅಧ್ಯಯನ ಮಾಡಿ ಆಯಾಕಟ್ಟಿನ ಪ್ರದೇಶದಲ್ಲಿ ಪ್ರವಾಹವನ್ನು ತಡೆಯು ಅಥವಾ ನಿರ್ಗಾಲುವೆಗಳು ದಿಕ್ಕನ್ನು ಬದಲಿಸುವ ಪ್ರಯತ್ನ ಮಾಡಲಾಗುತ್ತದೆ. ಹೀಗೆ ಸಂಗ್ರಹವಾಗುವ ನೀರನ್ನು ಕೆರೆಗಳಲ್ಲಿ ಅಥವಾ ಜಲಾಶಯಗಳಲ್ಲಿ ಸಂಗ್ರಹಿಸಲಾಗುತ್ತದೆ. ಈ ಕೆರೆಗಳ ಅಥವಾ ಜಲಾಶಯಗಳು ಯಾವ ಎಲ್ಲಾ ಪ್ರದೇಶದ ಮಳೆಯ ನೀರನ್ನು ಸಂಗ್ರಹಿಸಿಕೊಳ್ಳುತ್ತದೆಯೋ ಆ ಪ್ರದೇಶದ, ಮಳೆಯ ನೀರನ್ನು ಸಂಗ್ರಹಿಸಿಕೊಳ್ಳುತ್ತದೆಯೋ ಆ ಪ್ರದೇಶವನ್ನು ಆಯಾ ಕೆರೆಯ ಜಲಾನಯನ ಪ್ರದೇಶವೆಂದು ಕರೆಯಲಾಗುತ್ತದೆ.[40] ಈ ಹಂತದಲ್ಲಿ ಕೆರೆಗೆ ನೀರು ಉಣಿಸುವ ಪೂರಣ ಕಾಲುವೆಯನ್ನು ಗಮನಿಸಬೇಕು.

## 2. ಪೂರಣ ಕಾಲುವೆಗಳು

ಈ ಹಿಂದಿನ ಅಧ್ಯಯನದಲ್ಲಿ ಕೆರೆಗಳ ನಿರ್ಮಾಣದ ಬಗೆಗೆ ಮಾತನಾಡುತ್ತಾ ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ಸಿದ್ದಗಂಗಾ ಪರಿಸರದ ಕೆರೆಗಳ ಬಗೆಗೆ ಎಂ.ಜಿ.ಮಂಜುನಾಥರ ಕ್ಷೇತ್ರಕಾರ್ಯವನ್ನು ಉಲ್ಲೇಖಿಸಲಾಗಿತ್ತು.[41] ವಿಜಯನಗರದ ಸಾಮಾಂತರಾದ ಒಂದನೇ ಕೆಂಪೇಗೌಡರು ಶಿವಗಂಗೆ ಬೆಟ್ಟ ಸುತ್ತಲು ಮಳೆ ನೀರನ್ನು ಸಂಗ್ರಹಿಸುವ ಉದ್ದೇಶದಿಂದಾಗಿ ಕಾಲುವೆಗಳನ್ನು ನಿರ್ಮಿಸಿ. ಆ ಕಾಲುವೆಗಳ ನೀರನ್ನು ಕೆರೆಗಳಿಗೆ, ತುಂಬಿಸುವಂತೆ ಪ್ರಯತ್ನ ಮಾಡಿದರೆಂದು ದಾಖಲಿಸುತ್ತಾರೆ. ಶಿವಗಂಗೆ ಬೆಟ್ಟದ ಪರಿಸರದಲ್ಲಿರುವ ಕೆರೆಗಳು ಮೊದಲು ಭಾರಿ ತುಂಬಿದಾಗ ಕೆಂಪೇಗೌಡರ ಹೆಸರಿನಲ್ಲಿ ಗಂಗಾ ಪೂಜೆಮಾಡಿ ಬಾಗಿನ ಅರ್ಪಿಸಿ ತೆಪ್ಪೋತ್ಸವ ಮಾಡುತ್ತಾರೆ.[42]

ಈ ಎಲ್ಲಾ ಪ್ರಕ್ರಿಯೆಗಳು ಪ್ರಾರಂಭವಾದದ್ದು 1ನೇ ಕೆಂಪೇಗೌಡರು ವ್ಯರ್ಥವಾಗಿ ಹರಿದು ಹೋಗುತ್ತಿದ್ದ ನೀರನ್ನು ಬಳಸಲು ನಾಲೆಗಳನ್ನು ತೋಡಿಸಿ ಆ ನಾಲೆಗಳ ಮೂಲಕ ಕುಣಿಗಲ್ ಕೆರೆಯವರೆಗೆ, ಕೆರೆಗಳ ಪೂರಣಕ್ಕೆ ಬಳಸಿಕೊಂಡದ್ದನ್ನು ದಾಖಲಿಸಿದ್ದಾರೆ. ಅಷ್ಟೆ ಅಲ್ಲದೆ ಮಳೆಗಾಲದಲ್ಲಿ ತುಂಬ ಹರಿಯುವ ಎಣ್ಣೆಹೊಳೆಯು ಇದರ ಪ್ರಾರಂಭದ ಹರಿವು ಉಂಟಾಗಲು ಒಂದನೇ ಕೆಂಪೇಗೌಡರು ನಿರ್ಮಿಸಿದ ನಾಲೆಗಳು ಕಾರಣವೆಂದು ದಾಖಲಿಸಿದ್ದಾರೆ.[43] ಇದೇ ಬಗೆಯ ಪೂರಣ ಕಾಲುವೆಗಳು ಕೋಲಾರ ಜಿಲ್ಲೆಯ ಪ್ರದೇಶದಲ್ಲಿ ಕಂಡುಬರುತ್ತವೆಯೆಂದು ಟಿ.ವಿ. ನಾಗರಾಜು ತಮ್ಮ ಲೇಖನ ಹಾಗೂ ಗ್ರಂಥಗಳಲ್ಲಿ ಉಲ್ಲೇಖಿಸುತ್ತಾರೆ. ಕ್ರಿ.ಶ 1388ರ ಗೌರಿಬಿದನೂರಿನ ಕಲ್ಲೂಡಿ ಶಾಸನವು ಇದೇ ಬಗೆಯ ಕಾಲುವೆಯೊಂದನ್ನು ಉಲ್ಲೇಖಿಸುತ್ತದೆ.[45]

## 3. ಕೆರೆಯ ಅಂಗಳ

ಮಳೆಗಾಲದ ನಿರ್ಗಾಲುವೆಗಳಿಗೆ ಅಡ್ಡಲಾಗಿ ಆಯಾಕಟ್ಟಿನ ಪ್ರದೇಶದಲ್ಲಿ ಕೆರೆಗಳ ಏರಿಯನ್ನು ನಿರ್ಮಿಸಲಾಗುತ್ತದೆ. ಪ್ರತಿಯೊಂದು ಕೆರೆಯ ಏರಿಯು ಗರಿಷ್ಠ ಮಿತಿಯನ್ನು ಹೊಂದಿರುತ್ತದೆ. ಅದು ಗರಿಷ್ಠ ಮಿತಿಯನ್ನು ಮೀರಿದ ನಂತರ ಕೋಡಿಗಳ ನಂತರ ಹೆಚ್ಚಿನ ನೀರು ಹರಿದು ಹೋಗುತ್ತದೆ. ಈ ಗರಿಷ್ಠ ಮಟ್ಟದಲ್ಲಿ ನೀರಿನ ಹರಿವು ಎಷ್ಟು ಪ್ರದೇಶವನ್ನು ಆಕ್ರಮಿಸಿ ಕೊಳ್ಳುತ್ತದೆಯೋ ಆ ಪ್ರದೇಶವನ್ನು ಕೆರೆಯ ತಳವೆಂದು ಅಥವಾ ಕೆರೆಯ ಹರಿವಿನ ಪ್ರದೇಶವೆಂದು ಕರೆಯುತ್ತಾರೆ. ಕೆರೆಯಲ್ಲಿ ಸಂಗ್ರಹವಾಗುವ ನೀರಿನ ಎತ್ತರವನ್ನು ಮಾನವನ ಪ್ರಮಾಣದಲ್ಲಿ ಅಳತೆ ಮಾಡುತ್ತಿದ್ದುದಕ್ಕೆ ಶಾಸನಗಳು ದಾಖಲಿಸಿವೆ ಎಂದು ಸಿ.ಎಸ್.ವಾಸುದೇವನ್ ಗುರುತಿಸುತ್ತಾರೆ.[46]

ಮಳೆಯ ನೀರು ಹೆಚ್ಚಾಗಿ ಕೆರೆಯ ಸಂಗ್ರಹಣ ಸಾಮರ್ಥ್ಯ ಮೀರಿದ ನಂತರ ಹೆಚ್ಚಿನ ನೀರು ಕೋಡಿಗಳ ಮೂಲಕ ಹರಿದು ಕೆಳಭಾಗದ ಕೆರೆಗಳಿಗೆ ಪೂರಕ ಪೂರಣವಾಗಿ ಬಳಕೆಯಾಗುತ್ತದೆ. ಕರ್ನಾಟಕದ ಬಹುತೇಕ ಕೆರೆಗಳ ಈ ಬಗೆಯ ಸಂಕೀರ್ಣವಾದ ಪೂರ್ಣ ವ್ಯವಸ್ಥೆಯನ್ನು ಹೊಂದಿವೆ ಎಂದು ಇವರೆಗೆ ಕೆರೆಯ ನೀರಾವರಿಯ ಬಗೆಗೆ ಅಧ್ಯಯನ ಮಾಡಿದ ಎಲ್ಲಾ ವಿದ್ವಾಂಸರು ಅಂದರೆ ಕುಪ್ಪುಸ್ವಾಮಿ,

ಅಪ್ಪಾದೊರೆ, ದೀಕ್ಷೀತ್, ಗುರುರಾಜಚಾರ್, ವಾಸುದೇವನ್, ರಾಜರಾಮಹೆಗಡೆ, ಸಿ.ಟಿ.ಎಂ. ಕೊಟ್ರಯ್ಯ, ಹರಿಹರಶ್ರೀನಿವಾಸ್‌ರಾವ್, ಪಿ.ಬಿ.ಕೃಷ್ಣಮೂರ್ತಿರವರು ಅಭಿಪ್ರಾಯ ಪಡುತ್ತಾರೆ.[47]

## 4. ಕೆರೆಯ ಏರಿ

ಕೆರೆಯ ಅಂಗಗಳಲ್ಲಿ ಅತಿಮುಖ್ಯವಾದ ಅಂಗ ಕೆರೆಯ ಏರಿ. ಕರ್ನಾಟಕದಲ್ಲಿ ನಿರ್ಮಾಣವಾಗುತ್ತಿದ್ದ ಕೆರೆಗಳ ಏರಿಗಳ ರಚನೆಯನ್ನು ಮೊಟ್ಟ ಮೊದಲಿಗೆ ದಾಖಲಿಸಿದಾತ ಪ್ರಾನ್ಸಿಸ್ ಬುಕಾನನ್.[48] ಈ ಅಂಗ ಕೆರೆಯ ಸಂಗ್ರಹಣ ಸಾಮಾರ್ಥ್ಯವನ್ನು ಆಧಾರಿಸಿ ತನ್ನ ಗಾತ್ರವನ್ನು ರೂಪಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ಎಲ್ಲಾ ಕೆರೆಗಳು ಮಣ್ಣಿನ ಏರಿಗಳಾಗಿವೆ. ಇವು ಕೆರೆಯಲ್ಲಿ ಸಂಗ್ರಹವಾಗುವ ನೀರಿನ ಒತ್ತಡವನ್ನು ಎಲ್ಲಾ ಕಾಲದಲ್ಲಿಯು ತಡೆಯುವಷ್ಟು ಶಕ್ತಿಯುತ ವಾಗಿರಬೇಕು. ಹಾಗಾಗಿ ಬಹುತೇಕವಾದ ಕೆರೆಗಳ ಏರಿಗಳು ನೇರವಾಗಿ ನಿರ್ಮಾಣಗೊಳ್ಳದೆ. ಅಂಕುಡೊಂಕಿನ ಕ್ರಮದಲ್ಲಿ ಅಥವಾ ಸರ್ಪದ ಹರಿವಿನ ಆಕಾರದಲ್ಲಿ ನಿರ್ಮಾಣಗೊಂಡಿರುತ್ತವೆ. ಈ ಬಗೆಯ ನಿರ್ಮಾಣ ಏರಿಯ ಮೇಲೆ ಬೀಳುವ ನೀರಿನ ಒತ್ತಡವನ್ನು ಕಡಿಮೆ ಮಾಡುತ್ತದೆ. ಅಲ್ಲದೇ ಏರಿ ಬಹುಕಾಲದವರೆಗೆ ಬಾಳಕಿಗೆ ಬರುವಂತೆ ಕಾಯ್ದುಡುತ್ತವೆ. ಏರಿಯು ಸ್ಥಿರತೆಯು ಏರಿಯೂ ಇಳಿಜಾರನ್ನು ಮತ್ತು ಅಡಿಪಾಯವನ್ನು ಅವಲಂಬಿಸಿರುತ್ತದೆ. ಸಾಮಾನ್ಯವಾಗಿ ಕೆರೆಗಳ ನಿರ್ಮಾಣಕ್ಕೆ ಭದ್ರವಾದ ಪ್ರದೇಶಗಳನ್ನು ಆಯ್ಕೆಮಾಡಿಕೊಳ್ಳುತ್ತಿದ್ದರು ಅವಶ್ಯಕತೆ ಇದ್ದಲ್ಲಿ ಆ ಪ್ರದೇಶವನ್ನು ಮಾನವ ನಿರ್ಮಿತಿಗಳಿಂದ ಭದ್ರಗೊಳಿಸುತ್ತಿದ್ದರು ಏರಿಯ ಕೆಳಭಾಗ ವಿಸ್ತಾರವಾಗಿದ್ದು ಏರಿಯ ಎತ್ತರ ಮತ್ತು ಇಳಿಜಾರನ್ನು ಅವಲಂಭಿಸಿರುತ್ತಿತ್ತು. ಏರಿಯಾ ಮೇಲ್ಭಾಗ ಅಥವಾ ತಲೆಭಾಗ ಕಿರಿದಾಗಿರುತ್ತಿತ್ತು. ಕೆಲವೊಂದು ಏರಿಗಳು ತುಂಬಾ ಅಗಲವಾಗಿದ್ದು ಸಂಪರ್ಕ ಮಾರ್ಗಗಳಾಗಿ ಕೂಡ ಕಾರ್ಯನಿರ್ವಹಿಸಿರುವ ಉದಾಹರಣೆಗಳಿವೆ. ಸಾಮಾನ್ಯವಾಗಿ ಕೆರೆಗಳನ್ನು ಮಳೆಗಾಲದ ನಿರ್ಗ್ಗಾಲುವೆಗಳಿಗೆ ಅಡ್ಡಲಾಗಿ ನಿರ್ಮಿಸಿದ್ದರಿಂದ ಅವು ಸಂಪರ್ಕ ಮಾರ್ಗಗಳಾಗಿ ಸಹ ಕಾರ್ಯ ನಿರ್ವಹಿಸಿರುವುದನ್ನು ಕಾಣಬಹುದು. ಕೆಲವೇ ಕೆಲವು ಅಣೆಕಟ್ಟೆಗಳು ಮತ್ತು ಏರಿಗಳು ಈ ರೀತಿ ಬಳಕೆಯಾಗಿವೆ.[49]

**ಎವಿಟ್‌ಮೆಂಟ್**

ಜಲಾಶಯದ ಅಥವಾ ಕೆರೆಯ ವಿಸ್ತಾರವಾದ ನೀರ ಹರಿವಿನ ಮೇಲೆ ಬೀಸಿದ ಗಾಳಿಯಿಂದಾಗಿ ಕೆರೆಗಳಲ್ಲಿ ಅಲೆಗಳು ಉಂಟಾಗುತ್ತವೆ. ಈ ಅಲೆಗಳಿಂದ ಕೆರೆಗಳ ಏರಿಗಳನ್ನು ರಕ್ಷಿಸುವ ಸಲುವಾಗಿ ಕೆರೆಗಳ ಏರಿಯ ಒಳಭಾಗವನ್ನು ಬೃಹದಾಕಾರದ ಕಲ್ಲುಗಳನ್ನು ಜೋಡಿಸುವುದರ ಮೂಲಕ ನಿರ್ಮಿಸಲಾಗುತ್ತಿತ್ತು. ಈ ಕಲ್ಲು ಕಟ್ಟಡಗಳನ್ನು ರಿವಿಟ್‌ಮೆಂಟ್ ಎಂದು ಕರೆಯಲಾಗುತ್ತದೆ. ಕೆರೆಯನ್ನು ಕಟ್ಟುವಾಗಲೆ ಈ ಕಲ್ಲುಗಳನ್ನು ಜೋಡಿಸಿ ಅವುಗಳು ಕುಸಿಯದಂತೆ ಅವುಗಳ ಭಾರ ಮಣ್ಣಿನ ಏರಿಯ ಮೇಲೆ ಬೀಳುವಂತೆ ಇಳಿಜಾರನ್ನು ಮತ್ತು ಪ್ರತಿಯೊಂದು ಕಲ್ಲಿನ ಸ್ತರದ ನಡುವೆ ಅಂತರವನ್ನು ಕಾಯ್ದುಕೊಂಡು ಅವು ಕೆರೆಯ ತಳಕ್ಕೆ ತಲುಪಲು ಮೆಟ್ಟಿಲುಗಳಾಗುವಂತೆ ನಿರ್ಮಿಸಿ ಕೆರೆಯ ಏರಿಗಳನ್ನು ರಕ್ಷಿಸಿಕೊಳ್ಳುತ್ತಿದ್ದರು.[50]

ಅಚ್ಚುಕಟ್ಟು ಪ್ರದೇಶಕ್ಕೆ ಮುಖಮಾಡಿರುವ ಏರಿಯ ಮಣ್ಣಿನ ಸವಕಳಿಯನ್ನು ತಡೆಯಲು ಆ ಪ್ರದೇಶದಲ್ಲಿ ಕುರಚಲು ಗಿಡಗಳನ್ನು ಹುಲ್ಲುಹಾಸನ್ನು ಬಳಸಿ ಸಂರಕ್ಷಿಸುತ್ತಿದ್ದರು. ಕೆಲವೊಂದು ಅಧಿಕ ಮಳೆ ಬೀಳುವ ಪ್ರದೇಶದಲ್ಲಿನ ಏರಿಗಳನ್ನು ನಿರ್ಮಿಸುವಾಗ ಏರಿಯಾ ಹೊರ ಭಾಗಕ್ಕೂ ಕಲ್ಲು ಕಟ್ಟಡದ ರಕ್ಷಣೆಯನ್ನು ಒದಗಿಸುತ್ತಿದ್ದುದನ್ನು ಕ್ಷೇತ್ರ ಕಾರ್ಯದ ಸಮಯದಲ್ಲಿ ಗಮನಿಸಲಾಗಿದೆ.

## 5. ಕೆರೆಯ ತೂಬುಗಳು

ಕೆರೆಯಲ್ಲಿ ಸಂಗ್ರಹವಾದ ನೀರನ್ನು ಕೆರೆಯಿಂದ ಹೊರೆಗೆ ಹರಿಸುವ ಮತ್ತು ಬೇಕೆಂದಾಗ ನಿಲ್ಲಿಸಬಹುದಾದ ಅಂಗವೇ ತೂಬುಗಳು. ಈ ತೂಬುಗಳು ಸಂಗ್ರಹವಾದ ನೀರನ್ನು ಬಳಕೆಗೆ ಅನುಗುಣವಾಗಿ ನಿಯಂತ್ರಿಸಲು ಸಹಾಯ ಮಾಡುತ್ತವೆ. ಸೂಕ್ಷ್ಮವಾಗಿ ಹೇಳುವುದಾದರೆ ತೂಬುಗಳನ್ನು ಇಂದಿನ ನಲ್ಲಿಗಳಿಗೆ ಹೋಲಿಸಬಹುದು.[51] ಕೆರೆಯ ತಳ ಭಾಗದಿಂದ ಮೇಲೆದ್ದುನಿಂತ ಕೆರೆಯ ಸಂಗ್ರಹಣ ಸಾಮರ್ಥ್ಯದ ಗರಿಷ್ಠ ಮಟ್ಟದ ಮೇಲ್ಮಟ್ಟದ ತನಕ ಎರಡು ಅಥವಾ ನಾಲ್ಕು ಕಲ್ಗಂಬಗಳ ಆಸರೆಯಿಂದ ರಚಿತವಾದ ಅಂಗವಾಗಿರುತ್ತದೆ. ನಾಲ್ಕು ಕಂಬಗಳಿದ್ದರೆ ಆ ನಾಲ್ಕು ಕಂಬಗಳನ್ನು ಬಂದಿಸುವ ನಾಲ್ಕು ಪ್ರತ್ಯೇಕ ಕಲ್ಲಿನ

ತೊಲೆಗಳು ಅವುಗಳ ಮಧ್ಯದಲ್ಲಿ ತೂಬಿನ ಬಿರುಡೆಯನ್ನು ಮೇಲಕ್ಕೆ ಎತ್ತಲು ಮತ್ತು ಇಳಿಸಲು ಸಹಾಯಕವಾಗುವಂತೆ ಅಡ್ಡಗಲ್ಲನ್ನು ಹಾಸಿ ನಿರ್ಮಿಸಿರುತ್ತಾರೆ. ಮಧ್ಯದಲ್ಲಿ ಕೆರೆಯ ಹರವಿಗೆ ಅನುಗುಣವಾಗಿ ತೂಬಿನಿಂದ ಹೊರ ಹೋಗುವ ನೀರಿಗೆ ಅನುಗುಣವಾಗಿ ತೂಬಿನ ಬಿರುಡೆಯ ಮರದ ಗಾತ್ರ ಬದಲಾಗುತ್ತದೆ. ಇದರ ಅಳತೆಗೆ ಅನುಗುಣವಾಗಿ ಈ ಅಡ್ಡಗಲ್ಲಿನ ರಂಧ್ರವಿರುತ್ತದೆ. ಈ ಮರದ ತೂಬನ್ನು ಅಥವಾ ಬಿರುಡೆಯನ್ನು ಮೇಲಕ್ಕೆ ಎತ್ತಿದಾಗ ಏರಿಯ ತಳಭಾಗದಲ್ಲಿ ನಿರ್ಮಿಸಿರುವ ಕವಾಟದ ಮೂಲಕ ನೀರು ಅಚ್ಚುಕಟ್ಟು ಪ್ರದೇಶವನ್ನು ತಲುಪುವ ನಾಲೆಗಳಲ್ಲಿ ಹರಿಯುತ್ತದೆ. ಈ ತೂಬುಗಳಿಗೆ ಮರದ ದಿಮ್ಮಿಗಳನ್ನು ಬಳಸುತ್ತಿದ್ದ ಉದ್ದೇಶವೆಂದರೆ ನೀರಿನ ಹರಿವಿನ ಕವಾಚದ್ವಾರದ ಗಾತ್ರಕ್ಕೆ ಅನುಗುಣವಾಗಿ ಬಿರುಡೆ ಇರುತ್ತಿತ್ತು. ಈ ಭಾಗದಲ್ಲಿ ಮರದ ಬಿರುಡೆಯನ್ನು ಬಳಸುವುದರಿಂದ ಮರವು ನೀರಿನ ಅಂಶವನ್ನು ಪಡೆದು ಹಿಗ್ಗಿದಾಗ ಕವಾಟದ ಮೂಲಕ ಜಲ ಸೋರಿಕೆಯನ್ನು ಸುಲಭವಾಗಿ ತಡೆಯಲಾಗುತ್ತಿತ್ತು.

ಆದರೆ ಇತ್ತೀಚಿನ ದಿನಗಳಲ್ಲಿ ಲೋಹದ ಬಿಡುಡೆಗಳನ್ನು ಬಳಸಲಾಗುತ್ತದೆ. ಸಾಮಾನ್ಯವಾಗಿ ತೂಬುಗಳ ಕೆಳಭಾಗದಲ್ಲಿ ಸಣ್ಣ ತೊಟ್ಟಿಯಾಕಾರದ ರಚನೆಯಿದ್ದು ಅದರ ಮಧ್ಯದಲ್ಲಿ ಕವಾಟದ್ವಾರ ಇರುತ್ತಿತ್ತು. ಪ್ರಾಚೀನ ಕಾಲದ ಕೆರೆಗಳಲ್ಲಿ ಇವುಗಳನ್ನು ಕಲ್ಲುಗಳಿಂದ ರಚಿಸಿಸುತ್ತಿದ್ದರು. ಇದೇ ರೀತಿ ಏರಿಯ ಹೊರ ಭಾಗದಲ್ಲಿಯೂ ಹೊರಬಂದ ನೀರು ತನ್ನ ರಬಸವನ್ನು ಕಳೆದುಕೊಂಡುಬಂದು ಹೊರಬರಲು ಚೌಕಾಕಾರದ ತೊಟ್ಟಿಯ ರಚನೆಯಿರುತ್ತಿತ್ತು. ಅವುಗಳ ಮೂಲಕ ನಾಲೆಗಳಿಗೆ ನೀರು ಹರಿಸಲಾಗುತ್ತಿತ್ತು.[52] ಸಾಮಾನ್ಯವಾಗಿ ಈ ಕೆಲಸ ಸುಸೂತ್ರವಾಗಿ ನೇರವೇರುತ್ತಿತ್ತಾದರು ಅಲ್ಲಲ್ಲಿ ಅವಡಗಳು ಸಂಭವಿಸಿ ವ್ಯಕ್ತಿಗಳು ದುರ್ಮರಣಕ್ಕೀಡಾದ ಉದಾಹರಣೆಗಳಿವೆ ಅಂತಹ ಸಂದರ್ಭದಲ್ಲಿ ಆ ಮನೆತನದವರಿಗೆ ಜೀವನ ನಿರ್ವಹಣೆಗೆ ದಾನ ನೀಡಿದ ಉಲ್ಲೇಖಿತವಿದೆ.[53]

ತೂಬುಗಳನ್ನು ಸಾಮಾನ್ಯವಾಗಿ ಕೆರೆಯ ಏರಿಯಿಂದ ಸುಮಾರು 10.15 ಅಡಿ ದೂರದಲ್ಲಿರುವಂತೆ ನಿರ್ಮಿಸುತ್ತಿದ್ದರು. ಕಾರಣ ತೂಬುಗಳಿಂದಾಗಿ ಕೆರೆಯ ಏರಿಗಳಿಗೆ ಯಾವುದೇ ಹಾನಿಯಾಗುವುದನ್ನು ತಪ್ಪಿಸಬಹುದಾಗಿತ್ತು. ಸಾಮಾನ್ಯವಾಗಿ ಪ್ರಾಚೀನ

ಕಾಲದಲ್ಲಿ ಈ ತೂಬುಗಳು ಕೆರೆಯ ಮಧ್ಯದಲ್ಲಿರುತ್ತಿದ್ದುದರಿಂದ ನಿರ್ಗಂಟಿಗಳು ನೀರು ಹರಿಸುವಾಗ ಮತ್ತು ನಿಲ್ಲಿಸುವಾಗ ಕೆರೆಯ ದಡದಿಂದ ತೂಬಿನವರೆಗೆ ಈಜಿ ಆನಂತರ ಬಿರುಡೆಯನ್ನು ತೆರೆಯುವ ಮತ್ತು ಹಾಕುವ ಮೂಲಕ ನೀರಿನ ಹರಿವನ್ನು ನಿಯಂತ್ರಿಸುತ್ತಿದ್ದರು. ಬೆಂಗಳೂರು ಜಿಲ್ಲೆಯ ಅರಳುಲು ಗ್ರಾಮದ 2ನೇ ಹರಿಹರನ ಶಾಸನದಲ್ಲಿ ಇಂತಹ ಒಂದು ಸಂದರ್ಭ ದುರ್ಗಟನೆ ಉಲ್ಲೇಖವಾಗಿದೆ.[54] ಈ ಶಾಸನದಂತೆ ಮಾರಸಮುದ್ರದ ಕೆರೆಯ ನೀರನ್ನು ನಿಲ್ಲಿಸುವ ಸಮಯದಲ್ಲಿ ಅಲ್ಲಗೌಡ ಎಂಬಾತನು ನೀರಿನಲ್ಲಿ ಮುಳುಗಿ ಸಾಯುತ್ತಾನೆ. ಇದಕ್ಕೆ ಪೂರ್ವದ ಪ್ರಯತ್ನಗಳಲ್ಲಿಯೂ ಆ ತೂಬನ್ನು ಸರಿಪಡಿಸಲು ಸಾಧ್ಯವಾಗಿರಲಿಲ್ಲ. ಆದ್ದರಿಂದ ತೂಬನ್ನು ಸರಿಪಡಿಸುವ ಸಲುವಾಗಿ ಗುಳಿಯೋಜನೆಗೆ 2 ಕಂಡುಗ ಗದ್ದೆ ಒಂದು ಕಂಡುಗ ಹೊಲ ಮೂರು ಅಂಕಣದ ಮನೆಯನ್ನು ಕೊಡುವ ಶರತ್ತಿನೊಂದಿಗೆ ತೂಬನ್ನು ಸರಿಪಡಿಸುವ ಕೆಲಸವನ್ನು ನೀಡಲಾಗುತ್ತದೆ. ಕಾರ್ಯದಲ್ಲಿ ಯಶಸ್ವಿಯಾದ ಗುಳಿಯೋಜನು ಕೆರೆಯ ಆ ತೂಬಿನ ಬಾಧ್ಯತೆಯನ್ನು ತಾನೆ ವಹಿಸಿಕೊಳ್ಳುತ್ತಾನೆ. ಸಿ.ಟಿ.ಎಂ ಕೊಟ್ರಯ್ಯರವರ ಗ್ರಂಥದಲ್ಲಿ ಇದರ ಬಗೆಗಿನ ಸಾಕಷ್ಟು ವಿವರಗಳು ದಾಖಲಾಗಿವೆ.[55]

ಎಲ್ಲಾ ಕೆರೆಗಳು ಇಷ್ಟೆ ತೂಬಿರಬೇಕೆಂಬ ನಿಯಮವಿಲ್ಲ ಕೆರೆಗಳು ಹಿಡಿದಿಡುವ ನೀರಿನ ಜಲರಾಶಿಯನ್ನು ಆದರಿಸಿ ಅವು ಹೊಂದುತ್ತಿದ್ದ ತೂಬುಗಳ ನಿರ್ಧಾರವಾಗುತ್ತಿತ್ತು. ಕ್ರಿ.ಶ 1394ರ ತುಮಕೂರು ಜಿಲ್ಲೆ ಕುಣಿಗಲ್ ಕೆರೆಯ ಶಾಸನವು ಕ್ರಿ.ಶ 1394ರಲ್ಲಿ ಕೆರೆಯ ನೀರು ತೂಬು ನಿರ್ಮಾಣವಾದುದನು ಮತ್ತು ಕೆರೆಯನ್ನು ನಿರ್ಮಿಸಿದುದನ್ನು ದಾಖಲಿಸುತ್ತದೆ. ತೂಬುಗಳ ನಿರ್ಮಾಣವು ಆ ಕಾಲದ ಒಂದು ಮಹತ್ವದ ಕಾರ್ಯವಾಗಿತ್ತೆಂದು ಶಾಸನದ ಅಧ್ಯಯನಗಳು ಖಚಿತಪಡಿಸುತ್ತವೆ.

## 8. ಕೆರೆಗಳ ಕೋಡಿಗಳು

ಕೆರೆಗಳ ಏರಿಯಷ್ಟೆ ಮುಖ್ಯವಾದ ಮತ್ತೊಂದು ಅಂಗ ಕೆರೆಯ ಕೋಡಿ. ಕೆರೆಯನ್ನು ನಿರ್ಮಾಣಮಾಡುವ ತಂತ್ರಜ್ಞನಿಗೆ ಇರಬೇಕಾದ ಬಹುಮುಖ್ಯ ಜ್ಞಾನವೆಂದರೆ ಕೋಡಿಯನ್ನು ನಿರ್ಮಿಸುವ ಸ್ಥಳವನ್ನು ಆಯ್ಕೆಮಾಡುವುದು ಸಾಮಾನ್ಯವಾಗಿ ಕೋಡಿಯು

ಕೆರೆಯ ಏರಿಗೆ ವಿರುದ್ಧ ದಿಕ್ಕಿನಲ್ಲಿ ಅಥವಾ ಹೆಚ್ಚಿನ ಅರಿವು ಏರಿಯನ್ನು ಸಮೀಪಿಸಿದಂತೆ ಆಯಾಕಟ್ಟಿನ ಪ್ರದೇಶದಲ್ಲಿರುತ್ತದೆ. ಕೆರೆಯಲ್ಲಿ ನೀರು ಸಂಗ್ರಹವಾಗಿ ತನ್ನ ಗರಿಷ್ಠ ಮಟ್ಟವನ್ನು ತಲುಪಿದಾಗ ಹೆಚ್ಚಿನ ಹರಿವು ಕೋಡಿಗಳ ಮೂಲಕ ಹರಿದು ಹೋಗುತ್ತದೆ. ಇದು ಕೆರೆಯ ಒಡ್ಡನ್ನು ಮತ್ತು ಕೆರೆಯ ಅಚ್ಚುಕಟ್ಟು ಪ್ರದೇಶವನ್ನು ರಕ್ಷಿಸುವ ಮಹತ್ವದ ಅಂಗ. ಕೆರೆಯ ಕೋಡಿ ಬಿದ್ದಿತ್ತೆಂದರೆ ಆ ಕೆರೆ ತನ್ನ ಗರಿಷ್ಟ ಸಂಗ್ರಹಣ ಸಾಮರ್ಥ್ಯವನ್ನು ಮುಟ್ಟಿತ್ತು ಎಂದರ್ಥ. ಸಾಮಾನ್ಯವಾಗಿ ಕೆರೆಯ ಕೋಡಿಯ ಮಟ್ಟ ಕೆರೆಯ ಗರಿಷ್ಠ ಮಟ್ಟವನ್ನು ಅನುಸರಿಸುತ್ತದೆ. ಕೆಲವೊಂದು ಕೆರೆಗಳಿಗೆ ಎರಡೆರಡು ಕೋಡಿಗಳಿರುವುದುಂಟು ಸಾಮಾನ್ಯವಾಗಿ ಕೆರೆಯ ಕೋಡಿ ಮಟ್ಟಸವಾದ ಏರಿಯಂತ್ತಿದ್ದು ಸಾಮಾನ್ಯವಾಗಿ ಕಲ್ಲುಗಳನ್ನು ಮತ್ತು ಗಾರೆಯನ್ನು ಬಳಸಿ ನಿರ್ಮಿಸಿರುತ್ತಾರೆ. ಹಲವಾರು ಸಂದರ್ಭಗಳಲ್ಲಿ ಕೋಡಿಗಳನ್ನು ನಿರ್ಮಿಸುವಾಗ ಅವು ಏರಿಯ ಪ್ರಾರಂಭದ ಹಂತಗಳಾಗಿರುವುದರಿಂದ ಆ ಪ್ರದೇಶದ ಏರಿಯನ್ನು ಮತ್ತು ಕೋಡಿಯ ದ್ವಾರವನ್ನು ಸುಭದ್ರವಾಗಿ ಕಲ್ಲಿನಿಂದಲೇ ನಿರ್ಮಿಸಿರುತ್ತಾರೆ. ಕೆಲವೊಂದು ಸಂದರ್ಭದಲ್ಲಿ ಕೆರೆಯ ಏರಿಗಳು ಮತ್ತು ಕೋಡಿಗಳ ಸಂಪರ್ಕ ಮಾರ್ಗವಾಗಿದ್ದಾಗ ಕಲ್ಲು ಕಂಬಗಳನ್ನು ಆಧಾರಿಸಿದ ಸಂಪರ್ಕ ಸೇತುವೆ ಇರುತ್ತಿದ್ದುದು ಕಂಡುಬರುತ್ತದೆ.[57] ವಿಜಯನಗರದ ಶಾಸನಗಳು ಕೋಡಿಯನ್ನು ಕಟ್ಟಿಸುವುದರಲ್ಲಿ ಪರಿಣಿತರಿದ್ದ ವ್ಯಕ್ತಿಗಳನ್ನು ಉಲ್ಲೇಖಿಸುತ್ತದೆ ಎಂದು ಸಿ.ಎಸ್.ವಾಸುದೇವನು ಅಭಿಪ್ರಾಯಪಡುತ್ತಾರೆ.

## ೯. ಅಚ್ಚುಕಟ್ಟು ಪ್ರದೇಶ

ಕೆರೆಯ ನೀರು ಸಂಗ್ರಹವಾದ ವಿರುದ್ಧ ದಿಕ್ಕಿನಲ್ಲಿ ಏರಿಯ ಕೆಳಗೆ ವ್ಯವಸಾಯಕ್ಕೆ ಒಳಪಡುವ ಪ್ರದೇಶವನ್ನು ಆಯಕಟ್ಟು ಅಥವಾ ಅಚ್ಚುಕಟ್ಟು ಪ್ರದೇಶವೆಂದು ಕರೆಯುತ್ತಾರೆ. ಆಯಕಟ್ಟು ಮತ್ತು ಅಚ್ಚುಕಟ್ಟು ಪ್ರದೇಶವನ್ನು ವಿಜಯನಗರ ಕಾಲದ ಹಲವಾರು ಶಾಸನಗಳು ಮತ್ತು ಅದರ ಹಿಂದಿನ ಶಾಸನಗಳಲ್ಲಿ ಕೆರೆಯ ಶಾಸನಗಳ ಭೂಮಿಯೆಂದು ದಾಖಲಾಗಿರುವ ಕೆರೆಯ ನೀರಾವರಿಯ ಬಗೆಗೆ ಅಧ್ಯಯನ ಮಾಡಿರುವ

ವಿದ್ವಾಂಸರುಗಳಾದ ದೀಕ್ಷೀತ್, ಕುಪ್ಪಸ್ವಾಮಿ, ಶಿವಣ್ಣ, ಗುರುರಾಜ್‌ಚಾರ್, ಟಿ.ವಿ.ನಾಗರಾಜ, ತಮ್ಮ ಗ್ರಂಥಗಳಲ್ಲಿ ಹಾಗೂ ಲೇಖನಗಳಲ್ಲಿ ಉದಾಹರಿಸಿರುವುದನ್ನು ಕಾಣಬಹುದಾಗಿದೆ. ಪ್ರಸ್ತುತ ಅಧ್ಯಯನದಲ್ಲೂ ಕೂಡ ಈ ಉಲ್ಲೇಖಗಳನ್ನು ಗಮನಿಸಲಾಗಿದೆ.

## ಕೆರೆಯ ನಿರ್ಮಾಣದ ಕ್ರಮ

ಕೆರೆ ನಿರ್ಮಾಣದ ಬಗೆಗೆ ಹೀಗೆಯೇ ರಚಿಸಬೇಕೆಂಬ ನಿಖರವಾದ ಮಾಹಿತಿ ನಮಗೆ ಕಂಡುಬರುವುದಿಲ್ಲವಾದರೂ ಭಾರತೀಯ ಸಾಹಿತ್ಯ ಕೃತಿಗಳಾದ ವೇದಗಳಲ್ಲಿ ಕೂಪಗಳು, ಸರಸ್, ಕೃತ್ತಿಮ ನದಿಯ ಎಂದು ಉಲ್ಲೇಖಿಸುತ್ತವೆ. ಇವು ಬಹುಶಃ ಅಂದಿನ ಕಾಲದಲ್ಲಿ ನಿರ್ಮಿಸುತ್ತಿದ್ದ ನೀರಾವರಿಯ ವ್ಯವಸ್ಥೆಯ ಬಗೆಗಿನ ಪ್ರಪ್ರಥಮ ಉಲ್ಲೇಖವೆಂದು ಹೇಳಬಹುದು (ಸಿ.ಎಸ್.ವಾಸುದೇವನ್) ಮನುವು ತನ್ನ ಧರ್ಮಶಾಸ್ತ್ರ ಕೃತಿಯಲ್ಲಿ ನೀರಿನ ಆಶ್ರಯಗಳಿಗೆ ಯಾವುದೇ ದಕ್ಕೆ ಮಾಡಿದವರಿಗೆ ಮರಣದಂಡನೆಯನ್ನು ನೀಡಬೇಕೆಂದು ತಿಳಿಸುತ್ತಾನೆ. ಇದು ನೀರಿನ ಆಶ್ರಯಗಳ ಸಂರಕ್ಷಣೆಗೆ ಕೈಗೊಂಡ ಮಹತ್ವವನ್ನು ವಿವರಿಸುತ್ತದೆ. ಮಹಾಭಾರತವು ಬೇಸಾಯಕ್ಕೆ ಮಳೆಯನ್ನೇ ಅವಲಂಭಿಸಬಾರದು ಬದಲಾಗಿ ಕೆರೆ ಮತ್ತು ಸರೋವರಗಳನ್ನು ನಿರ್ಮಿಸಿಕೊಂಡು ಬೇಸಾಯವನ್ನು ನಿರ್ವಹಿಸಬೇಕೆಂದು ಉಲ್ಲೇಖಿಸುತ್ತದೆ. ಈ ಉಲ್ಲೇಖಗಳನ್ನು ಗಮನಿಸಿದಾಗ ಆ ಕಾಲದಲ್ಲಿಯೇ ಭಾರತದಲ್ಲಿ ಮಳೆಗಾಲವು ಅತಿವೃಷ್ಠಿ, ಅನಾವೃಷ್ಠಿ ಎರಡು ಕಾಲವನ್ನು ಉಂಟುಮಾಡುತ್ತೆಂದು ತಿಳಿಸುತ್ತದೆ.[63] ಇದರಿಂದ ತಮ್ಮ ಜೀವನ ಸಂರಕ್ಷಣೆಗೆ ತನ್ನ ನೀರಿನ ಆಸರೆಗಳನ್ನು ರಚಿಸಿಕೊಳ್ಳಬೇಕೆಂದು ಅರಿತಿದ್ದನು. ಕೌಟಿಲ್ಯನ ಅರ್ಥಶಾಸ್ತ್ರವು ಸಾಕಷ್ಟು ಗಂಭೀರವಾಗಿ ಕೆರೆಗಳ ಮತ್ತು ಸರೋವರಗಳ ವಿವರಗಳನ್ನು ತಿಳಿಸುತ್ತಾನೆ. ಅರ್ಥಶಾಸ್ತ್ರಗಳಲ್ಲಿ ತೂಬುಗಳನ್ನು ಕಾಲಕಾಲಕ್ಕೆ ಪರೀಕ್ಷಿಸಿ ಅವುಗಳನ್ನು ಸುಸ್ಥಿತಿಯಲ್ಲಿಡುವುದು ಮತ್ತು ಅವುಗಳಲ್ಲಿ ನೀರನ್ನು ಸಮರ್ಪಕವಾಗಿಡುವ ಅಂಶಗಳನ್ನು ದಾಖಲಿಸಿದ್ದಾನೆ. ಹೊಸ ಗ್ರಾಮವೊಂದನ್ನು ನಿರ್ಮಿಸುವಾಗ ಅ ಗ್ರಾಮದಲ್ಲಿ ಕೆರೆ ಇರಬೇಕೆಂದು, ಆ ಗ್ರಾಮದ ಕೆರೆಯ ನೀರು ಕುಡಿಯುವುದಕ್ಕೆ ಮತ್ತು ವ್ಯವಸಾಯಕ್ಕೆ

ಯೋಗ್ಯಕರವಾಗಿರಬೇಕೆಂದು ಕೆರೆಯ ನಿರ್ಮಾಣದಲ್ಲಿ ಮತ್ತು ಸಹಕರಿಸುತ್ತಿದ್ದ ಪ್ರಜೆಗಳಿಗೆ ತೆರಿಗೆಯಲ್ಲಿ ವಿನಾಯಿತಿ ನೀಡಬೇಕೆಂದು ದಾಖಲಿಸುತ್ತಾನೆ.

ಕೆರೆಗಳ ಕಟ್ಟೆಗಳನ್ನು ನಾಶಮಾಡಿದವರಿಗೆ ಕೆರೆಯ ನೀರಿನಲ್ಲಿ ಮುಳುಗಿಸಿ ಮರಣದಂಡನೆಯನ್ನು ನೀಡಬೇಕಂದು ತಿಳಿಸುತ್ತಾನೆ. ಇದಾದ ನಂತರ ಶುಕ್ರನೀತಿ ಸಾರದಲ್ಲಿ ನಾಲೆ ಮತ್ತು ಕೆರೆ ನೀರಾವರಿ ಬಗೆಗೆ ಉಲ್ಲೇಖ ಕಂಡುಬರುತ್ತದೆ. ಶುಕ್ರ ನೀತಿಸಾರವು ಅರ್ಥಶಾಸ್ತ್ರದಂತೆ ಕೆರೆಯ ನಿರ್ಮಾತೃಗಳನ್ನು ತೆರಿಗೆಗಳಿಂದ ಹೊರಗಿಡುವಂತೆ ತಿಳಿಸುತ್ತಾನೆ.[65] ಅಮರಕೋಶವು ವ್ಯವಸಾಯ ಪದ್ಧತಿಯನ್ನು ನದಿ ಮಾತೃಕ ಮತ್ತು ದೇವಿ ಮಾತೃಕವೆಂದು ವಿಭಾಗಿಸುತ್ತದೆ. ನದಿ ಪಾತ್ರದ ನೀರನ್ನು ಬಳಸಿ ವ್ಯವಸಾಯ ಮಾಡುವುದು ನದಿ ಮಾತೃಕವೆಂದು ಮಳೆಯ ನೀರನ್ನು ಆಧಾರಿಸಿ ಅಥವಾ ಅದನ್ನು ಸಂಗ್ರಹಿಸಿ ವ್ಯವಸಾಯ ಮಾಡುವ ಪದ್ಧತಿಯನ್ನು ದೇವಿ ಮಾತೃಕ ಎಂದು ಹೇಳುತ್ತಾರೆ.[66] ಹೀಗಾಗಿ ಕೆರೆಗಳ ನಿರ್ಮಾಣವು ಅತ್ಯಂತ ಪ್ರಾಚೀನ ಕಾಲಘಟ್ಟಗಳಿಂದ ಮುಂದುವರೆದು ಬಂದ ಸಂಸ್ಕೃತಿಯಾಗಿದೆ ಎಂದು ತಿಳಿದುಬರುತ್ತದೆ. ಕೆರೆಗಳ ನಿರ್ಮಾಣದ ಕಾರ್ಯದಲ್ಲಿ ಸಾಮಾನ್ಯವಾಗಿ ಉಪ್ಪಾರ ಜನಾಂಗದವರು ನಿರ್ಮಿಸುತ್ತಿದ್ದರೆಂದು ತಿಳಿದುಬರುತ್ತದೆ. ಮತ್ತು ಇದಕ್ಕೆ ಶಾಸನಾಧಾರಗಳಿವೆ.[67] ಕಟ್ಟಿಗರು ಎಂಬ ಮತ್ತೊಂದು ಜನಾಂಗ ಕೆರೆ ನಿರ್ಮಾಣದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೆಂದು ಶಾಸನದಲ್ಲಿ ಉಲ್ಲೇಖವಿದೆ.[68] ಉಪ್ಪಾರರನ್ನು ಒಳಗೊಂಡ ಇತರ ವರ್ಗದ ಜನರು ಕೆರೆಯ ನಿರ್ಮಾಣಕ್ಕೆ ಸಹಕಾರಿಯಾಗುತ್ತಿದ್ದುದ್ದನ್ನು ಶಾಸನಗಳ ಅಧ್ಯಯನಗಳು ಖಚಿತಪಡಿಸುತ್ತವೆ. ಆದರೆ ಉಪ್ಪಾರರು ಮಣ್ಣಿನ ಗುಣಲಕ್ಷಣಗಳನ್ನು ಅರಿತ್ತಿದ್ದರಿಂದ ಕೆರೆಯ ಏರಿಯ ನಿರ್ಮಾಣವನ್ನು ಪ್ರಾಯಶಃ ಅವರ ಮೇಲ್ವಿಚಾರಣೆಯಲ್ಲಿ ನಡೆಸುತ್ತಿದ್ದರೆಂದು, ಏರಿಯ ವಿವಿಧ ಭಾಗಗಳಿಗೆ ಬಳಸುತ್ತಿದ್ದ ಮಣ್ಣನ್ನು ಪರೀಕ್ಷಿಸಿ ಸೂಕ್ತ ಎಂದು ತಿಳಿಸಿದ ಮಣ್ಣನ್ನು ಏರಿಯ ನಿರ್ಮಾಣದಲ್ಲಿ ಬಳಸುತ್ತಿದ್ದರೆಂದು ಭಾವಿಸಬಹುದು.

ವಿಜಯನಗರ ಕಾಲದ ಒಂದು ಶಾಸನ ಕೆರೆಯ ನಿರ್ಮಾಣಕ್ಕೆ ಕುರಿತಾದ ಪೂರ್ಣ ಮಾಹಿತಿಯನ್ನು  ನೀಡುತ್ತದೆ. ಈ ಶಾಸನವು ನಮ್ಮ ಅಧ್ಯಯನದ ಪ್ರದೇಶದಿಂದ

ಹೊರಗಿದ್ದರು ಅದನ್ನು ಇಲ್ಲಿ ಬಳಸುವುದು ಉಚಿತವೆಂದು ಭಾವಿಸಿ ಅದರ ಸಾರವನ್ನು ಈ ಕೆಳಗಿನಂತೆ ಸಂಕ್ಷೇಪಿಸಬಹುದು.[70]

1. ಕೆರೆಯನ್ನು ಕಟ್ಟಿಸುವವನು ಸಂತೃಪ್ತನಾಗಿಯು, ಸಂತೋಷದಿಂದ ನಿರ್ಮಾಣದಲ್ಲಿ ತೊಡಗಿಕೊಳ್ಳಬೇಕು.
2. ಆಚಂದ್ರಾರ್ಕವಾಗಿ ಕೀರ್ತಿಯನ್ನು ಗಳಿಸಿಕೊಳ್ಳುವ ಇಚ್ಛೆಯುಳ್ಳ ವ್ಯಕ್ತಿಗಳು ಕೆರೆಯ ನಿರ್ಮಾಣದಲ್ಲಿ ತೊಡಗಿಕೊಳ್ಳಬಹುದೆಂದು ಹೇಳುತ್ತದೆ.
3. ಜಲಶಾಸ್ತ್ರದಲ್ಲಿ ನೈಪುಣ್ಯತೆಯನ್ನು ಹೊಂದಿದ್ದ ಬ್ರಾಹ್ಮಣನು ಈ ಕಾರ್ಯದಲ್ಲಿ ತೊಡಗಿಕೊಳ್ಳಬೇಕು. ಈ ಹಂತದಲ್ಲಿ ಕೋಲಾರ ಜಿಲ್ಲೆಯ ದಶಶಾಸ್ತ್ರ ಪಂಡಿತನಾಗಿದ್ದ ಜಲಸೂತ್ರಿ ಸಿಂಗಯ್ಯ ಬಟ್ಟ ಪೇನ್ನಾರು ನದಿಯೂ ನೀರನ್ನು ಪೇನುಗೊಂಡಗೆ ಹರಿಸಿದ್ದನು, ಇಲ್ಲಿ ಸ್ಮರಿಸಬಹುದು.
4. ಉತ್ತಮವಾದ ಜೇಡಿ ಮಣ್ಣುಕೂಡಿರುವಂತಹ ಪ್ರದೇಶವನು ಕೆರೆಯ ನಿರ್ಮಾಣಕ್ಕೆ ಅಯ್ಕೆಮಾಡಿಕೊಳ್ಳಬೇಕು.
5. ನದಿಯ ನೀರಿನ ಆಶ್ರಯ ಅಥವಾ ನೀರಿನ ಚಿಲುಮೆಗಳು ಕೆರೆಯಿಂದ ಸುಮಾರು ೩ ಯೋಜನೆಗಳಷ್ಟು ದೂರದಲ್ಲಿರಬೇಕು.
6. ಬೆಟ್ಟ ಸಾಲುಗಳದ್ದಲ್ಲಿ ಅವುಗಳು ಕೆರೆ ನಿರ್ಮಿಸಿಕೊಳ್ಳಲು ಉಪಯೋಗಿಸಿಕೊಳ್ಳಬೇಕು. ಬೆಟ್ಟ, ಕಣಿವೆ ಪ್ರದೇಶದಲ್ಲಿ ಅತಿದೊಡ್ಡದಲ್ಲದ ಸದೃಢವಾದ ಏರಿಯನ್ನು ನಿರ್ಮಿಸಬೇಕು.
7. ಕೆರೆಯ ಪ್ರದೇಶದಲ್ಲಿ ಅಥವಾ ಸಮೀಪದಲ್ಲಿ ಫಲವತ್ತಾದ ಭೂಮಿ ಇರಬೇಕು. ಕೆರೆಯ ನೀರಿನ ಹರವು ವಿಸ್ತಾರವಾಗಿರುವಂತೆ ಹಾಗೆ ಆಳವಾಗಿರುವಂತಹ ಪ್ರದೇಶವನ್ನು ನಿರ್ಮಾಣಕ್ಕೆ ಆಯ್ದುಕೊಳ್ಳಬೇಕು.
8. ಕೆರೆಯ ಸಮೀಪದಲ್ಲಿ ಕಲಿನ ಗಣಿಗಳಿದ್ದು ಉತ್ತಮವಾದ ಗಣಿಗಳು ದೊರೆಯುತ್ತಿರಬೇಕು.

9. ಕೆರೆಯ ಸಮೀಪವಿರುವ ಫಲವತ್ತಾದ ಜಮೀನು ಹಣ್ಣು-ಹಂಪಲುಗಳನ್ನು ಹೊಂದಿರಬೇಕು. ಅಚ್ಚುಕಟ್ಟು ಪ್ರದೇಶ ಏರಿಳಿತವಿಲ್ಲದ ಸಮತಟ್ಟಾದ ಪ್ರದೇಶಗಳನ್ನು ಹೊಂದಿರಬೇಕು.
10. ಕೆರೆಯ ತೂಬುಗಳಲ್ಲಿನ ಕಲ್ಲು ಅಥವಾ ನಿಯಂತ್ರಕಗಳು ಬದ್ರವಾಗಿರಬೇಕು. ಅಲ್ಲದೆ ನೀರಿನ ಒತ್ತಡದಿಂದ ಕಾಪಾಡುವಷ್ಟು ಸದೃಢವಾಗಿರಬೇಕು.
11. ಕೆರೆಯನ್ನು ಕಟ್ಟುವ ತಂತ್ರಜ್ಞಾನವನ್ನು ಅರಿತಿರುವ 12 ಮಂದಿ ಇರಬೇಕು. ಅವರೆಲ್ಲರ ಮೇಲೆ ಉಲ್ಲೇಖಿಸಿದ ಎಲ್ಲಾ ಅಂಶಗಳನ್ನು ಅರಿತಿರುವರಾಗಿರಬೇಕು.

ಇದೇ ಶಾಸನವು ಮುಂದುವರೆದು ಕೆರೆಯನ್ನು ನಿರ್ಮಾಣಮಾಡುವ ಕಾಲದಲ್ಲಿ ತೆಗೆದುಕೊಳ್ಳಬೇಕಾದ ಎಚ್ಚರಿಕೆಯನ್ನು ನೀಡುತ್ತದೆ.

1. ಕೆರೆಯ ನೀರು ಶ್ರವಿಸಿ ಹೋಗುವಂತೆ ಇರಬಾರದು. ಅಂದರೆ ಕೆರೆಯಲ್ಲಿ ನೀರು ಭೂಮಿಯಲ್ಲಿ ಇಂಗಿಹೋಗಬಾರದು.
2. ಕೆರೆಯ ಪಾತ್ರದಲ್ಲಿರುವ ಮಣ್ಣು ಲವಣಾಂಶದಿಂದ ಅಂದರೆ ಉಪ್ಪಿಣಾಂಶದಿಂದ ಕೂಡಿರಬಾರದು.
3. ಕೆರೆಗಳನ್ನು ಎರಡು ರಾಜ್ಯಗಳ ಗಡಿಯಲ್ಲಿ ನಿರ್ಮಿಸಿರಬಾರದು.
4. ಕೆರೆಯ ಮಧ್ಯಭಾಗವು ಕೂರ್ಮ ಪ್ರದೇಶ ಎತ್ತರವಾಗಿರಬಾರದು ಅಥವಾ ದಿಣ್ಣೆಯನ್ನು ಹೊಂದಿರಬಾರದು.
5. ಕೆರೆಯು ಅತ್ಯಲ್ಪ ನೀರನ್ನು ಹೊಂದಿ ಅತೀ ಹೆಚ್ಚು ಆಯಾಕಟ್ಟು ಜಾಗವನ್ನು ಹೊಂದಿರುವಂತೆ ನಿರ್ಮಿಸಿಬಾರದು.
6. ಅಧಿಕ ಜಲಸಂರಕ್ಷಣೆಯಾಗಿ ಸ್ವಲ್ಪವೇ ಸ್ವಲ್ಪ ಭೂಮಿ ವ್ಯವಸಾಯಕ್ಕೆ ಒಳಪಡುವಂತೆ ಕೆರೆ ನಿರ್ಮಿಸಬಾರದು.

ಈ ಎಲ್ಲಾ ವಿಚಾರಗಳು ಕೆರೆಯನ್ನು ನಿರ್ಮಿಸುವಾಗ ನಿಮಾತ್ರ ಮತ್ತು ತಂತ್ರಜ್ಞನು ಹೊಂದಿರಬೇಕಾದ ಜ್ಞಾನದ ಮತ್ತು ಎಚ್ಚರಿಕೆಯ ಮಾಹಿತಿಗಳಷ್ಟೆ ಅಲ್ಲ. ನಿರ್ಮಾಣಕ್ಕೆ

ವ್ಯಯಿಸಿದ ಹಣ ಮತ್ತು ಕಾಲ ಹಾಗೂ ಶ್ರಮಿಸಿದವರ ಶ್ರಮ ನೂರುಕಾಲ ಜನರಿಗೆ ಅನುಕೂಲವಾಗಬೇಕೆಂಬುವುದು ಇದರ ಪ್ರಮುಖ ಉದ್ದೇಶವಾಗಿದೆ.

ಕೆರೆಗಳು ಕೇವಲ ಒಬ್ಬ ವ್ಯಕ್ತಿಯಿಂದ ನಿರ್ಮಾಣವಾಗದೆ ಸಮುದಾಯದ ಚಟುವಟಿಕೆಯು ಹಾಗಿತ್ತೆಂದು ತಿಳಿಯುತ್ತದೆ. ಶಾಸನಗಳಲ್ಲಿ ಉಪ್ಪಾರರು ಕೆರೆಗಳನ್ನು ನಿರ್ಮಿಸುತ್ತಿದ್ದರೆಂದು ತಿಳಿಸುತ್ತದೆ. ಕೆರೆ ನಿರ್ಮಾಣಕ್ಕೆ ಭೂಮಿಯನ್ನು ಹಣವನ್ನು ಬೇಕಾದ ಮಾನವ ಸಂಪನ್ಮೂಲವನ್ನು ಒದಗಿಸಿಕೊಳ್ಳುವುದು ತಂತ್ರಜ್ಞರು, ದೈವಜ್ಞರು ಮತ್ತು ಶ್ರಮಿಕವರ್ಗ ಮುಂತಾದ ಎಲ್ಲಾ ಸಮುದಾಯವರ್ಗದ ಶ್ರಮ ಕೆರೆಗಳ ನಿರ್ಮಾಣದಲ್ಲಿ ವಿನಿಯೋಗವಾಗುತ್ತಿದ್ದುದರಿಂದ ಈ ಎಲ್ಲರ ಶ್ರಮ ದ್ರವ್ಯ ಸೂಕ್ತವಾಗಿ ವಿನಿಯೋಗವಾಗಬೇಕೆಂಬುದು ಈ ನಿರ್ಮಾಣ ಪ್ರತಿಕ್ರಿಯೆಯಲ್ಲಿ ಎಚ್ಚರಿಕೆಯನ್ನು ಮತ್ತು ಕ್ರಮಗಳನ್ನು ಅನುಸರಿಸುವುದರ ಮೂಲ ಉದ್ದೇಶ.

ವಿಜಯನಗರ ಕಾಲದ ಶಾಸನವೊಂದು ಕೆರೆಗಳನ್ನು ನಿರ್ಮಿಸುವುದಕ್ಕೆ ಬಳಸುತ್ತಿದ್ದ ಸಾಮಾಗ್ರಿಗಳ ವಿವರವನ್ನು ನೀಡುತ್ತದೆ. ಶಾಸನವು ಹೇಳುವಂತೆ ಕೆರೆಯ ನಿರ್ಮಾಣಕ್ಕೆ ಕಲ್ಲು, ತೂಬುಕಲ್ಲು, ಇಟ್ಟಿಗೆ, ಸುಣ್ಣ ಮತ್ತು ಗಾರೆಯನ್ನು ಬಳಸುತ್ತಿದ್ದರೆಂದು ತಿಳಿದಬರುತ್ತದೆ. ಶಾಸನವು ಹೇಳುವ ಕಲ್ಲು ಪದವನ್ನು ಪ್ರಾಕೃತಿಕವಾಗಿ ದೊರೆಯುವ ಹೊರಟು ಕಲ್ಲುಗಳೆಂದು ಭಾವಿಸಬೇಕು. ಕಾರಣ ಏರಿಯ ಒಳಭಾಗ ಮತ್ತು ಹೊರಭಾಗದ ಸವಕಳಿಯನ್ನು ತಪ್ಪಿಸಲು ಹೊರಟು ಕಲ್ಲಿನ ಗೋಡೆಯನ್ನು ಕಟ್ಟಿಸಲಾಗುತ್ತಿತ್ತು.[72]

ಕೆರೆಯ ಏರಿಯನ್ನು ನಿರ್ಮಿಸುವಾಗಿ ಕೆರೆಯ ಏರಿಯ ಮುಖದ ಮೂರುಪಟ್ಟು ಅಗಲವನ್ನು ಕೆರೆಯ ಅಡಿಪಾಯ ಹೊಂದಿರುತ್ತಿತ್ತು. ಅಂದರೆ ಕೆರೆಯ ಏರಿಯ ತಲಭಾಗ ಒಂದು ಮನುಷ್ಯ ಪ್ರಮಾಣದ ಅಗಲದಲ್ಲಿದ್ದರೆ ಆ ಏರಿಯ ಅಡಿಪಾಯ ಮೂರು ಮಾನವ ಪ್ರಮಾಣದ ಅಗಲವನ್ನು ಹೊಂದಿರುತ್ತಿತ್ತು. ಒಳ ಇಳಿಜಾರು ಕಡಿದಾಗಿಯೂ ಹಾಗೂ ಹೊರ ಇಳಿಜಾರು ನಯವಾಗಿಯು ಇರುತ್ತಿತ್ತು. ಸಾಮಾನ್ಯವಾಗಿ ಏರಿಯ ಒರ ಇಳಿಜಾರು ನಯವಾಗಿ ಕೆಳಹಂತದಲ್ಲಿ ಕಲ್ಲಿನ ಗೋಡೆಯಿಂದ ಸಂರಕ್ಷಿತವಾಗಿರುತ್ತಿತ್ತು. ಅತಿ ಹೆಚ್ಚು

ಮಳೆ ಬೀಳುವ ಪ್ರದೇಶದಲ್ಲಿ ಭಾಗದ ಹೊರಗೆ ಕಲ್ಲಿನ ಗೋಡೆಯ ಸಂರಕ್ಷಣೆಯನ್ನು ಹೊಂದಿರುತ್ತಿತ್ತು.

ಕೆರೆಯ ಏರಿಯ ನಿರ್ಮಾಣ ಕಾಲದಲ್ಲಿ ಏರಿಯಿಂದ 10–15 ಅಡಿ ದೂರದಲ್ಲಿ ತೂಬನ್ನು ಇರಿಸಲಾಗುತ್ತಿತ್ತು. ಸಾಮಾನ್ಯವಾಗಿ ಇವು ಅಲಂಕಾರಗೊಂಡಿರುತ್ತಿದ್ದವು. ತೂಬು ಗಿಂಡಿಯನ್ನು ಕಲ್ಲು ಚಪ್ಪಡಿಗಳ ಸಹಾಯದಿಂದ ಅತ್ಯಂತ ಸುಭದ್ರವಾಗಿ ನೀರು ಸೋರಿಕೆಯಾಗದ ರೀತಿಯಲ್ಲಿ ರಚಿಸುತ್ತಿದ್ದರು. ಕೆರೆಯ ನಿರ್ಮಾಣದಲ್ಲಿ ತೂಬು ಅತ್ಯಂತ ಪ್ರಮುಖ ನಿರ್ಮಾಣವಾಗಿರುತ್ತಿತ್ತು. ಮಹತ್ವದ ಅಂಗವು ಕೂಡ ಆಗಿತ್ತು.

ಕೆರೆಯು ಹಲವಾರು ಆಕರಗಳಲ್ಲಿ ರಚಿತವಾಗುತ್ತಿತ್ತು, ಬಹುತೇಕ ಸ್ಥಾನಿಕ ಭೌಗೋಳಿಕ ಲಕ್ಷಣಗಳನ್ನು ಅನುಸರಿಸಿ ಕೆರೆಗಳು ತಮ್ಮ ಆಕರವನ್ನು ಪಡೆದುಕೊಳ್ಳುತ್ತಿದ್ದವು.

ಚಕ್ರಪಾಣಿ ಮಿಶ್ರಣ ವಿಶ್ವವಲ್ಲಭ ಕೃತಿಯು ಕೆರೆಗಳ ಆಕರವನ್ನು ದಾಖಲಿಸುತ್ತದೆ. ಕೃತಿಯೆಂತೆ ವೃತ್ತಾಕಾರ ಚತುಷ್ಕೋನ, ಬಹುಕೋನಾಕೃತಿ, ಲಂಭಕಾರ, ಅರ್ಧಚಂದ್ರಕಾರ ಮುಂತಾದ ಆಕರದ ಕೆರೆಗಳನ್ನು ಒಳಗೊಂಡಿದೆ ಎಂದು ತಿಳಿಸುತ್ತದೆ.[73]

ಕೆರೆ ಕಟ್ಟಲು ಅವಶ್ಯಕವಾದ ವ್ಯಕ್ತಿಗಳನ್ನು ಹಲವಾರು ಶಾಸನಗಳು ತಿಳಿಸುತ್ತವೆ. ಕುಶಲಿಗಳಲ್ಲದ ಕೂಲಿಗಳನ್ನ ಏರಿಯ ಮಣ್ಣಿಗೆ ಕೆಲಸಕ್ಕೆ ಮಧ್ಯಮ ಕುಶಲಿಗಳಾದ ಒಡ್ಡರನ್ನು ಕೆರೆಯ ಒಳಭಾಗದ ಕಲ್ಲಿನ ಗೋಡೆಯ ನಿರ್ಮಾಣಕ್ಕೆ ಅತ್ಯಂತ ಹೆಚ್ಚು ಕುಶಲಿಗಳಾದ ಕೆಲಸಗಾರನ್ನು ತೂಬುಗಲ್ಲಿಗೆ ಬಳಸಿಕೊಳ್ಳಲಾಗುತ್ತಿತ್ತು. ಕೆರೆಯ ಏರಿಗಳಿಗೆ ಮಣ್ಣು ಸಾಗಿಸಲು, ಬಂಡಿಹೊಡೆಯುವ ಅದಕ್ಕಾಗಿ ಬೇಕಾದ ಧನಕರು ಮಣ್ಣು ಅಗೆಯುವವರು ಉಸ್ತುವಾರಿಗಳು ಸೇನಾಭೋಗ (ಲೆಕ್ಕಿಗ) ತೂಬುಗಳನ್ನು ನಿರ್ಮಾಣ ಮಾಡುತ್ತಿದ್ದ ಕುಶಲಕರ್ಮಿಗಳು ಅಲ್ಲದೇ ಜಲಸೂತ್ರ ವಿನ್ಯಾಶಕರು ಕೆರೆಗಳ ನಿರ್ಮಾಣದಲ್ಲಿ ತೊಡಗಿಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ. ಈ ಎಲ್ಲಾ ಸಮುದಾಯದವರು ನಿರ್ಮಾತೃವಿನಿಂದ ಅವರ ಶ್ರಮಕ್ಕೆ ಪ್ರತಿಫಲವಾಗಿ ಕೂಲಿಯನ್ನು ಪಡೆಯುತ್ತಿದ್ದರು.[74]

## ಕೆರೆ ನಿರ್ಮಾಣದ ಉದ್ದೇಶಗಳು

ಕೆಱಯಂ ಕಟ್ಟಿಸು ಬಾವಿಯಂ ಸವಸು ದೇವಾಗಾರಮಂ
ಮಾಡಿಸಜ್ಜೆರೆಯೊಳ್ಸಿಲ್ಕಿದನಾತರಂ ಬಿಡಿಸು ಮಿತ್ರರ್ಗ್ಗಿಂಬುಕೆಯ ನಂಬಿ
ದರ್ಗ್ಗೆರೆವೆಟ್ಟಾಗಿರು ಶಿಷ್ಟರಂ ಪೊರೆಯೆನ್ನುತ್ತಿಂತೆಲ್ಲವಂ ಪಿಂದೆತಾ
ಯೆಱದಳ್ವಾಲೆಱೆಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ॥

ಎಂದು ಹಿಂದಿನ ತಾಯಂದಿರು ಮಕ್ಕಳಿಗೆ ಹಾಲುಣಿಸುವಾಗ ಹಾಡುತ್ತಿದ್ದರೆಂದು ನಮ್ಮ ಅಧ್ಯಯನ ಕಾಲಘಟ್ಟದ ಶಾಸನವೊಂದು ತಿಳಿಸುತ್ತದೆ. ನಮ್ಮ ಅಧ್ಯಯನ ಕಾಲಘಟ್ಟ ಇಬ್ಬರು ಮಂತ್ರಿಗಳಾದ ಮಾದರಸ ಮತ್ತು ಸಾಯಣ್ಣರ ಬಗೆಗೆ ಮತ್ತೊಂದು ಶಾಸನ ಹೀಗೆ ಉಲ್ಲೇಖಿಸುತ್ತದೆ.[75] ತೋಡದ ಭಾವಿಗಳಿಲ್ಲ ಮರಕಟ್ಟದ ಪೆರ್ಗೆರೆಗಳಿಲ್ಲ ಲೀಲೆಯಂ ಮಾಡದ ದೇವತಾಭವನವಿಲ್ಲ. ನಿರ್ಮಾಣ ಮಾಡದ ಅಗ್ರಹಾರಗಳಿಲ್ಲ ಲೀಲೆಯಂ ಮಾಡದ ದೇವತಾಭವನವಿಲ್ಲ. ನಿರ್ಮಾಣ ಮಾಡದ ಅಗ್ರಹಾರಗಳಿಲ್ಲ ಎಂಬುದಾಗಿ ಹೇಳುತ್ತದೆ. ಈ ಎರಡು ಉಲ್ಲೇಖಗಳು ಹಿಂದಿನ ಪ್ರಾಚೀನರು ಕೆರೆಗಳಣ್ನು ದೇವಾಗಾರಗಳನ್ನು ಗ್ರಾಮಗಳನ್ನು ನಿರ್ಮಿಸುವುದರ ಹಿಂದಿದ್ದ ಉದ್ದೇಶಗಳನ್ನು ಸ್ಪಷ್ಟಪಡಿಸುತ್ತದೆ. ಕನ್ನಡದ ಮತ್ತೊಂದು ಗಾದೆ "ಪರೋಪಕಾರರ್ಥಂ ಇದಂ ಶರೀರಂ" ಎಂಬ ವಾಕ್ಯ ಕೂಡ ನಾವು ಜೀವಿಸಿರುವವರೆಗೂ ಇತರರಿಗೆ ಅನುಕೂಲವಾಗುವಂತೆ ಜೀವಿಸುವಬೇಕೆಂಬ ಮಹೋದ್ದೇಶ ಹೊಂದಿದ್ದರು.

ಪ್ರಾರಂಭದ ದಿನಗಳಿಂದ ಅಂದರೆ ಪ್ರಾಗೈತಿಹಾಸಿಕ ಕಾಲದಲ್ಲಿ ಕೆರೆಗಳನ್ನು ನಿರ್ಮಿಸುವ ಉದ್ದೇಶ ತಮ್ಮ ದೈನಂದಿನ ನೀರಿನ ಅವಲಂಭನೆಯನ್ನು ಮತ್ತು ಅವಶ್ಯಕತೆಗಳನ್ನು ಪೂರೈಸಿಕೊಳ್ಳುವುದಕ್ಕಲ್ಲದೆ, ವ್ಯವಸಾಯಕ್ಕೂ ಬಳಸಿಕೊಳ್ಳೂವ ಮೂಲ ಉದ್ದೇಶಗಳಿಂದಲೆ ಪ್ರಾರಂಭವಾದವು. ಜನಸಂಖ್ಯೆ ಬೆಳದಂತೆ ಹೊಸ ಗ್ರಾಮಗಳ ರಚನೆ ಅವಶ್ಯಕವಾಯಿತು. ಹೊಸ ಗ್ರಾಮಗಳು ರಚಿತವಾಗುವುದೆಂದರೆ ಅವು ತಾತ್ಕಾಲಿಕ ವಸತಿಗಳಾಗಿರದೆ ಅವು ನಿರಂತರ ಸ್ಥಾನಗಳಗಿರಬೇಕಾದ ಮುಖ್ಯ ಲಕ್ಷಣಗಳನ್ನು ಹೊಂದಿರಬೇಕಾಗಿತ್ತು. ಅದೇನೆಂದರೆ ಜನಗಳು ವರ್ಷ ಪೂರ್ತಿಯ ನೀರಿನ

ಅವಶ್ಯಕತೆಗಳನ್ನು ಆ ಗ್ರಾಮಗಳಿಗೆ ಪೂರೈಸುವುಲ್ಲದೆ ವ್ಯವಸಾಯ ಯೋಗ್ಯ ಭೂಮಿಯನ್ನು ಹೊಂದಿರಬೇಕಿತ್ತು. ಇಲ್ಲದಿದ್ದಲ್ಲಿ ಅಲ್ಲಿನ ಜನರ ಬದುಕು ದುಸ್ಥರವಾಗುತ್ತಿತ್ತು. ಹೀಗಾಗಿ ಸಿರಿವಂತರು ಅಥವಾ ಆಡಳಿತಾಧಿಕಾರಿಗಳು ಅಥವಾ ರಾಜ, ರಾಣಿ ಇವರು ಹಳೆಯ ಗ್ರಾಮಗಳ ಎಲ್ಲೆಯಿಂದ ಹೊರೆಗೆ ಹೊಸದೊಂದು ಗ್ರಾಮವನ್ನು ನಿರ್ಮಿಸುವ ಪ್ರಯತ್ನ ಮಾಡುವ ಮುನ್ನ ಅಲ್ಲಿ ಕೆರೆಯನ್ನು ನಿರ್ಮಸಿ ನೀರಿನ ಸೌಕರ್ಯವನ್ನು ಮಾಡಿ ಆನಂತರ ಗ್ರಾಮಗಳನ್ನು ನಿರ್ಮಿಸುತ್ತಿದ್ದರು.

ಓಂ ಪ್ರಕಾಶ್ ಪ್ರಸಾದ್‌ರವರು ಮಧ್ಯಕಾಲೀನ ಯುಗದ ನಗರಗಳ ಬೆಳವಣಿಗೆ ಮತ್ತು ಅವನತಿಯನ್ನು ಕುರಿತು ಮಾಡಿರುವ ಅಧ್ಯಯನದಲ್ಲಿ ಗಾವುಂಡ, ಅವನತಿಯನ್ನು ಕುರಿತು ಮಾಡಿರುವ ಅಧ್ಯಯನದಲ್ಲಿ ಗಾವುಂಡ, ಪುಟ್ಟಣಸ್ವಾಮಿ ಮತ್ತು ಇತರ ಅಧಿಕಾರಿ ವರ್ಗದವರು ಬೆಳೆಯು ಆಯಾ ಕ್ಷೇತ್ರಗಳಲ್ಲಿ ಬೆಳೆಯುವ ಜನಸಂಖ್ಯೆಯನ್ನು ಅನುಸರಿಸಿ ಜನರ ಅವಶ್ಯಕತೆಗಳನ್ನು ಪೂರೈಸುವುದು ಅವರ ಕರ್ತವ್ಯವಾಗಿತ್ತೆಂದು ದಾಖಲಿಸುತ್ತಾರೆ.[77] ಬಹುತೇಕವಾಗಿ ಪ್ರಾಚೀನ ಕಾಲಘಟ್ಟದಲ್ಲಿ ನಿರ್ಮಾಣವಾದ ಎಲ್ಲಾ ಕೆರೆಗಳು ದಾನದ ರೂಪದಲ್ಲಿ ಅಥವಾ ಪರೋಪಕಾರಾರ್ಥವಾಗಿ ಅಥವಾ ಪುಣ್ಯ ಸಂಪಾದನೆಗಾಗಿ ನಿರ್ಮಾಣ ಮಾಡಿದ ಕೆರೆಗಳಾಗಿವೆ ಎಂದು ದಾಖಲಿಸಲಾಗಿದೆ. ಈ ಉದ್ದೇಶಗಳನ್ನು ಅಧ್ಯಯನ ಮಾಡುತ್ತಾ ಸಿ.ಟಿ.ಎಂ. ಕೊಟ್ರಯ್ಯನವರು ವಿಜಯನಗರ ಕಾಲದ ಕೆರೆಗಳು ಅಲ್ಲದೆ ವಿಶೇಷವಾಗಿ ನೀರಾವರಿ ನಿರ್ಮಾಣಗಳು ಧಾರ್ಮಿಕ ಮತ್ತು ಸಾಮಾಜಿಕ ಉದ್ದೇಶಗಳನ್ನು ಹೊಂದಿದ್ದವೆಂದು ಭಾವಿಸುತ್ತಾರೆ.[78]

## ರಾಜಕೀಯ ಕಾರಣಗಳು ಮತ್ತು ಉದ್ದೇಶಗಳು

ಪ್ರತಿಯೊಂದು ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದನಂತರ ತನ್ನ ರಾಜಧಾನಿಯ ಪರಿಸರದಲ್ಲಿ ಜನರ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿ ಬೆಳೆಸುವ ಕಾರಣಕ್ಕಾಗಿ ಮತ್ತು ಸಾಮ್ರಾಜ್ಯದ ಆರ್ಥಿಕ ಚಟುವಟಿಕೆಯನ್ನು ಬಲಪಡಿಸಲು

ವ್ಯವಸಾಯ ಮತ್ತು ನೀರಾವರಿ ಕೈಂಕರ್ಯಗಳ ಬೆಳವಣಿಗೆ ಮತ್ತು ಅಭಿವೃದ್ಧಿಗೆ ಚಾಲನೆ ನೀಡಿದ್ದಾರೆ. ಒಂದು ಅಂದಾಜಿನ ಪ್ರಕಾರ ವಿಜಯನಗರ ಸಾಮ್ರಾಜ್ಯದ ಶಾಸನಗಳ ಅಧ್ಯಯನವು ಕೆರೆ ನಿರ್ಮಾತೃಗಳನ್ನು ಸಮೀಕ್ಷಿಸಿದೆ. ಅದರಂತೆ ವಿಜಯನಗರದ ಶಾಸನಗಳನ್ನು ಸಮೀಕ್ಷಿಸಿದಾಗ ವಿಜಯನಗರ ಸಾಮ್ರಾಜ್ಯದಾದ್ಯಂತ ಕೆರೆ ನಿರ್ಮಿಸಿದಿ ನಿರ್ಮಾತೃಗಳ ವಿವರ ಶೇಕಡವಾರು ಪ್ರಮಾಣದಲ್ಲಿ ಕೆಳಗನಂತಿದೆ.[79]

| ಕೆರೆಯ ನಿರ್ಮಾತೃಗಳು | ಶೇಕಡವಾರು |
|---|---|
| ಅರಸರು | 5.72 |
| ಮಂತ್ರಿಗಳು | 7.90 |
| ರಾಜನ ಉದ್ಯೋಗಿಗಳು | 5.72 |
| ಮಾಂಡಲಿಕರು | 3.66 |
| ಸ್ಥಾನಿಕ ಅಧಿಕಾರಿಗಳು | 29.90 |
| ಸಾಮಂತರುಗಳು | 20.54 |
| ಸಾಮಾನ್ಯರು | 26.56 |

ಪ್ರತಿಯೊಂದು ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದನಂತರ ತನ್ನ ರಾಜಧಾನಿಯ ಪರಿಸರದಲ್ಲಿ ಜನರ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿ ಬೆಳೆಸುವ ಕಾರಣಕ್ಕಾಗಿ ಮತ್ತು ಸಾಮ್ರಾಜ್ಯದ ಬಹುತೇಕ ಪ್ರಾಚೀನ ಕರ್ನಾಟಕದ ಎಲ್ಲಾ ಅರಸು ಮನೆತನೆಗಳ ಕಾಲಘಟ್ಟದಲ್ಲಿ ಇದೇ ಸಂಸ್ಕೃತಿ ಮುಂದುವರೆದಿತ್ತೆಂದು ಭಾವಿಸಬಹುದು. ದಕ್ಷಿಣ ಕರ್ನಾಟಕದಾದ್ಯಂತ ನಿರ್ಮಾಣಗೊಂಡಿರುವ ಎಲ್ಲಾ ಕೆರೆಗಳು ಎಲ್ಲಾ ನೀರಾವರಿ ಚಟುವಟಿಕೆಗಳು ಶಾಸನಗಳಲ್ಲಿ ದಾಖಲಾಗಿಲ್ಲ. ಉದಾ: ಮೈಸೂರಿನಲ್ಲಿ ಆರು ಕೆರೆಗಳವೆ ಶಾಸನಗಳು ಅವುಗಳ ನಿರ್ಮಾತೃಗಳನ್ನು ಉಲ್ಲೇಖಿಸುವುದಿಲ್ಲ. ತೊಣ್ಣೂರಿನಲ್ಲಿ  ನಾಲ್ಕು ಕೆರೆಗಳವೆ ಆ ಕೆರೆಗಳ ನಿರ್ಮಾತೃಗಳು ಯಾರೆಂದು ದಾಖಲಾಗಿಲ್ಲ.[80] ನಾಗಮಂಗಲದ ಆರು ನೀರಿನ ಆಸರೆಗಳವೆ ಅವುಗಳ ನಿರ್ಮಾತೃಗಳು ಖಚಿತವಾಗುವುದಿಲ್ಲ.[81] ಹೀಗೆ ಶಾಸನಗಳಲ್ಲಿ ಉಲ್ಲೇಖಿತವಾಗದ

ಸಹಸ್ರಾರು ಕೆರೆಗಳು ದಕ್ಷಿಣ ಕರ್ನಾಟಕದಲ್ಲಿ ಕಂಡುಬರುತ್ತವೆ. ಹೀಗಾಗಿ ಕೆರೆಗಳು ಶಾಸನಗಳು ಉಲ್ಲೇಖವಾಗಿಲ್ಲವೆಂಬ ಏಕೈಕ ಕಾರಣದಿಂದಾಗಿ ಯಾವುದೇ ಕಾಲಘಟ್ಟದಲ್ಲಿ ಶಾಸನೋಕ್ತವಲ್ಲದ ಕೆರೆಗಳು ನಿರ್ಮಾಣವಾಗಲೇ ಇಲ್ಲವೆಂದು ತಿಳಿಯುವುದು ಅಸಾಧ್ಯವಾದ ವಿಷಯ.

## ಧಾರ್ಮಿಕ ಉದ್ದೇಶ

ಅಗ್ರಹಾರಗಳ ರಚನೆ, ನಗರ ಪ್ರಾರಂಭ, ಹೊಸ ಗ್ರಾಮಗಳ ರಚನೆ, ದೇವಾಲಯಗಳ ನಿರ್ಮಾಣ, ಕೆರಗಳ ನಿರ್ಮಾಣ ಒಂದಕ್ಕೊಂದು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪೂರಕವಾಗಿದ್ದುದ್ದರಿಂದ ಮತ್ತು ಈ ಎಲ್ಲಾ ನಿರ್ಮಾಣಗಳಲ್ಲಿ ಭಾಗಿಯಾಗದ ನಿರ್ಮಾತೃಗಳು ಮತ್ತು ಫಲಾನುಭವಿಗಳು ಪೂರ್ವ ನಿಗಧಿತ ನಿಯಮದಂತೆ ತಮ್ಮ ಅಧಿಕಾರವನ್ನು ಮತ್ತು ಜವಾಬ್ದಾರಿಗಳನ್ನು ಹೊಂದಿದ್ದರು. ಈ ನಿರ್ಮಾಣಗಳಿಗೆ, ನಿರ್ವಹಣೆಗೆ ಮತ್ತು ನಿರ್ಮಾಣದ ಫಲಗಳಿಗೆ ನಿರ್ಮಾತೃಗಳು ಮತ್ತು ನಿರ್ವಹಣೆಗಾರರು ಫಲಾನುಭವಿಗಳಾಗಿದುದ್ದರಿಂದ ಅದನ್ನು ಶಾಶ್ವತಗೊಳಿಸಲು ಶಾಸನಗಳನ್ನು ಹಾಕಿಸುತ್ತಿದ್ದರು.

ಅಗ್ರಹಾರಗಳು ರಚನೆಯಾಗಿ ಬಹಳ ವರ್ಷಗಳು ಅಥವಾ ತಲೆಮಾರುಗಳು ಉರುಳಿದ ಮೇಲೆ ಹಾಗೂ ಅಗ್ರಹಾರದ ಎಲ್ಲಾ ಮಹಾಜನಗಳು ತಮ್ಮ ಹಕ್ಕುಗಳನ್ನು ಪುನಃ ನವೀಕರಿಸುವಂತೆ ಆ ಸ್ಥಾನಿಕ ಅಧಿಕಾರಿಗಳನ್ನು ನಿವೇದಿಸಿಕೊಂಡು ರಾಜನ ಅಥವಾ ಮಾಂಡಲಿಕನ ಅನುಮತಿಯೊಂದಿಗೆ ತಮ್ಮ ಹಕ್ಕುಗಳನ್ನು ಪುನಃ ಪಡೆಯುತ್ತಿದ್ದನ್ನು ಶಾಸನ ಅಧ್ಯಯಗಳು ದಾಖಲಿಸಿವೆ.[82] ಈ ಎಲ್ಲಾ ಹಿನ್ನೆಲೆಗಳಲ್ಲಿ ಕೆರೆ ನಿರ್ಮಾಣದ ಉದ್ದೇಶಗಳನ್ನು ಗಮನಿಸಿದಾಗ ಆರ್ಥಿಕ ಅಭಿವೃದ್ಧಿಯ ನೆಪದಲ್ಲಿ ರಾಜರುಗಳು ಇಂತಹ ನಿರ್ಮಾಣಗಳನ್ನು ಕೈಗೊಳ್ಳುತ್ತಿದ್ದರೆಂದು ಒಪ್ಪಿಕೊಂಡಲ್ಲಿ ಅವುಗಳು ರಾಜಕೀಯ ಉದ್ದೇಶಗಳಿಂದ ಕೂಡಿರುತ್ತವೆ. ಹೊಯ್ಸಳರ ಕಾಲದಲ್ಲಿ

ಬೇಲೂರು, ದೋರಸಮುದ್ರ ಸುತ್ತಮುತ್ತಲು ನಡೆದ ನೀರಾವರಿ ನಿರ್ಮಾಣಗಳು ರಾಜಧಾನಿಯ ಅವಶ್ಯಕತೆಗಳನ್ನು ಪೂರೈಸುವುದರೊಂದಿಗೆ ಆ ಪ್ರದೇಶಕ್ಕೆ ವಲಸೆಬಂದ ಉದ್ಯೋಗಕಾಂಶಿಗಳ ಮತ್ತು ಇತರ ಕುಶಲಕರ್ಮಿಗಳ ಬೇಡಿಕೆಗಳನ್ನು ಪೂರೈಯಿಸಲು ಮತ್ತು ಆಹಾರ ಉತ್ಪತ್ತಿಯನ್ನು ದ್ವಿಗುಣಗೊಳಸಲು ನೀರಾವರಿ ಸೌಕರ್ಯವನ್ನು ಒದಗಿಸುವ ಎಲ್ಲಾ ನಿರ್ಮಾಣಗಳನ್ನು ರಾಜಕೀಯ ಉದ್ದೇಶಗಳಿಂದ ನಿರ್ಮಿಸಿದರೆಂದು ಬಣ್ಣಿಸಬಹುದು. ವಿಜಯನಗರದ ಸಾಮ್ರಾಜ್ಯದಲ್ಲಿ ಕೇಂದ್ರಕೃತ ಆಡಳಿತ ವ್ಯವಸ್ಥೆ ವಿಕೇಂದ್ರಿಕರಣಗೊಂಡು ಸಾಮಂತರುಗಳು ಅಮರ ನಾಯಕರುಗಳು ತಮ್ಮ ಪ್ರದೇಶಗಳಲ್ಲಿ ಹೆಚ್ಚು ಪ್ರಬಲರಾಗಿದ್ದರು. ಇವರುಗಳು ಆರ್ಥಿಕವಾಗಿ ತಮ್ಮ ಪ್ರದೇಶಗಳನ್ನು ಅಭಿವೃದ್ಧಿಪಡಿಸಲು ಈ ಬಗೆಯ ನಿರ್ಮಾಣ ಕಾರ್ಯದಲ್ಲಿ ತೊಡಗಿಸಿಕೊಂಡರು. ಹಾಗಾಗಿ ಈ ಎಲ್ಲಾ ನಿರ್ಮಾಣಗಳು ರಾಜಕೀಯ ಉದ್ದೇಶದಿಂದ ಪ್ರೇರೇಪಿತವಾಗಿದವೆಂದು ಹೇಳಬಹುದು.[83]

ಬಹುತೇಕ ಅಗ್ರಹಾರಗಳು ಹೊಸ ಗ್ರಾಮಗಳು ಅಥವಾ ಗ್ರಾಮಗಳು ಅಗ್ರಹಾರಗಳಾಗಿ ಪರಿವರ್ತನೆಗೊಂಡಿದುದು. ಅಗ್ರಹಾರದ ನಿರ್ಮಾತೃಗಳಾದ ರಾಜ ರಾಣಿ, ದಂಡನಾಯಕರು ಮತ್ತು ಇತರರು ತಮಗೆ ಅಥವಾ ತಮ್ಮ ಇಡೀ ಸಂತತಿಯವರಿಗೆ ಪುಣ್ಯ ಪ್ರಾಪ್ತಿಯಾಗಲೆಂದು ಬಹುತೇಕವಾದ ಅಗ್ರಹಾರಗಳು ರಾಜನ ರಾಣಿಯ ಅಥವಾ ನಿರ್ಮಾತೃಗಳಿಗೆ ಪುಣ್ಯ ಬರಲೆಂದು ನಿರ್ಮಿಸಿದವುಗಳು.[84] ಈ ಹಂತದಲ್ಲಿ ಕೆರೆಗಳು ಇದೆ ಉದ್ದೇಶಗಳಿಗಾಗಿ ನಿರ್ಮಾಣಗೊಂಡಿವೆ ಎಂದು ಭಾವಿಸಬೇಕಾಗುತ್ತದೆ.[85]

ಈ ಎಲ್ಲಾ ನಿರ್ಮಾಣಗಳು ಧಾರ್ಮಿಕ ನಂಬಿಕೆಯ ಅಡಿ–ಪಡೆಯಲ್ಲಿ ನಿರ್ಮಾಣಗೊಂಡವುಗಳು ಹಾಗಾಗಿ ಅಥಿತಿ ಸತ್ಕಾರ, ಹಸಿದವನಿಗೆ ಅನ್ನದಾನ,

ಬಾಯಾರಿದವನಿಗೆ ಜಲವನ್ನು ನೀಡುವುದು ಶ್ರೇಯಸ್ಕರವು, ಪುಣ್ಯಕರವೆಂದು ಭಾವಿಸಿದ್ದ ನಮ್ಮ ಪೂರ್ವಜರು ಅಶೋಕನಿಂದ ವಿಜಯನಗರ ಸಾಮ್ರಾಜ್ಯದವರೆಗೆ ಇದೆ ಉದ್ದೇಶಗಳನ್ನು ಹೊಂದಿ ಅನ್ನಛತ್ರಗಳನ್ನು, ವೈದ್ಯಕೀಯ ನೆರವನ್ನು ಪ್ರವಾಸಿ ತಂಗುತಾಣವನ್ನು, ಮಠಮಾನ್ಯಗಳನ್ನು ನಿರ್ಮಿಸಿದರು. ಇದೇ ಮೂಲ ಉದ್ದೇಶ ಕೆರೆಗಳ ನಿರ್ಮಾಣ ಪ್ರಕ್ರಿಯೆಯಲ್ಲಿ ಕಾರ್ಯನಿರ್ವಹಿಸಿದೆ.[86]

## ಸಾಮಾಜಿಕ ಉದ್ದೇಶಗಳು

ಪ್ರತಿಯೊಂದು ಗ್ರಾಮಗಳು ನಿರ್ಮಾಣವಾದಮೇಲೆ ಆ ಗ್ರಾಮಗಳು ಯಾವ ಪರಿಸರದಲ್ಲಿ ಅಥವಾ ಯಾವ ಉದ್ದೇಶದಿಂದ ಪ್ರಾರಂಭವಾದವು ಆ ಉದ್ದೇಶಗಳಿಗೆ ಸೀಮಿತವಾಗದ ತಮ್ಮ ಉದ್ದೇಶಗಳನ್ನು ವಿಸ್ತೃತಗೊಳಿಸಿಕೊಂಡವು. ವ್ಯಾಪಾರ ಮಾರ್ಗಗಳಲ್ಲಿ ಕಂಡುಬಂದ ಗ್ರಾಮಗಳು ದಿನೇ ದಿನೇ ಬೆಳವಣಿಗೆಗೊಂಡು ನಗರಳಾಗಿ ಅಥವಾ ಪಟ್ಟಣಗಳಾಗಿ ಪರಿವರ್ತಗೊಂಡವು. ಈ ಪರಿವರ್ತನೆ ಪ್ರಕ್ರಿಯೆಗೆ ಒಳಗಾಗದ ಎಲ್ಲಾ ಪಟ್ಟಣಗಳ ಮಹಾನಗರಗಳ ಆಡಳಿತಗಾರರು ನಗರದ ನಾಗರೀಕರ ಸೌಲಭ್ಯಗಳನ್ನು ಯಥೋಚಿತ್ತಿವಾಗಿ ಒದಗಿಸುವ ಸಲುವಾಗಿ ಹಲವಾರು ನಿರ್ಮಾಣ ಕಾರ್ಯವನ್ನು ಕೈಗೊಂಡರು. ಈ ನಿರ್ಮಾಣ ಕಾರ್ಯವು ಸಾಮಾಜಿಕ ಕಳಕಳಿಯಿಂದ ಕೂಡಿದ್ದವೇ ಹೊರತು ಪುಣ್ಯ ಸಂಪಾದನೆಯ ಅಥವಾ ಮೋಕ್ಷಕಾರಕವಾದ ಅಥವಾ ಅಧಿಕಾರದ, ದ್ರವೀಕರಣದ ಅಥವಾ ಸಂಪತ್ತಿನ ಕ್ರೋಢಿಕರಣದ ಉದ್ದೇಶಗಳನ್ನು ಹೊಂದಿರಲಿಲ್ಲ.[87] ಪರಸ್ಪರ ಸಹಾಯಮಾಡಿಕೊಳ್ಳುವ ಉದ್ದೇಶಗಳನ್ನೊಂದಿದ್ದ ಇಂತಹ ರಚನೆಗಳು ಕಾಲದುದ್ದಕ್ಕೂ ಕಂಡುಬಂದಿದೆ. ಹೀಗಾಗಿ ಪ್ರಾಚೀನ ಕಾಲಘಟ್ಟದ ಕೆರೆ ನಿರ್ಮಾಣದ ಸಾಮಾಜಿಕ ಕಳಕಳಿಯಿಂದಲೂ ನಿರ್ಮಾಣಗೊಂಡವೆಂದು ದಾಖಲಿಸಬೇಕಾಗುತ್ತದೆ.

## ಕೆರೆಯು ನಿರ್ಮಾತೃಗಳು

ಈಗಾಗಲೇ ಉದ್ದೇಶಗಳನ್ನು ವಿವರಿಸುವಂತದಲ್ಲಿ ನಾಲ್ಕನೇ ಅಧ್ಯಯದಲ್ಲಿ ಕದಂಬ ಗಂಗರಿಂದ ಪ್ರಾರಂಭಮಾಡಿ ವಿಜಯನಗರ ಸಾಮ್ರಾಜ್ಯದ ಅವನತಿಯವರೆಗೆ ದಕ್ಷಿಣ ಕರ್ನಾಟಕದಲ್ಲಿ ನಿರ್ಮಾಣಗೊಂಡ ಕೆರೆಗಳ ಸುದೀರ್ಘ ವಿವರಣವನ್ನು ನೀಡಿದ್ದೇವೆ. ಅಲ್ಲದೆ ಕರ್ನಾಟಕದ ಕೆರೆಯ ಅಧ್ಯಯನಗಳ ಬಗೆಗೆ ಮಹತ್ವವಾದ ಸಂಶೋಧನೆ ಮಾಡಿರುವ ಕುಪ್ಪಸ್ವಾಮಿಯವರ ಶಾಸನಗಳ ಸಮೀಕ್ಷೆಯನ್ನು ನೀಡುತ್ತಾ ವಿಜಯನಗರ ಸಂಸ್ಥಾನದ ವಿಜಯನಗರ ಶಾಸನಾದಾದ್ಯಂತ ಉಲ್ಲೇಖಿತವಾಗಿರುವ ಕೆರೆಗಳ ನಿರ್ಮಾತೃಗಳ ಶೇಕಡಾವಾರು ಕ್ರಮದಲ್ಲಿ ಈ ಅಧ್ಯಯದ ಹಿಂದಿನ ಪುಟಗಳಲ್ಲಿ ನೀಡಲಾಗಿದೆ. ಅವುಗಳನ್ನು ಆಧರಿಸಿ ಹೇಳುವುದಾದರೆ ಕರ್ನಾಟಕವನ್ನು ಆಳಿದ ಅರಸುಮನೆತನಗಳ ರಾಜರುಗಳು ಯುವರಾಜರು ರಾಜಕುಮಾರಿಯರು, ರಾಣಿಯರು, ಸಾಮಾಂತರು, ರಾಜನ ಅಧಿಕಾರವರ್ಗ, ಸ್ಥಾನಿಕ ಅಧಿಕಾರಿಗಳು ಮತ್ತು ಸಾಮಾನ್ಯರುಗಳು ಕೆರೆಗಳ ನಿರ್ಮಾಣದಲ್ಲಿ ಭಾಗಿಯಾಗಿರುವುದನ್ನು ಕಂಡುಕೊಳ್ಳಬಹುದು.[೮೮]

ಕದಂಬ ಮಯೂರುಶರ್ಮನು ಚಿತ್ರದುರ್ಗದ ಗುಡ್ಡಕ್ಕೆ ಅಂಟಿದಂತೆ ಇರುವ ಚಂದ್ರವಳ್ಳಿಯ ಕೆರೆಯನ್ನು ಪುನರ್ ನಿರ್ಮಿಸಿದನು. ಕದಂಬ ಕಾಕುಸ್ಥವರ್ಮನ ಸ್ಥಾನ ಕುಂದೂರಿನ ಪ್ರಣವೇಶ್ವರ ಮುಂದಿನ ತಟಾಕವನ್ನು ನಿರ್ಮಿಸಿದನು. ಇದೇ ರೀತಿ ಗಂಗ ಅರಸರುಗಳು ಕೆರೆಗಳ ನಿರ್ಮಾತೃಗಳಾಗಿದ್ದರೆಂದು ತಿಳಿಸುತ್ತದೆ. ಅವನೀತನ ಹೊಸಕೋಟೆ ಶಾಸನ ಕೆರೆಯ ನಿರ್ಮಾಣವನ್ನು ಕುರಿತು ಪ್ರಸ್ತಾಪಿಸುತ್ತದೆ. ಗಂಗರಾಜ ಶ್ರೀಪುರುಷನು ಕ್ರಿ.ಶ 776ರ ತಾಮ್ರಶಾಸನ ಆರು ಕೆರೆಗಳ ನಿರ್ಮಾಣವನ್ನು ಉಲ್ಲೇಖಿಸುತ್ತದೆ.[೮೯]

ಅನಗೂಡಿನ ಚಾಳುಕ್ಯ ವಿಕ್ರಮಾದಿತ್ಯನ ಶಾಸನ ಕೆರೆಯ ಕೆಳಗಿನ ಭೂಮಿಯ ಧಾನವನ್ನು ದಾಖಲಿಸುತ್ತದೆ. ರಾಷ್ಟ್ರಕೂಟ ಕಾಲದಲ್ಲಿ ಗಂಗರು ಅವರ

ಸಾಮಂತರಾಗಿದ್ದರು, ಕ್ರಿ.ಶ 1819ರ ರಾಜ ಮಲ್ಲನ ಶಾಸನ ಕೆರೆ ನಿರ್ಮಾಣ ಮತ್ತು ಕೆರೆಕೆಳಗಿನ ಭೂಮಿಯ ವ್ಯವಹಾರವನ್ನು ಕುರಿತು ಉಲ್ಲೇಖಿಸುತ್ತದೆ.

ರಾಷ್ಟ್ರಕೂಟ ನಾಲ್ಕನೇ ಗೋವಿಂದನ ಶಾಸನವೊಂದು ಸ್ಥಳೀಯ ಕೆರೆಯ ಮೇಲೆ ದಂಡ ಹಾಗೂ ತೆರಿಗೆ ವಿಧಿಸಿದ್ದನ್ನು ದಾಖಲಿಸುತ್ತದೆ.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡ ಕೆರೆಗಳ ಸಮೀಕ್ಷೆಯನ್ನು ದೀಕ್ಷೀತ್‌ರವರು ಉಲ್ಲೇಖಿಸುತ್ತಾರೆ.[90] ಚಾಳುಕ್ಯ ದೊರೆ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ನಿರ್ಮಾಣವಾದ 50ಪ್ರತಿಸತ ಕೆರೆಗಳ ನಿರ್ಮಾಣಗೊಂಡವೆಂದು ಉಳಿದ ಅರಸರ ಕಾಲದಲ್ಲಿ ಅಂದರೆ ಇಮ್ಮಡಿ ತೈಲಪ, ಇಮ್ಮಡಿ ಜಯಸಿಂಹ, ಸೋಮೇಶ್ವರ ಹಾಗೂ ಇತರ ಅರಸರುಗಳ ಕಾಲದಲ್ಲಿ ಉಳಿದ 50 ಭಾಗ ಕೆರೆಗಳು ನಿರ್ಮಾಣವಾದ ಬಗ್ಗೆ ದಾಖಲಿಸುತ್ತಾರೆ.

ರಾಷ್ಟ್ರಕೂಟರ ದೊರೆ 3ನೇ ಗೋವಿಂದ ನಳಗುಂದದ ದಂಡಪುರದ ಕೆರೆಯನ್ನು ಜೀರ್ಣೋದ್ಧಾರ ಮಾಡಿದನೆಂದು ತಿಳಿಸುತ್ತದೆ. ಚಾವುಂಡರಾಯನ ಶಾಸನ ಸಾಧನೆಗಳನ್ನು ಹೇಳುವ ಶಾಸನ ಕೆರೆಗಳನ್ನು ನಿರ್ಮಿಸಿದನೆಂದು ಶಾಸನಗಳು ಉಲ್ಲೇಖಿಸುತ್ತದೆ.[91]

ಹೊಯ್ಸಳ ವಿನಯಾದಿತ್ಯನು ದೋರಸಮುದ್ರದ ಸಮೀಪ ಕೆರೆಯನ್ನು ಕಟ್ಟಿಸಿದನೆಂದು ದಾಖಲಿಸುತ್ತದೆ.[92] ವಿನಯಾದಿತ್ಯನು ಕ್ರಿ.ಶ 1096ರಲ್ಲಿ ನೀರಾವರಿ ಕಾರ್ಯಗಳನ್ನು ನಿರ್ಮಿಸಿದನೆಂದು ಉಲ್ಲೇಖಿಸಲಾಗಿದೆ. ಕ್ರಿ.ಶ 1117ರ ಶಾಸನವು ವಿಷ್ಣುಸಮುದ್ರವನ್ನು ನಿರ್ಮಿಸಿದನೆಂದು ತಿಳಿಸುತ್ತದೆ. ಇದೇ ರೀತಿ ಬುಕ್ಕ, ಹರಿಹರ, ಒಂದನೇ ದೇವರಾಯ, 2ನೇ ದೇವರಾಯ, ಕೃಷ್ಣದೇವರಾಯ ಮುಂತಾದವರು ಕೆರೆಯ ನಿರ್ಮಾಣದಲ್ಲಿ ತೊಡಗಿದ್ದರು ಹೇಳಲಾಗಿದೆ.[93]

ಕಂಪಣನ ದಕ್ಷಿಣ ದಂಡೆಯಾತ್ರೆ ಕೋಲಾರದ ಕೆಲವು ಶಾಸನ ರಾಜಕುಮಾರರ ಕೆರೆಗಳ ನಿರ್ಮಾಣದಲ್ಲಿ ತೊಡಗಿದ್ದನ್ನು ದಾಖಲಿಸುತ್ತದೆ. ಇದಲ್ಲದೆ ಬಹುತೇಕ ಶಾಸನಗಳು ಆಳಾರಸರು ಮಂತ್ರಿಗಳು, ಪ್ರಧಾನರು, ದಂಡನಾಯಕರುಗಳು, ಕೆರೆಗಳನ್ನು ನಿರ್ಮಾಣ ಮಾಡಿದನ್ನು ಉಲ್ಲೇಖಿಸುತ್ತದೆ. ಅಲ್ಲದೆ ಜೀರ್ಣೋದ್ದಾರ ಮಾಡಿದನ್ನು ಉಲ್ಲೇಖಿಸುತ್ತದೆ. ಆಳುವ ವರ್ಗವಲ್ಲದೆ ಸಾಮಾನ್ಯರು ಸ್ತ್ರೀಯರು, ಕೆರೆಗಳ ನಿರ್ಮಾಣದಲ್ಲಿ ತೊಡಗಿಸಿಕೊಂಡಿದ್ದನು ದಾಖಲಿಸುತ್ತದೆ.[94] ಶಿರಾ ತಾಲೂಕಿನ ಬರಗೂರು ಶಾಸನ ನಾರಣಬ್ಬೆ ಎಂಬ ಹೆಂಗಸು ಕೆರೆ ಕಟ್ಟಿದುದ್ದನ್ನು ದಾಖಲಿಸುತ್ತದೆ.[95]

ಕೃಷ್ಣರಾಜ ನಗರದ ಗಂಗರ ಶಾಸನದಲ್ಲಿ ಚಿನಿವಾರರು, ಅಗಸರು, ತಮ್ಮದೇ ಆದ ಕೆರೆಗಳನ್ನು ಹೊಂದಿದ್ದರೆಂದು ದಾಖಲಿಸುತ್ತದೆ. ಶಿರಾ ತಾಲೂಕಿನ ಅಮರಪುರದ ಶಾಸನವು ಕಾವಲುಗಾರನೊಬ್ಬ ನಿರ್ಮಿಸಿದ ಕೆರೆಯನ್ನು ಉಲ್ಲೇಖಮಾಡುತ್ತದೆ.[96] ಹೀಗಾಗಿ ಕೆರೆಗಳ ನಿರ್ಮಾಣದಲ್ಲಿ ರಾಜರು, ರಾಣಿಯರು, ಗಾವುಂಡರು, ನಾಡಗೌಂಡರು, ಶ್ರೀಕರಣಿಕ ಅಧಿಕಾರಿ, ಸೇನಾಭೋವ, ಸಂಧಿ ವಿಗ್ರಹಗಳು, ಸಾಮಾಂತರುಗಳು, ಪಟ್ಟಣ ಶೆಟ್ಟಿಗಳು, ಮಹಾಜನರು ಕೆರೆಗಳನ್ನು ನಿರ್ಮಿಸಿರುವುದನ್ನು ಶಾಸನ ಅಧ್ಯಯನಗಳು ಉಲ್ಲೇಖಿಸಿವೆ. ವಿಶೇಷವಾಗಿ ಸ್ತ್ರೀಯರು ಕೆರೆಗಳ ನಿರ್ಮಾಣದಲ್ಲಿ ಭಾಗಿಯಾಗುತ್ತಿದುದ್ದನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಮೂರನೇ ಕೃಷ್ಣನ ಕುಡುತಿನ ಶಾಸನವು ಪದ್ಮಾವತಿ ಎಂಬಾಕೆ ಕೆರೆ ನಿರ್ಮಾಣಕ್ಕೆ 62 ಮತ್ತರು ಭೂಮಿಯನ್ನು ದಾನ ಮಾಡಿದುದನ್ನು ದಾಖಲಿಸುತ್ತದೆ.[97]

ಶ್ರವಣಬೆಳಗೊಳದ ಶಾಸನವೊಂದು ನಾಗಿಯಕ್ಕ ಶ್ರವಣಬೆಳಗೊಳದಲ್ಲಿ ಕೆರೆಯೊಂದನ್ನು ನಿರ್ಮಿಸಿದ್ದನ್ನು ದಾಖಲಿಸುತ್ತದೆ. ಶಾಕರರ ಶೂಲೆಬ್ಬೆಯ ದಿವಬ್ಬೆಯು ಕೆರೆಯ ತೂಬನ್ನು ನಿರ್ಮಿಸಿದ್ದನ್ನು ದಾಖಲಿಸುತ್ತದೆ.[98]

ಹಾಸನದ ಶಾಸನವೊಂದು ಮಾಕನಬ್ಬೆಯು ಮಾಕ ಸಮುದ್ರವನ್ನು ಕಟ್ಟಿಸದನೆಂದು ದಾಖಲಿಸುತ್ತದೆ. ಚನ್ನರಾಯಪಟ್ಟಣದ ಶಾಸನವು ಮಾಚಿರಾಜನ ಪತ್ನಿ ಶಾಂತಲದೇವಿಯ ಕೆರೆಯನ್ನು ಕಟ್ಟಿಸಿದುದನ್ನು ದಾಖಲಿಸುತ್ತದೆ.[99] ಶ್ರವಣಬೆಳಗೊಳದ ಶಾಸನವು ಅಲ್ಲಿ ಶಾಂತದೇವಿ ವಿಲಾಶನ ಕಟ್ಟೆಯನ್ನು ಕಟ್ಟಿದುದಾಗಿ ತಿಳಿಸುತ್ತದೆ.[100]

ವಿಜಯನಗರದ ಕಾಲದಲ್ಲಿ ಅದರಲ್ಲೂ ಬುಕ್ಕರಾಯನ ಮಗಳು ಜುಮ್ಮಾದೇವಿ ತಿರುಮಯನಿಯೂರ್ ಗ್ರಾಮದಲ್ಲಿ ಇದ್ದ ಕೆರೆಗೆ ಪೆನ್ನಾರ್ ಕೆರೆಯ ನೀರನ್ನು ನಾಲೆಗಳ ಮೂಲಕ ಹರಿಸಿದ್ದಳೆಂದು ಶಾಸನಗಳ ಮೂಲಕ ತಿಳಿಸುತ್ತದೆ.[101]

ಈ ಮೇಲೆ ಉಲ್ಲೇಖಿಸಿದ ಕೆಲವು ಶಾಸನಗಳು ನೂರಾರು ಸಂಖ್ಯೆಯಲ್ಲಿ ಕಂಡುಬರುವ ಮತ್ತು ಪ್ರಕಟಿತ ಮತ್ತು ಆನುಷಂಗಿಕ ದಾಖಲೆಗಳ ಸಮೀಕ್ಷೆಯನ್ನು ಆಧರಿಸಿ ಎಲ್ಲಾ ವರ್ಗದವರನ್ನು ಪ್ರತಿನಿಧಿಸುವ ಪ್ರಯತ್ನ ಮಾಡಲಾಗಿದೆ.

ಯಾವುದಾದರೂ ವರ್ಗ ಕಣ್‌ತಪ್ಪಿದ್ದರೆ, ಉಲ್ಲೇಖವಾಗದಿದ್ದರೆ ಅವು ಕೆರೆ ನಿರ್ಮಾಣದಲ್ಲಿ ಬಾಗಿಯಾಗಲಿಲ್ಲವೆಂದು ಅರ್ಥವಲ್ಲ. ಶಾಸನಗಳನ್ನು ಅವಲೋಕಿಸುವಾಗ ಆಗಿರಬಹುದಾದ ಲೋಪವೆಂದು ಭಾವಿಸಬೇಕಾಗುತ್ತದೆ. ಈ ಯಾವ ಸಮೀಕ್ಷೆಗಳು ಸಮಗ್ರ ಸಮೀಕ್ಷೆಗಳಲ್ಲ ಇವು ಪ್ರಾತಿನಿಧಿಕ ಸಮೀಕ್ಷೆಗಳೆಷ್ಟೇ ಇದು ಪಕ್ಷಿನೋಟವನ್ನು ನೀಡುತ್ತದೆಯೇ ಹೊರತು ಸಮಗ್ರ ಚಿತ್ರಣವನ್ನಲ್ಲ.

**ಪರಾಮರ್ಶನಗಳು**

1. ಅ) ಮಲ್ಲಪ್ಪ ಪಿ – ಕರ್ನಾಟಕದ ಭೂಗೋಳಶಾಸ್ತ್ರ – ಲಕ್ಷ್ಮಿ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, 34 ಸಿ, ಹೂಟಗಳ್ಳಿ, ಇಂಡಸ್ಟ್ರಿಯಲ್ ಏರಿಯಾ, ಮೈಸೂರು, 1998, ಪು.ಸಂ.22–42.

   ಆ) ಹಯವದನರಾವ್– ಮೈಸೂರು ಗೆಜೆಟಿಯರ್ ವಾಲ್ಯುಂ ನಂ–5, ಆಯಾಯ ಜಿಲ್ಲೆಗಳ ಕೋಷ್ಟಕ ನೋಡಿ

   ಇ) ಬಿ.ಎಲ್.ರೈಸ್. – ಮೈಸೂರು ಗೆಜೆಟಿಯರ್ ವಾಲ್ಯುಂ ನಂ–2. ಆಯಾಯ ಜಿಲ್ಲೆಗಳ ಕೋಷ್ಟಕ ನೋಡಿ.

2. Dr.G.R.Kuppuswamy-*History of Tank Irrigation in Karnataka* (upto-AD-1336) *QJMS*. LXXXIII. NO.3 July-Sept-1992, Pg.No.255-297

3. ಜಿ.ಎಸ್.ದೀಕ್ಷಿತ್ – *ಕರ್ನಾಟಕದಲ್ಲಿ ಕೆರೆನೀರಾವರಿ,* ಕನ್ನಡ ವಿಶ್ವವಿದ್ಯಾಲಯ, ಹಂಪೆ, 2000, ಪೀಠಿಕೆ

4. Appadorai - *Economics Conditions in Southern India* (1000-1500 AD) Vol-2, University of Madras, 1936, Pg.No.668.

5. Dr.G.R.Kuppuswamy – *Economics Conditoins in Karnataka*, (AD973-1336), Karnatak University Dharwar, 1975, pg.86 after

6. S.Gururajachar – *Some Aspects of Socio-Economic Conditions in Karnataka,* Mysore, Pg.No.181-235.

7. ದೀಕ್ಷೀತ್ – ಪೂರ್ವೋಕ್ತ, 2000, ಪು.ಸಂ. 34ರ ನಂತರ.

8. ರಾಜರಾಮ್ ಹೆಗ್ಗಡೆ (ಸಂ) – *ಕೆರೆನೀರಾವರಿ, ನಿರ್ವಹಣೆ ಚಾರಿತ್ರಿಕ ಅಧ್ಯಾಯನ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2002, ಪು.ಸಂ.48.

9. ಸಿ.ಎಸ್.ವಾಸುದೇವನ್ – *ಹಂಪಿ ಪರಿಸರದ ಕೆರೆಗಳು,* ಪ್ರಸಾರಂಗ, ಕನ್ನಡ ವಿಶ್ವವಿದ್ಯಾನಿಲ, ಹಂಪಿ. 2001, ಪು.ಸಂ.50.

10. ಸಿ.ಟಿ.ಎಂ.ಕೊಟ್ರಯ್ಯ – *Irrigation System under Vijayanagara Empire,* Directorate of Archaeology and Museums, Mysore, 1995, Pg.No.113-123.

11. ಡಾ.ಟಿ.ವಿ.ನಾಗರಾಜ – *ಮೈಸೂರು ಸಂಸ್ಥಾನದಲ್ಲಿ ನೀರಾವರಿ ಕೋಲಾರ ಜಿಲ್ಲೆಯ ಒಂದು ಅಧ್ಯಯನ* (1800–1956), ಬೆಂಗಳೂರು, 2008, ಪು.ಸಂ.135–194.

12. ಡಾ.ಪಿ.ವಿ.ಕೃಷ್ಣಮೂರ್ತಿ – ಬೆಂಗಳೂರು ಜಿಲ್ಲಾ ಪರಿಸರದ ಶಾಸನೋಕ್ತ ಕೆರೆಗಳು, *ಇತಿಹಾಸ ದರ್ಶನ,* ಸಂ–21, 2006, ಪು.ಸಂ.117–121.

13. ಡಾ.ಪಿ.ವಿ.ಕೃಷ್ಣಮೂರ್ತಿ – ಬೆಂಗಳೂರು ಜಿಲ್ಲಾ ಪರಿಸರದ ಶಾಸನೋಕ್ತ ಕೆರೆಗಳು, *ಬೆಂಗಳೂರು ಇತಿಹಾಸ ಮತ್ತು ಪುರಾತತ್ವ,* ಸಂ– ಆರ್.ಗೋಪಾಲ್, ಮೈಸೂರು 2013, ಪು.ಸಂ.199–2007.

14. ಡಾ.ಜಿ.ಆರ್.ಕುಪ್ಪುಸ್ವಾಮಿ – ಪೂರ್ವೋಕ್ತ, 1975.

15. ಇ.ಸಿ 07 (1) ಶಿಕಾರಿಪುರ 227.

16. ಡಾ.ಜಿ.ಆರ್.ಕುಪ್ಪುಸ್ವಾಮಿ – ಪೂರ್ವೋಕ್ತ, ಪು.ಸಂ.88–89.

17. ಅದೇ

18. ಅದೇ

19. ಅದೇ

20. ಅದೇ

21. ಅದೇ

22. ಅದೇ

23. ಜಿ.ಎಸ್.ದೀಕ್ಷೀತ್ – ಕೆರೆಗಳು, ಚಾರಿತ್ರಿಕ ಅಂಶಗಳು, *ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮ್‌ಹೆಗಡೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2004, ಪು.ಸಂ. 1–6.
24. ಅದೇ
25. ಅದೇ
26. ಅದೇ
27. ವಾಸುದೇವನ್ – ಪೂರ್ವೋಕ್ತ, ಪೀಠಿಕೆ
28. ಬಿ.ರಾಜಶೇಖರಪ್ಪ – ಚಿತ್ರದುರ್ಗ ಪ್ರದೇಶದ ಕೆರೆಗಳ ನಿರ್ವಹಣೆಯ ಐತಿಹಾಸಿಕ ಅವಲೋಕನ, *ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮ್‌ಹೆಗಡೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002, ಪು.ಸಂ. 129–153.
29. ಡಾ.ಲ.ನ.ಸ್ವಾಮಿ – ಕೆರೆಕಟ್ಟೆಗಳು, *ತೊಣ್ಣೂರು,* ಸಂ–ಸಿ.ಮಹದೇವು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2009, ಪು.ಸಂ. 129–149.
30. ಜಿ.ಎಸ್.ದೀಕ್ಷಿತ್– ಪೂರ್ವೋಕ್ತ, 2000, ಪು.ಸಂ.
31. ಹಯವದನರಾವ್ – *ಮೈಸೂರು ಗೆಜೆಟಿಯರ್,* ವಾಲ್ಯೂಮ್–03, ಚಾಪ್ಟರ್ ಆನ್ ಇರಿಗೇಷನ್, 2012, ಪು.ಸಂ. 156–170.
32. ಅದೇ
33. B.L. Rice – *Mysore Gazetteer*, 1897, Vol-1, Pg.No.7 ff and Hayavadana Rao, 2012, Vol-03, Pg.No.150-170.
34. ವಾಸುದೇವನ್ – ಪೂರ್ವೋಕ್ತ, 2001, ಪು.ಸಂ.35–51.

35. ಎಸ್.ಕೆ.ಮೋಹನ್ – ಹಳೆಯ ಕೆರೆಗಳ ಕಟ್ಟದಲ್ಲಿನ ತಾಂತ್ರಿಕ ವಿಶಿಷ್ಟತೆ, *ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮಹೆಗಡೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, 2002, ಪು.ಸಂ.7–10.
36. ಜಗದೀಶ್ ಅಗಸಿ ಬಾಗಿಲವಾರ್ – ಮಧ್ಯಕಾಲೀನ ಕೆರೆಗಳ ತಾಂತ್ರಿಕತೆ ಮತ್ತು ಮಿತಿಗಳು, *ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮ ಹೆಗಡೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, 2002, ಪು.ಸಂ.7–10.
37. ಹಯವದನರಾವ್ - ಪೂರ್ವೋಕ್ತ, 2012, ಸಂ–03, ಪು.ಸಂ.150–170.
38. ವಾಸುದೇವನ್ - ಪೂರ್ವೋಕ್ತ, 2001, ಪು.ಸಂ.35–71.
39. ಅದೇ
40. ಪಿ.ಮಲ್ಲಪ್ಪ- ಪೂರ್ವೋಕ್ತ, ಮೈಸೂರು, 1998, ಪು.ಸಂ.22–42.
41. ಎಂ.ಜಿ.ಮಂಜುನಾಥ – ವಿಜಯನಗರದ ಅರಸರ ಕಾಲದ ಮಳೆಕೂಯ್ಲು ತಂತ್ರಜ್ಞಾನ ಅಪೂರ್ಣ ನಿದರ್ಶನ, *ವಿಜಯನಗರ ಅಧ್ಯಯನ*, ಸಂ–12, ಡಾ.ಆರ್.ಗೋಪಾಲ್ (ಸಂ), ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 2006, ಪು.ಸಂ, 375–378.
42. ಅದೇ
43. ಅದೇ
44. ಟಿ.ವಿ.ನಾಗರಾಜು ಪೂರ್ವೋಕ್ತ, 2008, ಅಧ್ಯಾಯ.2, ಪು.ಸಂ.35–45.
45. *ಇ.ಸಿ* 10, ಗೌರಿಬಿದನೂರು 6
46. ಸಿ.ಎಸ್.ವಾಸುದೇವನ್ - ಪೂರ್ವೋಕ್ತ, 2001, ಪು.ಸಂ.35–51.
47. ಈ ಅಧ್ಯಯನದಲ್ಲಿ ಬಳಸಿರುವ ಲೇಖಕಗಳ ಮತ್ತು ಕೃತಿಗಳ ಸಮೀಕ್ಷೆಯನ್ನು ಆಧರಿಸಿದ ಅಭಿಪ್ರಾಯವಾಗಿದೆ.

48. ಹಯವದನರಾವ್ ಪೂರ್ವೋಕ್ತ, 2012, ಪು.ಸಂ.48.
49. ಸಿ.ಟಿ.ಎಂ. ಕೊಟ್ರಯ್ಯ, ಪು.ಸಂ.113-123.
50. ಅದೇ
51. ವಾಸುದೇವನನ್ ಪೂರ್ವೋಕ್ತ, 2001, ಪು.ಸಂ.35-51.
52. ಕ್ಷೇತ್ರ ಕಾರ್ಯದಲ್ಲಿ ಕಂಡುಕೊಂಡ ವಿವರಗಳ ಸಾರ.
53. ಜಿ.ಎಸ್.ದೀಕ್ಷಿತ್ ಪೂರ್ವೋಕ್ತ, 2000, ಪು.ಸಂ.50-65.
54. ಸಿ.ಟಿ.ಎಂ. ಕೊಟ್ರಯ್ಯ - ಪೂರ್ವೋಕ್ತ, 1995, ಪು.ಸಂ.78.
55. ಅದೇ
56. ಶ್ರೀಧರ –ತುಮಕೂರು ಪರಿಸರದ ಐತಿಹಾಸಿಕ ಕೆರೆಗಳು, *ಇತಿಹಾಸದರ್ಶನ,* ಸಂ-05, ಬೆಂಗಳೂರು, 2010, ಪು.ಸಂ.56-58.
57. ಸಿ.ಟಿ.ಎಂ. ಕೊಟ್ರಯ್ಯ - ಪೂರ್ವೋಕ್ತ, 1995, ಪು.ಸಂ.113-123.
58. ವಾಸುದೇವನ್ - ಪೂರ್ವೋಕ್ತ, 2001, ಪು.ಸಂ.19-28.
59. ಸಿ.ಟಿ.ಎಂ. ಕೊಟ್ರಯ್ಯ - ಪೂರ್ವೋಕ್ತ, 1995, ಪು.ಸಂ.113-123.
60. ಈ ಅಧ್ಯಯದಲ್ಲಿ ಬಳಸಿರುವ ಉಲ್ಲೇಖಿತ ವಿದ್ವಾಂಸರ ಗ್ರಂಥಗಳ ಸಮೀಕ್ಷೆಯನ್ನು ಆಧರಿಸಿದೆ.
61. ವಾಸುದೇವನ್ - ಪೂರ್ವೋಕ್ತ, 2001, ಪು.ಸಂ.19-28.
62. ಅದೇ
63. ಅದೇ
64. ಡಾ.ಜಿ.ಆರ್.ಕುಪ್ಪುಸ್ವಾಮಿ - ಪೂರ್ವೋಕ್ತ, 1992, ಪು.ಸಂ.257-297.
65. ವಾಸುದೇವನ್ - ಪೂರ್ವೋಕ್ತ, 2001, ಪು.ಸಂ.19-28.
66. ಅದೇ

67. ಸಿ.ಟಿ.ಎಂ. ಕೊಟ್ರಯ್ಯ – ಪೂರ್ವೋಕ್ತ, 1995, ಪು.ಸಂ.19–28.
68. ಅದೇ
69. ಡಾ.ಜಿ.ಆರ್.ಕುಪ್ಪುಸ್ವಾಮಿ – ಪೂರ್ವೋಕ್ತ, 1992, ಪು.ಸಂ.257–297.
70. ಸಿ.ಟಿ.ಎಂ. ಕೊಟ್ರಯ್ಯ – ಪೂರ್ವೋಕ್ತ, 1995.ಪುಟ,74–75
71. ಅದೇ
72. ಅದೇ
73. ಅದೇ
74. ಹರಿಹರ ಶ್ರೀನಿವಾಸ್ – ಪ್ರಾಚೀನ ಕರ್ನಾಟಕದ ಜಲನಿರ್ವಹಣೆಯಲ್ಲಿ ಜನ ಸಾಮಾನ್ಯರ ಪಾತ್ರ, *ಕೆರೆ ನೀರಾವರಿ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮ್ ಹೆಗಡೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002, ಪು.ಸಂ.35–48.
75. SII. IV. No. 267
76. ಅದೇ
77. Om Prakash Prasad – *Decay and Revival of Urban Centers in Medieval South India (AD 600 – 1200),* Commonwealth Publisher, New Delhi, 1989, Pg.No.71-92.
78. ಸಿ.ಟಿ.ಎಂ. ಕೊಟ್ರಯ್ಯ – ಪೂರ್ವೋಕ್ತ, 1995.ಪುಟ, 27–45.
79. ಅದೇ ಪು.ಸಂ.66
80. ಡಾ.ಲ.ನ.ಸ್ವಾಮಿ – ಕೆರೆಕಟ್ಟೆಗಳು, *ತೊಣ್ಣೂರು,* ಸಂ–ಸಿ.ಮಹದೇವು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2009, ಪು.ಸಂ. 129–149.

81. ಡಾ.ಲ.ನ.ಸ್ವಾಮಿ – ಕೆರೆಕಟ್ಟೆಗಳು, *ನಾಗಮಂಗಲ,* ಸಂ–ಸಿ.ಮಹದೇವು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2009, ಪು.ಸಂ. 129–149.
82. ಎಂ.ಚಿದಾನಂದಮೂರ್ತಿ – *ಕರ್ನಾಟಕದ ಶಾಸನಗಳ ಸಾಂಸ್ಕೃತಿಕ ಅಧ್ಯಯನ,* ಮೈಸೂರು, 1968, ಶಿಕ್ಷಣದ ಅಧ್ಯಯನವನ್ನು ಗಮನಿಸುವುದು.
83. ಡಾ.ಜಿ.ಆರ್.ಕುಪ್ಪುಸ್ವಾಮಿ – ಪೂರ್ವೋಕ್ತ, 1992, ಪು.ಸಂ.265–298.
84. S.Gururajachar – *Some Aspects of Socio-Economic life in Karnataka*, Mysore, 1973, Pg.No.181-235.
85. ಜಿ.ಎಸ್.ದೀಕ್ಷಿತ್ – ಪೂರ್ವೋಕ್ತ, 2002, ಪು.ಸಂ.1–6.
86. ಮಾ ಸಕಲೇಶ – ಕೆರೆ ನಿರ್ಮಾತೃಗಳು, *ಕೆರೆ ನೀರಾವರಿ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮ್‌ಹೆಗಡೆ, ಪ್ರಾಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002, ಪು.ಸಂ.129–153.
87. ಓಂ ಪ್ರಕಾಶ್ – ಪೂರ್ವೋಕ್ತ, 1989, ಪು.ಸಂ.101–123.
88. ಮಾ.ಸಕಲೇಶ – ಪೂರ್ವೋಕ್ತ, ಪು.ಸಂ. 129–153, ವಾಸುದೇವನ್– ಪೂರ್ವೋಕ್ತ, ಪು.ಸಂ.19–25, ಸಿ.ಟಿ.ಎಂ.ಕೊಟ್ರಯ್ಯ – ಪೂರ್ವೋಕ್ತ, ಪು.ಸಂ. 113–123, ಮತ್ತು ಕುಪ್ಪುಸ್ವಾಮಿ – ಪೂರ್ವೋಕ್ತ, ಪು.ಸಂ.181–235.
89. ಇದೇ ಅಧ್ಯಯನದ ನಾಲ್ಕನೇ ಅಧ್ಯಯನವನ್ನು ಗಮನಿಸಿ ಮತ್ತು ಜಿ.ಎಸ್. ದೀಕ್ಷಿತ್‌ರವರ ಗ್ರಂಥದ ಪ್ರಾಚೀನ ಕಾಲದ ಕೆರೆಗಳ ಅಧ್ಯಯವನ್ನು ಗಮನಿಸುವುದು.
90. ಅದೇ

91. ಅದೇ
92. ಇ.ಸಿ. ೦೯ ಬೇಲೂರು, ೩೩೮.
93. ಡಾ.ಪಿ.ಬಿ.ದೇಸಾಯಿ – *ಎ ಹಿಸ್ಟರಿ ಆಫ್ ಕರ್ನಾಟಕ* (ಫ್ರಮ್ ಪ್ರೀ ಹಿಸ್ಟರಿ ಟು ಯೂನಿಫೀಕೇಶನ್) ಕನ್ನಡ ರಿಸರ್ಚ್ ಇನ್ಸಿಟ್ಯೂಷನ್ ಆಫ್ ಕರ್ನಾಟಕ ಯೂನಿವರ್ಸಿಟಿ, ಧಾರವಾಡ, 1970, ಪು.ಸಂ.316–421.
94. ಅದೇ ಪು.ಸಂ.45–58.
95. ಟಿ.ವಿ.ನಾಗರಾಜು – ತುಮಕೂರು ಜಿಲ್ಲೆಯ ಪ್ರಾಚೀನ ನೀರಾವರಿ ವ್ಯವಸ್ಥೆ ಒಂದು ಪರಿಶೀಲನೆ, ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಆರ್.ಗೋಪಾಲ್ (ಸಂ), ಮೈಸೂರು, ೨೦೦೯, ಪು.ಸಂ.೩೩೦–೩೪೩.
96. ಮಾ.ಸಕಲೇಶ – ಕೆರೆ ನಿರ್ಮಾತೃಗಳು, *ಕೆರೆ ನೀರಾವರಿ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮ್‌ಹೆಗಡೆ, ಪ್ರಾಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪು.ಸಂ.129–153.
97. ಅದೇ
98. ಟಿ.ವಿ.ನಾಗರಾಜ – ಹಾಸನ ಜಿಲ್ಲೆಯಲ್ಲಿ ಪ್ರಾಚೀನ ನೀರಾವರಿ ವ್ಯವಸ್ಥೆ ಒಂದು ಅಧ್ಯಾಯನ, *ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಆರ್.ಗೋಪಾಲ್ (ಸಂ), ಮೈಸೂರು, ೨೦10, ಪು.ಸಂ.135–148.
99. ಅದೇ
100. ಅದೇ
101. ಸಿ.ಟಿ.ಎಂ.ಕೊಟ್ರಯ್ಯ – ಪೂರ್ವೋಕ್ತ, 1995, ಪು.ಸಂ.65–67.

## ಅಧ್ಯಾಯ-ಆರು

# ಕೆರೆಯ ನಿರ್ಮಾಣದ ನಂಬಿಕೆಗಳು: ಹಣಕಾಸು, ಉದ್ದೇಶ, ನಿರ್ಮಾಣದ ಪ್ರಕ್ರಿಯೆ

### ವಿಚಾರಗಳು

ನದಿ ಬಯಲಿನಲ್ಲಿಯೇ ನಾಗರೀಕತೆಗಳು ಜನ್ಮತಳೆದವು. ಮಾನವ ಮೂಲತಃ ಇತರ ಪ್ರಾಣಿಗಳಿಗಿಂತ ಆಲೋಚನಾ ಶಕ್ತಿಯಲ್ಲಿ ಮೇಲುಗೈ ಸಾಧಿಸಿದ್ದಾನೆ. ಮಾನವನು ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಹಲವಾರು ರೀತಿಯ ಮಾರ್ಗೋಪಾಯಗಳನ್ನು ಕಂಡುಕೊಂಡಿದ್ದಾನೆ ಹಾಗಾಗಿ ನೀರು ಒಂದು ಅತೀ ಅವಶ್ಯಕವಾದ ಅಂಶ. ಹಲವು ಮೂಲಗಳಿಂದ ಆತ ಹಲವಾರು ಸದ್ಬಳಕೆಗಳನ್ನು ಮಾಡಿಕೊಳ್ಳುತ್ತಿರುವುದನ್ನು ನಾವು ಇಂದು ಕಾಣಬಹುದಾಗಿದೆ. ಹಾಗೆಯೇ ಈ ಪರಿಪಾಟ ನೆನ್ನೆ ಮೊನ್ನೆಯದಲ್ಲ ಸಾವಿರಾರು ವರ್ಷಗಳಿಂದಲೇ ಮಾನವ ತನ್ನ ಜೀವನದ ಅಗತ್ಯಾಂಶಗಳಲ್ಲಿ ಒಂದಾದ ನೀರನ್ನು ಪೂರೈಸಿಕೊಳ್ಳಲು ಕೆರೆ ಕೊಳ, ಬಾವಿ ಮೊದಲಾದ ಮೂಲಗಳನ್ನು ರೂಢಿಸಿಕೊಂಡಿದ್ದ ಇವು ವರ್ಷದ ಎಲ್ಲಾ ದಿನಗಳು ಉಪಯುಕ್ತವಾದವು.

ಹಾಗೆಯೇ ನಾವು ನಮ್ಮ ದಕ್ಷಿಣ ಕರ್ನಾಟಕದ ಕಡೇ ಸ್ವಲ್ಪ ಗಮನಹರಿಸಿದ್ದರೆ ಸಹಸ್ರಾರು ಕೆರೆಗಳು ಅಂದಿನ ಕಾಲದಲ್ಲಿಯೇ ನಿರ್ಮಿಸಲ್ಪಟ್ಟಿವೆ ಅಂದರೆ ಅದು ನೀರಿನ ಅವಶ್ಯಕತೆಯ ಬಗ್ಗೆ ತಿಳಿಸುತ್ತದೆ. ಪ್ರಸ್ತುತವಾಗಿ ದಕ್ಷಿಣ ಕರ್ನಾಟಕದ ಕೆರೆಯ ನಿರ್ಮಾಣ ಪ್ರಾರಂಭದ ಬಗ್ಗೆ ನಾವು ಗಮನಹರಿಸುವುದಾದರೆ ಮೊದಲು :

1. ಕೆರೆ ನಿರ್ಮಾಣದ ನಂಬಿಕೆಗಳು
2. ಹಣಕಾಸು
3. ದಾನ ದತ್ತಿ

4. ಷರತ್ತುಗಳು
5. ನಿಯಮಗಳನ್ನು ಗಮನಹರಿಸಬೇಕು.

**ಕೆರೆಯ ನಿರ್ಮಾಣ :**

ಕೆರೆ ಎಂದರೆ ಒಂದು ನಿರ್ದಿಷ್ಟ ಸ್ಥಳದಲ್ಲಿ ಕೃತಕವಾಗಿ ಅಂದರೆ ಮನುಷ್ಯ ನಿರ್ಮಿತವಾದಂತಹ ನೀರಿನ ಸಂಗ್ರಹಣಾ ಮೂಲವೇ ಕೆರೆ. ಕೆರೆ ಎಂಬ ಪದದಲ್ಲಿ 'ಕೆರೆ' ಕೆರೆದು ಅಥವಾ ಅಗೆದು ಭೂಮಿಯನ್ನು ಆಳವಾಗಿ ಅಗೆದು/ಕೆರೆದು ನೀರು ನಿಲ್ಲುವಂತೆ ಮಾಡುವ ಭಾವನೆ ಇದೆ. ಒಂದು ಊರಿಗೆ ಒಂದು ದೇವಸ್ಥಾನವು ಎಷ್ಟು ಮುಖ್ಯವೊ, ಹಾಗೆಯೇ ಒಂದು ಕೆರೆಯು ಅತ್ಯಂತ ಪ್ರಮುಖವಾದುದು. ಕೆರೆ ಎಂದರೇನು ಎಂದು ತಿಳಿದರೆ ಮಾತ್ರ ಸಾಲದು, ಕೆರೆಯ ನಿರ್ಮಾಣದ ಅಗತ್ಯತೆಯನ್ನು ಅರಿಯದಿದ್ದರೆ ನಮಗೆ ಕೆರೆಯ ಪ್ರಾಮುಖ್ಯತೆ ಮತ್ತು ಅದರ ಮಹತ್ವವನ್ನು ಅರಿಯಲು ಸಾಧ್ಯವೇ ಇಲ್ಲ. ಸಾಮಾನ್ಯವಾಗಿ ಮಾನವನ ನಾಗರೀಕಯ ಬೆಳವಣಿಗೆ ನದಿಯ ಅಕ್ಕಪಕ್ಕ ಬೆಳೆಯಲಾರಂಭಿಸಿತು. ಹೀಗೆ ಪ್ರಕೃತಿದತ್ತವಾಗಿ ಜೀವಕುಲಕ್ಕೆ ಲಭ್ಯವಾಗಿರುವ ವಾಯು, ಭೂಮಿ(ನೆಲ), ಮತ್ತು ನೀರು (ಜಲ) ಮಾನವನೂ ಸೇರಿದಂತೆ ಸಕಲ ಪ್ರಾಣಿ, ಸಸ್ಯ ಸಂಕುಲಕ್ಕೆ ಅತ್ಯಾವಶ್ಯಕವಾಗಿ ಬೇಕಾಗಿರುವಂತಹದ್ದು. ವಾಯು ಮತ್ತು ನೆಲ ಜಲ ಮೊದಲ ಆದ್ಯತೆಯನ್ನು ನಾವು ಕೊಡುತ್ತೇವೆ. ಜೀವ ಸಂಕುಲ ಬದುಕಲು ಉಳಿದವುಗಳಂತೆ ನೀರು ಅತಿಮುಖ್ಯವಾಗಿರುವಂತಹದ್ದು. ಹಾಗೆಯೇ ಒಂದು ಹಳ್ಳಿ ಬೆಳೆಯಬೇಕೆಂದರೆ ಅಲ್ಲಿ ಮೊದಲು ನೀರಿನ ಮೂಲವಿರಬೇಕು. ನೀರಿನ ಮೂಲ ಇಲ್ಲದಿದ್ದಾಗ ಕೆರೆಯನ್ನು ನಿರ್ಮಾಣ ಮಾಡಬೇಕು. ಇಲ್ಲದಿದ್ದರೆ ಅಲ್ಲಿ ಜನವಸತಿ ಬೆಳೆಯುವುದು ಕಷ್ಟಕರ. ನೀರಿನ ಪೂರೈಕೆಯೊಂದಿಗೆ ಒಂದು ಹಳ್ಳಿಯ ಬೆಳವಣಿಗೆಯಾಗಲಿ ಅಥವಾ ಅಲ್ಲಿನ ನಾಗರೀಕತೆಯಾಗಲಿ ಬೆಳೆಯಲು ಸಾಧ್ಯವೆಂದು ಅಂದಿನ ಮಾನವ ಅರಿತಿದ್ದ ಆದ್ದರಿಂದ ಹೆಚ್ಚಿನ ಆದ್ಯತೆಯನ್ನು ಕೆರೆಯ ನಿರ್ಮಾಣಕ್ಕೆ ನೀಡುವುದರ ಮುಖಾಂತರ ಮೊದಲು ಆತ ಕೆರೆ ನಿರ್ಮಾಣದ ಕಾರ್ಯವನ್ನು ಕೈಗೊಳ್ಳುತ್ತಿದ್ದನು. ನೀರಿದ್ದಲ್ಲಿ ಜೀವನ ಬದುಕು, ನಾಗರೀಕತೆ, ಜೀವ ವೈವಿಧ್ಯತೆ ಇದು ನಾವು ಕಂಡು ಕೊಂಡಿರುವ ಸತ್ಯ.

"ಕೆರೆಗಳ ಇತಿಹಾಸ ಕರ್ನಾಟಕದಲ್ಲಿ ಆದಿಕದಂಬರ ಕಾಲದಿಂದ ಆರಂಭವಾಗುತ್ತದೆ"[1]. ಹೊಸ ಕೆರೆಗಳನ್ನು ಕಟ್ಟುವುದಕ್ಕೆ ಮೊದಲು ಹಳೆಯ ಕೆರೆಗಳನ್ನು ದುರಸ್ತಿ ಮಾಡುವುದು ಯೋಗ್ಯ ಎಂದು ನಮ್ಮ ಪೂರ್ವಜರು ಈ ಕ್ರಮವನ್ನೇ ಅನುಸರಿಸುತ್ತಿದ್ದರು. ಹಾಗೆ ಮಾಡಿದ್ದರಿಂದಲೇ ನಮ್ಮಲ್ಲಿ ಸಾವಿರಾರು ಕೆರೆಗಳು ಇನ್ನೂ ಜೀವಂತವಾಗಿವೆ. ಕದಂಬರ ನಂತರ ಬಂದ ಬಾದಾಮಿ ಚಾಲುಕ್ಯರು ಸುಮಾರು ಕ್ರಿ.ಶ.700ರಲ್ಲಿ ಕೆರೆಗಳನ್ನು ಕಟ್ಟಿಸಿದರು. ಅವರ ನಂತರ ಬಂದ ರಾಷ್ಟ್ರಕೂಟರು ಈಗಲೂ ಉಪಯುಕ್ತವಾದ ಅನೇಕ ಕೆರೆಗಳನ್ನು ನಿರ್ಮಾಣ ಮಾಡಿದರು. ಅಂತಹ ಒಂದು ಉದಾಹರಣೆಯನ್ನು ಕೋಲಾರ ಜಿಲ್ಲೆಯ ಕೆ.ಜಿ.ಎಫ್‌ನಲ್ಲಿ ನೋಡಬಹುದು. ರಾಷ್ಟ್ರಕೂಟರ ಕಾಲದಲ್ಲಿ (ಕ್ರಿ.ಶ.950ರಲ್ಲಿ) ವಿಜಯಾದಿತ್ಯನು ಮಂಗಲದಲ್ಲಿ (ಈಗಿನ ಜೀತಮಂಗಳ) ಕೆರೆಯನ್ನು ಕಟ್ಟಿಸಿದನು. ಈ ಕೆರೆಯು ಈಗಲೂ ಕೋಲಾರ ಜಿಲ್ಲೆಯ 'ಗೊತ್ತುಪಟ್ಟಿಗೆ' ಎಂಬಲ್ಲಿಗೆ ಕುಡಿಯುವ ನೀರನ್ನು ಕೊಡುತ್ತದೆ.[2] ಅಲ್ಲದೆ ತುಮಕೂರು ಜಿಲ್ಲೆಯ ಕುಣಿಗಲ್ಲು ಕೆರೆ ಈ ಕಾಲದ್ದು.[3] ಹೀಗೆ ನಮ್ಮ ಕರ್ನಾಟಕದ ರಾಜ್ಯದಲ್ಲಿ ಆಳಿದಂತಹ ರಾಜಮನೆತನಗಳು ಕೆರೆಗಳ ನಿರ್ಮಾಣದಲ್ಲಿ ತೊಡಗಿಸಿಕೊಂಡಿದ್ದನ್ನು ಹಾಗೂ ಸ್ವತಃ ರಾಜರೇ ಕೆರೆಗಳನ್ನು ನಿರ್ಮಿಸುತ್ತಿದ್ದಂತಹ ಅನೇಕ ವಿಚಾರಗಳು ಶಾಸನಗಳ ಅಧ್ಯಯನದಿಂದ ತಿಳಿದುಬರುತ್ತದೆ. ಅಂದರೆ ನಮ್ಮ ನಾಯಕರು ಕೆರೆಯ ನಿರ್ಮಾಣ ಕಾರ್ಯದಲ್ಲಿ ಅನುಸರಿಸಿದ್ದಂತಹ ತಂತ್ರಜ್ಞಾನ ಉನ್ನತ ಮಟ್ಟದ ಕೌಶಲ್ಯ ಅಸಮಾನ್ಯವಾದುದು.[4] ಕೋಲಾರದ ಪ್ರದೇಶಗಳಿಗೆ ಕುಡಿಯುವ ನೀರನ್ನು ಸುಮಾರು ಒಂದು ಸಾವಿರ ವರ್ಷಗಳಿಂದ ಇಂದಿಗೂ ಈ ಕೆರೆಯು ಸುಸ್ಥಿತಿಯಲ್ಲಿ ಇರುವುದನ್ನು ಗಮನಿಸಿದರೆ ತುಂಬಾ ಆಶ್ಚರ್ಯವಾದಗುತ್ತದೆ. ಇವರ ನಂತರ ಆಳ್ವಿಕೆಗೆ ಬಂದತಹ ಕಲ್ಯಾಣದ ಚಾಲುಕ್ಯರು ಮತ್ತು ಹೊಯ್ಸಳರು ಕರ್ನಾಟಕದ ತುಂಬಾ ಅನೇಕ ಕೆರೆಗಳನ್ನು ಕಟ್ಟಿದ್ದರು. ಈ ಕಾಲದಲ್ಲಿ ಕೆರೆ ಕಟ್ಟುವ ವಿಧಾನದಲ್ಲಿ ಒಂದು ವಿಶೇಷ ಬದಲಾವಣೆಯಾಯಿತು.[5] ಈ ಕಾಲದಲ್ಲಿ ಒಂದರ ಕೆಳಗೆ ಇನ್ನೊಂದು ಕೆರೆಯನ್ನು ಕಟ್ಟುವುದು ಸಾಮಾನ್ಯವಾಯಿತು. ಇದರ ಅತಿ ಶ್ರೇಷ್ಠ ಉದಾಹರಣೆ ಕೋಲಾರ ಜಿಲ್ಲೆಯಲ್ಲಿದೆ. ಅಲ್ಲಿಯ ಪಾಲಕ ನದಿಗೆ ಒಂದರ ಕೆಳಗೆ ಇನ್ನೊಂದು ಒಟ್ಟು 1000 ಕೆರೆಗಳನ್ನು ಕಟ್ಟಿದ್ದಾರೆ.[6] ಈ ರೀತಿಯ ಕೆರೆಯ ನಿರ್ಮಾಣದ ಪ್ರಾರಂಭವು ಚೋಳರ ಕಾಲದಲ್ಲಿ

ಪ್ರಾರಂಭವಾದಂತಹದ್ದು ಇದಕ್ಕಿಂತ ಮುಂಚೆ ಕರ್ನಾಟಕದಲ್ಲಿ ಈ ಮಾದರಿಯ ವ್ಯವಸ್ಥೆಯು ಕಂಡು ಬಂದಿರುವುದು ಇದುವರೆಗೆ ಎಲ್ಲೂ ತಿಳಿದು ಬಂದಿಲ್ಲ. ಈ ಕೆರೆಯ ನಿರ್ಮಾಣವು ಸುಮಾರು ಕ್ರಿ.ಶ.1000ದಲ್ಲಿ ಎಂದು ತಿಳಿಸಲಾಗಿದೆ.[7]

ಈ ಜಾಲವು ಇನ್ನೂ ಸುಸ್ಥಿತಿಯಲ್ಲಿದೆ. ಈ ಜಾಲದ ಕೊನೆಯ ಕೆರೆ ರಾಮಸಾಗರ.[8] ಇಂತಹ ಕೆರೆಗಳ ಜಾಲದ ಪ್ರಸಿದ್ಧಿ ಕರ್ನಾಟಕದ ಇತರೆ ಭಾಗಗಳಲ್ಲಿ ಕಂಡುಬರುವುದು ಅಸಾಧ್ಯವೆನಿಸುತ್ತದೆ. ಇಂತಹ ವ್ಯವಸ್ಥೆಯಲ್ಲಿ ಚೋಳರ ಕಾರ್ಯ ಅತ್ಯಂತ ಹೆಚ್ಚು ಶ್ಲಾಘನೀಯವಾದುದಾಗಿದೆ. ಹಾಗೆಯೇ ಕಲ್ಯಾಣ ಚಾಲುಕ್ಯರ ಕಾಲದ ಅತಿ ಪ್ರಸಿದ್ಧ ಕೆರೆ ಸೂಳೆಕೆರೆ ಈಗ ಅದನ್ನು ಶಾಂತಿಸಾಗರವೆಂದು ಕರೆಯುತ್ತಾರೆ. ಈ ಕೆರೆಯ ನೀರು ಹತ್ತು ಚದುರ ಮೈಲು ಹಬ್ಬಿದೆ.[9] ಈ ಕೆರೆಯನ್ನು ಗಮನಿಸಿದರೆ ಈ ಕೆರೆಯ ನೀರಿನ ಪ್ರಮಾಣ ಅಂದರೆ ಈ ಕೆರೆಯಲ್ಲಿನ ನೀರಿನ ಸಂಗ್ರಹಣೆಯು ಹೆಚ್ಚು ಆಗಾಧವಾದದ್ದು ಎಂದು ತಿಳಿದುಬರುತ್ತದೆ. ಹಿಂದಿನ ಕಾಲದ ಕೆರೆಗಳು ಎಷ್ಟು ವಿಸ್ತಾರವಾಗಿರುತ್ತಿದ್ದವೆಂದು ನಮಗೆ ಈ ಕೆರೆಯನ್ನು ಗಮನಿಸಿದಾಗ ಮನದಟ್ಟಾಗುತ್ತದೆ.

ಕೆರೆ ಕಟ್ಟುವ ಕಲೆಯಲ್ಲಿ ಹೊಯ್ಸಳರು ಚಾಲುಕ್ಯರನ್ನು ಮೀರಿಸಿದ್ದಾರೆ. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡಿದ್ದಂತಹ ಕಡೂರಿನ ಹತ್ತಿರವಿರುವ ಅಯ್ಯನಕೆರೆ ಮತ್ತು ಮದಗ ಕೆರೆಗಳ ಸೌಂದರ್ಯ ವರ್ಣನಾತೀತ ಇವುಗಳಲ್ಲಿ ಒಂದರ ಮಧ್ಯೆ ದ್ವೀಪಗಳಿವೆ.[10]

ಕೆರೆಯ ನಿರ್ಮಾಣ ಕಾರ್ಯದಲ್ಲಿ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದಂತಹ ರಾಜಮನೆತನಗಳಲ್ಲಿ ಒಬ್ಬರಿಗಿಂತ ಒಬ್ಬರು ವಿಭಿನ್ನವಾಗಿ ಹಾಗೇ ಹೆಚ್ಚು ಹೆಚ್ಚು ಕೆರೆಗಳ ನಿರ್ಮಾಣ ಕಾರ್ಯವನ್ನು ಕೈಗೊಂಡಿರುವಂತಹದ್ದನ್ನು ನಾವು ಇಂದಿಗೂ ಕಾಣಬಹುದು. ಹೊಯ್ಸಳರ ನಂತರ ಬಂದಂತಹ ವಿಜಯನಗರದ ಅರಸರು ಭಾರೀ ಕೆರೆಗಳನ್ನು ಮತ್ತು ಅದ್ಭುತವಾದ ಅಣೆಕಟ್ಟೆಗಳನ್ನು ಕಟ್ಟಿ ಈ ಶಾಸ್ತ್ರದಲ್ಲಿ ತಮ್ಮ ಪರಿಣತೆಯನ್ನು ಉನ್ನತ ಶಿಖರಕ್ಕೆ ಒಯ್ಯಿದ್ದಿದ್ದಾರೆ. ಹಂಪಿಗೆ ನೀರನ್ನು ಒದಗಿಸುವ ತುರ್ತು ಅಣೆಕಟ್ಟು ಇಂದಿಗೂ ಉಪಯುಕ್ತ ಇಂತಹ ಅಣೆಕಟ್ಟುಗಳನ್ನು ವಿಜಯನಗರದ ರಾಜರು ತುಂಗ ಭದ್ರೆಗೂ ಮತ್ತು ಕಾವೇರಿ ನದಿಗೂ ಕಟ್ಟಿದ್ದಾರೆ.[11] ವಿಜಯನಗರದ ಕಾಲದ ಕೆರೆ ನಿರ್ಮಾಣದ ಕಾರ್ಯವನ್ನು

ಗಮನಿಸಿದಾಗ ಇವರುಗಳು ಕೆರೆ ನಿರ್ಮಾಣಕ್ಕೆ ಕೈಗೊಳ್ಳುವ ನೀರಿನ ಮೂಲಗಳಾಗಿ ಕಾವೇರಿ ಮತ್ತು ತುಂಗಭದ್ರ ನದಿಯನ್ನು ಹೆಚ್ಚಾಗಿ ಆಶ್ರಯಸಿರುವುದನ್ನು ಕಾಣಬಹುದಾಗಿದೆ.

## ಕೆರೆ ನಿರ್ಮಾಣದ ನಂಬಿಕೆಗಳು

ಕೆಱಿಯಂ ಕಟ್ಟಿಸು ಬಾವಿಯಂ ಸವಸು ದೇವಾಗಾರಮಂ
ಮಾಡಿಸಜ್ಜೆರೆಯೊಳ್ಸಿಲ್ಕಿದನಾತರಂ ಬಿಡಿಸು ಮಿತ್ರರ್ಗ್ಗಿಂಬುಕೆಯ ನಂಬಿ
ದರ್ಗ್ಗೆರವೆಟ್ಟಾಗಿರು ಶಿಷ್ಟರಂ ಪೊರೆಯೆನ್ನುತ್ತಿಂತೆಲ್ಲವಂ ಪಿಂದೆತಾ
ಯೆಱದಳ್ವಾಲೆಚೆಂದು ತೊಟ್ಟು ಕಿವಿಯೊಳ್ ಲಕ್ಷೀಧರಾಮಾತ್ಯನಾ॥[12]

ತಾಯಿ ಹಾನೀಯುವಾಗ ಕಂದನಿಗೆ ಕಿವಿಯಲ್ಲಿ ಹೇಳುವ ಈ ಪಿಸುಮಾತು ಹಿಂದಿನವರು ತಮ್ಮ ನಿಜ ಜೀವನದಲ್ಲಿ ರೂಪಿಸುವ ನಿಯಮಗಳಾಗಿವೆ. ಇವುಗಳಲ್ಲಿ ಕೆರೆ ಬಾವಿಗಳ ನಿರ್ಮಾಣ ಕಾರ್ಯವು ಪ್ರಥಮ ಪ್ರಾಶಸ್ತ್ಯದಲ್ಲಿ ಸೇರಿರುವುದು ಬಹುಮುಖ್ಯವಾದುದು. ಇದರಿಂದ ಅಂದಿನ ಪರಿಸ್ಥಿತಿಯಲ್ಲಿ ಕೆರೆ ಬಾವಿಗಳ ನಿರ್ಮಾಣವು ಹೆಚ್ಚಿನ ಮಹತ್ವ ಹೊಂದಿರಲು ಸ್ಪಷ್ಟವಾಗುತ್ತದೆ.

ಬಹುಶಃ ಸಾರ್ವಜನಿಕ ಕಾರ್ಯಗಳಲ್ಲೂ ಬಹುಮುಖ್ಯವಾದುದು ತಟಾಕ ನಿರ್ಮಾಣ ಸತ್ತವನ ಪ್ರೇತ್ರವು ಬಹಳ ಬಾಯಾರಿಕೆಯಿಂದ ಹಿಂಗುವುದೆಂದೂ, ತಟಾಕ ನಿರ್ಮಾಣದ ಮುಂತಾದ ಧರ್ಮ ಕಾರ್ಯಗಳಿಂದ ಅದರ ಬಾಯಾರಿಕೆಯಿಂದ ಹಿಂಗುವುದೆಂದೂ ಹಿಂದಿನ ಜನರು ನಂಬಿದ್ದರು. ಮಹಾಭಾರತದ ಪ್ರಕಾರ ಯಾವ ವ್ಯಕ್ತಿಯು ಕಟ್ಟಿಸಿದ ಕೆರೆಯಲ್ಲಿ ಹಸುಗಳು, ಪ್ರಾಣಿಗಳು, ಪಕ್ಷಿಗಳು, ಮನುಷ್ಯರು, ನೀರನ್ನು ಕುಡಿದು ತೃಪ್ತರಾಗುತ್ತಾರೋ ಅವನು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ.[13]

ಕೆರೆಯನ್ನು ಕಟ್ಟಿಸಿದರೆ ತನಗೆ ಮಾತ್ರವಲ್ಲ ತನ್ನ ತಾಯಿ ತಂದೆಗಳಿಗೂ ಪುಣ್ಯವು ಲಭಿಸುತ್ತದೆಂದು ಕೆರೆ ಕಟ್ಟಿಸಿದ್ದಾಗಿ ನಾಣಿಮಯ್ಯನಾಯಕ ಹೇಳಿಕೊಂಡಿದ್ದಾನೆ.[14] ಸೋರಿಗಾವುಂಡಿ ಎಂಬ ತಾಯಿ ತನ್ನ ಮೂವರು ಮಕ್ಕಳನ್ನು ಕರೆದು ತನಗೆ ಪುಣ್ಯ ಬರುವಂತಾಗಲೂ ಏನಾದರೂ ಧರ್ಮಕಾರ್ಯ ಮಾಡಿ ಎಂದು ಕೇಳಿಕೊಳುತ್ತಾಳೆ. ಆಗ

ಕೆರೆಯೊಂದನ್ನು ಜೀರ್ಣೋದ್ಧಾರ ಮಾಡದರೆ ಅದರ ಉದಾರ ದಾನದ ಫಲವು ನಮಗೆ ಸೇರುವುದೆಂದು ಆಕೆಗೆ ಮಕ್ಕಳು ಭರವಸೆ ನೀಡುತ್ತಾರೆ. ಇದರಿಂದ ಕೆರೆಯ ನಿರ್ಮಾಣ ಅಥವಾ ಜೀರ್ಣೋದ್ಧಾರದಂತಹ ಕೆಲಸಗಳಿಗೆ ಪುಣ್ಯ ಲಭಿಸುತ್ತದೆಂದು ಪೂರ್ವಜರು ನಂಬಿದ್ದು ಭಾಸವಾಗುತ್ತದೆ.

ರಾಜರು – ಶ್ರೀಮಂತರು ಅಧಿಕಾರಿಗಳು ಮತ್ತು ಸ್ಥಳೀಯ ಸಂಸ್ಥೆಗಳು ಕೆರೆ ಬಾವಿಗಳನ್ನು ಕಟ್ಟಿಸುವುದು ಒಳ್ಳೆಯ ಕಾರ್ಯವೆಂದು ನಂಬಿದ್ದರು. ವಿಸ್ತೃತವಾಗಿ ನೀರಾವರಿಗೋಸ್ಕರವಾಗಿ ಒಂದು ಕೆರೆಯನ್ನು ಕಟ್ಟಿಸಿದರು. ಇದು ಬಹುಶ್ರೇಷ್ಠವಾದ ಧರ್ಮಕಾರ್ಯವೆಂದು ಅಂದಿನ ಸಮಾಜವು ಪರಿಗಣಿಸಿತು. ಇಂತಹ ಬೇರು ಬಿಟ್ಟ ಧಾರ್ಮಿಕ ನಂಬಿಕೆಯು ಅರಸರಿಗೂ ಇತರರಿಗೂ ಸಮಾನವಾಗಿಯೇ ಲಾಭಕರವಾಗಿತ್ತು.[15]

ದೇವಾಲಯಕ್ಕೆ ಬರುವ ಭಕ್ತರಿಗೆ, ಕುಡಿಯಲು, ಸ್ನಾನಕ್ಕೆ, ಶಾಂತಿಕಾರ್ಯಕ್ಕೆ ಜನರ ಜಮೀನಿಗೆ, ಮೂಕ ಪ್ರಾಣಿ ಪಕ್ಷಿಗಳಿಗೆ ಹಾಗೂ ಜನರೆಲ್ಲರ ಉಪಯೋಗಕ್ಕೆ ಕೆರೆಗಳನ್ನು ಕಟ್ಟಿಸುವುದು. ಬಾವಿ ಮತ್ತು ಕಾಲುವೆಗಳನ್ನು ತೋಡಿಸುವುದನ್ನು ಪುಣ್ಯದ ಕಾರ್ಯವೆಂದು ಹಿಂದಿನವರು ಭಾವಿಸಿದ್ದರಿಂದಲೇ ಧಾರ್ಮಿಕ ಮೂಲ ನೆಲೆಯಾಗಿ ಸಂಭವಿಸಿರಬಹುದು.[16]

ಕೆರೆಗಳನ್ನು ಕಟ್ಟಿಸುವುದಕ್ಕೆ ಒಂದು ಪ್ರಮುಖ ಕಾರಣ ಪ್ರಾಚೀನ ಭಾರತದ ಜನರಲ್ಲಿ ಇದ್ದಂತಹ ನಂಬಿಕೆ. ಕೆರೆ ಕಟ್ಟುವುದು ಹಲವು ಪುಣ್ಯ ಕೆಲಸಗಳಲ್ಲಿ ಒಂದು ಎಂದು ಅಂದಿನ ಜನಸಾಮಾನ್ಯರ ಮನಸ್ಸಿನಲ್ಲಿ ಬೇರೂರಿದ್ದ ವಿಷಯ. ಆದುದ್ದರಿಂದ ಜನರು ಈ ಕಾರ್ಯದಲ್ಲಿ ತಮ್ಮನ್ನು ತಾವು ಸಕ್ರೀಯವಾಗಿ ತೊಡಗಿಸಿಕೊಳ್ಳುತ್ತಿದ್ದರು. ಅವರಿಗೆ ಅರಿವಿಲ್ಲದೆಯೇ ಕೆಲವು ನಂಬಿಕೆಗಳು ಮತ್ತು ಆಚರಣೆಗಳು ಅವರ ದೈನಂದಿನ ಜೀವನದಲ್ಲಿ ಹೊಸೆದು ಕೊಂಡಿದ್ದನ್ನು ಅಂದಿನ ಸಾಮಾಜಿಕ ಧಾರ್ಮಿಕ ಜೀವನವನ್ನು ಗಮನಿಸಿದಾಗ ನಮಗೆ ತಿಳಿದು ಬರುತ್ತದೆ.[17]

ಕೆರೆಯ ಬಗೆಗೆ ಇರುವ ಭಾರತದ ಅತ್ಯಂತ ಪ್ರಾಚೀನವಾದ ಉಲ್ಲೇಖವು ಸಂಭಾವನ ಗೃಹ್ಯಸೂತ್ರದಲ್ಲಿದೆ. ಬಾವಿಯನ್ನು ಅಥವಾ ಕೊಳವನ್ನು ಬಳಸುವ ಮುನ್ನ ವೈದಿಕ ಆಚರಣೆಗಳನ್ನು ನೆಡೆಸಿ ಋಗ್ವೇದದ ಮಂತ್ರಗಳನ್ನು ಉಚ್ಛರಿಸಿ ಮಳೆಯ ಅಧಿದೇವತೆಯಾದ

ವರುಣನನ್ನು ಮತ್ತು ಇತರೆ ದೇವತೆಗಳನ್ನು ಸ್ತುತಿಸಿದ ನಂತರದಲ್ಲಿಯೇ ಕೊಳ ಮತ್ತು ಬಾವಿಗಳನ್ನು ಉಪಯೋಗಿಸಬೇಕು ಎಂದು ಗ್ರಂಥವು ತಿಳಿಸುತ್ತದೆ.[18]

ಅಗ್ನಿ ಪುರಾಣವು ಸಹ ಈ ಅಭಿಪ್ರಾಯವನ್ನು ಅನುಮೋದಿಸುತ್ತದೆ ಹಾಗೂ ಕೆಲವು ವಿಧಗಳನ್ನು ಮತ್ತು ಆಚರಣೆಗಳನ್ನು ಕುರಿತ ಮಾಹಿತಿಗಳನ್ನು ನೀಡುತ್ತದೆ. ಅದರಂತೆ ಕೆರೆ, ಬಾವಿ ಮುಂತಾದ ಚುಕ್ತ ಸಂಬಂಧಿಸಿದ ರಚನೆಗಳನ್ನು ಕೈಗೆತ್ತಿಕೊಂಡಾಗ, ಅಂತಹ ಭಾಗದಲ್ಲಿ 8 ಮಡಿಕೆಗಳಲ್ಲಿ 8 ಬಗೆಯ ನೀರನ್ನು ತುಂಬಿಸಿ, 8 ದಿಕ್ಕುಗಳಲ್ಲಿ ಅವುಗಳನ್ನು ಸ್ಥಾಪಿಸಬೇಕು. ಅಷ್ಟದಿಕ್ಪಾಲಕರುಗಳನ್ನು ಪೂಜಿಸಿ, ಅಷ್ಟ ದಿಕ್ಪಾಲಕರಲ್ಲಿ ಒಬ್ಬನಾದ ಮಳೆಯ ಅಧಿದೇವತೆ ವರುಣ ಮೂರ್ತಿಯನ್ನು ಊರಿನಲ್ಲಿ ಮೆರವಣಿಗೆ ಮಾಡಿ ನಂತರ ಕೊಳದಲ್ಲಿ ಅಥವಾ ನೀರಿನಲ್ಲಿ ಮುಳುಗಿಸಬೇಕು (ಸ್ಥಾಪಿಸಬೇಕು) ಎಂದು ತಿಳಿಸುತ್ತದೆ. ಈ ರೀತಿಯಲ್ಲಿ ವಿಧಿಗಳನ್ನು ಆಚರಿಸಿದವನಿಗೆ ಅಶ್ವಮೇಧಯಾಗವನ್ನು ಮಾಡಿದ ಫಲವು ಲಭಿಸುತ್ತದೆ ಎಂದು ಪರಿಗಣಿಸಲಾಗಿತ್ತು.[19]

ಭಾರತದಲ್ಲಿ ಅಂದಿನಿಂದ ಇಂದಿನವರೆಗೂ ಯಾವುದೇ ಪ್ರಮುಖ ಕೆಲಸಗಳನ್ನು ಮಾಡಬೇಕಾದಲ್ಲಿ ಪ್ರಶಸ್ತದಿನ ಮತ್ತು ಸಮಯವನ್ನು ಆಯ್ಕೆಮಾಡಿ ಕೆಲಸವನ್ನು ಕೈಗೊಳ್ಳುವುದು ವಾಡಿಕೆಯಾಗಿದೆ. ಕೆರೆಗಳನ್ನು ಕಟ್ಟಲು ಮತ್ತು ಅದನ್ನು ಬಳಸಲು ಸಹ ಒಳ್ಳೆಯ ದಿನ ಮತ್ತು ಮುಹೂರ್ತವನ್ನು ನೋಡುತ್ತಿದ್ದರು.

ಎರಡನೇ ಹರಿಹರನ ಕಾಲದ ಒಂದು ಶಾಸನವು ತುಮಕೂರು ಜಿಲ್ಲೆಯಲ್ಲಿ ದೊರೆತಿದ್ದು ಕುಣಿಗಲ್ ಕೆರೆಯ ತೂಬನ್ನು ಕ್ರಿ.ಶ.1394ರಲ್ಲಿ ಮಂತ್ರಿವರ್ಯನಾದ ಇರುಗದ್ದೆ ದಣ್ಣಾಯಕನು ಕಟ್ಟಿಸಿದನೆಂದು ಉಲ್ಲೇಖಿಸುತ್ತದೆ. ಈ ತೂಬಿನ ಕಲ್ಲನ್ನು ಪ್ರಶಸ್ತವಾದ ಶುಭಲಗ್ನದಲ್ಲಿ ಸ್ಥಾಪಿಸಲಾಯಿತು ಎಂದು ತಿಳಿಸುತ್ತಾ ಅದರ ವಿವರಗಳನ್ನು ಈ ರೀತಿಯಾಗಿ ನೀಡುತ್ತವೆ. ಶಕವರ್ಷ, 1316ರ ಭಾವನಾಮ ಸಂವತ್ಸರದ ಭಾದ್ರಪದ ಶುಕ್ಲಪಕ್ಷದ ಮೊದಲ ದಿನದಂದು ಸೂರ್ಯೋದಯವಾಗಿ 7 ಘಟಕ ನಂತರ ಧನುರ್ ಲಗ್ನದಲ್ಲಿ ತೂಬನ್ನು ಸ್ಥಾಪಿಸಲಾಯಿತು ಎಂದು ದಾಖಲಿಸಿದೆ. ಈ ಶಾಸನವು ತೂಬಿರುವ ಕಲ್ಲಿನ ಮೇಲೆಯೆ ಇರುವುದು ಅತ್ಯಂತ ಕುತೂಹಲಕರವಾದ ಸಂಗತಿ.[20]

ಋಗ್ವೇದ ಮತ್ತು ಯಜುರ್ವೇದಗಳು ಕೋಟೆ, ದ್ವಾರ, ಹೆಬ್ಬಾಗಿಲು ಮತ್ತು ಅಣೆಕಟ್ಟು (ಕೆರೆಗಳನ್ನು ಒಳಗೊಂಡು) ಕಟ್ಟುವಾಗ ನರಬಲಿಯನ್ನು ನೀಡಿ. ಬಲಿಯಾದ ವ್ಯಕ್ತಿಯ ದೇಹವನ್ನು ಅಂತಹ ರಚನೆಗಳ ಅಡಿಪಾಯದಲ್ಲಿಯೇ ಹೂಳಬೇಕು ಎಂದು ತಿಳಿಸುತ್ತದೆ.[21]

ಜನಪದದಲ್ಲಿ ಇಂತಹ ನಂಬಿಕೆಗಳು  ಮತ್ತು ಆಚರಣೆಗಳು ಇದ್ದರು ಸಹ ಅವುಗಳು ಸಾಹಿತ್ಯ ರೂಪವನ್ನು ಪಡೆದು ಜನಪದಗೀತೆಗಳಾಗಿ ಇಂದಿಗೂ ಉಳಿದುಬಂದಿದೆ. ಕನ್ನಡದ ಒಂದು ಜನಪದಗೀತೆಯಂತೆ ಕಲ್ಲಿನಕೇರಿಯ ಮಲ್ಲನಗೌಡನೆಂಬುವನು ಒಂದು ಕೆರೆಯನ್ನು ಕಟ್ಟಿಸುತ್ತಾನೆ. ಆದರೆ ಆ ಕೆರೆ ಏರಿಯೂ ಬಲವಾಗಿ ನಿಲ್ಲದೆ ಒಡೆದು ಹೋಗುತ್ತದೆ. ಪ್ರತಿ ಬಾರಿಯೂ ಸರಿಪಡಿಸಿದ ನಂತರವೂ ಏರಿಯು ಒಡೆಯುತ್ತಲೇ ಇರುತ್ತದೆ. ಈ ಕಾರಣದಿಂದ ಮಲ್ಲನಗೌಡನು ಒಬ್ಬ ಜ್ಯೋತಿಷ್ಯನನ್ನು ಕಂಡು ಇದಕ್ಕೆ ಪರಿಹಾರವನ್ನು ಸೂಚಿಸಲು ಕೋರುತ್ತಾನೆ. ಜ್ಯೋತಿಷ್ಯರು ಕೆರೆಗೆ ನರಬಲಿಯನ್ನು ನೀಡಿದ ಪಕ್ಷದಲ್ಲಿ ಈ ಕೆರೆಯ ಏರಿಯು ಭದ್ರವಾಗಿರುತ್ತದೆ ಎಂದು ತಿಳಿಸುತ್ತಾನೆ. ಈ ಕಾರ್ಯಕ್ಕೆ  ಜನ ಮುಂದೆ ಬರುವುದಿಲ್ಲ. ಆಗ ಎಲ್ಲರ ಒಳಿತನನ್ನು ಗಮನದಲ್ಲಿರಿಸಿಕೊಂಡು ಮಲ್ಲಗೌಡನ ಕಿರಿಯ ಸೊಸೆ ಭಾಗೀರಥಿ ಕೆರೆಗೆ ಆಹುತಿಯಾಗುತ್ತಾಳೆ. ನಂತರದಲ್ಲಿ ಕೆರೆ ಏರಿಯೂ ಭದ್ರವಾಗಿ ನಿಲ್ಲುತ್ತದೆ. ಜನರು ಆಹುತಿಯಾದ ಭಾಗಿರಥಿಗೆ ಒಂದು ಚಿಕ್ಕ ಗುಡಿಯನ್ನು ಕೆರೆಯ ಸಮೀಪದಲ್ಲಿ ಕಟ್ಟಿ ಅವಳ ಮೂರ್ತಿಯನ್ನು ಸ್ಥಾಪಿಸಿ ಪೂಜಿಸುತ್ತಾರೆ ಎಂಬುದು ಜನಪದ ಗೀತೆಯ ಸಾರವಾಗಿದೆ.[22]

ವಿಜಯನಗರ ಕಾಲದಲ್ಲಿಯೂ ಸಹ ನರಬಲಿಯು ಪ್ರಚಲಿತದಲ್ಲಿತ್ತೆಂಬುದು ಕೆಲವು ಮೂಲಗಳಿಂದ ತಿಳಿದುಬರುತ್ತದೆ. ಕ್ರಿ.ಶ.1364ರಲ್ಲಿ ಬುಕ್ಕರಾಯನ ಮಂತ್ರಿಯಾದ ಚಿಕ್ಕ ಒಡೆಯನು ಕೆರೆಯ ಏರಿಯನ್ನು ನಿರ್ಮಿಸುವ ಸಮಯದಲ್ಲಿ ಒಬ್ಬ ಬಾಲಕಿಯನ್ನು ಬಲಿ ಕೊಟ್ಟಿರುವುದಾಗಿ ದಾಖಲಾಗಿದೆ.[23]

ಕೃಷ್ಣದೇವರಾಯನು ನಿರ್ಮಿಸಿದಂತಹ ಬಹುಉಪಯೋಗಿ ಕೆರೆಯಾದ ರಾಯರಕೆರೆಯನ್ನು ನಿರ್ಮಿಸುವಾಗ ಕೆರೆಯ ಏರಿಯು ಪದೇ ಪದೇ ಒಡೆಯುತ್ತಿರಲು ಅವನು ಬ್ರಾಹ್ಮಣರ ಬಳಿ ಕಾರಣ ವಿಚಾರಿಸುತ್ತಾರೆ. ಅವರು ನರಬಲಿ, ಕುದುರೆ ಮತ್ತು

ಎಮ್ಮೆಗಳನ್ನು ಬಲಿ ನೀಡಬೇಕೆಂದು ತಿಳಿಸುತ್ತಾರೆ. ಅದರಂತೆ ರಾಜನು 60 ಜನರನ್ನು ಕುದುರೆ ಎಮ್ಮೆಗಳನ್ನು ಬಲಿಕೊಡುತ್ತಾನೆ ಎಂಬ ವಿಷಯ ವಿದೇಶಿಯರ ಬರಹಗಳಲ್ಲಿ ದಾಖಲಾಗಿದೆ.[24]

ಹೊಸಪೇಟೆ ತಾಲೂಕಿನಲ್ಲಿ ಈಗಲೂ ಕೆಲವು ಆಚರಣೆಗಳು ಬಳಕೆಯಲ್ಲಿವೆ. ಒಂದು ಕೆರೆಯು ತುಂಬಿದಾಗ ಆ ಊರಿನ ಜನರು ಕೆರೆಯ ನೀರಿಗೆ ಪೂಜೆಯನ್ನು ಸಲ್ಲಿಸಿ ಒಂದು ಕುರಿಯನ್ನು ಬಲಿಕೊಡುತ್ತಾರೆ. ಆ ಆಚರಣೆಯನ್ನು 'ಗಂಗಮ್ಮ'ನನ್ನು ಪೂಜೆ ಮಾಡುವುದು ಎಂದು ಕರೆಯುತ್ತಾರೆ. ಕೇವಲ ಕೆರೆ ತುಂಬಿದಾಗ ಮಾತ್ರವೇ ಗಂಗಮ್ಮನ್ನು ಪೂಜೆ ಮಾಡುವುದು ಎನ್ನುತ್ತಾರೆ.[25]

ಡಣಾಯಕನು ಮಡಿದಾಗ ಅವನ ಕೋರಿಕೆಯಂತೆ ಅವನ ಭೌತಿಕ ದೇಹವನ್ನು ರಾಯರಕೆರೆಯ ಏರಿಯಲ್ಲಿ ಹೂಳಲಾಗಿದೆ ಎಂದು ಜನಪದರು ನಂಬುತ್ತಾರೆ. ಭಾರತದ ವಿವಿಧ ರಾಜ್ಯಗಳಲ್ಲಿಯೂ ಕೆರೆ, ಕುಂಟೆ, ಬಾವಿ ಮುಂತಾದ ಜಲ ಸಂಗ್ರಹಕಗಳನ್ನು ಕುರಿತು ಆಚರಣೆಗಳು ಇದ್ದವೆಂದು ಅಧಿಕವಾಗಿ ಜನಪದ ಮೂಲಗಳಿಂದಲೂ ತಿಳಿದುಬರುತ್ತದೆ.

ಕೆರೆಗಳನ್ನು ಕೇವಲ ಹಿಂದೂಗಳು ಮಾತ್ರಲ್ಲ ಮುಸಲ್ಮಾನರು ಸಹ ಹಿಂದೂಗಳ ನಂಬಿಕೆಯಿಂದ ಕೆರೆಗಳು ಕಟ್ಟೆಗಳನ್ನು ಕಟ್ಟಿದರೆ ಒಳ್ಳೆಯದಾಗುತ್ತದೆ ಎಂಬುದನ್ನು ಹೊಂದಿದ್ದರು. ಎಂದು ಶಾಸನಗಳಿಂದ ತಿಳಿದು ಬರುತ್ತದೆ. ನಮಗೆಲ್ಲಾ ತಿಳಿದಿರುವಂತೆ ಇಸ್ಲಾಂ ಧರ್ಮವು ನಮ್ಮ ದೇಶದ ಧರ್ಮವಲ್ಲ ಅದೂ ಅಲ್ಲದೆ, ಹಿಂದೂ ಧರ್ಮದ ಪ್ರಕಾರ ಪುನರ್ಜನ್ಮ ಮುಂತಾದ ಕಲ್ಪನೆಯಲ್ಲಿ ಅನೇಕ ವಿಚಾರಗಳಲ್ಲಿ ವಿಭಿನ್ನತೆಯು ಕಂಡುಬರುತ್ತದೆ. ಆದರೆ ವಿಜಯ ನಗರದ ಕಾಲದ ಶಾಸನವೊಂದು ಮುಸ್ಲಿಂ ಧರ್ಮದ ವ್ಯಕ್ತಿಯಾದ ಅರಸನ ಸೇವಕನಾದ ಕಟ್ಟಗೆಯ ಅಹಮದ್‌ಖಾನನು ಅರಸನಿಗೆ ಪುಣ್ಯವಾಗಬೇಕೆಂದು ಧರ್ಮಶಾಲೆ ಮತ್ತು ಬಾವಿಯನ್ನು ಕಟ್ಟಿಸಿದನೆಂದು 7ನೇ ದೇವರಾಯನ ಕಾಲದ ಅಂದರೆ ಕ್ರಿ.ಶ.1437ರ ಶಾಸನವು ಉಲ್ಲೇಖಿಸುತ್ತದೆ.[26] ದೊಡ್ಡಹೊಮ್ಮದಲ್ಲಿ ಕ್ರಿ.ಶ 1296ರಲ್ಲಿ ಹೊಯ್ಸಳ ವೀರಬಲ್ಲಾಳ ಆಳುತ್ತಿರುವಾಗ ಹಿರಿಯ ಪೂರ್ವದ ಮಾಲೆಗಾರನ, ಆರುವ ಗವುಂಡನ ಮಗ ತಾಯಿ ಸ್ವರ್ಗಕ್ಕೆ ಹೋಗಲೆಂದು ಅವಳ ಹೆಸರಲ್ಲಿ ಬಾವಿಯನ್ನು ತೊಡಿಸಿ ತೋಪು ಮಾಡಿದನು. ಇದು

ಆಗಿನ ಸಾಮಾನ್ಯ ಜನರಲ್ಲಿದ್ದ ನಂಬಿಕೆಯನ್ನು ತೋರಿಸುತ್ತದೆ.[27] ಇನ್ನೂ ಕೆಲವರು ಕೆರೆ ನಿರ್ಮಾಣ ಕಾರ್ಯ ಒಂದು ಮಹತ್ಕಾರ್ಯವೆಂದು ಇದರಿಂದ ನಮಗೆ ಮೋಕ್ಷ ದೊರೆಯುತ್ತದೆ ಎಂಬ ನಂಬಿಕೆಯನ್ನು ಇಟ್ಟುಕೊಂಡಿದ್ದರು. ಹಾಗಾಗಿ ಕೆರೆಯನ್ನು ನಿರ್ಮಿಸುತ್ತಿದ್ದರು. ಕೆಲವರು ಅನೇಕ ಹರಕೆಗಳನ್ನು ಹೊತ್ತುಕೊಳ್ಳುವುದರ ಮೂಲಕ ಕೆರೆ, ಕಟ್ಟೆ, ಕಾಲುವೆ, ಬಾವಿ, ಕೊಳ ಹೀಗೆ ಹಲವು ರೀತಿಯಲ್ಲಿ ಜನೋಪಕಾರ ಮಾಡುವನೋ ಅವನು ಅಶ್ವಮೇಧಯಾಗವನ್ನು ಮಾಡಿದ ಫಲವನ್ನು ಹೊಂದುತ್ತಾನೆ.

ಮಕ್ಕಳಾಗದಿದ್ದ ದಂಪತಿಗಳು ಮಕ್ಕಳಾದರೆ ಕೆರೆ ನಿರ್ಮಿಸುತ್ತೇನೆಂದು ಹರಕೆ ಹೊತ್ತುಕೊಳ್ಳುತ್ತಿದ್ದರು. ಇನ್ನು ಕೆಲವರು ತಾವು ಅಂದುಕೊಂಡ ಕೆಲಸವಾದರೆ ಅಥವಾ ಒಳ್ಳೆಯದಾದರೆ ಮದುವೆಯಾಗದೆ ಇರುವವರಿರಬಹುದು. ರೋಗಸ್ಥರಿರಬಹುದು. ಹೀಗೆ ಹಲವು ರೀತಿಯಲ್ಲಿ ಬೇಡಿಕೆ ಹೊಂದಿರುವವರು ಇಂತಹ ಕೆರೆ ನಿರ್ಮಾಣ ಕಾರ್ಯವನ್ನು ಮಾಡಲು ಇಚ್ಛಿಸುತ್ತಿದ್ದರು. ಇದರಿಂದ ನಮ್ಮ ಪಾಪ ಕರ್ಮಗಳನ್ನು ಕಡಿಮೆಯಾಗುತ್ತದೆ. ನಮಗೆ ಮೋಕ್ಷ ಸ್ವರ್ಗ ಸಿಗುತ್ತದೆಂಬ ನಂಬಿಕೆಯನ್ನು ಮತ್ತು ಉದ್ದೇಶವನ್ನು ಇಟ್ಟುಕೊಂಡು ಕೆರೆ ನಿರ್ಮಾಣದ ಕಾರ್ಯವನ್ನು ಮಾಡುತ್ತಿದ್ದರು.

## ವ್ಯಕ್ತಿ ಸಮೂಹ ಸಮಾಜ ಫಲಗಳು

ಕೆರೆ ನಿರ್ಮಾಣ ಕಾರ್ಯದಲ್ಲಿ ಕೇವಲ ದೊರೆಗಳು, ಅಧಿಕಾರಿಗಳು ಮಾತ್ರನಲ್ಲದೆ ಸಾಮಾನ್ಯ ಜನರು ಕೆರೆ ನಿರ್ಮಾಣ ಕಾರ್ಯದಲ್ಲಿ ಮುಂದಾಗುತ್ತಿದ್ದರು. ಸಿರಾ ತಾಲೂಕಿನಲ್ಲಿ ಅಮರಪುರ ಶಾಸನ (ಕ್ರಿ.ಶ.1100) ಬೆಟ್ಟರಾಚಯ್ಯ ಎಂಬ ಕಾವಲುಗಾರನೊಬ್ಬ ಒಂದು ಕೆರೆಯನ್ನು ಹಾಗೂ ಒಂದು ಗುಡಿಯನ್ನು ಕಟ್ಟಿಸಿದನೆಂದು ತಿಳಿಸುತ್ತದೆ. ಸಾಮಾನ್ಯವಾಗಿ ವ್ಯಕ್ತಿಯೊಬ್ಬ ಕೆರೆ ನಿರ್ಮಿಸಿದ ಹಾಗೂ ಒಂದು ಗುಡಿಯನ್ನು ಕಟ್ಟಿಸಿದ ಎನ್ನುತ್ತದೆ. ಸಾಮಾನ್ಯ ವ್ಯಕ್ತಿಯೊಬ್ಬ ಕೆರೆ ನಿರ್ಮಿಸಿದ ಇನ್ನೊಂದು ಉದಾಹರಣೆಯನ್ನು ಕ್ರಿ.ಶ.1195ರ ಮಾದೂಡಿ ಶಾಸನದಲ್ಲಿದೆ. ಅಲ್ಲಿನ ಕೆರೆಯನ್ನು ಮಾವುತನೊಬ್ಬ ಕಟ್ಟಿಸಿದ ಎಂದು ದಾಖಲಾಗಿದೆ.[28]

ಕೆರೆಗಳ ಬಗೆಗಿನ ಇಂದಿನ ಆಲಕ್ಷ್ಯಕ್ಕೆ ಮುಖ್ಯ ಕಾರಣವೆಂದರೆ ಗ್ರಾಮ ಸಮುದಾಯದಲ್ಲಿ ಈ ಕೆರೆ ತಮಗೆಲ್ಲರಿಗೂ ಸೇರಿದ ಆಸ್ತಿ ಅಥವಾ ತಮಗೆ ಸೇರಿದ ಸಂಪನ್ಮೂಲ ಎಂಬ ಭಾವನೆ ಇಲ್ಲದಿರುವುದು. ಕೆರೆ ಎನ್ನುವುದು ಸರ್ಕಾರಕ್ಕೆ ಸೇರಿದೆ, ಸರ್ಕಾರ ಸಂರಕ್ಷಿಸುವ ಹಾಗೂ ದುರಸ್ತಿ ಮಾಡುವ ಒಂದು ಬಾಬು ಎನಿಸಿಹೋಗಿದೆ.

ಹಿಂದೆ ಕೆರೆಯ ಸಂರಕ್ಷಣೆಯು ಸಾಮಾನ್ಯವಾಗಿ ಬಿತ್ತುವಟ್ಟು ದಶಂದ ಹಾಗೂ ಕಟ್ಟು ಕೊಡುಗೆಗಳನ್ನು ಪಡೆಯುತ್ತಿದ್ದ ಕೆರೆ ನಿರ್ಮಾತೃವಿನ ಹೊಣೆಯಾಗಿತ್ತು ಎನ್ನುವುದನನ್ನು ಶಾಸನಗಳು ಹಾಗೂ ಬುಕನನ್ನನ ಟಿಪ್ಪಣಿಗಳು ಸೂಚಿಸುತ್ತವೆ. ಕೆರೆಯ ಸಂರಕ್ಷಣೆಯನ್ನು ನಿರ್ಮಾತೃ ಅಸಡ್ಡೆ ಮಾಡಿದಲ್ಲಿ ಸಾಮಾನ್ಯವಾಗಿ ಬೇರೆ ಯಾವನಾದರೂ ವ್ಯಕ್ತಿ ಅದರ ದುರಸ್ತಿಯನ್ನು ಜೀರ್ಣೋದ್ಧಾರವನ್ನು ಒಂದು ಪುಣ್ಯ ಕಾರ್ಯವೆಂದು ಭಾವಿಸಿ ಕೈಗೊಳ್ಳುತ್ತಿದ್ದ ಇದಕ್ಕಾಗಿ ಆತನಿಗೆ ಹೊಸ ಕಟ್ಟು ಕೊಡುಗೆಗಳ ದತ್ತವಾಗುತ್ತಿತ್ತು.[29]

ಒಬ್ಬ ವ್ಯಕ್ತಿ ಕೆರೆಯನ್ನು ಕಟ್ಟಿದಾಗ ಅವನ ಉದ್ದೇಶ ಏನಿತ್ತೋ ಬೊಟ್ಟುಮಾಡಿ ಹೇಳುವುದು ಕಷ್ಟ. ಆದರೆ ಒಬ್ಬ ಧಾರ್ಮಿಕ ಮುಖಂಡ ಅಥವಾ ಸಂತ ಕಟ್ಟಿದಾಗ ಅಂಥ ಶಂಕೆಗೆ ಅವಕಾಶವೇ ಇರಬಾರದು. ಶ್ರೀರಂಗಪಟ್ಟಣಕ್ಕೆ ವಾಯುವ್ಯದಲ್ಲಿ 18.ಕಿ.ಮೀ ದೂರದಲ್ಲಿರುವ ತೊಣ್ಣೂರಿನ ಮೋತಿ ತಲಾಬನ್ನು ಮಹಾತ್ಮರಾದ ಶ್ರೀ ರಾಮನುಜಚಾರ್ಯರು ತಾವು ಮೇಲುಕೋಟೆಯಲ್ಲಿ ಇದ್ದಾಗ ಕಟ್ಟಿಸಿದರು ಅಥವಾ ದುರಸ್ತಿ ಮಾಡಿದರು ಎನ್ನಲಾಗಿದೆ. ಅದಕ್ಕೆ ಆಗಿನ ಹೆಸರು ಲಕ್ಷ್ಮಿಸಾಗರ ಶಿಕಾರಿಪುರ ತಾಲೂಕಿನ ಬಾಕೂರಿನ ಕ್ರಿ.ಶ.1077ರ ಶಾಸನದಲ್ಲಿ ಮಾಣಿಕ್ಯ ಬಿಡಿಯಚ್ಚಿ ಮತ್ತು ಮಗ ಜಂವೇಯಾಗಿ ಗೋಸಾಯಿ ದಕ್ಷಿಣಕ್ಕೆ ಕೆರೆಯನ್ನು ಕಟ್ಟಿಸಿದರು.[30]

ಕೆಲವು ಕುಟುಂಬಗಳಲ್ಲಿ ಕೆರೆ ನಿರ್ಮಾಣ ಒಂದು ಮಹಾದಾಸೆಯಾಗಿತ್ತು. ಕ್ರಿ.ಶ.1100ರ ಚಿಂತಾಮಣಿ ತಾಲೂಕು ಬೋವಿಗೊಂಡನಹಳ್ಳಿ ಶಾಸನ ಇದಕ್ಕೆ ಉದಾಹರಣೆ ವಿಕ್ರಮಗೊಂಡನೆಂಬ ದೊಡ್ಡ ಜಮೀನ್ದಾರ ಒಂದು ಕೆರೆಯ ಕೋಡಿಯನ್ನು ಕಟ್ಟಿಸಿದ. ಅವನಿಗೆ ಮಕ್ಕಳು ಮತ್ತು ಅವರ ಮಕ್ಕಳು ಸಹ ಕೆರೆಗಳನ್ನು ಕಟ್ಟಿಸಿದರು ಎನ್ನುತ್ತದೆ. ಕೆರೆ ನಿರ್ಮಾಣ ಒಂದು ವ್ಯಾಪಾರಿ ಉದ್ಯಮವೂ ಆಗಿರಬಹುದು. ಮತ್ತು ವ್ಯಾಪಾರಿಗುಣ

ವಂಶದಲ್ಲಿ ಹರಿದು ಅವರೆಲ್ಲ ಅದರಲ್ಲಿ ವಿಶೇಷತೆ ಪಡೆದಿರಬಹುದು. ಆದರೆ ಇನ್ನೂ ಕೆಲವು ಕುಟುಂಬಗಳಲ್ಲಿ ಇನ್ನೊಂದು ಉದ್ದೇಶ ಇರಬಹುದು ಅಷ್ಟೇ ಬಲವಾಗಿದ್ದುದೂ ಉಂಟು.[31]

ನಾಗಮಂಗಲ ತಾಲೂಕಿನ ಬೆಳ್ಳೂರು ಗ್ರಾಮದ ಕ್ರಿ.ಶ.1269ರ ಶಾಸನದಲ್ಲಿ (ಕನ್ನಡ ರೂಪ) ಬೆಳ್ಳೂರ ಮಹಾಜನರು ಅಗ್ರಹಾರವನ್ನು ಮಹಾ ಪ್ರಧಾನಿ ಪೆರುಮಾಳದೇವ, ದಣ್ಣಾಯಕನ ಮತ್ತು ಶ್ರೀರಂಗಪುರದ ಮಹಾಜನರ ನಡುವೆ ಬಳಗು, ದಡಿಗ, ಅರಣೆ ಮತ್ತು ಜಾತಿಯ ನಾಗಳ್ಳಿಯ ಗ್ರಾಮಸ್ಥರ ಸಮ್ಮುಖದಲ್ಲಿ ಏರ್ಪಟ್ಟ ಒಪ್ಪಂದದಂತೆ ಪೆರುಮಾಳದೇವ ಅಲ್ಲಾಳ ಸಮುದ್ರ ಕೆರೆಯನ್ನು ಪುನಃ ನಿರ್ಮಾಣ ಮಾಡುದುದಕ್ಕೆ ಶ್ರೀರಂಗಪುರದ ಗ್ರಾಮಸ್ಥರು ಮತ್ತು ಆ ಕೆರೆಯ ಕೆಳಗಿನ ತರಿಭೂಮಿ 12ಲೆ ಪಡೆದು, ಆ ಭೂಮಿಗೆ 12 ಗದ್ಯಣ, ಕಟ್ಟು ಕೊಡುಗೆ ನೀಡಬೇಕು. ತರೀ ಭೂಮಿಗೆ ಬದಲಾಗಿ ಸ್ವಲ್ಪ ಖುಷ್ಕಿ ಭೂಮಿಯನ್ನು ವಿನಿಮಯ ಮಾಡಿಕೊಳ್ಳಬೇಕು ಎಂದು ದಾಖಲಿಸಿದೆ.[32]

ಮದ್ದೂರು ತಾಲೂಕಿನ 13ನೇ ಶತಮಾನದಲ್ಲಿ ಕೋನೇರಿನ ಮಾಯಕೊಂಡನ ಆದೇಶದಂತೆ ಮದ್ದೂರಿನ ಮಹಾಜನರಿಗೆ 15 ಮತ್ತರು ಭೂಮಿಯಲ್ಲಿ ಒಂದು ಕೆರೆ ನಿರ್ಮಿಸಿದನು.[33]

ಹೀಗೆ ಜಿಲ್ಲೆಯಾದ್ಯಂತ ಚಾರಿತ್ರಿಕ ಕಾಲಘಟ್ಟದಲ್ಲಿ ಸಾಮಂತರು ಅಧಿಕಾರಿಗಳು ವ್ಯಾಪಾರಸ್ಥರು, ಸ್ಥಾನಿಕ ಮುಖಂಡರು, ಗಾವುಂಡರು ಹಾಗೂ ವ್ಯಕ್ತಿಗಳು ಕೆರೆ ಕಟ್ಟೆ ಹಾಗೂ ಕಾಲುವೆಗಳನ್ನು ನಿರ್ಮಿಸಿರುವುದನ್ನು ಶಾಸನಗಳ ಉಲ್ಲೇಖ ಸ್ಪಷ್ಟ ಮಾಹಿತಿ ನೀಡುತ್ತದೆ.

ಸ್ವಂತ ವೆಚ್ಚದಿಂದ ಹಲವು ಖಾಸಗಿ ವ್ಯಕ್ತಿಗಳು ಸಹ ಕೆರೆ ನಿರ್ಮಾಣ ಕಾರ್ಯಗಳಲ್ಲಿ ಪಾಲ್ಗೊಂಡಿರುವುದು ಕಂಡುಬಂದಿದೆ. ಚಿಕ್ಕಬಳ್ಳಾಪುರದ ಶಾಸನ ಬಿಡುವತ್ತಿಯಲ್ಲಿ ಕೆರೆಯನ್ನು ಸ್ವಂತ ಖರ್ಚಿನಿಂದ ನಿರ್ಮಿಸಿದ್ದಕ್ಕಾಗಿ ಆ ಕೆರೆಯನ್ನು ಅವನ ಮತ್ತು ಅವನ ವಂಶಸ್ಥರಿಗೆ ಬಿಟ್ಟುಕೊಡಲಾಗಿದೆ.[34]

ವ್ಯಾಪಾರಸ್ಥರ ಜನ ಸಮೂಹ ಸಹ ನೀರಾವರಿ ಕಾಮಗಾರಿಗಳ ನಿರ್ಮಾಣ ಕಾರ್ಯದಲ್ಲಿ ತೊಡಗಿಸಿಕೊಂಡಿರುವುದನ್ನು ಕಂಡುಬರುತ್ತದೆ. ಅರಳುಕುಂಟೆ ಶಾಸನದ

ಪ್ರಕಾರ ಕಂಚಿಯ ಪ್ರಸಿದ್ಧ ವ್ಯಾಪಾರಸ್ಥರು, ಕೆರೆಯೊಂದನ್ನು ನಿರ್ಮಿಸಿದರು ಎಂದು ದಾಖಲಿಸಿದೆ.[35]

ಸಿಂಧುವಳ್ಳಿ ಸಂಖ್ಯೆ 348ನೇ ಶಾಸನ ಕ್ರಿ.ಶ.1106–07ರಲ್ಲಿ ಕುಲೋತ್ತುಂಗ ಚೋಳರ ಕಾಲದಲ್ಲಿ ಬರೆಸಲಾಗಿದ್ದು ಗವುಂಡ ಎಂಬ ಸತ್ಯವಾಕ್ಯ ಗವುಂಡನ ಮೂಲಸ್ಥಾನವು ಮಲೆಯೂರು ದೇವಾಲಯ ನಿರ್ಮಾಣ ಮಾಡಿ ಕೆರೆಯನ್ನು ಕಟ್ಟಿಸಿ ತೂಬನ್ನು ಇಡಿಸಿದನು. ಇದು ಸಾಮಾನ್ಯ ಜನರು ಮಾಡಿಸಿದ ಕೆರೆಯನ್ನು ತೋರಿಸುತ್ತದೆ. ಹಾಗೆಯೇ ಶಿವಮೊಗ್ಗ ತಾಲೂಕಿನ ಕೂಡಲಾರ ಬ್ರಾಹ್ಮಣರು ಜಗನ್ನಾಥಪುರದಲ್ಲಿ ಕೆರೆಯನ್ನು ನಿರ್ಮಿಸಿ ಅದನ್ನು "ಶಾಸ್ತ್ರೀಯ"ವಾಗಿ ನೀಡಿದ್ದು ದಾಖಲಾಗಿದೆ.[36]

ಹಾಗೆಯೇ ಕೆಲ್ಲಂಗೆರೆ : ಅಡಿಕೆ ತೋಟ 1800 ಮರದ ಉಲ್ಲೇಖ 153 ಈ ಶಾಸನವು ಕ್ರಿ.ಶ.1367ರ ಜನವರಿ 31 ರಂದು ಹೊರಡಿಸಲ್ಪಟ್ಟಿದೆ. ಈ ಶಾಸನದ ಕಾಲಕ್ಕೆ ರಾಜನಾದ ಬುಕ್ಕನು ಆಳುತ್ತಿದ್ದನು. ಈ ಸಮಯದಲ್ಲಿ ಕೆಲ್ಲಂಗೆರೆಯ ಅನೇಕ ಮಹಾಜನಗಳು ಎಲ್ಲಾ ಒಂದೇ ಮನಸ್ಸಿನಲ್ಲಿ ಅಂದರೆ ಐಕ್ಯಮತ್ವದಿಂದ ಕೆರೆಯ ನಿರ್ವಹಣೆ ಮಾಡುವ ಬಂಡಿಯಕಾರನಿಗೆ ಅಂದರೆ ಗಾಡಿಯವನಿಗೆ ಅವನ ಜೀವಿತಕ್ಕಾಗಿ ಮತ್ತು ಗಾಡಿಯ ಕೀಲುಗಳ ಎಣ್ಣೆ (ಹೆರೆಯ ಎಣ್ಣೆ) ಹಾರೆ, ಗುದ್ದಲಿ, ಮತ್ತು ಎಣ್ಣೆಗಳಿಗಾಗಿ ಹಾಗೂ ಮುಂತಾದ ಖರ್ಚುಗಳು ಆ ಕೆರೆಯ ಪ್ರದೇಶದ ಬಾಡಿಗೆದಾರರಿಗೆ ಪ್ರತಿ ಹೇರಿಗೆ ಗಾಡಿಯಲ್ಲಿ ಎರಡು ತರಹದ ಲೆಕ್ಕದಲ್ಲಿ ಅವನಿಗೆ ನೀಡಿದ್ದರು. ಚಂದ್ರಪ್ಪನ್ನು ಕೆರೆಯ ನಿರ್ವಹಣೆಗಾಗಿ ಬಂಡಿಯನ್ನು (ಗಾಡಿಯನ್ನು) ನೀಡಿದನು. ಗಾಡಿಯನ್ನು ಓಡಿಸುವವನು ಜೀವನದ ನಿರ್ವಹಣೆಗಾಗಿ ಮಹಾರಾಜರು ದತ್ತಿಯನ್ನು ನೀಡಿದರು. 1 ಖಂಡುಗ 10 ಕೊಳಗ ಗದ್ದೆಯನ್ನು ಅಂದರೆ ಪುರಾಣದ ಗದ್ದೆ ಮಂದಗದ್ದೆ, ಬಿಟ್ಟಿ ನಿಗುರಂಡಗದ್ದೆ ಒಣಭೂಮಿ (ಹೊಲ) ಮತ್ತು ಕೆಲವು ಮಣ್ಣಿನ ಭೂಮಿ ದಂಡನಾಯಕನಿಗೆ ಸೇರಿದ್ದು ಕೊಂಡರು ಕಟ್ಟೆ ಮಳಲೆ ಕಟ್ಟೆ ಸೇರಿದ ಭೂಮಿಯನ್ನು ಆ ಬಂಡಿಯ ಆಳಿನ ಜನರ ನಿರ್ವಹಣೆಗೆ ಕೊಟ್ಟರು.[37]

ಹೀಗೆ ಕೆರೆ ನಿರ್ಮಾಣ ಕಾರ್ಯದಲ್ಲಿ ವ್ಯಕ್ತಿ ಸಮೂಹದ ಪಾತ್ರವು ಬಹಳ ಮುಖ್ಯವಾಗಿರುತ್ತದೆ. ಕೇವಲ ಶ್ರೀಮಂತರು ರಾಜರುಗಳ ಮಾತ್ರವಲ್ಲದೆ ಊರಿನ

ಮುಖಂಡರು, ಗ್ರಾಮಸ್ಥರು, ಸಮುದಾಯಗಳು ಸೇರಿ ಕೆರೆಯ ನಿರ್ಮಾಣ ಕಾರ್ಯದಲ್ಲಿ ತೊಡಗುತ್ತಿದ್ದರು. ಕೇವಲ ಇಷ್ಟೆ ಅಲ್ಲದೆ ಕೆರೆಗಳ ನಿರ್ಮಾಣವನ್ನು ಒಬ್ಬ ವ್ಯಕ್ತಿ ಅಥವಾ ರಾಜ ಮಾಡಿಸಬಿಡಬಹುದಿತ್ತು. ಅದರ ನಿರ್ವಹಣೆ ಹಾಗೂ ಹಂಚಿಕೆಯಲ್ಲಿ ವ್ಯಕ್ತಿ ಸಮೂಹದ ಪಾತ್ರವು ಅತ್ಯಂತ ಪ್ರಮುಖವಾದುದಾಗಿತ್ತು. ಆದ ಕಾರಣ ಕೆರೆಯ ನಿರ್ಮಾಣ ಕಾರ್ಯದಲ್ಲಿ ಹಾಗೂ ನಿರ್ವಹಣೆಯಲ್ಲಿ ಜನ ಸಮೂಹದ ಪಾತ್ರವಿಲ್ಲದಿದ್ದರೆ ಕೆರೆಯ ನಿರ್ವಹಣೆ ತುಂಬಾ ಕಷ್ಟಕರವಾಗಿದ್ದಿತ್ತು.

## ಫಲಗಳು

ಕೆರೆಯ ನಿರ್ಮಾಣ ಕಾರ್ಯದಿಂದ ನಿರ್ಮಾಣ ಮಾಡಿದಂತಹವರು ಹಾಗೂ ಅದರ ನಿರ್ವಹಣೆ ದುರಸ್ಥಿ ಕಾರ್ಯದಲ್ಲಿ ತೊಡಗಿಕೊಂಡವರು ಅನೇಕ ರೀತಿಯ ಫಲಗಳನ್ನು ಪಡೆಯುತ್ತಿದ್ದರು. ಕೆರೆಯ ನಿರ್ಮಾಣದ ಕೆಲಸ ಅತ್ಯಂತ ಪವಿತ್ರವಾದುದು. ಕೆರೆಯ ನಿರ್ಮಾಣ ಕೈಗೊಂಡಿದವರಿಗೂ ಅನೇಕ ರೀತಿಯ ಪೂಜ್ಯ ಫಲಗಳು ಪ್ರಾಪ್ತಿಯಾಗುತ್ತಿತ್ತು ಎಂದು ಶಾಸನಗಳಲ್ಲಿ ಉಲ್ಲೇಖಗೊಂಡಿರುವುದನ್ನು ಕಾಣಬಹುದು. ಹಾಗೂ ಇಂತಹ ಕೆರೆ ನಿರ್ಮಾಣ ಮಾಡಿದವರಿಗೆ ಸಮಾಜದಲ್ಲಿ ಗಣ್ಯವ್ಯಕ್ತಿಯ ಸ್ಥಾನಮಾನ ನೀಡಲಾಗುತ್ತಿತ್ತು ಅಥವಾ ಪಡೆದುಕೊಳ್ಳುತ್ತಿದ್ದರು.

## ಆರ್ಥಿಕ ಸಂಗತಿಗಳು

ಹಿಂದಿನ ಕಾಲದಲ್ಲಿ ಹಾಗೂ ಈಗ ಆ ಕೆಲಸಗಳ ನಿರ್ಮಾಣ ಹಾಗೂ ಸಂರಕ್ಷಣೆ ಮತ್ತು ನಿರ್ವಹಣೆಗಾಗಿ ಅನುಸರಿಸಲಾದ ಕ್ರಮಗಳು ಅವುಗಳ ನಿರ್ವಹಣೆಗಾಗಿ ಮಾಡಲಾದ ವ್ಯವಸ್ಥೆಗಳು, ಇವುಗಳಲ್ಲಿ ನೀರು, ಹಂಚಿಕೆಯ ವಿಧಾನ, ನಿರ್ಮಾಣದ ವೆಚ್ಚ ಹಾಗೂ ಫಲಾನುಭವಿಗಳಿಗೆ ವಿಧಿಸಬೇಕಾದ ನೀರು ತೆರಿಗೆ ದರಗಳು ಇವುಗಳನ್ನೆಲ್ಲಾ ತಿಳಿದುಕೊಳ್ಳದೆ ಇದ್ದರೆ ಅಧ್ಯಯನ ಪೂರ್ಣವಾಗುವುದಿಲ್ಲ. ನೀರಾವರಿ ಆಡಳಿತದ ಈ ಅಧ್ಯಯನ ಇಂದಿನ ವಿಧಾನಗಳಿಂದ ನಾವು ಪಾಠಗಳನ್ನು ಅರಿಯಲು ಸಹಾಯಕವಾಗುತ್ತಿದೆ.

ಮೊದಲು ನಾವು ನಿರ್ಮಾಣ ವಿಧಾನಗಳನ್ನು ತಿಳಿದುಕೊಳ್ಳೋಣ. ನಮ್ಮ ಹಿಂದಿನವರು ಕಟ್ಟಿದ ಬಹುಪಾಲು ಕೆರೆಗಳು ಸಣ್ಣ ಸಣ್ಣವು. ಅವುಗಳಲ್ಲಿ ಅನೇಕ ಕೈಬಿಟ್ಟು

ಹೋಗಿವೆ ಅಥವಾ ಇಲ್ಲವಾಗಿದೆ. ಹಾಗೂ ಜೀರ್ಣೋದ್ಧಾರವಾದಂಥ ಕೆಲವು ದೊಡ್ಡ ಕೆರೆಗಳು ಉಳಿದುಕೊಂಡಿದೆ. ಅವು ಸಹ ತಳದಲ್ಲಿ ಹೂಳೂ ತುಂಬಿಕೊಂಡು ಅಸಡ್ಡೆಗೆ ಒಳಗಾಗಿವೆ. ಭಾರಿ ನೀರಾವರಿ ಕಾಲುವೆ ವ್ಯೂಹದ ಅಚ್ಚುಕಟ್ಟು ಪ್ರದೇಶಗಳಲ್ಲಿರುವ ಕೆರೆಗಳಾದರು ಆ ಕಾಲುವೆ ವ್ಯೂಹದಿಂದ ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ ಅರಿದು ಬರುವ ಜಲ ವ್ಯೂಹದ ದೆಸೆಯಿಂದಾಗಿ ಇನ್ನು ಉಪಯುಕ್ತವಾಗಿದೆ. ಕೆರೆ, ಏರಿ, ತೂಬು, ಕಾಲುವೆ ಇತ್ಯಾದಿಗಳ ವಿನ್ಯಾಸ ಹಾಗೂ ರಚನೆಯ ಬಗ್ಗೆ ನಿರ್ಮಾಪಕರಿಗೆ ಇದ್ದ ಜ್ಞಾನಕ್ಕೆ ಸಾಕ್ಷಿಯಾಗಿದೆ.

## ಹಣಕಾಸು ವ್ಯವಸ್ಥೆ

ಹಣಕಾಸು ವ್ಯವಸ್ಥೆ ಅಂದರೆ ಅರ್ಥ ವ್ಯವಸ್ಥೆ. ಇದು ಯಾವುದೇ ಒಂದು ಕೆರೆಗಳ ನಿರ್ಮಾಣ ಕಾರ್ಯಕ್ಕೆ ಸಹಭಾಗಿತ್ವ ಅತ್ಯಮೂಲ್ಯ ಅಂದಿನ ಕಾಲದ ರಾಜರು, ನಾಯಕರು, ಗ್ರಾಮಸ್ಥರು ಯಾರೇ ಆದರು ಸಹ ಹಣಕಾಸಿನ ನಿಯೋಗಕ್ಕೆ ಕೆರೆ ನಿರ್ಮಾಣ ಕಾರ್ಯವನ್ನು ಆರಂಭಿಸುತ್ತಿದ್ದರೆಂದು ಸಾಮಾನ್ಯವಾಗಿ ತಿಳಿಯಬಹುದು. ಒಂದು ಸಂಶೋಧನೆಯ ಪ್ರಕಾರ ಅಂದಿನ ಕಾಲದಲ್ಲಿ 45 ಸಾವಿರ ಕೆರೆಗಳಿದ್ದು ಅವುಗಳ ನಿರ್ಮಾಣಕ್ಕೆ ನೂರು ಮಿಲಿಯನ್ (ಹತ್ತುಕೋಟಿ) ರೂ.ಗಳಷ್ಟು ವಿನಿಯೋಗಿಸಲ್ಪಟ್ಟಿತ್ತು ಎಂದು ತಿಳಿಯುತ್ತದೆ.

ಕೆಲವು ಕೆರೆಗಳು ಬಹಳ ವಿಸ್ತಾರವಾದುವುಗಳು ಅವುಗಳು ವರ್ಷದಲ್ಲಿ ಸದಾಕಾಲ ನೀರಿನಿಂದ ತುಂಬಿದ್ದು, ಬೇಸಿಗೆ, ಕ್ಷಾಮ, ಬರಗಾಲಗಳಲ್ಲಿಯೂ, ಜೀವನಾಧಾರವಾಗಿರುತ್ತಿದ್ದವು. ಹಾಗೆಯೇ ಇನ್ನು ಕೆಲವು ಬಹಳಷ್ಟು ಚಿಕ್ಕ ವಿಸ್ತೀರ್ಣ ಹೊಂದಿದ್ದ ಗ್ರಾಮದ ಅಥವಾ ನಾಡಿನ ಹೆಬ್ಬಾಗಿಲಲ್ಲಿಯೇ ನಿರ್ಮಿಸಲ್ಪಟ್ಟಿದ್ದು, ಎಲ್ಲಾ ಗಿಡ, ಮರ, ಪಕ್ಷಿ, ಪ್ರಾಣಿಗಳಾದಿಯಾಗಿ ಈ ನೀರಿನಿಂದ ದಣಿವಾರಿಸಿಕೊಳ್ಳುವಂತಹವು. ಸಾಮಾನ್ಯವಾಗಿ ವಿಸ್ತೀರ್ಣದಲ್ಲಿ ಕಡಿಮೆ ಇದ್ದರಿಂದ ಅವು ಮಳೆಗಾಲದಲ್ಲಿ ತುಂಬಿದ್ದು, ಬೇಸಿಗೆ ಕಾಲದಲ್ಲಿ ಅವು ಬತ್ತಿ ಹೋಗಿ ನಂತರ ಮಳೆಗಾಲದಲ್ಲಿ ತುಂಬಿಕೊಳ್ಳುತ್ತಿದ್ದವು. ಅವು ಶತಮಾನದ ಕಾಲದ ಉದ್ದಕ್ಕೂ ನಡೆದ ಅಭಿರುಚಿ ಕಾರ್ಯದ ಅವಶೇಷಗಳೇ ಇವಾಗಿವೆ. ಆ

ಕಾಲದಲ್ಲಿ ನೀರಾವರಿ ಕೆರೆಗಳ ಮೇಲೆ, ಅಷ್ಟು ಪ್ರಮಾಣದ ಬಂಡವಾಳ ಹೂಡಿಕೆ, ಅದು ದೀರ್ಘಕಾಲಕ್ಕೂ ಹರಡಿದ್ದು ಸಹ ಮಹತ್ಸಾಧನೆಯೇ ಸರಿ.

ನಮಗೆ ದೊರತೆ ಮಾಹಿತಿಗಳ ಪ್ರಕಾರ 5ನೇ ಶತಮಾನಕ್ಕೆ ಸರಿಹೊಂದುವ ಕುಂಟರಾಣಿ ಶಾಸನದಂತೆ ವಿಜಯ ವೈಜಯಂತಿಯಲ್ಲಿದ್ದ ರವಿವರ್ಮನ ವರಿಕು ಗ್ರಾಮದಲ್ಲಿ ಕೆರೆಯನ್ನು ತೋಡಿಸಿ ಅದರ 2 ಬದಿಗಳಲ್ಲಿ ಕರ್ಪಟೇಶ್ವರವೆಂಬುವವನು ಇಲ್ಲಿನ ನಿವರ್ತನ ಭೂಮಿಯನ್ನು ದಾಮ್ಯಗೋತ್ರದ ಭವಸ್ವಾಮಿಗೆ ದಾನ ನೀಡಿದನು. ಈ ಶಾಸನವು ಕೆರಯನ್ನು ನೀರಾವರಿಗೆ ಉಪಯೋಗಿಸಿದ್ದನು ಸೂಚಿಸುತ್ತದೆ.

- ಚಿತ್ರದುರ್ಗ ಜಿಲ್ಲೆಯ ಕ್ರಿ.ಶ 1051ರ ಮುತ್ತಗದೂರಿನ ಶಾಸನೋಕ್ತ ಕೆರೆಯು ನೀರಾವರಿಗೆ ಸಂಬಂಧಿಸಿದ ಶಾಸನವಾಗಿದೆ. ಕದಂಬಳಗೆ ನೀಡಿದ ಅಂಗರಸ ಮತ್ತು ಭೀಮರಸ ತಮ್ಮ ಗುರುವಿನ ಮತ್ತು ರಾಜರಸನ ಹೆಸರಿನಲ್ಲಿ ಕೆರೆಯೊಂದನ್ನು ಕಟ್ಟಿಸಿ ಭೂಮಿಗಳನ್ನು ದತ್ತಿಯಾಗಿ ನೀಡಿರುವುದನ್ನು ದಾಖಲಿಸಿದೆ.[38]
- ಕ್ರಿ.ಶ. 995ರ ಅಡನೂರು ಶಾಸನದ ಪ್ರಕಾರ ಮಹಾಸಾಮಂತ ಪೆರುಮಾಡಿಯ ಬಂಕ ಭುಜರಿಗೇಯ ಗೊಗ್ಗಿಮಯ್ಯ ಕಂದಬಳಗೆ ನಾಡನ್ನು ರಕ್ಷಿಸುತ್ತಿರುವಾಗ ಅವನ ಭಾಮೈದ ಗಣ್ಣಯ್ಯವೆರೆಯನು ಕೆರೆ ಅಚ್ಚುಕಟ್ಟಿನ ಭಾಗವನ್ನು ಶಾಂತಿಭಾವನಿಗೆ ದತ್ತಿ ನೀಡಿರುವುದನ್ನು ದಾಖಲಿಸಿದೆ.[39]
- ಕ್ರಿ.ಶ. 1522ರ ಶಾಸನ ಮೋಚಗೊಂಡ ಮತ್ತು ಇತರ ಗೌಂಡದಾರಿಯಾಗಿ ಮುಖ್ತುನಾಡಿನ ಶೈಲಿ ಹಳೆಯ ಕೆರೆಯ ಅಚ್ಚುಕಟ್ಟಿನ ಅಡಿಕೆತೋಟಗಳನ್ನು ಉಂಬಳಿಯಾಗಿ ನೀಡಿರುವುದನ್ನು ಪ್ರಸ್ತಾಪಿಸಿದೆ.[40]
- ಕ್ರಿ.ಶ. 1553ರ ಶಾಸನವು ದೊಡ್ಡೇರಿ ನಾಡಗೌಡ ಉಳ್ಳವರ್ತ ಕೆರೆಯ ಅಚ್ಚುಕಟ್ಟಿನ ಭೂಮಿಯನ್ನು ಕರಭಾರ ರಹಿತವಾಗಿ ನೀಡಿರುವುದನ್ನು ದಾಖಲಿಸಿದೆ.[41]

ಇಷ್ಟೇ ಅಲ್ಲದೇ ಶಾಸನಗಳನ್ನು ಕೂಲಂಕುಶವಾಗಿ ತುಲನೆಮಾಡಿದಾಗ ನಮಗೆ ದಕ್ಷಿಣ ಕರ್ನಾಟಕದ ಕೆರೆಗಳ ಬಗ್ಗೆ ಆಳವಾಗಿಯೇ ತಿಳಿಯದಿದ್ದರೂ ಮೇಲ್ನೋಟಕೆ

ಸರಿಯಾದ ಮಾಹಿತಿಯೇ ಸಂಗ್ರಹವಾಗಿದೆ. ಎಂದು ನಮಗೆ ಶಾಸನಗಳನ್ನು ನೋಡಿದಾಗ ತಿಳಿದುಬರುತ್ತದೆ. ಈ ನಿಟ್ಟಿನಲ್ಲಿ ಹಣಕಾಸು ವ್ಯವಸ್ಥೆಯು ಪ್ರಮುಖವೆನಿಸುತ್ತದೆ.

ವಿಜಯನಗರ ಅಚ್ಯುತದೇವ ಮಹಾರಾಯನ ಕಾಲದ ಕ್ರಿ.ಶ 1539ರಲ್ಲಿ ಈ ಶಾಸನವನ್ನು ಬರೆಯಲಾಗಿದ್ದು, ಅದರ ವಿವರಣೆಯು ಈ ರೀತಿಯಿದೆ. ಅಚ್ಯುತರಾಯ ಮಲ್ಲಪ್ಪಣ್ಣನು ವರದಾಜನಮ್ಮವರ ಪಟ್ಟಣದ ರಘುನಾಥ ದೇವರ ನೈವೇದ್ಯಕ್ಕೆ ಸೋಮಾಲಪುರ ಸೀಮೆಯಲ್ಲಿ ಸಂಗ್ರಹಿಸಿದ ತೋಟದ ಬೆಳೆಯು ಸುಂಕದ ಆದಾಯವಾದ 1050 ವರಹಗಳನ್ನು ಕೆರೆಯ ನಿರ್ಮಾಣಕ್ಕೆ ದಾನಮಾಡಿದ ಎಂದು ಇದರಲ್ಲಿ ಉಲ್ಲೇಖಿಸಿದೆ.[42]

ಈ ಶಾಸನವು ಕೆರೆಯ ನಿರ್ಮಾಣಕ್ಕೆ ಕ್ರಿ.ಶ 1539ರಲ್ಲಿ ತೋಟದ ಬೆಳೆಯಿಂದ ಬಂದ ಸುಂಕದ ಆದಾಯವನ್ನು ಅಂದರೆ 1050 ವರಹಗಳನ್ನು ದಾನಮಾಡಿದ ಉಲ್ಲೇಖವಿದೆ. ಈ ಶಾಸನವು ಅಂದಿನ ಕೆರೆಯ ನಿರ್ಮಾಣಕ್ಕೆ ಹಣಕಾಸು ನೆರವು ಹೇಗೆ ಯಾರಿಂದ ಬರುತ್ತಿತ್ತೆಂದು ಸ್ಪಷ್ಟವಾಗಿ ತೋರಿಸಿಕೊಡುವ ಒಂದು ಉದಾಹರಣೆಯಾಗಿದೆ ಎಂದು ತಿಳಿಯಬಹುದು..

ಚನ್ನರಾಯಪಟ್ಟಣ ಶಾಸನ ಸಣಖ್ಯ 19ರಲ್ಲಿ ಉಲ್ಲೇಖವಾಗಿರುವ ವಿಷಯವೆಂದರೆ ಶಾಂತಿ ಸಮುದ್ರದ ಕೆರೆಯ ನಿರ್ವಹಣೆಗಾಗಿ ಬಿತ್ತುವಟ್ಟಿ ಒಂದು ಖಂಡುಗ 5 ಕೊಳಗ ಭೂಮಿಯನ್ನು ನೂರು ಜನರು ದಾನ ಮಾಡಿದ ಬಗ್ಗೆ ಹೇಳುತ್ತದೆ. ಅವರನ್ನು ವಾರ್ಥಗೆತ್ತಹದ್ದ ತಿಘೋಳಗೆ ನಿಲ್ಲುವ ತಟಾಕ ಚಯಂಗಳ್ ಪೆನ್ಮರೆಯಿಂದ ಮೂರ್ಜಿದೂನಿದ ರಮವು ವಿಷ್ಣುನ್ನಾದಕನ್ನಿತ್ತ ದತ್ತಿಗಳ್ ಎಂದು ಹೇಳಲಾಗುತ್ತದೆ. ಈ ಶಾಸನದಲ್ಲೂ ಕೆರೆಯ ನಿರ್ಮಾಣಕ್ಕೆ ಹಣಕಾಸು ನೀಡಿರುವ ಉಲ್ಲೇಖವಿದೆ.[43]

ಮತ್ತೊಂದು ಚನ್ನರಾಯಪಟ್ಟಣದ ಶಾಸನ ಸಂಖ್ಯೆ 45 ಗೊಲ್ಲರವರಹಳ್ಳಿ ಎಂಬಲ್ಲಿ ಕ್ರಿ.ಶ 1530ರಲ್ಲಿ ಅಚ್ಯುತರಾಯಣ ಕಾಲದಲ್ಲಿ ಇತರೆ ದಾನ ದತ್ತಿ ನೀಡಿದ ವಿವರಗಳನ್ನು ನೀಡುವಾಗ ಕೆರೆಯ ಬಾಡಿಗೆ ಗದ್ಯಾಣ, ನೀಡಿರುವ ಉಲ್ಲೇಖವಿದೆ. ಅಂದರೆ ಈ ಶಾಸನದಲ್ಲೂ ಕೂಡ ಕೆರೆ ನಿರ್ಮಾಣಕ್ಕೆ ಹಣವನ್ನು ದಾನ ಮಾಡಿದ ಉಲ್ಲೇಖವಿದೆ ಎಂದು ತಿಳಿದುಬರುತ್ತದೆ.[44]

ಸಂಪಿಗೆಪುರದ ಈ ಶಾಸನದ ಪ್ರಕಾರ 9ನೇ ಶತಮಾನದಲ್ಲಿ ಈ ಶಾಸನದ್ಲಿ ಆ ಊರಿನ ಮಹಾಜನರು ತಾವು ಪಡೆದ ದಾನದ ಹಣದಿಂದ ಕೆರೆ, ದೇಗುಲ, ಬಸದಿ ಮತ್ತು ಸಾರ್ವಜನಿಕರಿಗೆ ಸೇರುವ (ಅಂಬಲ) ಸ್ಥಳದ ನಿರ್ವಹಣೆಗಾಗಿ ದಾನ ಮಾಡಿದರು ಎಂದು ತಿಳಿಸಲಾಗಿದೆ. ಅಂದರೆ ಈ ಶಾಸನದಲ್ಲೂ ಕೂಡ ಹಣಕಾಸನ್ನು ಕೆರೆಯ ನಿರ್ಮಾಣಕ್ಕಾಗಿ ನೀಡಿರುವ ಉಲ್ಲೇಖವಿದೆ.[45]

ಕ್ರಿ.ಶ 1492ರಲ್ಲಿ ದೇವರಾಯ ಉಮ್ಮತ್ತೂರು ಒಡೆಯುವ ಕಾಲಕ್ಕೆ ಹೊಸದಾಗಿ ತ್ರಿಯಂಬಕಮರವೆಂಬ ಪುರವನ್ನು ಕಟ್ಟಿ ಆ ಸೀಮೆಯಲ್ಲಿ ಕೆರೆ ಕಟ್ಟಿ. ಆ ಕೆರೆಯ ಕೆಳಗೆ ಅಡಿಕೆ ಸಸಿಗಳನ್ನು ನೆಡಿಸಲಾಗಿತ್ತು. ಅದನ್ನು ಗದ್ಯಾಣ 12ಕ್ಕೆ ಹೊರಗುತ್ತಿಗೆಯಾಗಿ ನೀಡಿರುವುದು ಜನರಿಗೆ ಇದ್ದ ಸಾಮಾಜಿಕ ಜವಾಬ್ದಾರಿಯನ್ನು ಈ ಶಾಸನವು ತಿಳಿಸುತ್ತದೆ.[46]

ಕ್ರಿ.ಶ. 1170 ಡಿಸೆಂಬರ್ 25 ರಲ್ಲಿ ಹೊಯ್ಸಳ ನರಸಿಂಹ ಆಳುತ್ತಿರುವಾಗ ಸಾವಾಸಿಲಿ ಭಟ್ಟನು ಉತ್ತರಾಯಣ ಸಂಕ್ರಮಣದಂದು ಹಾಲು ತೊರೆಯ ಮುದುಕಗೌಡ ಬಂಮಗೌಡ, ಮಲ್ಲಗೌಡ, ಮುದ್ದಗೌಡ, ರಾಜಗೌಡ, ಮಸಣಗೌಡ ಎಂಬುವರ ಭೂಮಿಯನ್ನು ಖರೀದಿಸಿ ಕೆರೆಯನ್ನು ಕಟ್ಟಿಸಿ ಆ ಕೆರೆಯ ಕೆಳಗಿನ ಗದ್ದೆಯನ್ನು ದೇವರಿಗಾಗಿ ಸಾವಾಸೆಳಿಭಟ್ಟನು ದಾನ ಮಾಡುತ್ತಾನೆ ಎಂದು ಈ ಶಾಸನವು ತಿಳಿಯಪಡಿಸುತ್ತದೆ. ಆ ಕೆರೆಗೆ ಸಿಂಗವನ ಕೆರೆ ಎಂದು ಹೆಸರಿಸಲಾಗಿದೆ.[47]

ಬಳ್ಳಾರಿ ಜಿಲ್ಲೆಯ ಶಾಸನವು ತಿಳಿಸುವಂತೆ ನಿಟ್ಟೂರಿನ ಈ ಶಾಸನವು ಕ್ರಿ.ಶ. 1135-96 ಇದು ಚಾಲುಕ್ಯ ವಿಕ್ರಮಾಶಕೆಯನ್ನು ಉಲ್ಲೇಖಿಸುತ್ತದೆ. ಕೆರೆಯ ದೇವಾಲಯವನ್ನು ಕಟ್ಟಿಸಿದ ಮಾಹಿತಿ ಈ ಶಾಸನದಲ್ಲಿದೆ. ಒಟ್ಟು 550 ಪೊಂಗದ್ಯಾಣ ಅದಕ್ಕೆ ಖರ್ಚಾಯಿತು ಎನ್ನಲಾಗಿದೆ.[48]

## ಕೆರೆಯು ನಿರ್ಮಾಣ ಮತ್ತು ನಿರ್ವಹಣೆ – ದಾನ ದತ್ತಿ

ದಾನ ಹಾಗೂ ದತ್ತಿಗಳ ನಡುವೆ ಸಾಕಷ್ಟು ವ್ಯತ್ಯಾಸಗಳಿವೆ ಕೆರೆಗಳ ನಿರ್ಮಾಣ ಕಾರ್ಯದಲ್ಲಿ ಹಣಕಾಸಿನ ಅಡಿಯಲಿ ದಾನಗಳು ಧತ್ತಿಗಳು ಗಮನಾರ್ಹ ಹಾಗಾಗಿ ಇವುಗಳ ಬಗ್ಗೆ ಕೂಲಂಕುಷವಾಗಿ ತಿಳಿಯುವ ಮೊದಲು ಇವುಗಳ ನಡುವಿನ ವ್ಯತ್ಯಾಸವನ್ನು

ತಿಳಿಯೋಣ "ದಾನ" ಎಂದರೆ ಅದು ಒಬ್ಬ ವ್ಯಕ್ತಿ ಹಸಿವು ಎಂದು ಬಂದಾಗ ಆತನಿಗೆ ಇಂತಿಷ್ಟು ಹಣ ನೀಡಿ ಹೋಗು ನಿನ್ನ ಹಸಿವನ್ನು ನೀಗಿಸಿಕೋ ಎಂದು ಕಳುಹಿಸುವುದು. ಅಂದರೆ ಇದು ಒಂದೇ ಸಂದರ್ಭಕ್ಕೆ ಸೀಮಿತವಾಗಿದೆ. ಹಿಂದೆ ಕೆರೆಗಳ ನಿರ್ಮಾಣ ಕಾರ್ಯಕ್ಕೆ ನಾಡಿನಾದ್ಯಂತ ಪ್ರಜೆಗಳು ಶ್ರೀಮಂತರು ವಿಶೇಷ ಸಾಧಕರು ದಾನಿಗಳು ರಾಜ ಮೊದಲಾದವರು ಕೆರೆಯ ನಿರ್ಮಾಣ ಕಾರ್ಯ ಪುಣ್ಯವೆಂತಲೋ ಅಥವಾ ಉಪಯುಕ್ತವೆಂತಲೋ ಅದರ ನಿರ್ಮಾಣಕಾರ್ಯಕ್ಕೆ ಇಂತಿಷ್ಟು ಎಂದು ನೀಡಿದ ಹಣ ಅಥವಾ ವಸ್ತುಗಳ ರೂಪದ ಕೊಡುಗೆಗಳನ್ನೆಬಹುದು. ಹಾಗಾಗಿ ದಾನ ಎಂಬುದು ಯಾರಾದರೂ ಬೇಡಿದಲ್ಲಿ ಅಥವಾ ಸ್ವಯಂ ಪೂರ್ಣ ಆಸಕ್ತಿಯಿಂದ ತಾವೇ ಮುಂದಾಗಿ ಬಂದು ನೀಡುವ ಕೊಡುಗೆ ಎನ್ನಬಹುದು.

ಇನ್ನೂ ದತ್ತಿಗಳೆಂದರೇನು ಎಂದು ತಿಳಿಯುವಾದದರೆ ಇದೂ ಸಹ ಒಂದು ರೀತಿಯ ದಾನವೇ. ಆದರೆ ಇದು ನಿರಂತರವಾದುದು. ಈಗಲೂ ಸಹ ಹಳ್ಳಿಗಳ ಕಡೆ ದೇವಾಲಯಗಳ ಅರ್ಚಕರಿಗೆ ಅಥವಾ ಪುರೋಹಿತರಿಗೆ ಒಂದು ದೇವಾಲಯದ ಕೆಲಸ ಕಾರ್ಯಗಳನ್ನು ಪುರೋಹಿತರಿಗೆ ವಹಿಸಿ ನಂತರ ಅದರ ಸಂಪನ್ಮೂಲಗಳಲ್ಲಿ ಒಂದಾದ ಗದ್ದೆಗಳು, ತೋಟಗಳು, ಹೊಲಗಳು ಹೀಗೆ ಭೂಮಿಗಳನ್ನು ದಾನಮಾಡಿ ಅದರಲ್ಲಿ ಬರುವ ಆದಾಯ ಅಥವಾ ಉತ್ಪನ್ನಗಳು ಅಲ್ಲಿಯ ಅರ್ಚಕರಿಗೆ ಸೇರುವಂತೆ ನೋಡಿಕೊಂಡಿರುವುದನ್ನು ಇಲ್ಲಿ ದೇವಸ್ಥಾನಕ್ಕೆಂದು ಬಿಟ್ಟ ಗದ್ದೆಗಳು ದಾನವೆನಿಸಿಕೊಂಡರೆ, ಅವು ಅಲ್ಲಿಯ ಅರ್ಚಕರಿಗೆ ದತ್ತಿಗಳೆನಿಸುತ್ತದೆ. ಏಕೆಂದರೆ ಆತ ಕೇವಲ ಅಲ್ಲಿಯ ಅರ್ಚಕನಾಗಿ ಕೆಲಸ ನಿರ್ವಹಿಸುವ ತನಕ ಮಾತ್ರ ಆ ಗದ್ದೆಯ ಫಲಾನುಭವಿಯಾಗಿರುತ್ತಾನೆ. ಆತ ಅಲ್ಲಿನ ಕಾರ್ಯ ನಿರ್ವಹಿಸದೇ ಬಿಟ್ಟು ಬೇರೊಬ್ಬ ಹೊಸ ಪುರೋಹಿತರು ಅಲ್ಲಿಗೆ ಬಂದರು ಆ ಉತ್ಪಾದನೆಯು ಆತನಿಗೆ ಸೇರಲ್ಪಡುತ್ತದೆ. ಹಾಗಾಗಿ ದಾನವು ಒಂದು ಸಲ ಕೊಟ್ಟಮೇಲೆ ಮುಗಿಯುತ್ತದೆ. ಆದರೆ ದತ್ತಿಯು ಕೊಟ್ಟಮೇಲೆ ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತಿರುತ್ತದೆ. ಹೀಗೆ ದಾನ ಮತ್ತು ದತ್ತಿಗಳು ವ್ಯತ್ಯಾಸವನ್ನು ಹೊಂದಿದೆ.

ಬಳ್ಳಾರಿ ಜಿಲ್ಲೆಯ ಶಾಸನವು ತಿಳಿಸುವಂತೆ ಶಾಸನ ಸಂಖ್ಯೆ 214ರಲ್ಲಿ ತಿಳಿಸಿರುವಂತೆ ಕ್ರಿ.ಶ 15–16ನೇ ಶತಮಾನದ ವಿಜಯನಗರ ಕಾಲಕ್ಕೆ ಸೇರಿದ ವಿರೂಪಾಕ್ಷ ಅಜಾರದಲ್ಲಿ ಅಬರಾಜು ತಿಮ್ಮಪ್ಪನು ಕೃಷ್ಣನ ಹೆಸರಿನಲ್ಲಿ ನೀರಿನ ತೊಟ್ಟಿಯನ್ನು ಕಟ್ಟಿಸಿದನೆಂದು ತಿಳಿಸಲಾಗಿದೆ.[49]

ತೃಟಿತವಾದ ಶಾಸನದಲ್ಲಿ ಮಲ್ಲಿಕಾರ್ಜುನ ದೇವರಿಗೆ ಕೊಟ್ಟ ದಾನವನ್ನು ತಿಳಿಸುತ್ತದೆ. ಕೊಲರಾಮಯ್ಯ ಮತ್ತು ಭೂಪತಿ ಕೆರೆಯನ್ನು ಕಟ್ಟಿಸಿದ್ದರೆಂದು ಆ ಶಾಸನವು ಉಲ್ಲೇಖಿಸುತ್ತದೆ. ಹೀಗೆ ದಾನವನ್ನು ಕೆರೆ ನಿರ್ಮಾಣಕ್ಕೆ ನೀಡಲಾದ ಬಗ್ಗೆ ಉಲ್ಲೇಖವಿದೆ ಎಂಬುದು ಹಲವಾರು ಶಾಸನಗಳಿಂದ ತಿಳಿದುಬಂದಿದೆ.[50]

ಇದರ ಕಾಲ ತಿಳಿದುಬಂದಿಲ್ಲ. ಶಾಸನ ಸಂಖ್ಯೆ 276 ವಿಜಯನಗರ ಕಾಲದ ಅಹಮದ್‌ಖಾನ್ ಧರ್ಮಶಾಲೆಯ ಪಶ್ಚಿಮಕ್ಕೆ ಬೆಟ್ಟದ ಮೇಲೆ ಶಾಸನವಿದ್ದು ಅದರಲ್ಲಿ ದೃವರಪಲ್ಲಿ ಮುಮ್ಮಡಿ ಸೆಟಿಗೆ ಪುಣ್ಯವಾಗಲೆಂದು ನಂಜೇದೇವನ ನಿರಾನೆ ಮಠಕ್ಕೆ ಭೂಮಿ ಮತ್ತು ಬಾವಿಯನ್ನು ನೀಡಿದನೆಂದು ತಿಳಿಸುತ್ತದೆ.[51]

ವಿಜಯನಗರದ ರಾಜ ಕೃಷ್ಣದೇವರಾಯನ ಕಾಲಕ್ಕೆ ಸೇರಿದ ಈ ಶಾಸನವು ಕ್ರಿ.ಶ 1521ರಲ್ಲಿ ಬರೆಯಲಾಗಿದ್ದು ವಿವರಣೆಯು ಹೀಗಿದೆ. ಮೇರುವ ಸಿಂಹಾಸನಾಧೀಶ್ವರ ಕಾಶ್ಯಪಗೋತ್ರದ ಮಹಾಮಂಡಳೇಶ್ವರ ಚಿಕ್ಕತಿಮ್ಮಯ್ಯದೇವ ಮಹಾ ಅಸನ ಮಗ ತಿಮ್ಮರಾಜನು ರಾಮಚಮದ್ರ ದೇವರ ಅಮೃತಪಡಿ ಸೇವೆಗೆಂದು ಕೃಷ್ಣದೇವರಾಯನು ದಾನಮಾಡಿ ಸೊಂಡುರು ಸೀಮೆಯಲ್ಲಿನ ತಾಳೂರು ಗ್ರಾಮದಲ್ಲಿಯ ಒಡೆದುಹೋದ ಕೆರೆಯನ್ನು ದೊಡ್ಡಕೆರೆಯಾಗಿ ಕಟ್ಟಿಸಿ ದೇವರ ಗುಡಿಯ ಮುಂದೆ ಉತ್ತಮವಾದ ಮಂಟಪವನ್ನು ಕಟ್ಟಿಸಿದನೆಂದು ತಿಳಿಯುತ್ತದೆ. ಅಲ್ಲದೆ ರಾಮಚಂದ್ರ ದೇವಸ್ಥಾನದ ಕಾರ್ಯಕರ್ತ ಪರಿಣಿತ ಮಂಗಳರಸನ್ನೊಳಗೊಂಡು ಕೆಲವು ವ್ಯಕ್ತಿಗಳು ಕೆರೆಗೆ ಭೂಮಿಯನ್ನು ದಾನ ಮಾಡಿದ ಎಂದು ತಿಳಿಸುತ್ತದೆ. ತಿಮ್ಮರಾಜ ತನ್ನ ಚಿಕ್ಕತಿಮ್ಮರಾಜ ಒಡೆಯ ಮತ್ತು ತಾಯಿ ಕೋನಾಜಿ ಅಮ್ಮನವರಿಗೆ ಪುಣ್ಯವಾಗಲೆಂದು ಅಂದೇ

ದೇವಸ್ಥಾನದಲ್ಲೇ ಉತ್ಸವಗಳನ್ನು ಆಚರಿಸಲು ಭೂಮಿಯಿಂದ ಬರುವ ಆದಾಯದ ಒಂದು ಭಾಗವನ್ನು ದಾನಮಾಡಿದನೆಂದು ತಿಳಿಸುತ್ತದೆ.[52]

ರಾಜಸವನಹಳ್ಳಿಯ ಶಾಸನವು ವಿಜಯನಗರ ದೇವರಾಯ ಮಹಾರಾಯರಿಗೆ ಸೇರಿದ್ದಾಗಿದೆ. ಈ ಶಾಸನ ಕ್ರಿ.ಶ 1419ರಲ್ಲಿ ಬರೆದ ಶಾಸನವಾಗಿದೆ. ಶಾಸನದ ವಿವರಣೆಯು ಈ ರೀತಿ ಇದೆ. ಲಕ್ಕಪ್ಪ ಮಗ ಹರಿಹರನು ಅರಸನ ಆಜ್ಞೆಯ ಮೇರೆಗೆ ಪಾಂಡ್ಯನಾಡಿನೊಳಗಿನ ನೋಣಬನ ಅರಸಿಕೆರೆಯ ವಿಭಾಗವನ್ನು ಆಳುತ್ತಿದ್ದಾಗ ಹಿರಿಯಣ್ಣನ ನಾಯಕತ್ವದಲ್ಲಿ ಮಹಾಜನರಿಗೆ ಅರಣ್ಯವನ್ನು ನಾಶಪಡಿಸಿ ಹಿರಿಯ ಸಮುದ್ರ ಗ್ರಾಮವನ್ನು ಸ್ಥಾಪಿಸಿದ್ದಲ್ಲದೆ ಅಲ್ಲಿ ಒಂದು ಕೆರೆಯನ್ನು ಕಟ್ಟಿಸಿದಕ್ಕಾಗಿ ಆ ಊರನ್ನು ಶೋಯ ಅಗ್ರಹಾರವಾಗಿ ದಾನಮಾಡಲಾಯಿತು. ಹೊಸಕೆರೆಯ ಕೆಳಗಿನ ಭೂಮಿಗೆ ತೆರಿಗೆ ವಿನಾಯಿತಿಯನ್ನು ನೀಡಲಾಯಿತು. ಮಹಾಜನರು ಇತರ ಬ್ರಾಹ್ಮಣರಿಗೆ ತೆರಿಗೆ ರಹಿತ ಭೂಮಿಗಳನ್ನು ದಾನ ನೀಡಿದರು ಎನ್ನಲಾಗಿದೆ.[53] ಕ್ರಿ.ಶ 1512ರ ಶಾಸನದಲ್ಲಿ ಒಬ್ಬ ಸ್ತ್ರೀಯು ಶಾಂತಮಲ್ಲಿಕಾರ್ಜುನ ದೇವಸ್ಥಾನದ ಬಾವಿಯನ್ನು ದುರಸ್ಥಿಗೊಳಿಸಿ ಭೂಮಿ ದಾನಮಾಡಿದ್ದನ್ನು ತಿಳಿಸುತ್ತದೆ. ಶಾಸನದಲ್ಲಿ ಆತನ ಹೆಸರನ್ನು ಉಲ್ಲೇಖಿಸಲಾಗಿದೆ.[54]

ಚಾಳುಕ್ಯ ವಿಕ್ರಮಾದಿತ್ಯನ ಶಾಸನವು ಕಚ್ಯ ಪಗಡೆಯು ಒಂದು ಕೆರೆಯನ್ನು ಕಟ್ಟಿಸಿ ಅದಕ್ಕಾಗಿ ಅಂದರೆ ಅದರ ನಿರ್ವಹಣೆಗಾಗಿ ಬಿತ್ತುವಟ್ಟಕ್ಕಾಗಿ ಭೂಮಿಯನ್ನು ದಾನಮಾಡುತ್ತಾನೆ. ಇದಕ್ಕೆ ಕನ್ನಗೆರೆ ಎಂದು ಹೆಸರಿಟ್ಟು ಭೂಮಿಯನ್ನು ಪ್ರಸಿದ್ಧನಾದ ಅಂದರೆ ಕೆರೆಯ ಕೆಲಸ ಮಾಡಿದವರು ಅಂದಿನ ಕಾಲಕ್ಕೆ ಮಹಾಪುಣ್ಯವಂತರು ಎಂದು ಕರೆಸಿಕೊಳ್ಳುತ್ತಿದ್ದರು. ಅದು ಅಲ್ಲದೆ ಕೆರೆಗೆ ಮಾಡಿಸಿದ ತಯಾರಿ ಅವರದೇ ಅದರ ನಿರ್ವಹಣೆಗಾಗಿ ಬಿತ್ತುವಟ್ಟದ ದಾನವನ್ನು ಮಾಡಿದ ಪುಲಗೆರೆಯಿಂದ ಬಂದ ಏಚು ತೂಬನ್ನು ಮಾಡಿದ, ಇಲ್ಲಿಗೆ ಕೆಲಸಗಾರರನ್ನು ಬಹಳ ದೂರದಿಂದ ಕರೆಯಿಸಿಕೊಳ್ಳುತ್ತಿದ್ದರು. ಏಕೆಂದರೆ ಅರಸ ಕೆಲಸದಲ್ಲಿ ತುಂಬ ನಿಷ್ಠೂರನಾಗಿರಬೇಕಿತ್ತು.[55]

ಕ್ರಿ.ಶ 1195ರ ಹೊಯ್ಸಳರ ಎರಡನೇ ಬಲ್ಲಾಳನ ಕಾಲಕ್ಕೆ ಸೇರಿದ ಕಾತೆಯ ಮಾವಂತನು ಇತರರನ್ನು ಮುಂದುವಡಿಯಲ್ಲಿ ಕೆರೆಯನ್ನು ಕಟ್ಟಿ ಇದರ ಕೆಳಗೆ ಗದ್ದೆಗಳನ್ನು

ಮಾಡಿದರು. 1200 ಎಂ.ಯು ಕಟ್ಟೆ ಕಟ್ಟಿ ಗೌಡರಿಗೆ ಆ ಊರಿನ ಜನ ಕೆರೆಯನ್ನು ಕಟ್ಟಿಸಿದಾಗ ಉಂಬಳಿಯಾಗಿ ಮೂರು ಖಂಡುಗ ಭೂಮಿಯನ್ನು ದಾನಮಾಡಿದ ಎಂದು ತಿಳಿಸುತ್ತದೆ. ಆತ ದೇವರಿಗೆ ಅನೇಕ ದಾನಗಳನ್ನು ಮಾಡುತ್ತಾನೆ. ಈ ಶಾಸನವು ಹಣಕಾಸಿನ ಉಲ್ಲೇಖವನ್ನು ನೀಡುವುದರ ಬಗ್ಗೆ ಹಾಗೂ ದಾನ ನೀಡುವುದರ ಬಗ್ಗೆ ಕೆರೆ ನಿರ್ಮಾಣವನ್ನು ಮಾಡಲು ಸಹಕರಿಸಿರುವುದನ್ನು ಕಾಣಬಹುದಾಗಿದೆ.[56]

ಶ್ರೀರಂಗ ದಂಡಾಧಿಪತಿ ತಮ್ಮ ಸಾಳ್ವ ಬಲ್ಲಾಳ ಚಂಪುಗೇಜಿಯಲ್ಲಿ ತನ್ನ ಕೈಯಾರೆ ನೀರೆದು ಕೆರೆಯನ್ನು ಕಟ್ಟಿಸಿದ ಎಂದು ಹೇಳಲಾಗಿದೆ. 2ನೇ ವೀರ ಬಲ್ಲಾಳನು ಈ ಶಾಸನದಲ್ಲಿ ನೀರೇರೆಯುವುದು ಕೆರೆಯ ಮುಂದಿನ ಭಾಗದಲ್ಲಿ ಕಲ್ಲು ಕುಟಿಗರಿಗು ಕೂಡ ಭೂಮಿ ದಾನ ಮಾಡಲಾಗಿದೆ. ಬಹುಶಃ ಅವರಿಗೆ ಕೆರೆಯನ್ನು ಕಟ್ಟಿದವರು ಹಾಗೂ ನಿರ್ವಹಣೆ ಮಾಡುವವರು ಇರಬೇಕು ಎಂಬುದಾಗಿ ಅಭಿಪ್ರಾಯಪಡಲಾಗಿದೆ.[57]

ಕ್ರಿ.ಶ. 1227ರಲ್ಲಿ ಗಂಜಿಹಳ್ಳಿಯ ಶಾಸನದಲ್ಲಿ ಎಕ್ಕಲಸೇ ಎರಡನೇ ನರಸಿಂಹನ ಕಾಲಕ್ಕೆ ಸೇರಿದ್ದ ಈ ಶಾಸನವು ತಿಳಿಸುವಂತೆ ಗಂಜಿಹಳ್ಳಿಯಲ್ಲಿ ಎಕ್ಕಲ ಸಮುದ್ರವನ್ನು ಕಟ್ಟಿಸಿದ ಆತ ಆ ಊರಿನ ಜನರು ಎಕ್ಕಲಸೇವೆಗೆ ಮತ್ತು ಕಲ್ಲಸೇವೆಗೆ ಸಲಗೆ 40 ರಿಂದ 300 ಬೆತ್ತಲ ಕಂಬ ಭೂಮಿಯನ್ನು ಅಶೇಷ ಮಹಾಜನಗಳು ದಾನಮಾಡಿದರು ಎಂದು ತಿಳಿಸಲಾಗಿದೆ.[58]

ಕ್ರಿ.ಶ 1432ರ ಈ ಶಾಸನದಲ್ಲಿ ಮೂರುರಾಯ ಬಸವಶಂಕರ ನಾಯಕರು ನೇರಳಿಗೆಯ ಹಿರಿಯ ಕೆರೆಯ ಬಂಡಿಯ ನಿರ್ವಹಣೆಗಾಗಿ ಭೂಮಿಯನ್ನು ದಾನ ಮಾಡಿದರು.[59]

ಕ್ರಿ.ಶ 1429ರಲ್ಲಿ ವೀರುಪಣ್ಣ ನಾಯಕನ ನೇರಲಿಗೆಯ ಹಿರಿಯಕಟ್ಟೆಯ ಬಂಡಿಯ ನಿರ್ವಹಣೆಗಾಗಿ ಭೂಮಿಯನ್ನು ದಾನಮಾಡಲಾಗಿದೆ.[60]

ಅರಸೀಕೆರೆ ತಾಲ್ಲೂಕಿನ ಮೊಸಳೆಯ ಶಾಸನವು ಕ್ರಿ.ಶ 1267ರ ನರಸಿಂಹನ ಕಾಲದಲ್ಲಿ ಬಳ್ಳೆಯ ಕೆರೆಗೆ ಒಡ್ಡನ್ನು ಕಟ್ಟಿಸಿದ ಉಲ್ಲೇಖ ಮತ್ತು ಈ ಧರ್ಮ ನಡೆದ್ದು ಸಂತಾನಾಭಿವೃದ್ಧಿಗಾಗಿ ಎಂಬುದು ಗಮನಾರ್ಹ ವಿಷಯವಾಗಿದೆ.[61]

ಕೋಳಿಗುಂದದ ಶಾಸನದಲ್ಲಿ ಕೆರೆಯನ್ನು ಕಟ್ಟಿದ ಕೇತೂಜ ಮತ್ತು ಗಣಪೂಜಾಂಗಗಳಿಗೆ ಭೂಮಿಯನ್ನು ದಾನಮಾಡಲಾಗಿದೆ. ಈ ದಾನದ ಧರ್ಮವನ್ನು ಕೆಡಿಸಿದವರಿಗೆ ಕೆರೆಯನ್ನು ಒಡೆದ ಪಾಪ ಬರಲಿ ಎಂದು ಹೇಳಿದ್ದಾರೆ.[62]

ಹೊಯ್ಸಳ ಸೋಮೇಶ್ವರ ಕಾಲದ ಕ್ರಿ.ಶ. 1253ರ ಈ ಶಾಸನದಲ್ಲಿ ಲಕ್ಕವ್ವೆಯಕ್ಕನ್ನು ಹಿರಿಯ ಕೆರೆಯನ್ನು ಕಟ್ಟಿಸಿದ್ದನ್ನು ಉಲ್ಲೇಖಿಸುತ್ತದೆ. ಹೆಲಗದರೂ ಕೂಡ ದಳಿನ ಕೆರೆ ಕಟ್ಟಿಸಿದರು. ಆದರೆ ಅದು ಮಹಾಪ್ರಧಾನ ಬೊಮ್ಮಣ್ಣ ದಂಡಮಾರರ ಅಕ್ಕ ಬಂದು ಕಂಬ 32 ಕೋನಗಳೆಂದು ಕೆಲಸಗಾರ ಗಾವುಂಡ ರಿಂದ ಅರ್ಜುನನು ಮಹಾದೇವರ ದೇಗುಲವತ್ತಿ ಕೆರೆಯನ್ನು ಕಟ್ಟಿಸಿ ಕೆರೆಯ ಭೂಮಿಯನ್ನು ದೇವರಿಗೆ ದಾನ ಮಾಡಿದರು.[63]

ನಂಜನಗೂಡಿನ ಶಾಸನ ಸಂಖ್ಯೆ 147ರ ಪ್ರಕಾರ ಕಣೆನೂರು ಶಾಸನವು 8ನೇ ಶತಮಾನದ ಗಂಗರ ಪೆರ್ಮಾಡಿಯ ಕಾಲಕ್ಕೆ ನಡೆದ ಕೆಂಗೆರೆ ಕೆರೆಯ ಕೆಳಗೆ ದಾನ ದತ್ತಿಯನ್ನು ನೀಡಿದ್ದನು ಶಾಸನವು ಉಲ್ಲೇಖಿಸುತ್ತದೆ.[64]

ಕ್ರಿ.ಶ. 1217ರ ಆಗಸ್ಟ್ 4ರ ಅರಸೀಕೆರೆಯ ಹೆರಗುವಿನ ಶಾಸನ ಸಂಖ್ಯೆ 144 ರಲ್ಲಿ ಹೊಯ್ಸಳ ವೀರಬಲ್ಲಾಳ ದೇವನು ಈ ಶಾಸನದಲ್ಲಿ ಹಿರಿಯ ಕೆರೆಯ ಕೆಳಗೆ ನೀಡಿರುವ ದೇವರ ತೋಟಕ್ಕೆ ಬೃಂದಾವನ ಎಂದು ಕರೆದಿರುವುದು ವಿಶೇಷವಾಗಿದೆ.[65] ಅದು ಅಲ್ಲದೇ ಲಕ್ಷ್ಮೀ ನಾರಾಯಣ ದೇವರಿಗಾಗಿ ಕೊಟ್ಟ ದಾನ ಆದ್ದರಿಂದ ಕೃಷ್ಣನ ಸಂಬಂಧವಾಗಿ ಕೃಷ್ಣದೇವರ ತೋಟವಾಗಿದ್ದರಿಂದ ಇದನ್ನು ಬೃಂದಾವನ ಎಂದು ಕರೆದಿರಬಹುದು. ಗಂಡವಿಮುಕ್ತ ಸಿದ್ಧಾಂತ ದೇವರ ಜೈನ ಬಸದಿಯನ್ನು ಕಟ್ಟಿಸಿ ದೇವರ ಅರ್ಚನ ಭೋಗಕ್ಕೆ ಬಿತ್ತುವಟ್ಟ ಭೂಮಿ 2142ರಷ್ಟನ್ನು ರಾಜೇಂದ್ರ ಪೃಥ್ವಿ ಕೊಂಗಾಳ್ವ ನೀಡುತ್ತಾನೆ. ಇದು ಕೊಂಗಾಳ್ವ ಮುಖ್ಯಸ್ಥನಿಂದ ನಡೆದ ದಾನ ಎಂದು ತಿಳಿಯಲಾಗಿದೆ.[66]

ಹೊಳೇನರಸೀಪುರದ ಶಾಸನದಲ್ಲಿ ತಿಳಿಸಿರುವಂತೆ ಹೂದೋಟಕ್ಕಾಗಿ ಒಂದು ಗದ್ಯಾಣವನ್ನು ದಾನಮಾಡಿರುವ ಬಗ್ಗೆ ಉಲ್ಲೇಖವಿದೆ.[67] ಮತ್ತೊಂದು ಹೊಳೇನರಸೀಪುರದ ನಿಡಾಪುಣಿಯ ಶಾಸನದ ಪ್ರಕಾರ ವೀರಪ್ಪರಸ ಒಬ್ಬ ಕಾರ್ಯಕರ್ತ. ಇವನು ಪ್ರಧಾನಿಗಳಾದ ಮಲ್ಲರಸಯ್ಯರಿಗೆ ಪುಣ್ಯವಾಗಬೇಕೆಂದು ಕೆರೆ ನಿರ್ವಹಣೆಗಾಗಿ ತಿಡುಪೋಣಿಯಲ್ಲಿ ರಾಚಯ್ಯನಿಂದ ಕಟ್ಟಲ್ಪಟ್ಟ ಕೆರೆಯ ಬಂಡಿಗಾಗಿ ಕೆರೆ ಕೆಳಗಣ, ಗದ್ದೆ, ಹೊಲ ಹಾಗೂ ಇಪ್ಪತ್ತು (ಗದ್ಯಾಣ) ಹಣವನ್ನು ದಾನಮಾಡಿದರು ಎಂದು ತಿಳಿಸುತ್ತದೆ.[68]

ಮದ್ದೂರಿನ ಆತಕೂರಿನ ಶಾಸನವು (ಕ್ರಿ.ಶ 1247) ವೀರಬಲ್ಲಾಳನು ಹಿರಿಯ ಕೆರೆಯ ನಿರ್ವಹಣೆಗಾಗಿ ಕೆಲವು ಜಮೀನು ದಾನಮಾಡಿರುವುದರ ಬಗ್ಗೆ ವಿಶ್ಲೇಷಣೆ ಇದೆ.[69]

ಬೀಚೆನಹಳ್ಳಿಯ ಶಾಸನದಲ್ಲಿ ತಿಳಿಸಿರುವಂತೆ ಕೆರೆಯ ನಿರ್ವಹಣೆಗೆ ಒಂದು ಹಳ್ಳಿಯನ್ನು ದಾನಮಾಡಲಾಗಿದೆ.[70]

ಕ್ರಿ.ಶ 1477ರ ಚಾಮಲಾಪುರದ ಶಾಸನವು ಗದ್ದೆ, ಬೆದ್ದಲು, ಆಣೆ, ಅಚ್ಚುಕಟ್ಟು ಕಾಲುವೆಯನ್ನು ಸರ್ವಬಾದ ಪರಿಹಾರವಾಗಿ ದಾನ ಮಾಡಿದುದ್ದಾಗಿ ತಿಳಿಸಲಾಗಿದೆ.[71]

ಬೆಳ್ಳೂರಿನ ಕ್ರಿ.ಶ 11139-40ರ ಶಾಸನವು ಮುದಿಗೇರೆಯಲ್ಲಿ ಆಳುತ್ತಿದ್ದ ಬಣ್ಣಾಂಡಿಯ ತನ್ನ ತಾತ, ಅಜ್ಜಿ ಮತ್ತು ತಾಯಿಗೋಸ್ಕರ ಕೆರೆಗೆ ಮೇಲ್ಛದರವನ್ನು ಇರಿಸಿ ತೂಬು ಮತ್ತು ಗದ್ದೆ ಹಾಗೂ ಹೊಲವನ್ನು ದಾನಮಾಡಿದನು ಎಂದು ತಿಳಿಸುತ್ತದೆ. [72]

ಕ್ರಿ.ಶ 1271ರ ಪೆರಮಾಳು ದೇವದಾಡನಾಡು ಶಾಸನ ಶುಕ್ರವಾರ ದೇವರ ಹೆಸರಲ್ಲಿ ಕೆರೆಗಳನ್ನು ನಿರ್ಮಾಣ ಮಾಡುತ್ತಿದ್ದ ವಿಷಯವನ್ನು ತಿಳಿಸುತ್ತದೆ. ಬೆಳ್ಳೂರಿನ ಶಾಸನದಲ್ಲಿ ಹಿರಿಯ ಕೆರೆ ಎಂದು ಕರೆದಿರುವುದಲ್ಲದೆ ಬಲ್ಲಾಳ ಸಮುದ್ರ ಎಂದೂ ಕರೆಯಲಾಗಿದೆ. ಅದು ಅಲ್ಲದೆ ಕೆರೆಯ ಸುತ್ತಲಿನ ಪ್ರದೇಶವನ್ನು ದಾನಮಾಡಲಾಗಿದೆ ಎಂದು ತಿಳಿಸುತ್ತದೆ.[73]

## ಕೆರೆ ನಿರ್ಮಾಣದ ಷರತ್ತುಗಳು

ಒಂದು ಕೆರೆಯನ್ನು ನಿರ್ಮಿಸಬೇಕಾದರೆ ಏನೆಲ್ಲಾ ಕ್ರಮ ಮುನ್ನಚ್ಚರಿಕೆಗಳನ್ನು ತೆಗೆದುಕೊಳ್ಳಬೇಕೆಂದು ಶಾಸನಗಳು ತಿಳಿಸುತ್ತವೆ ಅವುಗಳೇ ಷರತ್ತುಗಳೆನ್ನಿಸಿವೆ.

ಒಂದು ಸಾಮಾನ್ಯ ಮನೆ ನಿರ್ಮಾಣವನ್ನೇ ನೋಡುವುದಾದರೆ ಅದಕ್ಕಾಗಿ ನಾವು ಹಿಂದಿನ ವರ್ಷದಿಂದಲೇ ಆಲೋಚಿಸಿ ಸರಿಯಾದ ನೀಲನಕ್ಷೆ ತಯಾರಿಸಿ ಅದರ ಉದ್ದ, ಅಗಲ, ವಿಸ್ತಾರ, ರೀತಿ, ವಾಜ್ಯಗಳನ್ನು ತಲೆಕೆಡಿಸಿಕೊಂಡು ಮಾಡುವುದು ಸಾಮಾನ್ಯ ಕೆಲಸ ಅದು ನೆನ್ನೆ ಮೊನ್ನೆಯದಲ್ಲ ಬುದ್ಧಿಯ ಜೀವಿಯಾದ ಮಾನವನ ವಿಕಾಸದ ಮಟ್ಟಕ್ಕೆ ಅನುಗುಣವಾಗಿ ಆದಿಕಾಲದಿಂದಲೂ ನಡೆದುಕೊಂಡೇ ಬಂದಿದೆ. ಹಾಗೆಯೇ ಕೆರೆಯ ನಿರ್ಮಾಣ ಕಾರ್ಯದಲ್ಲಿಯೂ ಇದು ಅಕ್ಷರ ಸಹ ನಿಜವಾದ ಸಂಗತಿಯಾಗಿದೆ.

ಒಂದು ಕೆರೆಯ ನಿರ್ಮಾಣವು ಅಂದಿನ ಕಾಲದ ಎಲ್ಲಾ ಸೌಕರ್ಯಗಳನ್ನು ಒಳಗೊಂಡಿರುವ ಶಾಸನಗಳಿಂದ ತಿಳಿಯಬಹುದಾಗಿದೆ. ಅಂದರೆ ಅಂದಿನ ಕಾಲದ ಒಂದು ಕೆರೆ ನಿರ್ಮಾಣವು ಆ ಕಾಲದ ಆರ್ಥಿಕ ಪರಿಸ್ಥಿತಿ, ಸಾಮಾಜಿಕ ಸ್ಥಿತಿ, ಪ್ರಜೆಗಳ ಬಗೆಗಿನ ಕಾಳಜಿ ಅಂದಿನ ಜನರ ವೈಜ್ಞಾನಿಕ ದೃಷ್ಟಿಕೋನ ಮೊದಲಾದವುಗಳ ಬಗ್ಗೆ ಬೆಳಕು ಚೆಲ್ಲುತ್ತದೆ. ಹೀಗೆ ದಾನ ದತ್ತಿಗಳು ನೀಡಿರುವ ರಾಜ ಅಧಿಕಾರಿ, ಜನ ಸಾಮಾನ್ಯ ಮೊದಲಾದವರ ಬಗೆಗಿನ ಉಲ್ಲೇಖಗಳು ಸಹ ಹಲವು ಶಾಸನಗಳಲ್ಲಿ ದಾಖಲಿಸಲ್ಪಟ್ಟು ಅವುಗಳಲ್ಲಿ ಕೆಲವೊಂದನ್ನು ಮೇಲ್ಕಂಡತೆ ನಾವು ನೋಡಿದ್ದೇವೆ. ಈ ದಾನ ದತ್ತಿ ಪ್ರಕ್ರಿಯೆಯು ಹಲವಾರು ಅಂಶಗಳು ಪ್ರಭಾವಿತವಾಗಿದೆ. ತನ್ನ ಪ್ರಿತಿ ಪಾತ್ರರ ನೆನಪನ್ನು ಶಾಶ್ವತಗೊಳಿಸಲು ತಾನು ಪ್ರತಿಷ್ಠಿತ ವ್ಯಕ್ತಿಯೆಂದು ತೋರಿಸಿಕೊಳ್ಳುಲು ಅಥವಾ ದೇವರ ಕಾರ್ಯವೆಂದು ಪುಣ್ಯಕ್ಕಾಗಿ ಅಥವಾ ಜನಾನುರಾಗಿಯಾಗಿಯೇ ಮಾಡಿರಬಹುದು. ಏನೇ ಆದರೂ ಒಂದು ಉತ್ತಮ ಕಾರ್ಯಕ್ಕೆ ಈ ರೀತಿಯ ದಾನ ದತ್ತಿಯ ಮಹಾಪೂರವೇ ಹರಿದು ಬರುತ್ತಿತ್ತು ಎಂಬುದಂತೂ ಅಕ್ಷರಸಹ ಸತ್ಯಾಂಶವಾಗಿದೆ.

## ಮುನ್ನಚ್ಚರಿಕೆ ಕ್ರಮಗಳು

### 1. ಕೆರೆಯಿಂದ ನೀರು ಸ್ರವಿಸಬಾರದು

ಮೊದಲನೆಯದಾಗಿ ಅಂದರೆ ಕೆರೆಯಿಂದ ನೀರು ಹೊರಹೋಗುದಂತೆ ಅದನ್ನು ಕಟ್ಟಬಾರದು. ಅಂದರೆ ಸಮತಟ್ಟಾದ ಪ್ರದೇಶದಿಂದ ಮೇಲ್ಮಟ್ಟದಲ್ಲಿ ನಿರ್ಮಿಸಿದರೆ ಅದರ ನೀರು ಸ್ವಲ್ಪದರಲ್ಲೇ ಸಂಗ್ರಹವಾಗಿ ಇಳಿಜಾರಿನ ಕಡೆಗೆ ಸ್ರವಿಸುತ್ತದೆ. ಹಾಗೆಯೇ ಕೆರೆಯ ಸುತ್ತಲಿನ ಒಡ್ಡು ಅಥವಾ ಏರಿಗಳನ್ನು ಸರಿಯಾಗಿ ನಿರ್ಮಿಸದಿದ್ದರೆ ಅದರಿಂದಲೂ ನೀರು ಸ್ರವಿಸುತ್ತದೆ. ಬಂಡಿಗಾರರು, ಕೂಲಿಗಾರರು, ಜನವಸತಿಯು ಕೆರೆಯ ಸುತ್ತಮುತ್ತ ಸದಾಕಾಲ ಓಡಾಡುತ್ತಲೇ ಇರುವುದರಿಂದ ಆ ರಸ್ತೆಗಳು ಸವೆಯದಂತೆ ನೋಡಿಕೊಳ್ಳಬೇಕು. ಆಗಾಗಿ ನೀರು ಕೆರೆಯಿಂದ ಹೋಗದಂತೆ ಕಾಪಾಡಲು ಕೈಗೊಳ್ಳಬಹುದಾದಂತ ಎಲ್ಲಾ ಕ್ರಮಗಳನ್ನು ಯೋಜಿಸಿಕೊಳ್ಳಬೇಕು.

**2. ಕೆರೆಯ ಪಾತ್ರದಲ್ಲಿನ ಮಣ್ಣು ಉಷ್ಣಾಂಶದಿಂದ ಕೂಡಿರಬಾರದು.**

ಸಾಮಾನ್ಯವಾಗಿ ಕೆರೆಯನ್ನು ತೋಡಿಸುವಾಗಿ ಮಣ್ಣು ಯಾವ ವಿಧವಾದದ್ದು ಎಂದು ಪರೀಕ್ಷಿಸುವುದು, ಏಕೆಂದರೆ ಕೆರೆಯ ನಿರ್ವಹಣೆಗಾಗಿ ಅಗೆಯುವ ಮಣ್ಣು ಜೇಡಿಮಿಶ್ರಿತ ಮಣ್ಣೋ, ಮರಳು ಮಿಶ್ರಿತಮಣ್ಣೋ, ಚೌಳು ಮಣ್ಣೋ ಎಂಬುದನ್ನು ಗಮನಿಸಿ ಉಷ್ಣಾಂಶದಿಂದ ಕೂಡಿರುವಂತೆ ನೋಡಿಕೊಳ್ಳಬೇಕು.

**3. ರಾಜ್ಯಗಳ ನಡುವಿನ ಗಡಿ ಪ್ರದೇಶವನ್ನು ಆಯ್ಕೆ ಮಾಡಬಾರದು**

ಕೆರೆಯ ನಿರ್ಮಾಣ ಕಾರ್ಯವು ಸುಲಲಿತವಾಗಿ ನಡೆಯಬೇಕು. ಹಾಗೂ ಮುಂದಿನ ಪೀಳಿಗೆಯವರಿಗೆ ಅದರ ಫಲವನ್ನು ಶಾಂತಿಯುತವಾಗಿ ಅನುಭವಿಸಬೇಕೆಂಬುದೇ ಆಗಿದೆ. ಆದರೆ ಅದರ ನಿರ್ಮಾಣಕ್ಕೆ ಎರಡು ರಾಜ್ಯದ ಎರಡು ಊರಿನ ಎಲ್ಲಾ ಭಾಗವನ್ನು ಆಯ್ದುಗೊಳ್ಳಬಾರದು ಎಂಬುದು ನಿಯಮವಾಗಿದೆ. ಏಕೆಂದರೆ ಸಾಮಾನ್ಯವಾಗಿ ನಾವು ನಮ್ಮವರು ನಮ್ಮದೆನ್ನುವ ಅಂಶಗಳು ಅಶಾಂತಿಗೆ ಕೆಲವೊಮ್ಮೆ ಎಡೆಮಾಡಿಕೊಡುತ್ತವೆ. ಹಾಗಾಗಿ ಗಡಿ ಭಾಗದ ಕೆರೆಯ ನಿರ್ಮಾಣಕ್ಕೆ ಸಲ್ಲದು.

4. ಅಷ್ಟೇ ಅಲ್ಲದೆ ಜನಸಂಖ್ಯೆ ತೀವ್ರಗತಿಯಲ್ಲಿ ಬೆಳೆಯುವ ಪ್ರಕ್ರಿಯೆಯಾಗಿರುವುದರಿಂದ ಒಂದು ಊರಿನ ಜನತೆಯು ಅಲ್ಲಿನ ಜನಸಂಖ್ಯೆಗೆ ಅನುಗುಣವಾಗಿ ನೀರು ಬಳಸುತ್ತದೆ. ಹಾಗೆಯೇ ಇನ್ನೊಂದು ಗ್ರಾಮವು ಸಹ ಜನಸಂಖ್ಯೆ ಎರಡು ಗ್ರಾಮಗಳಲ್ಲಿಯೂ ಅಸಮತೋಲನದಿಂದ ಕೂಡಿದಾಗಿ ಅದರ ದುರಸ್ಥಿ ಕಾರ್ಯಕ್ಕೆ ಹಣ ವಿನಿಯೋಗದ ಅವಶ್ಯಕತೆ ಇದ್ದಾಗ ಹಲವಾರು ಸಮಸ್ಯೆಗಳು ಉದ್ಭವಿಸಬಹುದು. ಭವಿಷ್ಯದಲ್ಲಿ ಇದು ಸಮಸ್ಯೆಯೆಂದು ಪರಿಗಣಿಸಲ್ಪಡದೇ ಇರಲು ಈ ನಿಯಮವನ್ನು ಅನುಸರಿಸುವುದು ಸರ್ವಕಾಲಿಕ ಸತ್ಯಾಂಶವಾಗಿದೆ.

5. ಅತ್ಯಲ್ಪ ನೀರು ಬರುವ ಪ್ರದೇಶವನ್ನು ಆಯ್ಕೆಮಾಡಬಾರದು ಮತ್ತು ಆಯಾಕಟ್ಟು ಇರುವ ಭಾಗವನ್ನು ಆರಿಸಬಾರದು. ಏಕೆಂದರೆ ಅತಿ ಕಡಿಮೆ ನೀರಿನ ಸೆಲೆ ಹೊಂದಿರುವ ಭಾಗವನ್ನು ಆಯ್ಕೆಮಾಡಿದರೆ ಕಡಿಮೆ ಪ್ರಮಾಣದ ನೀರು ಸಂಗ್ರಹವಾಗುವುದರ ಜೊತೆಗೆ ಅದು ವರ್ಷದ ಎಲ್ಲಾ ಕಾಲಗಳಗೂ ನೀರು ಪೂರೈಸುವಲ್ಲಿ ವಿಫಲವಾಗಬಹುದು.

ಕೆರೆಯ ಅಣೆಕಟ್ಟು ಪ್ರದೇಶಗಳಲ್ಲಿ ಶತ್ರುಗಳ ದಾಳಿಗೆ ಬೇಗ ತುತ್ತಾಗದಂತಿರಬಾರದು. ಆ ಜಾಗವು ಪ್ರಮುಖವಾದ ಸ್ಥಳ ಎಂದರೆ ಕೆರೆಯ ಆ ಪ್ರದೇಶದಲ್ಲಿ ಕಟ್ಟೆಯು ಒಂದು ವೇಳೆ ಒಡೆದು ಹೋದರೆ ಇಡೀ ಊರೆ ಮುಳುಗಿ ಹೋಗುವಂತಾಗುತ್ತದೆ. ಆದ್ದರಿಂದ ಇಂತ ಪ್ರದೇಶವನ್ನು ಆರಿಸಿಬಾರದು. ಉದಾಹರಣೆಗೆ ಕೆ.ಆರ್.ಎಸ್ ಅಣೆಕಟ್ಟು (ಡ್ಯಾಮ್) ಮೈಸೂರಿಗೆ ಯಾವ ತೊಂದರೆಯಿಲ್ಲದಾಗಿದೆ. ಆದರೆ ಕೆರೆಯನ್ನು ಆಯಾಕಟ್ಟಿನ ಪ್ರದೇಶದಲ್ಲಿ ನಿರ್ಮಿಸಿದರು ಅದು ಬೇಗ ನೀರು ಇಂಗುವಂತಹ ಸ್ಥಳವಾಗಿರಬಾರದು. ಇಂಥ ಸ್ಥಳ ಆಯ್ಕೆಕೂಡ ಪ್ರಮುಖ ಪಾತ್ರವಹಿಸುತ್ತದೆ.

ಕೆರೆಯು ಊರಿಗೆ ಮೊದಲೆ ಸಿಗುವಂತಹ ಸ್ಥಲವಾಗಿರಬಾರದು. ಒಂದು ವೇಳೆ ಆ ರೀತಿ ನಿರ್ಮಿಸಿದರೆ ಅವು ಶತ್ರುಗಳ ಸೆರೆಗೆ ಸಿಕ್ಕಿ ವಿಷ ಬೆರೆಸಿ ಹಾನಿ ಮಾಡುವಂತಹ ಸಂದರ್ಭಗಳು ಹೆಚ್ಚಾಗಿರುತ್ತವೆ. ಆದ್ದರಿಂದ ಊರಿನ ಒಳಭಾಗದಿಂದ ನಿರ್ಮಿಸಬೇಕು. ಇದರಿಂದ ಊರಿನ ಜನಗರಿಗೆ ಯಾವುದೇ ರೀತಿಯ ತೊಂದರೆಯಾಗಬಾರದು.

**6. ಸ್ವಲ್ಪ ಜಮೀನಿದ್ದು ಅಧಿಕ ನೀರು ಬರುವಂತಹ ಭಾಗವನ್ನು ಆಯ್ಕೆ ಮಾಡಬಾರದು.**

ಈ ನಿಯಮವು ಹೇಳುವುದೆಂದರೆ ಬೇಸಾಯಕ್ಕೆ ಒಳಪಡುವ ಭೂಮಿ ಅತ್ಯಲ್ಪವಾಗಿದ್ದು, ಆ ಪ್ರದೇಶದಲ್ಲಿ ಅತಿ ಜಲ ಉತ್ಪತ್ತಿಯಾಗಿದೆ. ಅಲ್ಲಿ ಕೆರೆಯನ್ನು ನಿರ್ಮಿಸಲ್ಪಟ್ಟರೆ ಅಂತಹ ಪ್ರದೇಶದ ನೀರು ಕೃಷಿಗೆ ಉಪಯೋಗವಾಗದೇ ಅನಾವಶ್ಯಕವಾಗಿ ಪೋಲಾಗುತ್ತದೆ ಎಂದು ಹೇಳಬಹುದಾಗಿದೆ. ಹಾಗೆಯೇ ಅಧಿಕ ನೀರಿನ ನೆಲೆಯ ಆಳ ತೆಗೆದಷ್ಟು ಹೆಚ್ಚಾದ ನೀರು ಉಕ್ಕಿ ಹರಿದರೆ ಅಲ್ಲಿಯ ಸುತ್ತಮುತ್ತಲಿನ ಪ್ರದೇಶದ ಜನರಿಗೆ ತೊಂದರೆಯುಂಟಾಗಿ ನೆಲ ಮುಳಗಡೆಯಾಗುತ್ತದೆ ಎಂದು ಈ ನಿಯಮ ತಿಳಿಸುತ್ತದೆ.

ವಿಜಯನಗರ ಕಾಲದಲ್ಲಿ ಮಹಿಳೆಯರಿಗೂ ಪೂರ್ಣ ಸ್ವಾತಂತ್ರ್ಯವಿದ್ದುದು ಕಂಡಬರುತ್ತದೆ. ಇವರುಗಳು ಮಿಕ್ಕವರಂತೆಯೇ ಕೆರೆ ಕಟ್ಟಿಸುವಿಕೆ ಭೂಧಾನ ನೀಡುವಂತೆ ಮುಂತಾದ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು ಎಂದು ಅನೇಕ ಶಾಸನಗಳು ತಿಳಿಸುತ್ತವೆ. ಇದಕ್ಕೆ ಪೂರಕವಾಗಿ ಒಂದು ಕುತೂಹಲಕಾರಿಯಾದ ಶಾಸನವನ್ನು ಉಲ್ಲೇಖಿಸಲಾಗಿದೆ.

ಪೆನುಗೊಂಡ ರಾಜ್ಯದ ಬೊಮ್ಮದೇವಿಯು ಬುಕ್ಕರಾಯನ ಮಗಳು ತಿರುಮಣಿ ಯಾರು ಎಂಬ ಗ್ರಾಮದಲ್ಲಿ ಒಂದು ಕೆರೆಗೆ ನೀರು ಹರಿದುಬರಲು ಕಾಲುವೆಯನ್ನು ಅಗೆಸಬೇಕೆಂದು ಆತ ತನ್ನ ಮಂತ್ರಿಗಳಿಂದ ನಾಗರಾಜ ಮತ್ತು ಮಾಹಾಯಾನಿಗಳಿಗೆ ಆದೇಶಿಸುತ್ತಾಳೆ. ಯಾವ ರಾಶಿಯು ನಿರೂಪದಂತೆ ಮಂತ್ರಿಗಳ ಬದ್ಧ ನಾಯಕರಾದ ಬಯವೋಜ ಮತ್ತು ಬಯರುವೋಜರೆಂಬ ಇಬ್ಬರು ಕರ್ಮಿಗಳಿಗೆ ಆ ಕೆಲಸವನ್ನು ವಹಿಸಿತ್ತಾರೆ. ಈ ಕಾರ್ಯವನ್ನು ಅವರಿಗೆ ವಹಿಸಿಕೊಡುವಾಗಿ ಈ ಕೆರೆಯ ನೀರು ನಾಲೆಯಲ್ಲಿ ಸರಿಯಾಗಿ ಅರಿಯಬೇಕು ಎಂಬ ಷರತ್ತನ್ನು ವಿಧಿಸುತ್ತಾರೆ. ಒಂದು ವೇಳೆ ಕೆರೆಯ ನೀರು ಸರಿಯಾಗಿ ಬಂದ ಪಕ್ಷದಲ್ಲಿ ಅವರುಗಳಲ್ಲಿನ ನೂರ ಮೂವತ್ತು ಸ್ವರ್ಣ ನಾಣ್ಯಗಳನ್ನು ಭೂಮಿ ತೂಬಿನ ಹತ್ತಿರ ಮನೆ ಮತ್ತು ಬಂಗಾರದ ಕಡಗಳನ್ನು ನೀಡುವುದಾಗಿಯೂ ಒಂದು ವೇಲೆ ಆ ಕೆಲಸವು ಅಸಮರ್ಪಕವಾಗದಿದ್ದಲ್ಲಿ ಅವುಗಳನ್ನು ನೀಡುವುದಿಲ್ಲವೆಂದು ಒಪ್ಪಂದವನ್ನು ಮಾಡಿಕೊಂಡಿರುತ್ತಾರೆ ಎಂದು ತಿಳಿಸಲಾಗಿದೆ.

ಕೆರೆಯ ತಲೆ ಎಂದು ಗುರುತಿಸುವ ಭಾಗವು ಸಾಮಾನ್ಯ ಭೂಪ್ರದೇಶವಾಗಿದ್ದು ಇಲ್ಲಿ ನೀರು ಸಂಗ್ರಹಣೆಗೊಳ್ಳುತ್ತದೆ. ಕೆರೆ ಈ ಭಾಗದಲ್ಲಿ ಚಿಕ್ಕಹಳ್ಳಗಳಂದ ನೀರು ಹರಿದು ಬಂದು ಶೇಖರಗೊಳ್ಳುತ್ತದೆ. ಹೆಚ್ಚು ಮಳೆಯಾಗಿ ಅಧಿಕ ನೀರು ಬರದಂತೆ ನೀರಿನ ಹರಿವು ವಿಸ್ತಾರಗೊಳ್ಳುವುದರೊಂದಿಗೆ ಕೆರೆಯು ತುಂಬುತ್ತ ಹೋಗುತ್ತದೆ. ಭೂ ಮಟ್ಟದಿಂದ ಕೆರೆ, ಗದ್ದೆಯ ಗರಿಷ್ಠ ಮಟ್ಟ ಮುಟ್ಟಿದೆಯೆನ್ನುತ್ತವೆ. ಕನಿಷ್ಠ ಮಟ್ಟದ ನೀರು ನಿಲ್ಲುವ ಕೆರೆಯ ಭೂಭಾಗಕ್ಕೆ ಕೆರೆಯ ತಳ ಎಂದು ಹೆಸರು. ಕೆರೆಯಲ್ಲಿ ಒಬ್ಬ ವ್ಯಕ್ತಿಯ ಎತ್ತರದಷ್ಟು ನೀರು ಇರಬೇಕು. ಮತ್ತು ತುಂಬಾ ತುಂಬಬೇಕು. ಅದಕ್ಕಿಂತ ಹೆಚ್ಚಿನ ನೀರು ಬಂದ ಪಕ್ಷದಲ್ಲಿ ಆ ನೀರು ಕೋಡಿಯ ಮೂಲಕ ಹರಿದಹೋಗಬೇಕು ಎಂದು ತಿಮ್ಮಲಾಪುರದ ಕೆರೆಯ ಸಮೀಪದಲ್ಲಿ ದೊರೆತಿರುವ ಶಾಸನದಲ್ಲಿ ದಾಖಲಿಸಿರುವುದು ಪ್ರಶಂಸನಾರ್ಹ.

## ಮುನ್ನೆಚ್ಚರಿಕೆ ಕ್ರಮಗಳು

ಒಂದು ಕೆರೆಯನ್ನು ನಿರ್ಮಿಸಬೇಕಾದರೆ ಏನನ್ನು ಕ್ರಮ ಮತ್ತು ಮುನ್ನಚ್ಚರಿಕೆ ಕ್ರಮಗಳನ್ನು ತೆಗೆದುಕೊಳ್ಳಬೇಕೆಂಬುದನ್ನು ಈ ಒಂದು ಶಾಸನದಲ್ಲಿ ಅಡಗಿದೆ. ಈ ವಿವರಗಳು ಈ ಕೆಳಕಂಡಂತಿದೆ.

1. ಕೆರೆ ಕಟ್ಟುವವನಾದ ರಾಜನು ಸಂತೃಪ್ತನಾಗಿಯೂ, ಸಂತೋಷದಿಂದ ಕೂಡಿದವನಾಗಿಯೂ ಮತ್ತು ಆಚಂದ್ರಾರ್ಕವಾಗಿ ಹೆಸರುಗಳಿಸಿಕೊಳ್ಳುವನಾಗಿ ಇರಬೇಕು. ಅಂತಹವರು ಕೆರೆಯ ನಿರ್ಮಾಣಕ್ಕೆ ತೊಡಗಿಸಿಕೊಳ್ಳಬೇಕು.
2. ಜಲಶಾಸ್ತ್ರದಲ್ಲಿ (ವಯಸ್ ಶಾಸ್ತ್ರದಲ್ಲಿ) ನೈಪುಣ್ಯತೆಯನ್ನು ಹೊಂದಿದ ಬ್ರಾಹ್ಮಣನು ಈ ಕಾರ್ಯದಲ್ಲಿ ತೊಡಗಬೇಕು.
3. ಉತ್ತಮ ಜೌಗಿನಿಂದ ಕೂಡಿರುವಂತಹ ಪ್ರದೇಶದಲ್ಲಿ ಕೆರೆ ಕಟ್ಟುವುದನ್ನು ಆಯ್ದುಕೊಳ್ಳಬೇಕು.
4. ನದಿಯ ನೀರಿನ ಆಶ್ರಯವು ಮತ್ತು ಬುಗ್ಗೆಯು ಕೆರೆಯಿಂದ ಸುಮಾರು ೩.ಕಿ.ಲೋ.ಮೀ.ರಷ್ಟು ಈ ಯೋಜನೆ ದೂರದಲ್ಲಿರಬೇಕು.
5. ಬೆಟ್ಟಗಳ ಸಾಲುಗಳು ಇದ್ದಲ್ಲಿ ಕೆರೆಯನ್ನು ನಿರ್ಮಿಸಲು ಉಪಯೋಗಿಸಿಕೊಳ್ಳಬೇಕು.

6. (ಬೆಟ್ಟಗಳು) ನಡುವಿನ (ಕಣಿವೆ) ಪ್ರದೇಶದಲ್ಲಿ ಅತಿ ದೊಡ್ಡದಲ್ಲದ ಮತ್ತು
7. (ಕೆರೆಯ ಪ್ರದೇಶದಲ್ಲಿ) ಸಮೀಪದಲ್ಲಿ ಫಲ ಕೊಡುವ ಭೂಮಿಯಿರಬೇಕು.
8. ಕೆರೆಗೆ ನೀರು ಹರಿದು ಬರುವ ಜಾಗ ಬಹಳ ವಿಸ್ತೀರ್ಣವಾಗಿರಬೇಕು. ಹಾಗೆಯೇ ಆಳವಾಗಿಯೂ ಇರಬೇಕು.
9. ಸಮೀಪದಲ್ಲಿರುವ ಕಲ್ಲುಗಳು ಇದ್ದು ಅಲ್ಲಿ ಉದ್ದವಾದ ಮತ್ತು ಸಮನಾದ ಕಲ್ಲುಗಳು ದೊರೆಯಬೇಕು.
10. (ಕೆರೆಯ) ಸಮೀಪದಲ್ಲಿರುವ ಜಮೀನು ಫಲವತ್ತಾಗಿರಬೇಕು. ಹಾಗೂ ಹಣ್ಣು, ಹಂಪಲುಗಳ ಮರಗಳು ವನಗಳು ಇರಬೇಕು ಮತ್ತು ಜಮೀನು ಸಮನಾಗಿ ಏರಿಳಿತವಿಲ್ಲದೆ ಇರಬೇಕು.
11. ಕೆರೆಯ ತೂಬುಗಳನ್ನು ಕೆಲವು ಅಥವಾ ನಿಯಂತ್ರಕಗಳು ಭದ್ರವಾಗಿರಬೇಕು ಮತ್ತು ನೀರಿನ ಒತ್ತಡದಿಂದ ಕಾಪಾಡುವಷ್ಟು ಸದೃಢವಾಗಿರಬೇಕು.
12. ಕೆರೆಗಳನ್ನು ಕಟ್ಟುವ ತಂತ್ರಜ್ಞಾನವನ್ನು ಹೊಂದಿರುವಂತಹ 12 ಮಂದಿಯಿರಬೇಕು, ಅದರಲ್ಲೂ ಮೇಲೆ ಉಲ್ಲೇಖದ 11 ಅಂಶಗಳನ್ನು ಅರಿತಿರಬೇಕು.[75]
13. ಕೆರೆ ಕಟ್ಟುವ ಮುನ್ನವೇ ಇದರ ಬಂಡೀದಾರಿಗಳನ್ನು ಹಾಗೆಯೇ ಬಿಡಬೇಕು. ಆ ಜಾಗವನ್ನು ನಮ್ಮದು ಅಥವಾ ನಿಮ್ಮದು ಎಂದು ಜಗಳವಾಡಬಾರದು. ಹಿಂದಿನ ನಮ್ಮ ಜನರು ಇಂದಿನಂತೆಯೇ ಸಂಪರ್ಕ ಸೇತುವೆಗಳಿಂದ ರಸ್ತೆ ಸಾರಿಗೆ (ಬಂಡೀ ಹಾದಿಯ) ಬಗ್ಗೆ ಇತ್ತಿದ್ದ ಪ್ರಾಮುಖ್ಯತೆಯನ್ನು ಈ ಶಾಸನದ ಸಾಲುಗಳು ಸ್ಪಷ್ಟಪಡಿಸುತ್ತದೆ.

ಹೀಗೆ ಈ ಮೇಲೆ ತಿಳಿಸಿದಂತೆ ಒಂದು ಕೆರೆಯನ್ನು ನಿರ್ಮಾಣ ಮಾಡುವ ಮೊದಲು ಕೆರೆಗಳ ನಿರ್ಮಾಣಕ್ಕೆ ಸಂಬಂಧಪಟ್ಟಂತಹ ಅನೇಕ ನಿಯಮಗಳನ್ನು ನಮ್ಮ ಪೂರ್ವಿಕರು ಮಾಡಿಕೊಂಡಿರುತ್ತಿದ್ದರು. ಇಂತಹ ಮುನ್ನಚ್ಚರಿಕೆ ಕ್ರಮದಿಂದಾಗಿ ಕೆರೆಯ ನಿರ್ಮಾಣವನ್ನು ಯಾರು ಮಾಢಬೇಕು ಅದಕ್ಕೆ ಸಂಬಂಧಿಸಿದ ಹಣಕಾಸು ಭೂಮಿಯನ್ನು ಹೇಗೆ ಪಡೆಯಬೇಕು, ಅದರ ನೀರನ್ನು ಯಾರಿಗೆ ಎಷ್ಟು ಮಟ್ಟದಲ್ಲಿ ಹಂಚಬೇಕು. ಅಲ್ಲದೆ ಕೆರೆಯ ನಿರ್ಮಾಣ ಮಾಡಿದರೆ ಅಷ್ಟು ಮಾತ್ರ ಸಾಲದು ಅದರ ನಿರ್ವಹಣೆ ಅತ್ಯಂತ

ಪ್ರಮುಖವಾದದ್ದು. ಅದನ್ನು ಯಾರು ನಿರ್ವಹಿಸಬೇಕು ನಿರ್ವಹಿಸುವವರಿಗೆ ಯಾವ ಯಾವ ಸವಲತ್ತುಗಳನ್ನು ಅಥವಾ ಪ್ರತಿಫಲವನ್ನು ನೀಡಬೇಕೆಂಬುದನ್ನು ಮೊದಲೆ ನಿಯಮಗಳು ಷರತ್ತುಗಳನ್ನು ಮಾಡಿರುತ್ತಿದ್ದರು.

ಇಂತಹ ನೀತಿ ನಿಯಮಗಳ ಷರತ್ತುಗಳನ್ನು ಮೊದಲೆ ರೂಪಿಸಿಕೊಳ್ಳುತ್ತಿದುದ್ದರ ಫಲವಾಗಿ ಯಾವುದೇ ರೀತಿಯ ತೊಂದರೆ ಜಗಳ ವೈಮನಸ್ಸಿಗೆ ಎಡೆಮಾಡಿಕೊಡಂತೆ ಪ್ರತಿಯೊಬ್ಬರಿಗೂ ನ್ಯಾಯವನ್ನು ಒದಗಿಸುವಂತಹ ನಿಯಮಗಳನ್ನು ರೂಪಿಸುತ್ತಿದ್ದರು.

ತೊಣ್ಣೂರು ಕೆರೆ ಇದು ಪಾಂಡವಪುರದ ಸಮೀಪ ಇದೆ. ಈ ಕೆರೆ ಶ್ರೀ ವೈಷ್ಣವ ಗುರುಗಳಂದ ಶ್ರೀರಾಮಾನುಜಾಚಾರ್ಯರ ಕಾಲದಲ್ಲಿ 11ನೇ ಶತಮಾನದಲ್ಲಿ ಕಟ್ಟಲಾಗಿದೆ ಎಂಬ ಊಹೆ. ಈ ಕೆರೆಯ ವಿಶಿಷ್ಟ ರಚನೆ ಅದರ ಕೋಡಿ. ಇಲ್ಲಿ ಕೋಡಿ ಮತ್ತು ಕಾಲುವೆಗೆ ತೂಬು ಒಂದೆ ಆಗಿರುತ್ತದೆ. ಕೋಡಿಯಿಂದ ಹೊರಡುವ ಕಾಲುವೆ ಸ್ವಲ್ಪ ದೂರ ಹರಿದನಂತರ 2ಗಿ ಸೀಳುಗುತ್ತದೆ. ಒಂದು ಭಾಗದ ನೀರು ಬಲಭಾಗದ್ಲಿರುವ ನದಿಯ ಕಣಿವೆ ಸೇರುತ್ತದೆ. ಉಳಿದ ಭಾಗ ಮುಂದಕ್ಕೆ ಹೋಗಿ ನೀರಾವರಿ ಪ್ರದೇಶವನ್ನು ಸೇರುತ್ತದೆ. ಈ ಕೊಡಿ ಕಾಲುವೆಯನ್ನು ಬೆಟ್ಟದ ಬಂಡೆಯನ್ನು ಕೊರೆದು ನಿರ್ಮಿಸಿದೆ. ಕೋಡಿ ಕಾಲುವೆ ನೀರು ಹರಿಯುವ ಸಣ್ಣನಕ್ಷೆ ಒಳ್ಳೆಯ ಕಲ್ಲಿನ ಜಾಡು ಇರಬೇಕೆಂದು ತಿಳಿದು ಅದೇ ರೀತಿಯ ಸ್ಥಳವನ್ನು ತಮ್ಮ ಕಟ್ಟಡ ನಿರ್ಮಾಣಕ್ಕೆ ಅಳವಡಿಸಿಕೊಳ್ಳುತ್ತಿದ್ದರು.

ರಾಯರ ಕೆರೆ (ಹಂಪಿಯ ಹೊಸಪೇಟೆ ಸಮೀಪ ಇದೆ). 16ನೇ ಶತಮಾನದಲ್ಲಿ ಕೃಷ್ಣದೇವರಾಯ ಕಟ್ಟಿಸಿದ ವೈಭವದ ಕೆರೆ. ಅಂದಿನ ರಾಜಧಾನಿಯಾದ ಹಂಪೆಯ ಹಲವಾರು ತೋಟಗಳಿಗೆ ನೀರು ಒದಗಿಸುತ್ತಿತ್ತು. ಈ ಕೆರೆಗೆ ತನ್ನದೆ ಆದ ಜಲಾನಯನ ಪ್ರದೇಶದ ಸ್ವಲ್ಪ ಮಾತ್ರ. ಆದ್ದರಿಂದ ಆ ಕೆರೆಗೆ ಅದರ ಸಮೀಪದಲ್ಲೇ ಸುಮಾರು 10 ಮೈಲಿ ದೂರದಲ್ಲಿದ್ದ ಇನ್ನೊಂದು ಕೆರೆಯಿಂದ ನೀರನ್ನು ಹಾಯಿಸಿ. ರಾಯರ ಕೆರೆಯ ಅಶ್ವಾಸಕತೆಯನ್ನು ಪೂರೈಸುವ ವ್ಯವಸಾಯವನ್ನು ಮಾಡಿದರು. ಇದು ಒಂದು ತಾಂತ್ರಿಕ ಕುಶಲತೆಯ ಸಂಕೇತವಾಗಿದೆ.

ಈ ಹಲವು ಕಟ್ಟಡಗಳ ಪರೀಶಿಲನೆಯಿಂದ ನಮಗೆ ತಿಳಿಯುವುದೇನೆಂದರೆ ನಮ್ಮ ಪೂರ್ವಿಕರಿಗೆ ಸಾಕಷ್ಟು ತಾಂತ್ರಿಕ ಜ್ಞಾನ, ಜಲಶಾಸ್ತ್ರದ ವಿಜ್ಞಾನವು ಇತ್ತು. ಆದರೆ ಅವರು ತಮ್ಮ ಜ್ಞಾನ ಬಂಡಾರವನ್ನು ಕ್ರೋಢಿಕರಿಸಿ, ನಮಗೆ ಲಭ್ಯವಾಗುವಂತೆ ಯಾವ ಲಿಖಿತ ಗ್ರಂಥವನ್ನು ಬಿಟ್ಟುಹೋಗಿಲ್ಲ.

ಹರಿಯುವ ನೀರಿಗೆ ತಡೆಯನ್ನೊಡ್ಡಿ ಅದು ನಿಂತು ಮತ್ತೆ ಮುಂದೆ ಸಾಗುವಂತೆ ಮಾಡುವುದೇ ನೀರಾವರಿ ವ್ಯವಸ್ಥೆ. ಹೀಗೆ ನಿಂತ ನೀರನ್ನು ಅಕ್ಕಪಕ್ಕದ ಕಾಲುವೆಗಳ ಮುಖಾಂತರ ಸಾಗಿಸಿ ಭೂಮಿಗಳಿಗೆ ಉಣಿಸಲಾಗುತ್ತದೆ. ತಾಂತ್ರಿಕ ದೃಷ್ಟಿಯಿಂದ 2 ಬಗೆಯ ತಡೆಗಳಿವೆ.

1. ಕೆರೆ (Storage Works)
2. ತಿರುವು (Divertian works)

ಏರಿಗೆ ಉಪಯೋಗಿಸುವ ಮಣ್ಣು ಸೂಕ್ತ ಗುಣ ಮತ್ತು ಕೆರೆ ಏರಿಯ ಒಳ ಮತ್ತು ಹೊರ ಇಳಿಜಾರು ಸೂಕ್ತ ಪ್ರಮಾಣದಲ್ಲಿರಬೇಕು. ಏರಿಯ ಮಣ್ಣು ನೀರು ಕುಡಿದರೆ ಅದರ ಗಟ್ಟಿತನ ಸಡಿಲವಾಗುತ್ತದೆ. ನಂತರ ಏರಿಯು ಒಡೆದು ಹೋಗುತ್ತದೆ.[76]

ನಯಸೇನ ಕವಿಯು ರಚಿಸಿರುವ ಧರ್ಮಾಮೃತ ಕೃತಿಯಲ್ಲಿ ಅನೇಕ ನುಡಿ ಮುತ್ತುಗಳಿವೆ. ಕೆರೆಗೆ ಸಂಬಂಧಿಸಿದಂತೆ "ಅಂತೊಡೆದ ಕಲ್ಲಿ ಕೆರೆಯಿಲ್ಲೆಂಬ" ನಾಣ್ಣುಡಿ ಉಲ್ಲೇಖಿಸಿದ್ದಾರೆ. ಇದರ ಅರ್ಥ ಮೊದಲು ಕೆರೆಯ ಏರಿಗಳು ಬರೀ ಮಣ್ಣಿನಿಂದ ಕೂಡಿದ್ದು ಆಗಾಗ್ಗೆ ಇವು ಹಾನಿಯಾಗುತ್ತಿದ್ದರಿಂದ ಅವುಗಳ ಇಳಿಜಾರಿಗೆ ಕಲ್ಲು ಹೊದಿಕೆ ಹಾಕುವ ಕೆಲಸ ರೂಢಿಯಲ್ಲಿ ಬಂದಿದೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಮಣ್ಣಿನ ಏರಿಗಳಿಗೆ ಕಲ್ಲು ಹೊದಿಕೆ ಹಾಕುವ ವ್ಯಾಪಕ ಪ್ರಕ್ರಿಯೆ ಜಾರಿಯಲ್ಲಿತ್ತು.

ಕೆಳದಿ ಸದಾಶಿವನಾಯಕ ಕ್ರಿ.ಶ 1540-65 ಬಂಕಾಪುರ ಮೊದಣ್ಣ ಒಡೆಯರು ಮೂಲಕ ಮದಗದ ಕೆರೆಯನ್ನು ಪೂರ್ಣ ಮಾಡಿದನೆಂದು ತಿಳಿಯಲಾಗುವುದು ಈ ಕೆರೆ 800 ಅಡಿ ಅಗಲ ಮತ್ತು 100 ಅಡಿ ಎತ್ತರ ಇದೆ. ಕೆರೆಗೆ 2 ತೂಬುಗಳಿದ್ದು ಈ 2 ಕೆರೆಯ

ಬಲಭಾಗದಲ್ಲಿ ಇವೆ. ಮೊದಲನೇ ತೂಬು ಸಮುದ್ರ ಮಟ್ಟದಿಂದ 577.83 ಮೀ ಮತ್ತು 2 ನೇ 600.00 ಮೀ ಎತ್ತರದಲ್ಲಿದೆ ಮೊದಲನೆಯ ತೂಬು 16 ಕಂಬಗಳಿಂದ ಕೂಡಿದ್ದು ಸ್ಥಳಿಯರು ಇದನ್ನು ಕತ್ತರಿ ತೂಬು ಎಂದು ಕರೆಯುತ್ತಾರೆ. ಇದು ಕಸಕಟ್ಟಿ ಇತ್ಯಾದಿಗಳು ತೂಬಿನ ಒಳಹೋಗದಂತೆ ಕತ್ತರಿಸಿ ಹಾಕುತ್ತಿತ್ತೆಂದು ಹೇಳುತ್ತಾರೆ. 2ನೇ ತೂಬಿನಲ್ಲಿ 9 ಕಂಬಗಳಿದ್ದು 4 ಅಗಳಗಳಿವೆ.

ತೂಬಿನ ಪ್ರತಿಯೊಂದು ಕಂಬವು ಒಂದೆ ಶಿಲೆಯ ಟ್ರ್ಯಾಸ್ ಕಲ್ಲು ಆಗಿದ್ದು ಸುಮಾರು 200 ಟನ್ನು ತೂಕ ಇರಬಹುದಾಗಿದ್ದು ಇದನ್ನು ಸ್ಥಳಕ್ಕೆ ತಂದು ಗುರುತ್ವಾಕರ್ಷಣೆ ಮಾತ್ರದಿಂದಲೇ ನಿಲ್ಲಿಸಿರುವುದು ಮಹಾ ಸಾಹಸ ಮತ್ತು ತಾಂತ್ರಿಕ ಕೌಶಲ್ಯ ಹೊಂದಿದವರು ಮಾಡಿದ ಕೆಲಸವಾಗಿದೆ. ಒಂದೆ ಬದಿಯಲ್ಲಿ 2 ತೂಬುಗಳಿದ್ದು, ತೂಬುಗಳ ನಡುವಿನ ಮಟ್ಟವನ್ನು ಗಮನಿಸಬೇಕು. 2ನೇ ತೂಬಿನ ತಳಮಟ್ಟವು ಮೊದಲನೆಯ ತೂಬಿನ ಕೆಳಮಟ್ಟಕ್ಕಿಂತ 20.00ಮೀ ಎತ್ತರದಲ್ಲಿದೆ. ಮದಗದ ಕೆರೆಯಲ್ಲಿ ಹೆಚ್ಚು ನೀರು ಬಂದಾಗ ಮೊದಲನೆ ತೂಬು ಸಂಪೂರ್ಣವಾಗಿ ನೀರಿನಲ್ಲಿ ಮುಳುಗಿ ಹೋಗಿ ಅದರಿಂದ ಬರುವ ನೀರನ್ನು ನಿಯಂತ್ರಿಸಲು ಅಸಾಧ್ಯವಾಗುತ್ತದೆ. ಈಗ 2ನೇ ತೂಬಿನಿಂದ ನೀರನ್ನು ಹಾಯಿಸಿ ಅದರ ಕೆಳಮಟ್ಟ ಬಂದನಂತರವೆ ಮೊದಲನೇ ತೂಬಿನ ಮಾಳಿಗೆ ಕಾಣಬಹುದಾಗಿದ್ದು ಆನಂತರವೂ ನೀರನ್ನು ನಿಯಂತ್ರಿಸಬಹುದು.

| | |
|---|---|
| ಮೊದಲಿನ ತೂಬಿನ ಕೆಳಮಟ್ಟ | 5.77.83 ಮೀ |
| ತೂಬಿನ ಕೆಳದಿಂದ ಮಾಳಿಗೆ | 8,00.00 ಮೀ |
| ಒಟ್ಟು | 585.83 ಮೀ |
| 2ನೇ ತೂಬಿನ ಕೆಳಮಟ್ಟ | 600.00 ಮೀ |

ಇವೆರಡು ಮಟ್ಟಗಳಲ್ಲಿನ ವ್ಯತ್ಯಾಸ ಸುಮಾರು 14,000 ಮೀ ಇದೆ. ಇಷ್ಟು ವ್ಯತ್ಯಾಸವಿರುವ ತೂಬುಗಳ ನೀರು ನಿರ್ವಹಣೆಯ ಸರಿ ತಿಳಿಯದಾಗಿದೆ.

ತೂಬುಗಳ ನಡುವಿನ ಎತ್ತರದ ವ್ಯತ್ಯಾಸವನ್ನು ಹೀಗೆ ವಿವರಿಸಬಹುದಾಗಿದೆ. ಮದಗದ ಕೆರೆಯ ನಿರ್ಮಾಣ 2 ಹಂತಗಳಲ್ಲಿ ಆಗಿರಬೇಕು. ಮೊದಲನೆಯ ಹಂತದಲ್ಲಿ ಕತ್ತರಿ

ತೂಬು ಮತ್ತು ಆ ಮಟ್ಟಕ್ಕೆ ಏರಿ ಇರಬೇಕು. ಕುಮುದ್ಧತಿ ನದಿಯು ಮಲೆನಾಡು ಪ್ರದೇಶದಲ್ಲಿ ಹುಟ್ಟಿದ್ದರೂ ಬಹುಪಾಲು ಅದು ಹರಿಯುವುದು ಅರೆಮಲೆನಾಡು ಪರದೇಶದಲ್ಲಿ ಮೊದಲನೇ ಹಂತದ ಏರಿಯು 20ಮೀ ಇರಬೇಕು (7-8 ಪುರುಷ ಎತ್ತರ).[77]

ಕ್ರಿ.ಶ 1419ರ ಶಾಸನವು ರಾಜ ಗುಂಡ್ಡಹಳ್ಳಿ ಕೆರೆಯನ್ನು ಕಟ್ಟಿದ ವಿಧಾನವನ್ನು ಹೀಗೆ ವಿವರಿಸಿದೆ. ಆ ಕಾಲದಲ್ಲೂ ಕೆರೆಯನ್ನು ಕಟ್ಟಿಸಿ ಕೆರೆಗೆ ಮಣ್ಣಾಸು ಬಹಳವಾಗಿ ಹಾಕಿ ಕಲ್ಲು ಕಟ್ಟೆಯನ್ನು ಕಟ್ಟಿ ಕಲ್ಲು ತೂಬನ್ನು ಹಾಕಿ ಆ ತೂಬಿಗೆ ಇಟ್ಟಿಗೆ ಗಾರೆ ಸುರಿದು ಅದರ ಸಹಾಯದಿಂದ ತೂಬನು ಜತನವಾಗಿ ಮಾಡುತ್ತಿದ್ದರು. ಆ ಕೆರೆಯನ್ನು ಪೂರೈಸಿಕೊಂಡು ಕೆರೆಯ ಕೆಳಗೆ ಅಚ್ಚುಕಟ್ಟಿನ ಗಡಿಯಲ್ಲಿ ನಿರ್ಮಿಸುತ್ತಿದ್ದರು. ಈ ತಂತ್ರಜ್ಞಾನವನ್ನು ಬಳಸಿ ಸುಮಾರು 10-20 ರ ಎಕರೆಗಳ ವ್ಯಾಪ್ತಿಯಲ್ಲಿನ ಕೆರೆಗಳನ್ನು ಸಂಪರ್ಕಿಸಲ್ಪಟ್ಟಿರುತ್ತವೆ. ಉದಾ: ಹೆಚ್ಚೆಯ ಒಂದು ದೊಡ್ಡ ಕೆರೆಗೆ ಸುಮಾರು 20 ಕ್ಕೂ ಹೆಚ್ಚು ಗ್ರಾಮದ ಸುಮಾರು 40 ಕೆರೆಗಳ ನೀರು ಹಳ್ಳದಾಗೆ ಸೇರುತ್ತಿತ್ತು. ಅದೇ ರೀತಿ ಕೆಲವು ಕೆರೆಗೂ ಸುಮಾರು 15 ಕಿ.ಮೀ ವ್ಯಾಪ್ತಿಯಲ್ಲಿನ ಕೆರೆಗಳ ನೀರು ಸೇರುತ್ತಿತ್ತು. ಸುಮಾರು 5 ಕ್ಕಿಂತಲೂ ಹೆಚ್ಚು ಕೆರೆಗಳದ್ದು, ಒಂದು ಕುಡಿಯುವ ನೀರಿಗಾಗಿ, ಜಾನುವಾರುಗಳಗಾಗಿ ಉಳದವನ್ನು ಕೃಷಿಗಾಗಿ ಬಳಸುತ್ತಿದ್ದರು. ಈ ಭಾಗದಲ್ಲಿ ಇನ್ನೂ ಒಂದು ಗಮನಿಸಬೇಕಾದ ತಂತ್ರಜ್ಞಾನವೆಂದರೆ ಮೂಲ ಗಾತ್ರದ ಸುತ್ತ ಕೆರೆಯ ನಿರ್ಮಾಣವಿದ್ದು ಅವುಗಳಗೆ ಸರಪಳ ವ್ಯತ್ಯಾಸ ಕಲ್ಪಿಸಿಲಾಗಿದೆ. ಇದರಿಂದಾಗಿ ಗ್ರಾಮದೊಳಗಿನ ಬಾವಿ ಹಾಗೇ ಭೂಮಿಯ ನೀರು ತೇವಾಂಶದಿಂದ ಸದಾ ಕಾಯ್ದುಕೊಳ್ಳಲು ಸಹಕಾರಿಯಾಗುತ್ತಿತ್ತು ಎಂದು ತಿಳಸಲಾಗಿದೆ.

ನಮ್ಮ ಪೂರ್ವಜರು ಎಲ್ಲೆಲ್ಲಿ ಕೆರೆಯನ್ನು ಕಟ್ಟಲೂ ಸಾಧ್ಯವೋ ಅಲ್ಲೆಲ್ಲಾ ಕೆರೆಗಳನ್ನು ಕಟ್ಟಿಬಿಟ್ಟಿದ್ದಾರೆ. ಹೊಸಕೆರೆಗಳಗೆ ಸ್ಥಳವನ್ನು ಹುಡುಕುವುದು ದುಸ್ತರ, ಒಂದು ವೇಳೆ ಸ್ಥಳ ಇದೆಯೆಂದು ಹೊಸಕೆರೆಯನ್ನು ಕಟ್ಟಲಾರಂಭಿಸಿದರೆ ಅದರಿಂದ, ಈಗಿರುವ ಹಳೆಯ ಕೆರೆಗಳಲ್ಲಿ ನೀರು ಸೇರುವುದಕ್ಕೆ ತಡೆಯುಂಟಾಗಬಹುದೆಂದು ಸ್ಯಾಂಕಿಯ ಅಭಿಪ್ರಾಯ ಪಟ್ಟಿದ್ದಾನೆ.

## ಪರಾಮರ್ಶನಗಳು

1. ಟಿ.ವಿ.ನಾಗರಾಜ – ಕದಂಬರ ನೀರಾವರಿ ಚೌಕಟ್ಟು, *ಇತಿಹಾಸ ದರ್ಶನ,* ಸಂ–25, ಬೆಂಗಳೂರು, 2010, ಪು.ಸಂ.339–341.
2. ಟಿ.ವಿ.ನಾಗರಾಜ – *ಮೈಸೂರು ಸಂಸ್ಥಾನದಲ್ಲಿ ಕೆರೆಯ ನೀರಾವರಿ, (ಕೋಲಾರ ಜಿಲ್ಲೆಯ ಒಂದು ಅಧ್ಯಯನ 1800–1956),* 2008, ಪು.ಸಂ.35–47.
3. ಟಿ.ವಿ.ಕೃಷ್ಣಮೂರ್ತಿ – ರಾಷ್ಟ್ರಕೂಟ ಅಕಾಲ ವರ್ಷ ಮುಮ್ಮಡಿ ಕೃಷ್ಣನ ಕುಣಿಗಲ್‌ಕೆರೆ ಶಾಸನ, *ಇತಿಹಾಸ ದರ್ಶನ,* ಸಂ–19, ಬೆಂಗಳೂರು, 2004, ಪು.ಸಂ.47–50.
4. ಎಚ್.ಎಸ್.ಉಷಾರಾಣಿ – ಹೊಯ್ಸಳರ ಕಾಲದ ಕೆರೆ ನೀರಾವರಿ, ಒಂದು ವಿಶ್ಲೇಷಣೆ, *ಇತಿಹಾಸ ದರ್ಶನ,* ಸಂ–07, ಬೆಂಗಳೂರು, 1992, ಪು.ಸಂ.97–101.

5. ಜಿ.ಎಸ್.ದೀಕ್ಷಿತ್ – ಕೆರೆಗಳ ಬಗ್ಗೆ ಐತಿಹಾಸಿಕ ಸಂಶೋಧನೆ ಅವಶ್ಯಕತೆ, *ಇತಿಹಾಸ ದರ್ಶನ,* ಸಂ–07, ಬೆಂಗಳೂರು 1992, ಪು.ಸಂ.90–96.

6. ಸಿ. ಹಯವದನರಾವ್ – *ಮೈಸೂರು ಗೆಜೆಟಿಯರ್,* ಸಂ–03, ಬೆಂಗಳೂರು, 2012, ಪು.ಸಂ.156–170.

7. ಜಿ.ಎಸ್.ದೀಕ್ಷಿತ್ – ಕೆರೆಗಳ ಚಾರಿತ್ರಿಕ ಅಂಶಗಳು, *ಕೆರೆ ನೀರಾವರಿ ನಿರ್ವಹಣೆ, ಚಾರಿತ್ರಿಕ ಅಧ್ಯಯನ,* ಸಂ–ಡಾ.ರಾಜರಾಮ್ ಹೆಗಡೆ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2002, ಪು.ಸಂ.01–06.

8. ಬಿ.ಎಲ್.ರೈಸ್ – *ಮೈಸೂರು ಗೆಜೆಟಿಯರ್,* ಸಂ–02, ಲಂಡನ್ 1897, ಕೋಲಾರ ಜಿಲ್ಲೆಯ ಅಂಕಿಅಂಶಗಳ ಪಟ್ಟಿ, ಮತ್ತು ಹಯವದನರಾವ್ ಮೈಸೂರು ಗೆಜೆಟಿಯರ್ ಸಂ–05, ಬೆಂಗಳೂರು, 1930, ಕೋಲಾರ ಜಿಲ್ಲೆಯ ಅಂಕಿಅಂಶಗಳ ಪಟ್ಟಿ.

9. ಡಾ.ಬಿ.ರಾಜಶೇಖರಪ್ಪ – ಚಿತ್ರದುರ್ಗ ಪರಿಸರ, ಕೆರೆಗಳು, ನಿರ್ವಹಣೆಯ, ಐತಿಹಾಸಿಕ ಅವಲೋಕನ, ಸಂ–ಡಾ.ರಾಜರಾಮ್‌ಹೆಗಡೆ, *ಕೆರೆ ನೀರಾವರಿ ನಿರ್ವಹಣೆ, ಚಾರಿತ್ರಿಕ ಅಧ್ಯಯನ,* ಕನ್ನಡ ವಿಶ್ವವಿದ್ಯಾನಿಲಯ, 2002, ಪು.ಸಂ.106–128.

   ಬಿ.ಎಸ್.ರಾಮಭಟ್ಟ – ಶಾಂತಿಸಾಗರ ಒಂದು ಅಧ್ಯಯನ, ಸಂ–ಡಾ.ರಾಜರಾಮ್‌ಹೆಗಡೆ, *ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ,* ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2002, ಪು.ಸಂ.106–128.

10. ಎಸ್.ಉಷಾರಾಣಿ – ಪೂರ್ವೋಕ್ತ, 1992, ಪು.ಸಂ.97–101.

11. ಸಿ.ಎಸ್.ವಾಸುದೇವನ್ – ಹಂಪಿ ಪರಿಸರದ ಕೆರೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2001, ಪು.ಸಂ.19–27.

12. ಎಸ್.ಐ.ಐ – IV, ಸಂಖ್ಯೆ. 267.

13. ಎಂ.ಚಿದಾನಂದಮೂರ್ತಿ – *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಮೈಸೂರು, 1968, ಪು.ಸಂ.452.
14. ಅದೇ
15. ಮಾ ಸಕಲೇಶ – ಕೆರೆ ನಿರ್ಮಾತೃಗಳು, *ಕೆರೆ ನೀರಾವರಿ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮ್‌ಹೆಗಡೆ, ಪ್ರಾಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002, ಪು.ಸಂ.129–160.
16. ಸಿ.ಎಸ್.ವಾಸುದೇವನ್ – ಪೂರ್ವೋಕ್ತ, 2001, ಪು.ಸಂ.87.
17. ಅದೇ ಪು.ಸಂ.88.
18. ಸಿ.ಟಿ.ಎಂ. ಕೊಟ್ರಯ್ಯ – *ಇರಿಗೇಶನ್ ಸಿಸ್ಟಮ್ ಅಂಡರ್ ವಿಜಯನಗರ ಎಂಪೈರ್,* ಮೈಸೂರು, 1995, ಪು.ಸಂ.131.
19. ಅದೇ
20. *ಎಂ.ಎ.ಆರ್,* 1919, ಪು.ಸಂ.33.
21. ಸಿ.ಟಿ.ಎಂ ಕೊಟ್ರಯ್ಯ – ಪೂರ್ವೋಕ್ತ, 1995, ಪು.ಸಂ.132.
22. ಅದೇ ಪು.ಸಂ.132.
23. ಅದೇ ಪು.ಸಂ.133.
24. ವಸುಂಧರಾ ಫಿಲಿಯೋಜಾ, – *ದಿ ವಿಜಯನಗರ ಎಂಪೈರ್,* ದೆಹಲಿ, 1998, ಪು.ಸಂ.27.
25. ಸಿ.ಎಸ್.ವಾಸುದೇವನ್ – ಪೂರ್ವೋಕ್ತ, 2002, ಪು.ಸಂ.90.
26. ಸಿ.ಎಸ್.ಪಾಟೀಲ್ – *ಹಂಪಿ ಶಾಸನಗಳು*, ಮೈಸೂರು, 1996, ಪು.ಸಂ.82.
27. *ಇ.ಸಿ.* 06, ನಂಜನಗೂಡು 296.
28. ಜಿ.ಎಸ್.ದೀಕ್ಷೀತ್ ಮತ್ತು ಇತರರು – *ಕರ್ನಾಟಕದಲ್ಲಿ ಕೆರೆ ನೀರಾವರಿ,* ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000, ಪು.ಸಂ.45.
29. ಅದೇ ಪು.ಸಂ.135.

30. ಟಿ.ವಿ.ನಾಗರಾಜ – ಶಿವಮೊಗ್ಗ ಜಿಲ್ಲೆಯ ನೀರಾವರಿ ಒಂದು ಚಾರಿತ್ರಿಕ ಪರಿಶೀಲನೆ, *ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ–ಆರ್.ಗೋಪಾಲ್, ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 2008, ಪು.ಸಂ.223–430.
31. ಜಿ.ಎಸ್.ದೀಕ್ಷಿತ್ – ಪೂರ್ವೋಕ್ತ, 200, ಪು.ಸಂ.44.
32. ಟಿ.ವಿ.ನಾಗರಾಜ – ಮಂಡ್ಯ ಜಿಲ್ಲೆಯ ಪ್ರಾಚೀನ ನೀರಾವರಿ ಒಂದು ಸಮೀಕ್ಷೆ, *ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ–ಆರ್.ಗೋಪಾಲ್, ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 2008, ಪು.ಸಂ.181–196.
33. ಅದೇ
34. *ಇ.ಸಿ.*10, ಹಳೆಯ ಆವೃತ್ತಿ, Cb.41.
35. ಟಿ.ವಿ.ನಾಗರಾಜ – ಪೂರ್ವೋಕ್ತ, 2008, ಪು.ಸಂ.35–47.
36. ಟಿ.ವಿ.ನಾಗರಾಜ – ಲೇಖನ, ಪೂರ್ವೋಕ್ತ, 2008, ಪು.ಸಂ.223–230.
37. *ಇ.ಸಿ.* 10, ಕೆಲ್ಲಂಗೆರೆ, 152.
38. ಡಾ.ಬಿ.ರಾಜಶೇಖರಪ್ಪ – ಪೂರ್ವೋಕ್ತ, 2002, ಪು.ಸಂ.106–128.
39. ಅದೇ
40. ಅದೇ
41. ಅದೇ
42. ARSIE – 1922-23, Pg.NO.695, and SII, *IX*, (ii) No.595.
43. *ಇ.ಸಿ.*10 ಚನ್ನರಾಯಪಟ್ಟಣ, 19.
44. *ಇ.ಸಿ.*10 ಚನ್ನರಾಯಪಟ್ಟಣ, 65.
45. *ಇ.ಸಿ.*03 ಚಾಮರಾಜನಗರ, 92.
46. *ಇ.ಸಿ.*03 ಚಾಮರಾಜನಗರ, 135.
47. ಅದೇ ಸಂ–07, ಗೌಡಗೆರೆ, 21.

48. ಸಿ.ಎಸ್.ಪಾಟೀಲ್ – *ಬಳ್ಳಾರಿ ಜಿಲ್ಲೆ ಶಾಸನಗಳು,* ನಿಟ್ಟೂರು ಶಾಸನ ಸಂಖ್ಯೆ–71.
49. ಅದೇ ನಿಟ್ಟೂರು ಶಾಸನ ಸಂಖ್ಯೆ–214.
50. *ವಿಜಯನಗರ ಪ್ರೋಗ್ರೇಸ್ ಆಫ್ ರಿಸರ್ಚ್* 1984–87, ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಪು.ಸಂ.43.
51. ಅದೇ 1984–87, ಪು.ಸಂ.98.
52. ARSIE – 1889, Pg.NO.250.
53. ARSIE – 1918-19, Pg.No.283, and SII, IX, (ii) No.447.
54. ARSIE – 1903-04, Pg.No.59.
55. *ಇ.ಸಿ.10 ಅರಸೀಕೆರೆ, 38.*
56. *ಇ.ಸಿ.10 ಅರಸೀಕೆರೆ, 214.*
57. *ಇ.ಸಿ.10 ಅರಸೀಕೆರೆ, 224.*
58. ಇ.ಸಿ.10 ಅರಸೀಕೆರೆ, 226.
59. ಇ.ಸಿ.10 ಅರಸೀಕೆರೆ, 280.
60. ಇ.ಸಿ.10 ನೇರಲಗೆ, 285 ಅರಸೀಕೆರೆ.
61. ಇ.ಸಿ.10 ಮೊಸಳೆ, 288 ಅರಸೀಕೆರೆ.
62. ಇ.ಸಿ.10 ಕೋಳಗುಂದ, 299 ಅರಸೀಕೆರೆ.
63. ಉಷಾರಾಣಿ – ಪೂರ್ವೋಕ್ತ, 1992, ಪು.ಸಂ.97–101.
64. ಇ.ಸಿ.03 ನಂಜನಗೂಡು, 147.
65. ಇ.ಸಿ.10 ಅರಸೀಕೆರೆ, 144.
66. ಇ.ಸಿ.08 ಹೊಳೆನರಸೀಪುರ, 133.
67. ಇ.ಸಿ.08 ಹೊಳೆನರಸೀಪುರ, 78.
68. ಇ.ಸಿ.08 ಹೊಳೆನರಸೀಪುರ, 128.
69. ಇ.ಸಿ.07 ಮದ್ದೂರು, 44.

70. *ಇ.ಸಿ.*08 ಮೈಸೂರು, 18.
71. *ಇ.ಸಿ.*05 ಮೈಸೂರು, 42.
72. *ಇ.ಸಿ.*07 ಮಂಡ್ಯ, 84.
73. *ಇ.ಸಿ.*07 ನಾಗಮಂಗಲ, 29.
74. *ಇ.ಸಿ.*ಹಳೆಯ ಆವೃತ್ತಿ, ಸಂ-02, ಸಂ-563.
75. ಸಿ.ಟಿ.ಎಂ.ಕೊಟ್ರಯ್ಯ - ಪೂರ್ವೋಕ್ತ, 1995, ಪು.ಸಂ.67-68.
76. ಜಗದೀಶ್ ಅಗಣಿ ಬಾಗಿಲವಾರ್ – ಮಧ್ಯಕಾಲೀನ ಕೆರೆಗಳ ತಾಂತ್ರಿಕ ಮತ್ತು ಮಿತಿಗಳು, *ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ,* ಸಂ- ರಾಜರಾಮ ಹೆಗಡೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002, ಪು.ಸಂ.11-24.
77. ಅದೇ

**ಅಧ್ಯಾಯ–ಏಳು**

# ಕೆರೆಗಳ ನಿರ್ವಹಣೆ ನಿಯಮಗಳು ಮತ್ತು ಷರತ್ತುಗಳು

(ಹೂಳೆತ್ತುವುದು ನಾಲೆಗಳ –ತೂಬುಗಳ ಮೇಲ್ವಿಚಾರಣೆ ಮೇಲ್ವಿಚಾರಕ ವರ್ಗ ದುರಸ್ತಿಕಾರ್ಯ, ಸಂಭಾವನೀಯ ಹಾನಿ, ಪಾಪ ಹಾಗೂ ಇತ್ಯಾದಿ.)

**ಪೀಠಿಕೆ :**

ಕರ್ನಾಟಕದ ಪ್ರತಿಯೊಂದು ಶಾಸನಗಳಲ್ಲಿಯೂ ಯಾವುದೇ ದಾನದತ್ತಿ ದೇವಾಲಯದ ನಿರ್ಮಾಣ ಕೆರೆಯ ನಿರ್ಮಾಣ ಅಥವಾ ಇನ್ನಾವುದೇ ರೀತಿಯ ಧಾನ ಧರ್ಮಗಳನ್ನು ನೀಡಿದಾಗ ಅವು ಸೂರ್ಯ ಚಂದ್ರರು ಇರುವವರೆಗೂ ನಡೆಯಬೇಕೆಂಬುದು ಧಾನಕೊಟ್ಟವರ ಆಶಯವಾಗಿತ್ತು.

ಏಕೆಂದರೆ ಸಾಮಾನ್ಯವಾಗಿ ದಾನಗಳನ್ನು ದಾನಕೊಟ್ಟವರು ಮತ್ತು ಅವರ ಮನೆತನದವರು, ಸ್ವರ್ಗದಲ್ಲಿ ವಾಸಿಸುತ್ತಾರೆ ಎಂಬ ನಂಬಿಕೆಗಳು ಪ್ರಮುಖವಾಗಿವೆ. ಸಾಮಾನ್ಯವಾಗಿ ದಾನ ಮಾಡಬಾರದು ಎಂಬ ಮನಸ್ಸು ಇರುವವರು ವಿರಳ. ಅಲ್ಲದೆ ದಾನ ಮಾಡದೇ ಇರುವುದು ವಿರಳ. ದಾನ ಮಾಡುವುದು ಕಷ್ಟದಲ್ಲಿರುವವರಿಗೆ ಅತ್ಯಲ್ಪ ವಸ್ತು ಅಥವಾ ಹಣವನ್ನು ಬೇರೆಯವರಿಗೆ ಸಂತೋಷದಿಂದ ಕೊಡುವುದು ಪವಿತ್ರವಾದ ದಾನವಾಗುತ್ತದೆ. ಮಹಾಭಾರತದ ಶಾಂತಿ ಪರ್ವದಲ್ಲಿಯು ಸಹ ದಾನ ಧರ್ಮಗಳ ಬಗ್ಗೆ ವಿಶೇಷ ವಾದ ಉಲ್ಲೇಖವನ್ನು ಕಾಣಬಹುದಾಗಿದೆ. ಭಾರತದಲ್ಲಿ ದಾನ ಧರ್ಮಗಳಿಗೆ ಅಪಾರವಾದ ಮಹತ್ವವನ್ನು ನೀಡಲಾಗಿದೆ. ಆದರೆ ದಾನಕ್ಕಿಂತಲೂ ಹೆಚ್ಚಿನದಾದದ್ದು ದಾನವನ್ನು ಕಾಯ್ದುಕೊಂಡು ಹೋಗುವುದು ಮತ್ತು ಅರ್ಹರಿಗೆ ಅದರ ಫಲವನ್ನು ಅನುಭವಿಸಲು ನೆರವಾಗುವುದು. ಆದ್ದರಿಂದಲೇ ಶಾಸನಗಳಲ್ಲಿ ದಾನ ಪಾಲನೆಯೂ ಮಧ್ಯಮಂ ಶ್ರೆಯೋನೋಪಾಲನಂ, ದಾನತ ಸ್ವರ್ಗವರ ಅನಾಪನೋ ವಾಲನಾತ್ ಅಚ್ಯುತಂ ಪದಂ ಎಂದು ಹೇಳಲಾಗಿದೆ. ಅಂದರೆ ದಾನ ಮತ್ತು ಪಾಲನೆಗಳಲ್ಲಿ ಯಾವುದು

ಶ್ರೇಷ್ಠ ಎಂದರೆ ಪಾಲಿಸುವುದೇ ಶ್ರೇಷ್ಠವಾದುದ್ದು. ಏಕೆಂದರೆ ದಾನದಿಂದ ನಮಗೆ ಸ್ವರ್ಗ ಸಿಗುತ್ತದೆ. ಆದರೆ ಪಾಲನೆ ಮಾಡುವುದರಿಂದ, ಶಾಶ್ವತವಾದ, ಆನಂದವುಳ್ಳ ಅಚ್ಯುತ ಪದ ಅಥವಾ ಮೋಕ್ಷವು ಉಂಟಾಗುತ್ತದೆ ಎಂದು ಹೇಳಲಾಗಿದೆ.

**ಫಲಾನುಭವಿಗಳು:**

ಬಹಳಷ್ಟು ದೇವಾಲಯಗಳೂ ಭೂಮಿಯ ಒಡೆತನ ಹೊಂದಿದ್ದು ಕೆರೆಗಳ ಪ್ರಧಾನ ಫಲಾನುಭವಿಗಳಾಗಿದ್ದವು ಉದಾಹರಣೆಗೆ ಹರಿಹರ ಶಾಸನವು ತಿಳಿಸುವಂತೆ ಹರಿಹರ ಕ್ಷೇತ್ರದ ಮಹಾಜನರಿಗೂ ಹರಿಹರ ದೇವಾಲಯಕ್ಕೂ ಒಪ್ಪಂದವೊಂದಾಗಿತ್ತು.[1] ಅದರಂತೆ ಹರಿದ್ರಾ ನದಿಗೆ ನಿರ್ಮಿಸಿದ್ದ ಜಲಾಶಯದಿಂದ ವಾರ್ಷಿಕ ದುರಸ್ಥಿಗೆ, ತಗುಲಿದ ವೆಚ್ಚ $^{2}/_{3}$ ಭಾಗ ದೇವಾಲಯ, $^{1}/_{3}$ ರಷ್ಟು ಮಹಾಜನರು ಹಂಚಿಕೊಳ್ಳಲು ಒಪ್ಪಿಕೊಳ್ಳಯಿತು ಎಂದು ತಿಳಿದಿದೆ.[2]

ಯಾವುದೇ ಒಂದು ಕಾರ್ಯದ ನಿರ್ಮಾಣದಲ್ಲಿ ಅದಕ್ಕೆ ಅದರದ್ದೆ ಆದಂತಹ ಫಲಾನುಭವಿಗಳು ಇರಲೇಬೇಕು. ಏಕೆಂದರೆ ಫಲಾನುಭವಿಗಳು ಇಲ್ಲದಿದ್ದರೆ ದಾನ ಕಾರ್ಯಗಳು ಕೈಗೊಳ್ಳುವುದರಲ್ಲಿ ಅರ್ಥವೇ ಇಲ್ಲ. ಹಾಗೆಯೇ ಕೆರೆಯ ನಿರ್ಮಾಣದಲ್ಲೂ ಅದನ್ನು ನಿರ್ಮಾಣ ಮಾಡುವುದಕ್ಕೂ ಮೊದಲೇ ಅದರ ಫಲಾನುಭವಿಗಳು ಯಾರು, ಯಾರು ಯಾರಿಗೆ ನೀರಿನ ಹಂಚಿಕೆಯಾಗಬೇಕು ಎಷ್ಟು ಪ್ರಮಾಣದಲ್ಲಿ ಅದನ್ನು ಬಳಸಬೇಕು ಎಂಬುದನ್ನು ಮೊದಲೆ ನಿರ್ಧರಿಸಲಾಗಿದೆ.

ಈ ರೀತಿಯ ನಿಯಮಗಳನ್ನು ರೂಪಿಸಿದೆ ಇಲ್ಲದಿದ್ದರೆ ಕೆರೆಯ ನಿರ್ಮಾಣದ ನಂತರ ಅನೇಕ ಸಮಸ್ಯೆಗಳಗೆ ಕಾರಣವಾಗುತ್ತಿತ್ತು.

ಕೆರೆ ನೀರಿನ ಫಲಾನುಭವಿಗಳೆಂದರೆ ಪ್ರಮುಖವಾಗಿ ಅಲ್ಲಿ ವಾಸಿಸುವ ಗ್ರಾಮಸ್ಥರು ಪ್ರಮುಖವಾದವರು. ಇವನ ನಂತರದಲ್ಲಿ ಜಾನವಾರುಗಳು ಕೂಡ ಇದರ ಫಲಾನುಭವಿಗಳು. ಫಲಾನುಭವಿಗಳನ್ನು ಈ ಕೆಳಕಂಡಂತೆ ವಿಂಗಡಿಸಲಾಗಿದೆ.

## 1. ಮೊದಲನೆ ಫಲಾನುಭವಿಗಳು :

ಮೊದಲನೇ ಫಲಾನುಭವಿಗಳು ಯಾರು ಎಂದರೆ ಗ್ರಾಮಸ್ಥರು ಅಂದರೆ ಕೆರೆಯ ಯಾವ ಪ್ರದೇಶಕ್ಕೆ ಗ್ರಾಮಕ್ಕೆ ಸೇರಿದೆಯೋ ಆ ಗ್ರಾಮಕ್ಕೆ ಮೊದಲ ಆದ್ಯತೆಯನ್ನು ನೀಡಬೇಕು ಎಂಬುದಾಗಿರುತ್ತದೆ. ಇವರಿಂದ ನಮಗೆ ಅನೇಕ ರೀತಿಯ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಉಪಯೋಗವನ್ನು ಕಾಣಬಹುದಾಗಿದೆ.

## ಹೂಳೆತ್ತುವುದು ನಿರ್ವಹಣೆ

ನೀರಾವರಿ ಕಾಮಗಾರಿಗಳ ನಿರ್ಮಾಣಕ್ಕಿಂತ ಅವುಗಳ ನಿರ್ವಹಣೆ ಅಥವಾ ಪಾಲನೆ ಮತ್ತು ದುರಸ್ಥಿ ಮಹತ್ವದ ವಿಚಾರವಾಗಿದೆ. ಯಾವುದೇ ನೀರಾವರಿ ಕಾಮಗಾರಿಗಳು ದೀರ್ಘಕಾಲ ಸುಸ್ಥಿರವಾಗಿರುವುದಿಲ್ಲ. ಕೆರೆಗಳು ಕೂಡ ಇದಕ್ಕೆ ಹೊರತಲ್ಲ. ಸೂಕ್ತವೂ ಸಮಕಾಲಿನವೂ ಆದ ನಿರ್ವಹಣೆ ಹಾಗೂ ದುರಸ್ಥಿಯಿಂದ ಕಾಮಗಾರಿಯ ಉಪಯುಕ್ತತೆಯ ಅವಧಿಯನ್ನು ಹೆಚ್ಚಿಸಲು ಸಾಧ್ಯವಾಗುತ್ತಿದೆ. ಅಂತಹ ಪ್ರಯತ್ನಗಳ ಅಭಾವದ ಪರಿಣಾಮವಾಗಿ ಕೆರೆಯು ಹೂಳಿನಿಂದ ತುಂಬುತ್ತದೆ. ಏರಿ ಅಥವಾ ದಂಡೆಯು ದುರ್ಬಲಗೊಳ್ಳುತ್ತದೆ. ಅಥವಾ ತೂಬುಗಳು ಒಡೆದು ನೀರು ಸೋರಿ ಹೋಗುತ್ತದೆ. ಕಾಲುವೆಯನ್ನು ನಿರ್ಲಕ್ಷಿಸಿದರೂ ಇದೇ ರೀತಿ ಒಡೆದು ನೀರು ಸೋರಿ ಹೋಗುತ್ತಿದೆ. ನಮ್ಮ ಪೂರ್ವಜರು ಇದನ್ನರಿತು ನಿರ್ಮಾಣಕ್ಕಿಂತ ನಿರ್ವಹಣೆಗೆ ಹೆಚ್ಚು ಆದ್ಯತೆಯನ್ನು ನೀಡಿದ್ದರು. ಇದೇ ವಿಚಾರವನ್ನು ಬೆಂಬಲಿಸುವ ಉಲ್ಲೇಖಗಳನ್ನು ಶಾಸನಗಳಲ್ಲೂ ನೋಡಬಹುದಾಗಿದೆ ಉದಾ : ಕ್ರಿ.ಶ.1413ರ ಶಿವಮೊಗ್ಗದ ಶಾಸನವೊಂದರಲ್ಲಿ ನಶಿಸುತ್ತಿರುವ ಕುಟುಂಬವೊಂದು ಬಿರುಕುಗೊಂಡ ಕೆರೆಯೊಂದನ್ನು ಪತನಗೊಳ್ಳುತ್ತಿರುವ ರಾಜ್ಯವನ್ನು ಶಿಥಿಲಗೊಂಡ ದೇವಾಲಯಗಳನ್ನು ಯಾರು ಜೀರ್ಣೋದ್ದಾರ ಮಾಡುತ್ತಾರೋ ಅವರಿಗೆ ಅವುಗಳ ನಿರ್ಮಾಣದಿಂದ ಲಭಿಸಿದ ಪುಣ್ಯಕ್ಕಿಂತ 4 ಪಟ್ಟು ಪುಣ್ಯ ಲಭಿಸುವುದು ಎಂದು ಆ ಶಾಸನದಲ್ಲಿ ತಿಳಿಸಲಾಗಿದೆ.[3]

**ಕೆರೆಗಳ ನಿರ್ವಹಣೆ ಕಾರ್ಯವು ಸಾಮಾನ್ಯವಾಗಿ ಹೀಗಿರುತ್ತವೆ.**

- ❖ ಕೆರೆ ಮತ್ತು ಕಾಲುವೆಗಳಲ್ಲಿರುವ ಹೂಳನ್ನು ಕಾಲಕಾಲಕ್ಕೆ ತೆಗೆಸುವುದು.
- ❖ ಕೆರೆಗಳ ಏರಿ ಅಥವಾ ದಂಡೆಯನ್ನು ಮಳೆ ಅಥವಾ ಇನ್ನಿತರ ಕಾರಣಗಳಿಂದ ಹಾನಿಗೊಂಡಿದ್ದನ್ನು ಸರಿಪಡಿಸುವುದು.
- ❖ ತೂಬು ಮತ್ತು ಕೋಡಿ ಹಾನಿಕೊಂಡರೆ ಕಾಲಕಾಲಕ್ಕೆ ದುರಸ್ಥಿ ಮಾಡುವುದು.
- ❖ ಕೆರೆಯಂಗಳವನ್ನು ಒತ್ತುವರಿಯಾಗದಂತೆ ರಕ್ಷಿಸುವುದು.
- ❖ ಕೆರೆಯಂಗಳಕ್ಕೆ ಹೂಳು ಬರದಂತೆ ತಡೆಯುವುದು.
- ❖ ಕೆರೆಗಳ ಗಾತ್ರ ಅವಶ್ಯವಿದ್ದಲ್ಲಿ ವಿಸ್ತರಿಸುವುದು ಹಾಗೂ ಮೆಟ್ಟಿಲುಗಳನ್ನು ನಿರ್ಮಿಸುವುದು.
- ❖ ನೀರಿನ ಬಳಕೆ ಕುರಿತ ವಿವಾದ ಬಗೆಹರಿಸುವುದು.[4]

ಕೆರೆ ನಿರ್ಮಾಣದಲ್ಲಿ ಪ್ರಾಕೃತಿವಾಗಿದ್ದು ಗುಡ್ಡಗಳ ನಡುವಿನ ಕಣಿವೆಗಳನ್ನು ಬಳಸಿದ್ದಾರೆ ನಿದರ್ಶನ ಚಂದ್ರವಳ್ಳಿ (ಚಿತ್ರದುರ್ಗ) ಹುಲಿಗೊಂಡ ಕಣಿವೆಯಲ್ಲಿ ನೋಡಬಹುದು. ಅಷ್ಟೆ ಅಲ್ಲದೆ ಅದು ಹಾಳಾದಾಗ ಅದರ ದುರಸ್ಥಿಕಾರ್ಯವನ್ನು ಮಾಡಿದ್ದಾರೆ ಎಂಬುದು ಇದಕ್ಕೆ ಉದಾಹರಣೆ ಇದಾಗಿದೆ. ಅದನ್ನು ಇನ್ನೂ ಚೆಂದಗೊಳಿಸಿದ್ದಾರೆ ಎಂಬ ನಿದರ್ಶನವೂ ಇದಾಗಿದೆ. ಅದರ ಬಳಿ ಪ್ರವಾಸಿ ನೆಲೆ ನಿರ್ಮಿಸಿದ್ದು ಸ್ವಾರಸ್ಯಕರವಾಗಿದೆ. ಹೀಗೆ 2 ಗುಡ್ಡಗಳ ನಡುವೆ ನಿರ್ಮಿತವಾಗಿದ್ದು ಆ ಕೆರೆಯು ಇಂದಿಗೂ ಇದೆ.

ಕದುಬಾಣಂ ಮಯೂರವರ್ಮಣಾ

ತಟಾಕಂ ದೃಢೀಕೃತಂ ಅಭಿರೂಸ್ ರಚಯಿತ್ತಾ

ವಾನವಾಸಕಂ ಸ್ಥಾಪಯತ್ಯ.....

ಎಂದು ಪ್ರಾಕೃತ ಮಿಶ್ರ ಸಂಸ್ಕೃತದಲ್ಲಿ ಒಂದು ಸಾರ್ವಜನಿಕ ದಾಖಲೆಯೊಂದಿಗೆ ಅನೇಕ ಶತಮಾನದಲ್ಲಿ ಕೆರೆ ನಿರ್ಮಾಣ, ನಿರ್ವಹಣೆ (ದುರಸ್ತಿ) ಸೌಂದರ್ಯೀಕರಣವನ್ನು ಕನ್ನಡ ದೇಶಿ, ಸ್ವತಂತ್ರ ರಾಜಮನೆತನಗಳು ಮಾಡಿದ್ದು ತುಂಬ ಸ್ವಾರಸ್ಯಕರವಾಗಿದೆ.[5]

- ತೀರ್ಥಹಳ್ಳಿಯ ಶಾಸನವೊಂದರಲ್ಲಿ ಕೆರೆಯಲ್ಲಿ ಹೂಳು ತುಂಬಿದ್ದು ನೀರು ಹರಿಯದೇ ಅಪವ್ಯಯವಾಗುತ್ತಿದಲ್ಲಿ ಆ ಆಯಕಟ್ಟಿಗೆ ಸೇರಿದ ಜಮೀನಿನ ತೆರಿಗೆಯಿಂದ ವಿನಾಯಿತಿ ನೀಡಲಾಗುತ್ತಿತ್ತು ಎಂದು ಭಾವಿಸಲಾಗಿದೆ.[6]
- ಕೆರೆಯ ನಿರ್ವಹಣೆ ಹಾಗೂ ಅವುಗಳ ನಿರ್ವಹಣೆಗೆ ಭವಿಷ್ಯದಲ್ಲಿ ಹಲವಾರು ವ್ಯವಸ್ಥೆ ಜಾರಿಗೆ ಬಂದಿತು. ಶಾಸನಗಳು ಇಂತಹ ವ್ಯವಸ್ಥೆಯನ್ನು ದಾಖಲಿಸಿದೆ. ಕ್ರಿ.ಶ 1139ರ ಓಟೂರು ಶಾಸನದಲ್ಲಿ "ರಾಜಗಾವುಂಡರು ಸಮಸ್ತ ಪ್ರಜೆಗಳಲ್ಲಿ "ಚಿತ್ರವನ್ನು" ಕೆರೆಗೆ ಬಿಟ್ಟ ಉಲ್ಲೇಖವಿದೆ.[7]
- ಕ್ರಿ.ಶ. 1526ರ ಶಾಸನವೊಂದು ವಿಜಯನಗರಕಾಲಕ್ಕೆ ಸೇರಿದ್ದು ಕೆರೆಯ ಹೂಳು ತೆಗೆಯುವಂತೆ ನಂಜಪ್ಪ ಒಡೆಯರು ಅಲ್ಲಿನ ಗೌಡ ಪ್ರಜೆಗಳಿಗೂ ಶ್ಯಾನಾಭೋಗರಿಗೂ ಕಟ್ಟು ಮಾಡಿ ಮೂವರು ಹೆಯ್ಯುವ ಸಾವಿರ ಸೇತುವೆ ಸ್ಥಳವನ್ನು ಇಂತಹ ಕಾರ್ಯಕ್ಕೆ ಬಿಟ್ಟ ದಾಖಲಾತಿ ಗಮನಾರ್ಹ. [8]

ಜಲಾಶಯವನ್ನು ಸಂಗ್ರಹಣದ ನೀರಿನ ಕಾಲುವೆಗಳ ಜಾಲದ ಮೂಲಕ ಜಮೀನನ್ನು ತಲುಪುತ್ತದೆ. ಕೆರೆಯಿಂದ ನೀರನ್ನು ಒಂದು ಕಾಲುವೆಯ ಮೂಲಕ ಇನ್ನೊಂದು ಕಾಲುವೆಗೆ ಹೋಗಲು ಒಡ್ಡಲಾಗುವುದು. ಹಿಂದೆ ಒಂದು ಮರದ ಬಿರುಡೆಯ ಜಾಗದಲ್ಲಿ ಇಂದು ಉಕ್ಕಿನ ಬಾಗಿಲು ರೂಢಿಗೆ ಬಂದಿದೆ. ತೂಬು ಇರುವುದು ಏರಿಯ ಮೇಲು ಪಾರ್ಶ್ವದಲ್ಲಿ ಅದಕ್ಕೆ ಹೋಗಲು ಒಂದು ನೀರಿನಲ್ಲಿ ಈಸೀಕೊಂಡು ತೂಬಿಗೂ ಹೋಗುತ್ತಿದ್ದರು. ತೂಬಿಗೆ ಹಾಗೂ ಏರಿಯಗಳ ಪಾರ್ಶ್ವಾದಲ್ಲಿ ಇರುವ ಕಾಲುವೆಗೂ ನಡುವೆ ಏರಿಯ ಮುಖಾಂತರ ರಚಿಸಲಾದ ಒಂದು ಸುರಂಗ ಸಂಪರ್ಕ ಇರುತ್ತದೆ. ಹಳೆಯ ಕಟ್ಟಡಗಳಲ್ಲಿ ಸುರಂಗದ ಕಲ್ಲು ಕಟ್ಟಡದ್ದಾಗಿರುತ್ತದೆ.[9]

ತೂಬುಗಳನ್ನು ಚಲಾಯಿಸುವುದು ಸುಲಭವಾಗಿರಲಿಲ್ಲ. ಕೆಲವು ಸಲ ಪ್ರಾಣಾಪಾಯವೂ ಆಗಿರುತ್ತಿತ್ತು. ಅಲ್ಲಿಗೌಂಡ ಎಂಬುವನು ತೂಬಿ ಕೊರತೆಯನ್ನು ಜೋಡಿಸುವ ಯತ್ನದಲ್ಲಿ ಕೆರೆಗೆ ಬಿದ್ದು ಸತ್ತು ಹೋದ. ಆನಂತರ ಯೋಜನೆಯಲ್ಲಿ ಕಲ್ಲು

ಕೆಲಸಗಾರರನ್ನು ತರಿ–ಖುಷ್ಕಿ ಜಮೀನನ್ನು ಮನೆಯನ್ನು ದಾನ ಕೊಡುವುದಾಗಿ ಷರತ್ತಿನ ಮೇಲೆ ಆ ಕೆಲಸಕ್ಕೆ ಮತ್ತೊಬ್ಬನ್ನನ್ನು ನೇಮಿಸಲಾಯಿತು. ತೂಬಿಗೆ ಏನಾದರೂ ಜಖಂ ಆದರೆ ಆತ ಅದನ್ನು ಸರಿಪಡಿಸಬೇಕಿತ್ತು. ಆಗಿನಿಂದ ತೂಬು ಸುಸ್ಥಿತಿಯಲ್ಲಿ ಇಟ್ಟಿರುವುದು ಅದನ್ನು ನಡೆಸುವುದು ಅವನ ಹೊಣೆಯೇ ಆಯಿತು[10].

## ಹೂಳೂ ತೆಗೆಯುುವುದು

ಮಳೆಗಾಲದ ಪ್ರವಾಹ ಬಾರಿ ಪ್ರಮಾಣದ ಹೂಳನ್ನು ಹೊತ್ತು ತರುತ್ತದೆ. ಇದು ನೀರಿನೊಂದಿಗೆ ತೂಬಿನ ಮೂಲಕ ಕಾಲುವೆಗಳಗೆ ಸಾಗಿಹೋಗುತ್ತದೆ. ಪ್ರವಾಹದ ಬಿರುಸು ಇಳದಂತೆ ಹೂಳು ನೀರಿನಿಂದ ಬೇರ್ಪಟ್ಟು ಕಾಲುವೆಯ ಅಡಿಯಲ್ಲಿ ಪದರುಗಟ್ಟುತ್ತದೆ. ಮುಂದಿನ ಮಳೆಗಾಲ ಮೊದಲಾಗುವುದಕ್ಕೂ ಮುಂಚೆಯೇ ಇದನ್ನು ತೆಗೆದು ಹಾಕಬೇಕು. ನೆರೆಯ ಹೊತ್ತಿನಲ್ಲಿ ನೀರು ಈ ತೊಂದರೆ ಉಂಟುಮಾಡುತ್ತಿತ್ತು. ಬೇಸಾಯ ಮುಗಿದ ನಂತರ ಕೆರೆಯ ಹೂಳು ಮಣ್ಣನ್ನು ಗೊಬ್ಬರವಾಗಿ ಫಲವತ್ತತೆಯ ಸಾಧನವಾಗಿ ಮಾಡಿಕೊಳ್ಳಲಾಗುತ್ತಿತ್ತು. ಮಳೆಗಾಲ ಮುಗಿದ ಬಳಕ ನೀರು ತಿಳದು, ಅದು ಮಳೆಗಾಲದಲ್ಲಿ ತಂದ ಮಣ್ಣು, ಕೆರೆಯ ಅಂಗಳದಲ್ಲಿ ಶೇಖರವಾಗುತ್ತಿತ್ತು. ಮಳೆಗಾಲದ ನಂತರ ತೂಬಿನಲ್ಲಿ ನಿರಂತರವಾಗಿ ಹರಿವು ಇರುತ್ತಿದ್ದರಿಂದ ಸುರಂಗದ ಮಣ್ಣು ನೀರು ಕಾಲುವೆಯಲ್ಲಿ ನುಗ್ಗಿ ಬಂದು ಕೊಚ್ಚಿಕೊಂಡು ಹೋಗುತ್ತಿತ್ತು.

ಕೆರೆಯ ಅಂಗಳದಲ್ಲಿ ಹೂಳನ್ನು ರೈತರು, ಅಗೆದು ಗಾಡಿಗಳಲ್ಲಿ ತೋಟ, ಗದ್ದೆ, ಹೊಲಗಳಗೆ, ಸಾಗಿಸಿ ತೆರವು ಮಾಡುತ್ತಿದ್ದರೂ, ಇದಕ್ಕೆ ಆರಿಸಿಕೊಳ್ಳುತ್ತಿದ್ದ ಕಾಲ ಮಳೆ ಆರಂಭವಾಯಿತೋ ಇಲ್ಲವೋ ರೈತರು ಕೆರೆಯಲ್ಲಿ ತೂಬಿನ ತಲೆಯ ಬಳ ಸಾಲುಗಟ್ಟಿ ನಿಲ್ಲುತ್ತಿದ್ದರು. (ಮಳೆಗಾಲ ಆರಂಭವಾದ್ದರಿಂದ ನೀರಿನ ಮಟ್ಟ ಕಡಿಮೆಯಾಗಿ) ಕೆರೆಯಲ್ಲಿ ನೀರು ಜಗ್ಗಡವಾಗುವವರೆಗೂ ಜಾಲಾಡುತ್ತಿದ್ದರು. ನೀರಿನ ಜೊತೆಗೆ ಹೂಳು ಆ ಜಗ್ಗಡದಲ್ಲಿ ತೂಬಿನ ಮೂಲಕ ಹೋಗುತ್ತಿತ್ತು. ಇದು ಭಾಗಶಃ ಪರಿಹಾರವಷ್ಟು ಆದಾಗಿ ತೂಬಿನಲ್ಲಿ ಹೂಳು ಇರದಂತೆ ಸಹಾಯಕವಾಗಿತ್ತು.

ಕೆರೆಗೆ ಬರುವ ನೀರು ತರುವ ಭಾರಿ ಪ್ರಮಾಣದ ಹೂಳನ್ನು ನೀರ್ಗಾಲುವೆಗೆ ಅಡ್ಡಲಾಗಿ ಅಣೆಕಟ್ಟೆಯಂತಹ ಒಂದು ಒರಟುಗಲ್ಲಿನ ಕಟ್ಟೆ ಕಟ್ಟುವುದು ಇದರ ಪರಿಣಾಮವಾಗಿ ನೀರಿನ ವೇಗ ತಗ್ಗುತ್ತಿತ್ತು. ಹೂಳು ಅಲ್ಲಲ್ಲಿ ನಿಲ್ಲುತ್ತಿತ್ತು. ಈ ಅಪೇಕ್ಷಣಿಯ ಪರಿಣಾಮವನ್ನು ಮುಂದುವರಿಸಬೇಕಾದಲ್ಲಿ ಕಟ್ಟೆಯನ್ನು ಒಳ್ಳೆ ದುರಸ್ತಿ ಸ್ಥಿತಿಯಲ್ಲಿ ಇಟ್ಟಿರುವುದು ಅಗತ್ಯವಾಗಿತ್ತು. ಹೂಳನ್ನು ದೂರವಿರಿಸುವ ಈ ಉಪಾಯಗಳನ್ನೆಲ್ಲಾ ಅಸಡ್ಡೆ ಮಾಡಲಾಗಿ ಕೆರೆ ಅಂಗಳದಲ್ಲಿ  ಹೂಳಗೆ ನೆಲೆಗಳಾದವು.

"ನಮ್ಮ ಹಿರಿಯರ ವಿವೇಕ ನಾಡಿಗೆ ಅತ್ಯಂತ ಉಪಯುಕ್ತವೂ ಯೋಗ್ಯವು ಆದ ಕೆಲವು ಕೆರೆಗಳು ಬೃಹದಾಕಾರವಾದವು. ಆದರೂ ಅವುಗಳು ದಕ್ಷತೆ ಬಾಳಿಕೆ ಎರಡು ಅಗತ್ಯಗಳನ್ನು ಜೊತೆಗೂಡಿಸಿಕೊಂಡು ಇಂದಿಗೂ ಸಾಗಿಬಂದಿರುವುದು ನಿರ್ವಹಣೆ ಎನ್ನಬಹುದು.

ಶ್ರೀ ಕೃಷ್ಣದೇವರಾಯನ ಕಾಲದ ಉಂಬಳಿಯಾಗಿ ನೀಡುವಾಗ ಒಂದು ಕರಾರನ್ನು ವಿಧಿಸಲಾಗಿದೆ. ಅದರಂತೆ ಸ್ಥಳೀಯ ತೆರಿಗೆಯಿಂದ ಪ್ರತಿವರ್ಷವೂ ಹೂಳು ತೆಗೆಯಬೇಕು. ಈ ಮುಖ್ಯ ಕಾರ್ಯದ ಹೊಣೆ ಗೌಡ – ಶ್ಯಾನುಭೋಗ ಮತ್ತು ಗ್ರಾಮಸ್ಥರದಾಗಿತ್ತು. ಎಂಬ ನಿರ್ವಹಣೆಯ ಜವಾಬ್ದಾರಿಯನ್ನು ಸ್ಥಳೀಯ ಸಮುದಾಯಗಳಿಗೆ ಹೊಣೆ ಹಾಕಿರುವುದು ಮಹತ್ವವೆನಿಸುತ್ತದೆ.[11]

ಶಿಕಾರಿಪುರ ತಾಲ್ಲೂಕಿನ ಬಂದಳಿಕೆಯ ಕ್ರಿ.ಶ 1510 ಶಾಸನದಲ್ಲಿ ನಂಜಪ್ಪ ಒಡೆಯರ್...ರವರ ಆದೇಶದಂತೆ ನಾಯಕನು ಪ್ರತಿವರ್ಷ ಕೆರೆಯ ಹೂಳು ತೆಗೊಂದುದಕ್ಕು...... ಪುಣ್ಯಬರಲಿ ಎಂದು ಹಾರೈಸಿದ್ದು 1000 ಅಡಿಕೆ ಮರಗಳ ತೋಟವನ್ನು ದಾನವಾಗಿ ನೀಡಿರುವುದನ್ನು ಉಲ್ಲೇಖಿಸಲಾಗಿದೆ.[12] ಇದೇ ರೀತಿ ಸೊರಬ ತಾಲ್ಲೂಕಿನ ಬಂದಳಿಕೆ ನಾಗರ ಕೆರೆಯಲ್ಲಿರುವ ಕ್ರಿ.ಶ. 1071ರ ಶಾಸನವೊಂದು ಕಾಲಕಾಲಕ್ಕೆ ಕೆರೆಯ ಹೂಳು ತೆಗೆಸುವ ಹಾಗೆ ನಂಜಪ್ಪ ಒಡೆಯರು ಅಲ್ಲಿನ ಗೌಡ ಪ್ರಜೆಗಳು ಮತ್ತು ಶ್ಯಾನುಭೋಗರಿಗೆ ಕಟ್ಟುಮಾಡಿ ಮೂವರು ಗೇಯುವ ಸಾವಿರ ಕೋಟಿ ಸ್ಥಳವನ್ನು

ದಾನವಾಗಿ ಕೊಟ್ಟಿರುವುದನ್ನು ಪ್ರಸ್ತಾಪಿಸಿದೆ. ಕೆರೆಗಳನ್ನು ಕಟ್ಟಿಸಿದಂತೆ ಅವುಗಳ ನಿರ್ವಹಣಾ ವ್ಯವಸ್ಥೆ ನೋಡಿಕೊಳ್ಳವುದು ಮುಖ್ಯವಾಗಿತ್ತು.[13]

## ನಾಲೆ

ಹೆಚ್ಚಿನ ಮೊತ್ತದಲ್ಲೂ ಶೇಖರಿಸಿ ಸಾವಿರಾರು ಹೆಕ್ಟೇರುಗಳಿಗೆ ನೀರನ್ನು ಸರಬರಾಜು ಮಾಡಲು ಯುಕ್ತ ಸ್ಥಳದಲ್ಲೂ ನದಿಗೆ ಅಡ್ಡವಾಗಿ ಭಾರಿ ಕಟ್ಟೆ ನಿರ್ಮಿಸಿ ಬೃಹತ್ ಜಲಾಶಯವನ್ನು ಸ್ಥಾಪಿಸುವುದೊಂದೇ ಕೆರೆ ನೀರಾವರಿಯ ಯುಕ್ತಮಾರ್ಗ. ಇಂಥ ಬೃಹತ್ ಜಲಾಶಯಗಳು ಎಲ್ಲಾ ದೇಶಗಳಲ್ಲಿಯೂ ನಿರ್ಮಾಣವಾಗಿವೆ. ಬೃಹತ್ ಜಲಾಶಯದಿಂದ ಬೇಸಾಯಕ್ಕೆ ನೀರು ಪಡೆಯುವುದಷ್ಟೇ ಅಲ್ಲದೆ ಇತರ ಹಲವು ಅನುಕೂಲತೆಗಳನ್ನು ಪಡೆಯಬಹುದು. ಆದ್ದರಿಂದಲೇ ಬೃಹತ್ ಜಲಾಶಯ ಯೋಜನೆಗಳನ್ನು ವಿವಿಧೋದ್ದೇಶ ಯೋಜನೆಗಳೆಂದು ಕರೆದಿರುವುದು ಬೇಸಾಯಕ್ಕೆ ನೀರನ್ನು ಒದಗಿಸುವುದರ ಜೊತೆಗೆ ಇವು ನೆರೆ ಹಾವಳಿ ತಡೆಯಲು ಜಲಮಾರ್ಗ ಮತ್ತು ಮೀನುಗಾರಿಕೆ ಅಭಿವರ್ಧನೆ ಹಾಗೂ ವಿಹಾರ ಕೇಂದ್ರಗಳ ಸ್ಥಾಪನೆಗೆ ಅನುಕೂಲತೆ ಒದಗಿಸುತ್ತದೆ.[14]

- **ಬುಕ್ಕಸಾಗರ**ದ: ಶಾಸನವು ವಿಜಯನಗರ ಕಾಲದ ಅರಸರಿಗೆ ಸೇರಿದ್ದಾಗಿದ್ದು ಕ್ರಿ.ಶ. 1528ರದ್ದಾಗಿದೆ. ಈ ಶಾಸನದ ಪ್ರಕಾರ ರಾಮಸಾಗರದ ಅವಿಕಥವಿತರಸನು ಕಲ್ಲನ್ನು ಒಡೆಸಿ ಕಾಲುವೆಯನ್ನು ಕಟ್ಟಿಸಿದನು. ಮತ್ತು (ವಿರೂಪಾಕ್ಷ ದೇವರ ಸೇವಕ) ಬೊಮೋಜನು ಕಟ್ಟಿಸಿದನೆಂದು ದಾಖಲಿಸುತ್ತದೆ[15].

- **ಹಂಪೆ**ಯ : ಶಾಸನವು ವಿಜಯನಗರ ಕಾಲಕ್ಕೆ ಸೇರಿದ್ದು 15ನೇ ಶತಮಾನದ್ದಾಗಿದೆ. ಅಣೆಕಟ್ಟು ಕಟ್ಟೆನ್ನು ಚಿಂತಾಯಕ ದೇವಣ್ಣನು ಕಟ್ಟಿಸಿದನು ಮತ್ತು (ವಿರೂಪಾಕ್ಷ ದೇವರ ಸೇವಕ) ಬೊಮೋಜನು ಕಟ್ಟಿಸಿದನೆಂದು ಈ ಶಾಸನದಲ್ಲಿ ದಾಖಲಿಸುತ್ತದೆ.[16]

- **ಕೃಷ್ಣರಾಯನ** : ತೆರಕಣಾಂಬಿಯ ವಿರೂಪಾಕ್ಷಭಟ್ಟನ ಮಗ ಗೋಪಿನಾಥ ದೀಕ್ಷಿತನು ಹಿರಿಯ ಕಾಲುವೆಯನ್ನು ಪ್ರತಿಸ್ಥಾಪಿಸಿ ರಘುನಾಥದೇವರಿಗೆ ಪಂಪಾವಿರೂಪಾಕ್ಷನಿಗೆ ಪ್ರತಿದಿನ 5 ಪಡಿ ಅಕ್ಕಿ ಕಾಲುಪಡಿ ಎಣ್ಣೆಯನ್ನು ಕೊಡುವ ಕಟ್ಟಲೆಯನ್ನು ಮಾಡಿದನು.

ಅರಸನು ರಘುನಾಥದೇವರಿಗೆ ಪ್ರತಿದಿನ 20 ಪಡಿ ಅಕ್ಕಿ 1 ಪಡಿ ತುಪ್ಪ ಮತ್ತು ಪಡಿ ಎಣ್ಣೆಯನ್ನು ಮತ್ತು ಪ್ರತಿ ತಿಂಗಳು 1 ಗದ್ಯಾಣ ಅಥವಾ ಹೊನ್ನನ್ನೂ ಕೊಡುವಂತೆ ಆದೇಶಿಸಿದ್ದನ್ನು ದಾಖಲಿಸಿದೆ.[17]

- ಕೆಂಚನಗುಡ್ಡದ ವಿಜಯನಗರ ಅಣೆಕಟ್ಟಿನ ಪೂರ್ವ ಭಾಗದಲ್ಲಿ ಕ್ರಿ.ಶ. 1467 ಈ ಶಾಸನವನ್ನು ಬರೆಯಲಾಗಿದ್ದು ಶಾಸನದ ವಿವರಣೆ ಭಾಗಶಃ ಹಾಳಾಗಿದೆ. ಸಾಲಗುಂಟೆಯ ಸೋಮಣ್ಣನಾಯಕ ಮತ್ತು ಬಸವಾಂಬಿಕೆಯರ ಮಗ ಅರಿರಾಯ ತೋಡರಮಲ್ಲ ವೀರಣನಾಯಕ (ವಿರಣ-ನಾಯಕ)ನು ಪ್ರತಾಪರುದ್ರನ ವಂಶಕ್ಕೆ ಸೇರಿದವನೆಂದು ಮತ್ತು ಜಗತಾಪಿ ಗುತ್ತಿಯ ದುರ್ಗವನ್ನಾಳುತ್ತಿದ್ದನೆಂದು ತಿಳಿಸುತ್ತದೆ. ಆತನು ತನ್ನ ತಂದೆ ಸೋಮಣ - ನಾಯಕ ಮತ್ತು ಅಣ್ಣ ಬಸವಣ್ಣರಿಗೆ ಪುಣ್ಯವಾಗಲೆಂದು ಒಡೆದ ದೇವರಸನ ಕಾಲ್ವೆಯ ಅಣೆಕಟ್ಟನ್ನು ಪುನಃ ಕಟ್ಟಿಸಿ, ಕಾಲುವೆ ಮತ್ತು ಭೂಮಿ (ಕಾಲುವೆಯ ಭೋಗ ಮತ್ತು ಬಯಲು ಭೋಗ) ಗಳನ್ನು ಅನುಭವಿಸುವ ಅಧಿಕಾರವನ್ನು ಗ್ರಾಮದ ಮಹಾಜನರಿಗೆ ಅರಸನ ದಕ್ಷಿಣಭುಜದಂಡನಾದ ಬಸವರಸನ ಮೂಲಕ ಒಪ್ಪಿಸಿದ್ದನ್ನು ಈ ಶಾಸನವು ತಿಳಿಸುತ್ತದೆ.[18]

- ಹೊಯ್ಸಳ 2ನೇ ಬಲ್ಲಾಳನು ಆಳುತ್ತಿದ್ದ ಕಾಲದಲ್ಲಿ ಕೋಗುಂದದ, ಏಚಗೌಡ ಮತ್ತು ಆತನ ಪತ್ನಿ ಮಾರ ಗೌಡಿಯವರ ಮಗ ಮಾರಿಗೌಡನಿಗೆ ಹಳ್ಳಿಯನ್ನು ಮಾಡು ಎಂದರು. ಅವರ ಮಾತಿನಂತೆ ಅವರು ಮೊದಲು ಕಂನಗೆರೆಯನ್ನು ಕಟ್ಟಿ ನಂತರ ಊರನ್ನು ಮಾಡಿ ನಂತರ ಅದರಲ್ಲಿ ದೇವಾಲಯವನ್ನು ನಿರ್ಮಿಸಿದನು ಅಲಿ ಏಕೇಶ್ವರ ದೇವರ ಪ್ರತಿಷ್ಠೆ ಮಾಡಿಸಿದ. ಉದ್ದ ಮುಖದಲ್ಲ ಭೈರನು, ಹಳ್ಳಿಯ ದಕ್ಷಿಣಕ್ಕೆ ತನಗೆ ಪುಣ್ಯವಾಗಬೇಕೆಂದು, ಹಾಗೆ ಸಕಲ ಪ್ರಾಣಿಗಳಿಗೂ ಉಪಕಾರವಾಗುವ ಹಾಗೆ ಬಯರ ಸಮುದ್ರದಿಂದ ನಂದನವನಕ್ಕೆ ಅದೇ ರೀತಿ ಜಾವಗಲ್ಲದ ಪೂರ್ವದ ಕೆರೆಗೆ ಸಾಳುವನ ಆಗಳು ಎಂಬ ಹೊದ ಕಾಲುವೆಯನ್ನು ತೆಗೆಸಿ ಎಲ್ಲಾ ಕೆರೆಗಳೂ ಪೂರ್ಣವಾಗುವ ಹಾಗೆ

ಮಾಡಿ. ಆ ಕೆರೆಗಳನ್ನು ದೃಢವಾಗುವ ಹಾಗೆ ಮಾಡಿಸಿದರು. ಕಾಲುವೆಗೆ ಕುಲಪಣವ ಕಾಲ್‌ದರ ಅಂದರೆ ಕಾಲುವೆಗೆ ಭದ್ರಪಡಿಸಿದರು.[19]

- 1267 ನರಸಿಂಹನಕಾಲದಲ್ಲಿ ಒಳ್ಳೆಯ ಕೆರೆಗೆ ವೊಡ್ಡನ್ನು ಕಟ್ಟಿಸಿದ ಉಲ್ಲೇಖ ಈ ಧರ್ಮಕ್ಕಾಗಿ ನಡೆದ್ದು ಸಂತಾನಾಭಿವೃದ್ಧಿಗಾಗಿ ಎನ್ನುವುದು ಗಮನಿಸಬೇಕಾದ ವಿಷಯವಾಗಿದೆ.[20]

- 27ನೇ ಜೂನ್ 1227 ಶಾಸನದಲ್ಲಿ ದೇವಸ್ವಾಮಿಗಳ ಬಗ್ಗೆ ಹೀಗೆ ಹೇಳಲಾಗಿದೆ. ದೇವ ತಟಾಕ, ಖಾನೀತ ಅಂದರೆ ಶಾಂತಿಗ್ರಾಮದಲ್ಲಿ ದೇವರ ಕೆರೆಯನ್ನು ತೋಡಿಸಿದರು ಎಂದಿದೆ. ಅಂದರೆ ಬೇರೆ ಕೆರೆಗಳು ಇದ್ದರು ದೇವರ ಪೂಜೆ ನೈವೇದ್ಯಗಳ ನಿರ್ವಹಣೆಗಾಗಿಯೂ ಕೆರೆಯನ್ನು ತೋಡಿಸಲಾಗುತ್ತಿತ್ತು. ದೇವರ ಕೆರೆ ಅಥವಾ ದೇವರ ತಟಾಕ ಎಂದು ಅದನ್ನು ಕರೆಯಲಾಗುತ್ತಿತ್ತು. ಆ ಕೆರೆಯ ನೀರಿನಿಂದ ಬೆಳೆಯುವ ಭೂಮಿಯ ಮೇಲೆ ತೆರಿಗೆಯ ಆದಾಯಗಳಂದ ದೇವಾಲಯದ ನಿತ್ಯ ನೈವೇದ್ಯ ಸಂವತ್ಸರ ಪೂಜೆಗಳನ್ನು ನಿರ್ವಹಿಸಲಾಗುತ್ತಿತ್ತು ಎಂಬ ಅಂಶವು ಸ್ಪಷ್ಟವಾಗುತ್ತದೆ. ಅಲ್ಲಾದೆ ಅದೇ ಶಾಸನದಲ್ಲಿ ದೇವಿ ಕೆರೆ, ವಿಠಲಕೆರೆ, ಹಿರಿಯಕೆರೆ ಮುಂತಾದ ಬೇರೆ ಕೆರೆಗಳು ಇರುವುದರಿಂದ ದೇವರ ಕೆರೆಯು ಪ್ರತ್ಯೇಕವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ.[21]

- ಸುಖದರೆಯ ಕ್ರಿ.ಶ 1139–40 ಶಾಸನವು ಗಾರಂದರ ಕುಲದ ಬಿನ್ನುಂಡಿಯು ಮುದಿಗೆರೆಯಲ್ಲಿ ತೀರಿಕೊಂಡ ತನ್ನ ಮುತ್ತಯ್ಯ, ಮುತ್ತಮ್ಮ, ಮತ್ತು ತಾಯಿ ಚಾನವೆಂಬರ ನೆನಪಿಗಾಗಿ ಕೆರೆಯನ್ನು ನಿರ್ಮಿಸಿ ಅಂಗ ಪ್ರತಿಷ್ಟಾಪನೆ ಮಾಡಿದನು. ಕೆಲವೊಮ್ಮೆ ಬೆದ್ದಲ ಅಥವಾ ಬಂಜರು ಭೂಮಿಗಳನ್ನು ಫಲವತ್ತಾದ ಭೂಮಿಗಳನ್ನಾಗಿ ಮಾಡಲು ತನ್ಮೂಲಕ ಜನರ ಆಹಾರ ಭದ್ರತೆಯನ್ನು ಒದಗಿಸಲು ಅರಸರು ಕೆರೆಗಳನ್ನು ಕಟ್ಟಿಸಿ ನಾಲೆಗಳನ್ನು ನಿರ್ಮಿಸಿ ಈ ಬಂಜರು ಭೂಮಿಗೆ ನೀರುಣ್ಣೀಸುತ್ತಿದ್ದರು. ಉದಾ : ಮಹಾಪ್ರಧಾನರು ಪೆರುಮಾಳ್ ದಂಡನಾಯಕನು ಉದ್ಭವ ನರಸಿಂಹಪುರವಾದ ಬೆಳ್ಳೂರನ್ನು ಅರಸನಿಂದ ಸರ್ವಮಾನ್ಯವಾದ ಅಗ್ರಹಾರವಾಗಿ ಪಡೆದು ಅಲ್ಲಾಳನ

ಸಮುದ್ರ ಮತ್ತು ಕೆರೆಯನ್ನು ತೋಡಿಸಿ ಅಗ್ರಹಾರ ಕಾಲುವೆಯ ಕೆಳಗಿನ ಬೆದ್ದಲ ಭೂಮಿಯನ್ನು ಗದ್ದೆಯನ್ನಾಗಿ ಪರಿವರ್ತಿಸಿದನು.[22]

## ತೂಬುಗಳು

ತೂಬುಗಳೆಂದರೆ ಕೆರೆಯಲ್ಲಿ ಸಂಗ್ರಹವಾದ ನೀರನ್ನು ಜನರಿಗೆ ಉಪಯೋಗವಾಗಲು ಎರಡು ಅಥವಾ ಮೂರು ಕಡೆ ಕಟ್ಟಿರುವ ಕಾಲುವೆಯ ಹಾದಿ ಎನ್ನಲಾಗಿದೆ. ಉದಾಹರಣೆಗೆ ಸೂಳೆಕೆರೆ ಆರಂಭದಲ್ಲಿ ಈ ಕೆರೆಗೆ (ಸೂಳೆಕೆರೆ) ಹಲವಾರು ತೂಬುಗಳಿತ್ತೆಂದು ಹೇಳಲಾಗಿದೆ. ಪ್ರಸ್ತುತ ಹಳೆಯ ತೂಬುಗಳನ್ನೆಲ್ಲಾ ಮುಚ್ಚಿ ಈಗ ಸಿದ್ಧನಾಲಾ ಮತ್ತು ಬಸ್‌ನಾಲಾ ಎಂಬ 2 ತೂಬುಗಳನ್ನು ಮಾತ್ರ ನಿರ್ಮಿಸಲಾಗಿದೆ. ಜಲಾಶಯದ ಒಳಗೆ ಕಟ್ಟಿರುವ ಈ ತೂಬುಗಳ ವಿನ್ಯಾಸ ಸೊಗಸಾಗಿದೆ. ತೂಬಿನ ಏರಿಯ ತಳಭಾಗದಲ್ಲಿ ಸುಮಾರು 4 ಅಡಿ ಸುರಂಗವನ್ನು ಕಲ್ಲುಗಳಿಂದ ಕಟ್ಟಿದೆ. ಎರಡು ತೂಬುಗಳಲ್ಲಿಯೂ ಅಲಂಕೃತವಾದ ಮತ್ತು ಶಿಲಾಸ್ಥಂಬಗಳಿವೆ ಇದರ ಮೇಲೆ ಗೋಪುರವಿದೆ. ಮಂಟಪದ ನಡುವೆ ಶಿವಲಿಂಗವಿದೆ ಏರಿಯಿಂದ ಈ ಮಂಟಪಕ್ಕೆ ಹೋಗಲು ಉಕ್ಕಿನ ಸಾರವನ್ನು ಅಳವಡಿಸಿದೆ. ಇದಕ್ಕೆ ಉಕ್ಕಿನ ಬಾಗಿಲಿದೆ. ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿರುವ ಈ 2 ಕಾಲುವೆಗಳಿವೆ. ಜಲಾಶಯದಿಂದ ಹೊರಡುವ ಕಾಲುವೆಗಳು ಸಹ ಸುಭದ್ರವಾಗಿದೆ. ತೂಬಿನ ಮೇಲಿರುವ ಶಿಲಾಮಂಟದಲ್ಲಿ ನಿಂತು ನೋಡುವ ಜಲಾಶಯನ ನೋಟ ಚೇತೋಹಾರಿಯಾಗಿರುತ್ತದೆ.[23]

ಒಂದೊಂದು ಕೆರೆಗೂ ಒಂದು ಅಥವಾ 2 ತೂಬು ಇರುತ್ತಿದ್ದವು ಕೆಲವೊಮ್ಮೆ 3 ಇದ್ದದ್ದು ಉಂಟು. ಅವುಗಳಿಂದ ನೀರನ್ನು ಜಮೀನಿಗೆ ಬಿಡಲಾಯಿತು. ತೂಬು ಇರುತ್ತಿದ್ದುದು ಸಾಮಾನ್ಯವಾಗಿ ಕೆರೆಯ ಅಂಗಳದ ಮಧ್ಯದಲ್ಲಿ ಆದರೆ ನೀರಾವರಿಯಾಗಬೇಕಾದ ಯಾವುದೇ ಭೂಮಿ ಆ ಮಟ್ಟಕ್ಕಿಂತ ಮೇಲೆ ಇದ್ದಲ್ಲಿ ಇನ್ನು ಒಂದೇ ಎರಡೋ ತೂಬುಗಳನ್ನು ಅದಕ್ಕನುಗುಣವಾದ ಮಟ್ಟದಲ್ಲಿ ಇಡಲಾಗುತ್ತಿತ್ತು. ಕೆರೆ ತೂಬೂ ದೊಡ್ಡದೂ ದೃಢವೂ ಆಗಿದ್ದು ದುಬಾರಿಯ ಕೆಲಸವು ಆಗಿರುತ್ತಿತ್ತು. ಅದರಲ್ಲಿ 2 ಅಡಿ ಚದರ ಇಟ್ಟಿಗೆ ಅಥವಾ ಕಲ್ಲಿನ ತೊಟ್ಟಿ, ಮರಳು ಬಾರದಂತೆ ಒಂದು ಗಜ ಎತ್ತರವಾಗಿ ಇರುತ್ತಿತ್ತು. ಅದರ

ಬಂಡೆಯನ್ನು ಕೆರೆ ನೀರಿನ ಮಟ್ಟಕ್ಕಿಂತ ಮೇಲಿನವರೆಗೂ ಇರುವಂಥ ಒಂದು ಉದ್ದನೆಯ ಗಳುವಿಗೆ ಜೋಡಿಸಲಾಗಿರುತಿತ್ತು. 9 ಅಂಗುಲ ಅರ್ಧಗಜ ಚದರದ ಅಳತೆಯ ಎರಡು ಅಥವಾ ಲಂಬ ಕಲ್ಲು ಕಂಬಗಳು ಅದನ್ನು ಸ್ವಸ್ಥಾನದಲ್ಲಿ ಹಿಡಿದಿಟ್ಟಿರುತಿದ್ದವು. ಆ ಕಂಬಗಳಿಗೆ ತಲೆಯಲ್ಲಿ ಒಂದು ಒಂದು ನಡುವೆ ಒಂದು ಹೀಗೆ 2 ಸಮತಲದ ಅಡ್ಡ ಕಲ್ಲುಗಳು ಇರುತ್ತಿದ್ದವು. ಬಿರಡೆಯ ಕೊಂತವೊಂದು 3 ಅಡ್ಡಕಲ್ಲುಗಲ್ಲಿನ ರಂಧ್ರದೊಳಗಿಂದ ಹಾದು ಹೋಗುತ್ತಿತ್ತು. ಬೇಕಾದಾಗ ಬಂಡೆಯನ್ನು ಎತ್ತಲು ಹಾಗೂ ನೀರು ಹರಿಯುವುದನ್ನು ನಿಯಂತ್ರಿಸಲು ಕೊಂತವನ್ನು ಒಂದು ದಪ್ಪ ಸರಪಳಿ ಹಾಗೂ ಗೂಟದ ನೆರವಿನಿಂದ ಚಲಿಸಲಾಗುತ್ತಿತ್ತು. ನೀರು ಹರಿಯುವುದನ್ನು ತಡೆಯಲು ಬಂಡೆಯನ್ನು ಕೆಳಗಿಳಿಂದಾಗ, ಅದರ ಮೇಲು ಪಾರ್ಶ್ವದ ಮೇಲಿರುವ ನೀರಿನ ಒತ್ತಡ ಬಿರಡೆಯನ್ನು ಸಾಕಷ್ಟು ಬಿಗಿಯಾಗಿ ಹಿಡಿದು ಇರಿಸುತಿತ್ತು.

ಏರಿಯ ಹಿಂಬದಿಯಲ್ಲಿ ಸುಮಾರು ಅದೇ ಅಳತೆಯ ಇನ್ನೊಂದು ತೊಟ್ಟಿಯನ್ನು ಸಾಮಾನ್ಯವಾಗಿ ಇಟ್ಟಿಗೆ ಗಾರೆಗಳಿಂದ ಕಟ್ಟಲಾಗುತಿತ್ತು. ತೊಟ್ಟಿಯ 3 ಪಾರ್ಶ್ವಗಳಲ್ಲಿ ಚೌಕಾರದ ಕಂಡಿಗಳದ್ದು, ಬೇಕಾದ ದಿಕ್ಕಿಗೆ ನೀರನ್ನು ಬಿಡುವಂತೆ ಅವುಗಳಿಗೆ ಬಾಗಿಲು ಇರುತ್ತಿತ್ತು. ಏರಿಯ ಅಗಲಕ್ಕೆ ಅನುಗುಣವಾಗಿ ಅದರ ಉದ್ದ ಸಾಮಾನ್ಯವಾಗಿ 10– 30 ಅಥವಾ 40 ಗಜ ನೀರು ಹಾಯುವ ಸುರಂಗದ ಸ್ಥಿತಿಯನ್ನು ಪರಿಶೀಲಿಸಲು ಅನುಕೂಲವಾಗುವಂತೆ ಸುರಂಗದ ಒಳ ಅಳತೆ ಇರುತ್ತಿತ್ತು. ಸುರಂಗದ ಒಳ ಭಾಗ ಸಾಮಾನ್ಯವಾಗಿ ಆಯಾಕಾರದ್ದು. 6–9 ಅಂಗುಲ ದಪ್ಪದ ಚಪ್ಪಡಿಗಳ ಗೋಡೆ ಇರುತಿತ್ತು.[24]

ಕ್ರಿ.ಶ 1152 ರ ಶಾಸನದಲ್ಲಿ ತಾಲ್ಲೂಕಿನ ನಾಗರಕೆರೆ ಶಾಸನವು ಕೆರೆಯ ಹೂಳನ್ನು ಕಾಲಕಾಲಕ್ಕೆ ತೆಗೆಸಲು ಕಟ್ಟುಮಾಡಿ ಅದಕ್ಕಾಗಿ ತೋಟವೊಂದನ್ನು ಅರಸರು ಧಾನ ಮಾಡಿದರು ಎಂದು ತಿಳಿಸಲಾಗಿದೆ.[25]

- ಚಾಲುಕ್ಯ ವಿಕ್ರಮಾದಿತ್ಯನ ಕಾಲದ ಈ ಶಾಸನವು ಕಚ್ಚ ಪೆಗಟೆಯು ಒಂದು ಕೆರೆಯನ್ನು ಕಟ್ಟಿಸಿ ಅದಕ್ಕಾಗಿ ಅಂದರೆ ಅದರ ನಿರ್ವಹಣೆಗಾಗಿ ಬಿತ್ತುವಟ್ಟಕ್ಕಾಗಿ ಭೂಮಿಯನ್ನು

ದಾನಮಾಡುತ್ತಾನೆ. ಇದಕ್ಕೆ ಕನ್ನಗೆರೆ ಎಂದು ಹೆಸರಿಟ್ಟು ಭೂಮಿಯಲ್ಲಿ ಪ್ರಸಿದ್ಧನಾದ ಅಂದರೆ ಕೆರೆಯ ಕೆಲಸ ಮಾಡಿದವರು ಅಂದಿನ ಕಾಲಕ್ಕೆ ಮಹಾಪುಣ್ಯವಂತರು ಎಂದು ಕರೆದುಕೊಳ್ಳುತ್ತಿದ್ದರು. ಅದೂ ಅಲ್ಲದೆ ಕೆರೆಗೆ ಮಾಡಿಸಿದವರೂ ಅದರ ನಿರ್ವಹಣೆಗಾಗಿ ಬಿತ್ತಿವಟ್ಟದ ದಾನವನ್ನು ಮಾಡಿರುತ್ತಿದ್ದರು. ಪುಲಗೆರೆಯಿಂದ ಬಂದ ಏಚನು ತೂಬನ್ನು ಮಾಡಿದ. ಇಲ್ಲಿ ಕೆಲಸಗಾರರನು ಬಹಳ ದೂರದಿಂದಲೂ ಕರೆಸುತ್ತಿದ್ದರು. ಏಕೆಂದರೆ ನಿಷ್ಠುರನಾಗಿರಬೇಕಿತ್ತು.[26]

- 1237ರ ತೂಬಿನ ಮೇಲೆಯೇ ಇರುವ ಹೊಯ್ಸಳರ ಕಾಲದ ಶಾಸನದ ಪ್ರಕಾರ ಕೆರೆಗೆ ತೂಬನ್ನು ಇಟ್ಟು ಇದಕ್ಕಾಗಿ ಅರಕೆರೆಯ ಅಶೇಷ ಮಹಾಜನಗಳು ಮತ್ತು ಒಂದು ಸಾವಿರ ಕುಟುಂಬದವನ್ನು ಒಂದು ದತ್ತಿಯನ್ನು ನೀಡುತ್ತಾರೆ.[27]

- ಕ್ರಿ.ಶ.1272ರಲ್ಲಿ ಹೊಯ್ಸಳರ ವೀರ ನರಸಿಂಹನು ಆಳುತ್ತಿರುವಾಗ ಅರೆಕೆರೆಯ ಕೆರೆಯ ತೂಬನ್ನು ದಂಡನಾಯಕನು ಜೀರ್ಣೋದ್ದಾರ ಮಾಡಿದ್ದನ್ನು ಶಾಸನವೊಂದು ದಾಖಲಿಸುತ್ತದೆ.[28]

- ಈ ಶಾಸನದಲ್ಲಿ ಹಿರಿಯ ಕೆರೆಯ ಚಿಕ್ಕ ತೂಬು ಅದರ ಮೇಲಿನ ಏರಿಗಳು, ಅದರ ಬಯಲು ಪ್ರದೇಶಗಳು ಅದರಲ್ಲಿ ಗದ್ದೆ, ಬೆದ್ದಲು ಮುಂತಾದ ವಿವರಗಳನ್ನು ನೀಡಲಾಗಿದೆ, ಇದು ಈ ಕೆರೆಯಲ್ಲಿ ಮಾತ್ರದಲ್ಲಿ ಎಲ್ಲಾ ಕೆರೆಗಳಲ್ಲೂ ಸಾಮಾನ್ಯವಾಗಿ ಕಂಡುಬರುವ ಅಂಶವಾಗಿತ್ತು ಎಂದು ನಾವು ಸುಲಭವಾಗಿ ಊಹಿಸಬಹುದು. ಹಲಕೂರು ಕ್ರಿ.ಶ 1177ರ ಶಾಸನ ಆಡಳಿತ ನಡೆಸುತ್ತಿದ್ದವನ ಬಗ್ಗೆ ಹೇಳುತ್ತಾ ಅವರು ಅತ್ಯಂತ ಕೀರ್ತಿವಂತರಾಗಿದ್ದರು ಮತ್ತು ಹಲವು ಕೆರೆಗಳನ್ನು ಕಟ್ಟಿದ್ದರು ದೇಗುಲಗಳನ್ನು ನಿರ್ಮಿಸಿದರು ಎಂದು ಹೇಳಲಾಗಿದೆ. ಇಲ್ಲಿ ಪ್ರಮುಖವಾಗಿ ಗಮನಿಸಬೇಕಾದ ಅಂಶವೆಂದರೆ ದೇವಾಲಯಕ್ಕಿಂತ ಮುಂಚೆ ಅವರು ಕೆರೆಗೆ ಪ್ರಾಧಾನ್ಯತೆ ನೀಡಿದ್ದಾರೆ. ಇದೇ ಊರಲ್ಲಿ ಹಿರಿಯ ಕೆರೆ, ಮತ್ತಿಯ ಕೆರೆ, ಒಟ್ಟಿಯ ಕೆರೆ ಅಣಿಯಕೆರೆ, ದೇವರ ಮುಂದಣ ಕೆರೆಯ, ಉಲ್ಲೇಖವಿದ್ದು ಈ ಊರು ನೀರಾವರಿಯಲ್ಲಿ ಎಷ್ಟು

ಮುಂದುವರಿದಿತ್ತು ಮತ್ತು ಕೃಷಿಗೆ ಒಳಪಡಿಸಿದ ಭೂಮಿಯ ದರವನ್ನು ನಾವು ಅಂದಾಜಿಸಬಹುದು.[29]

- 1191 ಹೊಯ್ಸಳ ವೀರಬಲ್ಲಾಳನು 2 ಆಳುತ್ತಿರುವಾಗ ಈ ಶಾಸನ ಹೊರಡಿಸಿದ್ದು ಶಾಸನ ಗ್ರಾಮದ ಸೊಬಗನ್ನು ವರ್ಣಿಸುವಾಗ ತುಂಬಿದ ಕೆರೆ ಅಲ್ಲಿ ಹಸಿರು ಗದ್ದೆಗಳು ಭತ್ತ ಕಟ್ಟನ್ನು ಹಾಕಲಾಗಿತ್ತು ಎಂದು ದಾಖಲಿಸಿದೆ. ಅಲ್ಲಿನ ಕೆರೆಗೆ ಏರಿ, ತೂಬು, ಕಾಲುವೆಗಳು ಇದ್ದವು ಎಂದು ವರ್ಣಿಸಲಾಗಿದೆ. ಈ ಶಾಸನದ ಪ್ರಮುಖ ಅಂಶವೆಂದರೆ ಯಾರು ಸಣ್ಣ ತೂಬಿನಿಂದ ನಾರಣಗಟ್ಟದ ಕೆರೆಯ ನೀರನ್ನು ಪಕ್ಕದಲ್ಲಿರುವ ಚಿಕ್ಕ ಕೆರೆಯ ಗದ್ದೆಗೆ ಹರಿದಿರುವವನನ್ನು ದ್ರೋಹಿಯೆಂದು ದೂರಲಾಗಿದೆ.[30]
- 1218ರ ಶಾಸನದಲ್ಲಿ ಹೊಯ್ಸಳ ವೀರ ಬಲ್ಲಾಳನ ಮಂಡಲಚಾರಿ ಕೆರೆ ಕಟ್ಟಿ 200 ಕಂಬ ಭೂಮಿಧಾನ ಮಾಡಿದ ಬೊಮ್ಮಯನ ಕೆರೆಯ ದಕ್ಷಿಣದಲ್ಲಿ ತೂಬನ್ನು ರಚಿಸಿದನು ಎಂದು ಹೇಳುತ್ತದೆ.[31]
- **1338**ರ ಶಾಸನ ಹಡಪದ ಬೊಮ್ಮನು ಕೆರೆಯನ್ನು ಕಟ್ಟಿ ತೂಬು ನಿರ್ಮಿಸಿದ ವೀರ ಬಲ್ಲಾಳನ ಕಾಲದಲ್ಲಿ 1196ರಲ್ಲಿ ವರದ ಹಳ್ಳಿಯಲ್ಲಿ ಹೀರೆವಾಳದಲ್ಲಿ ವಡಗೆರೆಯ ಪಡುವಣ ದೆಸೆಯಲ್ಲಿ ಕೆರೆಯನ್ನು ಕಟ್ಟಿ ನಂತರ ತಮ್ಮ ಪ್ರತಿಷ್ಠೆಯನ್ನು ಮಾಡಿಸಿದ ವಿವರವಿದೆ. ಆಗ ಅಲ್ಲಿನ ಗಾವುಂಡನು ಕೂಸದಲ್ಲಯ್ಯಂಗೆ ಆ ಕೆರೆಯ ಕೆಳಗೆ ಕೆರೆಗೊಡೆಯಾಗಿ ಕೊಟ್ಟರು. ಇಲ್ಲಿ ತಮ್ಮ ಪ್ರತಿಷ್ಠೆ ಎಂದರೆ ಏನು ಎಂಬ ಪ್ರಶ್ನೆಯ ಮೂಡುತ್ತದೆ.[32]
- ಕೆರೆ, ತೂಬು ಕಟ್ಟಿ 10 ಕೊಳಗ ಬೇಲೂರು ಶಾಸನ ಇಲ್ಲಿನ ಭೂಮಿಯನ್ನು ಬಿತ್ತುವಟ್ಟಾಗಿ ನೀಡಿದ್ದನ್ನು ಸಾಖಲಿಸಿದೆ.[33]
- 1472, ಜನವರಿ 26, ಶಾಸನವು ಕೆರೆಯ ಕೆಳಭಾಗದಲ್ಲಿದ್ದ 200 ಅಡಿಕೆ ಮರಗಳ ತೂಬಿನ ದಾನವನ್ನು ಹೇಳುತ್ತದೆ. ಅಂದರೆ ಕೆರೆಯ ಕೆಳಗೆ ಗದ್ದೆ ಮಾತ್ರವಲ್ಲದೆ ಅಡಿಕೆಯ ತೋಟದ ನಿರ್ವಹಣೆ ನಡೆಯುತ್ತಿತ್ತು ಎಂದು ಹೇಳಬಹುದು.[34]

- 96 ಮುದಿಗೆರೆಯನ್ನ ಆಳುತ್ತಿದ್ದ ಬಿಣ್ಣಾಂಡಿಯ ತನ್ನ ತಾತ, ಅಜ್ಜಿ ಮತ್ತು ತಾಯಿಗೋಸ್ಕರ ಕೆರೆಗೆ ಮೇಲ್ವದರವನ್ನು ಇರಿಸಿ ತೂಬು ಮತ್ತು ಗದ್ದೆ ಹಾಗೂ ಹೊಲವನ್ನು ದಾನ ಮಾಡಿದನು.[35]
- ರಾಮಚಂದ್ರಪುರದ ಕೆರೆಯ ದೊಡ್ಡ ತೂಬಿನ ತೊಟ್ಟಿಯಲ್ಲಿ ಈ ಕೆರೆ ರಾಮಚಂದ್ರ ಹೆಬಾರೂವಾನ ಧರ್ಮ ಎಂದು ಕೆತ್ತಲಾಗಿದ್ದು ಇದರಿಂದ ಧರ್ಮಕ್ಕಾಗಿ ಕೆರಗಳ ತೂಬನ್ನು ಮತ್ತು ಕೆರೆಯನ್ನು ಕಟ್ಟುತ್ತಿದ್ದರು ಎಂದು ಸ್ಪಷ್ಟವಾಗುತ್ತಿದೆ.[36]
- 1465 ಆಗಸ್ಟ್ 11, ವರದರಾಜ ಸಮುದ್ರದ ಶಾಸನ ಶಂಕರ ನಾರಾಯಣ ದೇವರ ಸ್ನಾನಕ್ಕಾಗಿ ಅರಕನಕಟ್ಟೆ ದಾನ ಮಾಡಿದ್ದನ್ನು ದೇವಾಲಯಗಳ ಜೀರ್ಣೋದ್ಧಾರವನ್ನು ಅಲ್ಲದೆ ಕೆರೆಯ ತೂಬು ಮತ್ತು ಕೋಡಿ ಇರುತ್ತಿದುದ್ದನ್ನು ದಾಖಲಿಸಿದೆ.[37]
- ಈ ಶಾಸನವನ್ನು 1106–07ರ ಕುಲೋತುಂಗ ಚೋಳನ ಕಾಲದ ಶಾಸನ ಸತ್ಯ ವಾಕ್ಯ ಗಾವುಂಡನು ಮೂಲಸ್ಥಾನ ಮಲೆಯೂರು ದೇವಾಲಯ ನಿರ್ಮಾಣ ಮಾಡಿ ಕೆರೆಯನ್ನು ಕಟ್ಟಿಸಿ ತೂಬನ್ನು ಇಡಿಸಿದನ್ನು ದಾಖಲಿಸಿದೆ. ಇದು ಸಾಮಾನ್ಯ ಜನರು ಮಾಡಿಸಿದ ಕೆರೆಯನ್ನು ದಾಖಲಿಸುತ್ತದೆ. ಅದೇ ಅಲ್ಲದೇ ಬಿತ್ತುವಟ್ಟಿ, ಅರುವಣ ಮುಂತಾದವುದನ್ನು ಈ ಧರ್ಮಕ್ಕೆ ನೀಡಲು ಹೇಳಲಾಗಿದೆ ಅದೂ ಅಲ್ಲದೇ ಭತ್ತ ಮಾಡಿದರೆ ಭತ್ತಾಯ ಹಾಗೂ ತೋಟದ ಫಲವನ್ನು ಸಹ ಅದಕ್ಕೆ ನೀಡಲಾಗಿದೆ.[38]

## ಮೇಲ್ವಿಚಾರಣೆ : ಮೇಲ್ವಿಚಾರಕ ವರ್ಗ :

ಹಿಂದೆ ಕೆರೆ ಹಾಗೇ ಕಾಲುವೆಗಳ ನಿರ್ವಹಣೆ ಹಾಗೂ ದುರಸ್ಥಿ ಜವಾಬ್ದಾರಿಯು ಗ್ರಾಮ ಸಮುದಾಯದ್ದಾಗಿತ್ತು.

ನಿರ್ವಹಣಾ ಕಾರ್ಯದಲ್ಲಿ ತೊಡುವವರಿಗೆ ಅಥವಾ ಜವಾಬ್ದಾರಿ ಹೊಂದ್ದಿದವರಿಗೆ ವಿವಿಧ ರೂಪದ ಕೊಡುಗೆ ಹಾಗೇ ಕಂದಾಯದಲ್ಲಿ ರಿಯಾಯಿತಿ ನೀಡುವ ವ್ಯವಸ್ಥೆಯಿದ್ದಿತ್ತು. ಭೂಮಿ ರೂಪದ ಕೊಡುಗೆಗಳನ್ನು ಈ ಉದ್ದೇಶಕ್ಕಾಗಿ ನೀಡಿರುವುದನ್ನು ಶಾಸನಗಳು

ತಿಳಿಸುತ್ತದೆ. ಸ್ಥಳೀಯ ಸರ್ಕಾರಗಳು ಇಂತಹ ಕಾರ್ಯವನ್ನು ನಿರ್ವಹಿಸುತ್ತಿದ್ದಲ್ಲಿ ಕೆಲವು ತೆರಿಗೆ ಬಾಬ್ತುಗಳನ್ನು ಉಪಯೋಗಿಸಿಕೊಳ್ಳಲು ಪ್ರಭುಗಳು ವ್ಯಕ್ತಿಗೆ ಅಥವಾ ಸಂಸ್ಥೆಗೆ ಅನುಮತಿ ನೀಡಿರುವುದುಂಟು.

ಸ್ವಾತಂತ್ರ್ಯ ಪೂರ್ವದಲ್ಲಿಯೆ ಆಡಳಿತದಲ್ಲಿ ರಾಜನೇ ಶ್ರೇಷ್ಠ ಅಧಿಕಾರಿಯಾಗಿದ್ದು ಎಲ್ಲ ವ್ಯವಸ್ಥೆಯಂತೆ ನೀರಾವರಿ ವ್ಯವಸ್ಥೆಯೂ ಆತನ ಕೈಯಲ್ಲಿ ಇರುತ್ತಿದ್ದರಾದರೂ ಮಂತ್ರಿಗಳು, ಸಂಧಿ ವಿಗ್ರಹಗಳೂ, ಊರ ಗೌಡರೂ ಜಲ ಸೂತ್ರಧಾರರು, ಶ್ಯಾನುಭೋಗರು, ನೀರ್ಗಂಡಿಗಳು ತಳವಾರು, ಗ್ರಾಮಪಂಚಾಯಿತಿಯ ಪಂಚರು ನೀರಿನ ನಿರ್ವಹಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರು.

ಕೆರೆಗಳನ್ನು ಕಟ್ಟುವ ಮೊದಲೇ ನೀರಿನ ಹರಿವನ್ನು ಗಮನಿಸಬೇಕು. ಆದರಿಂದ ಕೆಲವರಿಗೆ ಯಾವ ರೀತಿಯ ಹಾನಿಯುಂಟಾಗುತ್ತದೆ? ಅದಕ್ಕೆ ಪರಿಹಾರವೇನು? ನೀರಿನ ಕ್ಷಾರೀಯ/ಆಮ್ಲೀಯತೆಯಿಂದಾಗಿ ಭೂ ಸತ್ವಮ ಕಡಿಮೆಯಾದಾಗ ಅದಕ್ಕೆ ತಕ್ಕ ಪರಿಹಾರವೇನು ಇತ್ಯಾದಿಗಳನ್ನು ಕೆರೆ ಕಟ್ಟುವವರು ನಿರ್ಧರಿಸಿ ಪರಿಹಾರ ನೀಡಬೇಕಾಗಿತ್ತು.

ಕೆರೆ ಹಾಗೆ ಕಾಲುವೆಗಳ ನಿರ್ವಹಣಾ ಹಾಗೂ ದುರಸ್ಥಿ ಜವಾಬ್ದಾರಿಯು ಗ್ರಾಮದ ಅಥವಾ ಸಮುದಾಯದ ಜವಾಬ್ದಾರಿಯಾಗಿತ್ತು.

ಕೆರೆಗಳ ನಿರ್ಮಾಣ ಹಾಗೂ ನಿರ್ವಹಣೆಗಾಗಿ ಅನೇಕ ದತ್ತಿಗಳನ್ನು ನೀಡಲಾಗುತಿತ್ತು ಹಾಗೆ ಕೆರೆಗಳ ನಿರ್ಮಾಣದ ನಂತರ ಅದರ ನಿರ್ವಹಣೆಗಾಗಿ ಮೇಲ್ವಿಚಾರಣೆ ನೋಡಿಕೊಳ್ಳಲು ಕೆಲವರನ್ನು ನೇಮಿಸಲಾಗುತ್ತಿತ್ತು.

ಕೆರೆಗಳ ನಿರ್ವಹಣೆಯಲ್ಲಿ ಅಂದಿನ ಗ್ರಾಮಸಭೆಗಳು ಹಾಗೂ ಮಹಾಜನರುವಹಿಸಿದ ಪಾತ್ರ ಪ್ರಧಾನವಾದುದಾಗಿದೆ. ನಿರ್ವಹಣೆಗಾಗಿ ನೀಡಿದ ಭೂಮಿಯ ರಕ್ಷಣಾ ಜವಾಬ್ದಾರಿಯು ಗ್ರಾಮದ ಗ್ರಾಮಸಭೆ ಹಾಗೂ ಮಹಾಜನರದ್ದಾಗಿರುತ್ತಿತ್ತು. ಅವುಗಳ ಕೆರೆಗಳ ನಿರ್ವಹಣೆಗಾಗಿ ಗಾಡಿಗಳನ್ನು ಹೊಂದಿದ್ದು. ನಿರ್ವಹಣೆ ಕಾರ್ಯದಲ್ಲಿ ತೊಡಗಿರುವವರಿಗೆ ಗಾಡಿಗಳನ್ನು ಹಾಗೂ ಇತರೆ ಅವಶ್ಯ ವಸ್ತುಗಳನ್ನು ನೀಡುತ್ತಿದ್ದರು.

ಕ್ರಿ.ಶ. 1300 ರಲ್ಲಿ ಓರ್ವನು ಕಲ್ಲಿನಗೆರೆಯ ಮಹಾಜನರಿಗೆ ಕೆರೆಯ ನಿರ್ವಹಣೆಗಾಗಿ ಗಾಡಿಯೊಂದನ್ನು ನೀಡಿದನೆಂದೂ ಪ್ರತಿಯಾಗಿ ಅಲ್ಲಿನ ಗ್ರಾಮಸ್ಥರ ಗಾಡಿ.[39]

**ದುರಸ್ತಿಕಾರ್ಯ :**

ಮಧ್ಯಕಾಲಿನ ಕರ್ನಾಟಕದಲ್ಲಿ ಪ್ರಮುಖ ರಾಜ ವಂಶಗಳಾದ ಹೊಯ್ಸಳರ ಕಾಲದಲ್ಲಿ 215 ಕೆರೆಗಳ ನಿರ್ಮಾಣ ಹಾಗೂ 76 ಕೆರೆಗಳ ಜೀರ್ಣೋದ್ದಾರವಾದರೆ ವಿಜಯನಗರ ಕಾಲದಲ್ಲಿ 77 ಕೆರೆಗಳ ನಿರ್ಮಾಣಗೊಂಡು 19 ಕೆರೆಗಳು ಜೀರ್ಣೋದ್ಧಾರಗೊಂಡಿವೆ ಎಂದು ಶಾಸನಗಳು ತಿಳಿಸಿವೆ.

ಶ್ರೀಮಂತರು ವರ್ತಕರು ಹಾಗೂ ಅಧಿಕಾರಿಗಳೂ ಕೂಡ ಕೆರೆಗಳ ದುರಸ್ತಿಕಾರ್ಯದಲ್ಲಿ ಭಾಗವಹಿಸಿದ್ದನ್ನು ಶಾಸನಗಳು ದೃಢಪಡಿಸುತ್ತವೆ. ಮಹಾವಡ್ಡ ವ್ಯವಹಾರಿ (ಮಾಧವೀಭಟ್ಟಚಾರ್ಯ)ಯ ಮಗ ಅಲ್ಲಿದೇವ (ಅಲ್ಲಾಳದೇವ) ಎಂಬಾತನು ವಿಷ್ಣು ಸಮುದ್ರದ ನಿರ್ವಹಣೆಗಾಗಿ 300 ಗದ್ಯಾಣಗಳನ್ನು ಕೊಡುಗೆ ನೀಡಿದ್ದನ್ನು. ಅದರ ಬಡ್ಡಿಯಲ್ಲಿ ಆ ಕೆರೆಯ ತೂಬು ಹಾಗೂ ಕಾಲುವೆಗಳ ದುರಸ್ತಿ ಮಾಡಲಾಗುತ್ತಿತ್ತು. ಕ್ರಿ.ಶ. 1484ರಲ್ಲಿ ಬುಕ್ಕರಾಯ ನಿರ್ಮಿತ ಹರಿದ್ರಾ ನದಿಯ ಜಲಾಶಯವು ಬಿರುಕು ಬಿಟ್ಟಾಗ ನಾಗಣ್ಣ ಒಡೆಯರ್ ಎಂಬ ದೇವಾರಾಯನ ಮಂತ್ರಿಯ ಸೇನಾನಿಯಿಂದ ಮುಂಗಡ ಹಣ ಪಡೆದು ಜಲಾಶಯವನ್ನು ದುರಸ್ತಿಗೋಳಿಸಿದರು. ಕ್ರಿ.ಶ. 1107ರಲ್ಲಿ ದಂಡನಾಯಕ ಬಾಗಳಿಯ ಪೆರಿಯ ಕೆರೆಯ ದುರಸ್ತಿಗಾಗಿ ಪರ್ಯಾಯ ತೆರಿಗೆ ಬಾಬ್ತಿನಲ್ಲಿ ತಿಂಗಳಿಗೆ ಒಂದು ಗದ್ಯಾಣ ನೀಡಿದನು ಹಾಗೂ ಕ್ರಿ.ಶ 1115ರಲ್ಲಿ ಇದೇ ಕೆರೆಯ ನಿರ್ವಹಣೆಗಾಗಿ ಲೆಕ್ಕಭಟ್ಟ ದಂಡನಾಯಕನು ಗ್ರಾಮದ ಸುಂಕದ ಬಾಬ್ತನ್ನು ದಾನ ನೀಡಿದನು.

**ಕೆರೆಗಳ ದುರಸ್ತಿ ಹಾಗೂ ಸಂರಕ್ಷಣೆ**

ಹಿಂದೆ ಕೆರೆಗಳ ಸಂರಕ್ಷಣೆ ಗ್ರಾಮ ಸಮುದಾಯಕ್ಕೆ ಸೇರಿತ್ತು, ಬ್ರಿಟಿಷ್ ಆಳ್ವಿಕೆಯಲ್ಲಿ 1863ರಲ್ಲಿ ಸಂಸ್ಥಾನಾದಾದ್ಯಂತ ಗ್ರಾಮೀಣಾಧಿಕಾರಿಗಳಿಗೆ ಆಜ್ಞೆಯನ್ನು ಮಾಡಲಾಯಿತು. ಸೇರುವವರಿಗೆ ಕೆರೆಗಳ ಸಣ್ಣಪುಟ್ಟ ದುರಸ್ತಿ ಕೆಲಸಗಳ ಬಗ್ಗೆ ಗ್ರಾಮಸ್ಥರು ತಮ್ಮ

ಕರ್ತವ್ಯವನ್ನು ನಿರ್ವಹಿಸಬೇಕು ಎಂದು ಆಜ್ಞೆ ಮಾಡಲಾಯಿತು. ಅಂಥ ದುರಸ್ತಿ ಕೆಲಸಗಳನ್ನು ಮಾಡಲು ಸಾಧ್ಯವಾಗಲೆಂದು ಕೆರೆಗಳ ದುರಸ್ತಿ ಅಥವಾ ಜೀರ್ಣೋದ್ಧಾರಗಳನ್ನು ಕೈಗೊಳ್ಳುವ ವ್ಯಕ್ತಿಗಳಿಗೆ ಕಂದಾಯದಲ್ಲಿ ೩೦ವರ್ಷಗಳ ಕಾಲ ರಿಯಾಯಿತಿಯನ್ನು ನೀಡಲಾಯಿತು.

ಕೆರೆಗಳಿಂದ ಪ್ರತ್ಯೇಕ್ಷವಾಗಿಯೋ ಅಥವಾ ಪರೋಕ್ಷವಾಗಿಯೋ ಲಾಭ ಪಡೆಯುವ ಭೂ ಹಿಡುವಳಿದಾರರೆಲ್ಲರೂ ಕೆರೆಗಳ ಸಂರಕ್ಷಣೆಗೆ ಬಾದ್ಯಸ್ಥ ಎನ್ನಲಾಯಿತು. ಹಿಡುವಳಿದಾರರ ಮೇಲೆ ಈ ಕರ್ತವ್ಯವನ್ನು ಹಳ್ಳಿಯ ಪಟೇಲನಿಗೆ ವಹಿಸಲಾಗಿತ್ತು.

ಕೆರೆ ರಸ್ತೆ ಮೊದಲಾದವುಗಳ ದುರಸ್ತಿಗಾಗಿ ಮಧ್ಯ ಯುಗದಲ್ಲಿ ರಾಜ್ಯವು ಪ್ರಜೆಗಳಿಂದ ಬಿಟ್ಟ (ಊರುಬಿಟ್ಟ) ಎಂಬ ಕಡ್ಡಾಯ ಸೇವೆಯನ್ನು ಪಡೆಯುತ್ತಿತ್ತು. ಹಾಗೂ ನೀರಿನ ನಿರ್ವಹಣೆಗಾಗಿ ನೀರು ಗಟ್ಟಿಗಳನ್ನು ನೇಮಿಸಿ ಅವರಿಗೆ ಉತ್ಪನ್ನದಲ್ಲಿ ಕೆಲಭಾಗವನ್ನು ಪ್ರತಿಫಲವಾಗಿ ನೀಡಲಾಗುತ್ತಿತ್ತು.[೪೦]

- ಹರಿಹರ ಶಾಸನವು ತಿಳಿಸುವಂತೆ ಹರಿಹರ ಕ್ಷೇತ್ರದ ಮಹಾಜನರಿಗೂ ಹರಿಹರ ದೇವಾಲಯವನ್ನು ಒಪ್ಪಂದವೊಂದಾಗಿತ್ತು. ಅದರಂತೆ ಹರಿದ್ರಾ ನದಿಗೆ ನಿರ್ಮಿಸಿದ ಜಲಾಶಯದ ವಾರ್ಷಿಕ ದುರಸ್ಥಿಗೆ ದೇವಾಲಯವು 2/3 ರಷ್ಟು ಮಹಾಜನರು 1/3ರಷ್ಟು ವೆಚ್ಚ ಮಾಡಲು ಹಾಗೂ ನೀರನ್ನು ಕೂಡ ಅದೇ ಪ್ರಮಾಣದಲ್ಲಿ ಹಂಚಿಕೊಳ್ಳಲು ಒಪ್ಪಿಕೊಳ್ಳಲಾಯಿತು.[41]
- ಅಂಬಲಿ ಎಂಬ ಗ್ರಾಮ ಕಲ್ಲೇಶ್ವರ ದೇವಸ್ಥಾನ ಎದುರಿಗೆ ನಿಲ್ಲಿಸಿದ ಕಲ್ಲಿನಮೇಲೆ ಕಲ್ಯಾಣ ಚಾಲುಕ್ಯ ತ್ರಿಭುವನಮಲ್ಲ ಕ್ರಿ.ಶ. 1106ರಲ್ಲಿ ಬರೆಸಲಾದ ಶಾಸನದ ವಿವರಣೆಯು ಹೀಗಿದೆ. ಸುಂಕದ ಹೆಗ್ಗಡೆಗಳಾದ ಕೇಶಿರಾಜ ಮತ್ತು ಕಾಳಿಮರಸರು ಅನುಕಪಲ್ಲವರಾಯ – ದಂಡನಾಯಕನ ಆಜ್ಞೆಯ ಮೇರೆಗೆ ಹಿರಿಯ ಕೆರೆಯ ದುರಸ್ತಿಗಾಗಿ ಅಮ್ಮೆಳೆಯ ಮಹಾಜನರಿಗೆ ಸುಂಕಾದಾಯದ ಸ್ವಲ್ಪಭಾಗವನ್ನು ಮತ್ತು ತೆರಿಗೆ ರಹಿತವಾದ ದಾನ ಮಾಡಿದ್ದಲ್ಲದೆ ಅದೇ ಉದ್ದೇಶಕ್ಕಾಗಿ ಮೊದಲುದಾನವನ್ನು ದೃಢೀಕರಿಸಿದ್ದನ್ನು ತಿಳಿಸುತ್ತದೆ.[೪೨]

- ಕ್ರಿ.ಶ. 1512 ಒಬ್ಬ ಸ್ತ್ರೀಯು ಶಾಂತ ಮಲ್ಲಿಕಾರ್ಜುನದೇವರ ದೇವಸ್ಥಾನದ ಬಾವಿಯನ್ನು ದುರಸ್ತಿಗೊಳಿಸಿ ಭೂಮಿ ದಾನ ಮಾಡಿದ್ದನ್ನು ತಿಳಿಸುತ್ತದೆ.[43]
- ಹಾವಿನಹಾಳು (ವೀರಾಪುರ ಪು.ಸಂ.7) ವಿಜಯನಗರದ ಕೃಷ್ಣರಾಯನ ಕ್ರಿ.ಶ. 1529ರಲ್ಲಿ ಬರೆಯಲಾದ ಶಾಸನದಂತೆ ದೊಂಡವಟಿ ಗ್ರಾಮವನ್ನು ರಾಜನಿಂದ ಉಂಬಳಿಯಾಗಿ ಪಡೆದ ಮಲೆಸಾಣಿಗ ಆ ಗ್ರಾಮದಲ್ಲಿ ಒಂದು ಕೆರೆಯನ್ನು ದುರಸ್ತಿಗೊಳಿಸಲು ಭೂಮಿದಾನ ನೀಡಿದ್ದನ್ನು ತಿಳಿಸುತ್ತದೆ.[44]

## ಸಂಭಾವನೆ ಹಾನಿಕಾರಕ ಹಾಗೂ ಪಾಪ

ಮಧ್ಯಕಾಲೀನ ಕರ್ನಾಟಕದಲ್ಲಿ ಕೆರೆಗಳ ನಿರ್ವಹಣೆ ತೀರ್ಥಹಳ್ಳಿಯಲ್ಲಿ ಕಂಡುಬರುವ ಹಲವು ದಾನ ಶಾಸನಗಳಲ್ಲಿ ಕೆರೆಗಳಲ್ಲಿ ನಾಗಕೃತ್ಯವನ್ನು ಘೋರ ಪಾಪ ಕೃತ್ಯಗಳೆಂದು ಹೇಳಲಾಗಿದೆ. ಏಕೆಂದರೆ ಇದನ್ನು ಶಿಶು ಹತ್ಯೆ ಗೋಹತ್ಯೆ ಹಾಗೂ ಬ್ರಾಹ್ಮಣ ಹತ್ಯಗಳೊಡನೆ ಸಮೀಕರಿಸಲಾಗಿದೆ. ಕೆರೆಗಳ ಸಂರಕ್ಷಣೆ ನಮ್ಮೆಲ್ಲರ ಹೊಣೆಯಾಗಿರುತ್ತದೆ. ಒಂದು ಊರಿಗೆ ಬೇಕಾಗುವ ಉಪಯುಕ್ತ ನೀರಿನ ಸೆಲೆಯನ್ನು ಅಂದರೆ ನದಿ ಇಲ್ಲವೆ ಕೆರೆಯನ್ನು ಅದನ್ನು ಕಾಪಾಡುವುದು ನಮ್ಮೆಲ್ಲರ ಹೊಣೆಯಾಗಿರುತ್ತದೆ. ಈ ನಿಟ್ಟಿನಲ್ಲಿ ಅದನ್ನು ಯಾರು ಯಾವುದೇ ರೀತಿಯ ಹಾನಿಗೆ ಒಳಗಾಗದಂತೆ ತಡೆಯಬೇಕು ಎಂದು ದಾಖಲಿಸಿದೆ.

- 10ನೇ ಶತಮಾನದ ಶಾಸನದಲ್ಲಿ ಕೆರೆಯನ್ನು ನಾಶ ಮಾಡಿದವರಿಗೆ ಕರೆಯಲ್ಲಿ ಬ್ರಾಹ್ಮಣರನ್ನು ಕವಿಲಗಳನ್ನು ಕೊಂದ ಪಾಪಕ್ಕೆ ಹೋಗುವರು ಎಂದು ದಾಖಲಾಗಿದೆ.[45]
- 1194 ಕೋಳಗುಂದದ ಶಾಸನದಲ್ಲಿ ಕೆರೆಯನ್ನು ಕಟ್ಟಿದ ಕೇತೂಜನು, ಗಣ ಪೂಜಂಗಳಿಗೆ ಭೂಮಿಯನ್ನು ದಾನ ಮಾಡಿದ್ದನ್ನು ಹೇಳಿದೆ. ಈ ದಾನದ ಧರ್ಮವನು ಕೊಡದವರಿಗೆ ಕೆರೆಯನ್ನು ಒಡೆದ ಪಾಪಬರಲಿ ಎಂದು ಹೇಳಿದ್ದಾರೆ.[46]
- ಮಡಬಲು ಗ್ರಾಮದ ಶಾಸನದ ಪ್ರಕಾರ ಕೆರೆಯೊಂದಕ್ಕೆ ಸಂಬಂಧಿಸಿದಂತೆ ಕೆರೆಹಳ್ಳಿಯವರೊಡನೆ ಉಂಟಾದ ಸಂಘರ್ಷದಲ್ಲಿ ಹಂತಿಯ (ಹಂಚ) ಒಡೆಯನು

ಮರಣ ಹೊಂದಿದನು. ಮರಣ ಹೊಂದಿದ ನಾಯಕನ ನೇತೃತ್ವದಲ್ಲಿ ಹಳ್ಳಿಯ ಪ್ರಜೆಗಳು ಮೃತದ ಸ್ಮರಣಾರ್ಥ ಕೊಳವನ್ನು ಕಟ್ಟಿ ವೀರಗಲ್ಲೊಂದನ್ನು ನಿರ್ಮಿಸಿದರು.[47]

- ಹೊಯ್ಸಳ ವೀರಬಲ್ಲಾಳನ ಶಾಸನದಿಂದ ಕೆರೆಯನ್ನು ಕಟ್ಟಿಸುವಾಗ ಹೇಗೆ ಆರಂಭಿಸುತ್ತಿದ್ದರು ಎಂಬ ಅಂಶವನ್ನು ನಾವು ಮನಗಾಣಬಹುದಾಗಿದೆ. ಮಹಾ ಪ್ರಧಾನನಾದ ಕೂಗಿದೇವ ದಂಡನಾಯಕರು ಕೆರೆಯನ್ನು ಕಟ್ಟಿಸುವುದಕ್ಕಾಗಿ ನಾಲ್ಕು ಹಳ್ಳಿಗಳನ್ನು ಕ್ರಯಕ್ಕೆ ತೆಗೆದುಕೊಂಡು ಪಡುಮಲೇಶ್ವರ ದೇವರಿಗೆ ಹೊದಕೆಯಾಗಿ 2300 ಗದ್ಯಾಣ ಹಾಗೂ 3 ಪರ್ಗನ್ನು ನೀಡಿದನು. ನಾಲ್ಕು ಹಳ್ಳಿಗಳನ್ನು ಅಂದರೆ ನಿರಹಳ್ಳಿ, ಕಾಲೇಯನಹಳ್ಳಿ ಕಾಲುವೆಯಹಳ್ಳಿ ಮತ್ತು ಚೋಳಚ – ಚೋಳನಹಳ್ಳೀಯನ್ನು ನರಸಿಂಹಪುರದ ಮಹಾಜನಗಳಿಂದ ಪಡೆದುಕೊಂಡನು. ಅದು ದೇವದಾನವಾಗಿ ಈ ರಾಜರು ತನ್ನ ಹಸ್ತಾಕ್ಷರದ ಸಹಿತವಾಗಿ ದಾನ ಶಾಸನವನ್ನು ನೀಡಿದ್ದನು ಆದ್ದರಿಂದ ಈ ಹಳ್ಳಿಗಳ ಎಲ್ಲಾ ತೆರಿಗೆಗಳನ್ನು ವಿನಾಯಿತಿಗೊಳಿಸಿ ರಾಜನು ಮಹಾ ಪ್ರಧಾನದ ಮೂಲಕ ಆಜ್ಞೆ ಮಾಡಿದ್ದನು. 8 ಪಣವನ್ನು, ಗಾಡಿಯ ಎತ್ತುಗಳಿಗಾಗಿ, ಕೆಲಸದವರು, ಬಂಡಿಗೆ ಕೆರೆಯಗಾಡಿ, ಅದರ (ಮೇಲ್ವಿಚಾರಕ) ಕೆರೆಯನ್ನು ತೋಡುವುದರ ಮೇಲ್ವಿಚಾರಕರಿಗೆ ಇತರರಿಗೆ ನೀಡಿದ ಹಣದ ವಿವರವಿದೆ. ದೇವಭೋವ ಎರಡು ತೂಬುಗಳನ್ನು ನಿರ್ಮಿಸಿದ, ಕಲ್ಲಿನ ಮೇಲೆ, ಹಿರಿಯಣ್ಣ, ಇತರ ಖರ್ಚು (ಚಿಲುವಾನ ಮುಂತಾದ ಕೆರೆ ಕಟ್ಟಿಸುವು ಖರ್ಚು 226 ಗದ್ಯಾಣ ಪಣ ಎಂದಿದೆ. ಇನ್ನು ಕೆರೆಯ ನಿರ್ವಹಣೆಯ ಗಾಡಿಗಳಿಗಾಗಿ 800 ಗದ್ಯಾಣವನ್ನು ನೀಡಿದ ಒಟ್ಟು 3060 ಗದ್ಯಾಣ ಮತ್ತು 8 ಹಣವನ್ನು ಖರ್ಚುಮಾಡಿ ತನ್ನ ಹೆಂಡತಿಯ ಹೆಸರಿನಲ್ಲಿ ಮಹಾಸಮುದ್ರವನ್ನು ಕಟ್ಟಿಸಿದನು. ಇದನ್ನು ಕೆಡಿದವರ ಪಾಪಕ್ಕೆ ಒಳಗಾಗುತ್ತಾರೆ ಎಂದು ದಾಖಲಾಗಿದೆ. ಈ ಕೆರೆಗೆ ಸಾಕ್ಷಿಗಳೆಂದರೆ, ಆದಿತ್ಯ, ಚಂದ್ರ, ವಾಯು, ಅಗ್ನಿ, ಎರಡು ಭಾಗೀರು, ಹೃದಯ, ಯಮ, ಹಗಲು, ರಾತ್ರಿ, ಮೂರು ಸಂಸ್ಥೆಗಳ ಪತ್ರಧರ್ಮ ಇದನ್ನು ಕೆಡಿಸಿದವರು ನರರಕ್ಕೆ ಹೋಗುವರು.

- ಹಣುಗನ ಹರ ಬಾನೂರುರವರು ಭೂಮಿಯನ್ನು ಕೆರೆಗೆ ನೀಡಿದ್ದಾರೆ ಇದನ್ನು ಕೆಡಿಸಿದವರು ಕತ್ತೆ ಮಾಂಸ, ನಾಯಿ ಮಾಂಸ ತಿಂದ ಪಾಪಕ್ಕೆ ಹೋಗುತ್ತಾರೆ ಎಂದು ಹೇಳಿದ್ದಾರೆ.[48]

## ಪರಾಮರ್ಶನಗಳು


1. ಪ್ರಭಾಕರ್‌ರಾವ್ ಕೆ. – ಮಧ್ಯಕಾಲಿನ ಕರ್ನಾಟಕದಲ್ಲಿ ಕೆರೆಗಳ ನಿರ್ವಹಣೆ, *ಕೆರೆ ನೀರಾವರಿ, ನಿರ್ವಹಣೆ ಚಾರಿತ್ರಿಕ ಅಧ್ಯಯನ,* ರಾಜರಾಮ್ ಹೆಗಡೆ (ಸಂ), ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002, ಪು.ಸಂ.222–228.
2. ಅದೇ
3. ದೀಕ್ಷಿತ್ ಜಿ.ಎಸ್ ಮತ್ತು ಇತರರು – *ಕರ್ನಾಟಕದಲ್ಲಿ ಕೆರೆ ನೀರಾವರಿ,* ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000, ಪು.ಸಂ.29.
4. ಪ್ರಭಾಕರ್‌ರಾವ್ ಕೆ. – ಪೂರ್ವೋಕ್ತ, 2002, ಪು.ಸಂ.222–228.
5. ಅದೇ
6. ರಾಜಶೇಖರಪ್ಪ ಬಿ, – ಚಿತ್ರದುರ್ಗ ಪ್ರದೇಶದ ಕೆರೆಗಳ ನಿರ್ವಹಣೆಯ ಐತಿಹಾಸಿಕ ಅವಲೋಕನ, *ಕೆರೆಯ ನೀರಾವರಿ ಚಾರಿತ್ರಿಕ ಅಧ್ಯಯನ*, ರಾಜರಾಮ್ ಹೆಗಡೆ (ಸಂ), ಕರ್ನಾಟಕ ವಿಶ್ವವಿದ್ಯಾನಿಲಯ, ಹಂಪಿ, 2002, ಪು.ಸಂ.106–128.
7. ದೀಕ್ಷಿತ್ ಜಿ.ಎಸ್ _ ಪೂರ್ವೋಕ್ತ, 2000, ಪು.ಸಂ.56.
8. ಅದೇ
9. ಅದೇ ಪು.ಸಂ.5.
10. ಅದೇ ಪು.ಸಂ.54
11. ಅದೇ ಪು.ಸಂ.114.
12. ಹಾ.ಮ ನಾಯಕ – ಕನ್ನಡ ವಿಶ್ವಕೋಶ, ಸಂ–04, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1977, ಪು.ಸಂ.846–852.
13. ಅದೇ ಪು.ಸಂ. 368.
14. *ವಿಜಯನಗರ ಪ್ರೋಗ್ರೆಸ್ ಆಫ್*, ರಿಪೋರ್ಟ್, 1984–87, ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 1988, ಪು.ಸಂ. 15.
15. ಅದೇ ಪು.ಸಂ.16.

16. *ಇ.ಸಿ.* 03, ಗುಂಡ್ಲುಪೇಟೆ, 64.
17. ಎಂ.ಆರ್.ಎಸ್.ಐ.ಐ 1923-24, ನಂ.434.
18. *ಇ.ಸಿ.* 10, ಅರಸೀಕೆರೆ, 262.
19. *ಇ.ಸಿ.* 10, ಅರಸೀಕೆರೆ, 228.
20. ಪಾಟೀಲ್ ಸಿ.ಎಸ್ ಮತ್ತು ವಿನೋದಾಪಾಟೀಲ್, *ಬಳ್ಳಾರಿ ಶಾಸನಗಳು*, ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 1996, ಸಂ.02, ಪು.ಸಂ.54.
21. *ಇ.ಸಿ.* 07, ನಾಗಮಂಗಲ, 14.
22. ದೀಕ್ಷಿತ್ ಜಿ.ಎಸ್ – ಪೂರ್ವೋಕ್ತ, 2000, ಪು.ಸಂ.183-184.
23. ಪ್ರಭಾಕರ್‌ರಾವ್ ಕೆ. – ಪೂರ್ವೋಕ್ತ, 2002, ಪು.ಸಂ.25-34.
24. ಅದೇ
25. *ಇ.ಸಿ.* 06, ಶ್ರೀರಂಗಪಟ್ಟಣ 48.
26. *ಇ.ಸಿ.* 06, ಶ್ರೀರಂಗಪಟ್ಟಣ 40.
27. *ಇ.ಸಿ.* 06, ಶ್ರೀರಂಗಪಟ್ಟಣ 41.
28. *ಇ.ಸಿ.* 06, ಶ್ರೀರಂಗಪಟ್ಟಣ 254.
29. *ಇ.ಸಿ.* 10, ಅರಸೀಕೆರೆ 80.
30. ದೀಕ್ಷಿತ್ ಜಿ.ಎಸ್ – ಪೂರ್ವೋಕ್ತ, 2000, ಪು.ಸಂ.34 ರ ನಂತರ.
31. ಪಾಟೀಲ್ .ಸಿ.ಎಸ್, – ಬಳ್ಳಾರಿ ಜಿಲ್ಲೆಯ ಶಾಸನಗಳು, ಪು.ಸಂ.46.
32. *ಇ.ಸಿ.* 09, ಬೇಲೂರು 67.
33. *ಇ.ಸಿ.* 05, ಮೈಸೂರು 157.
34. *ಇ.ಸಿ.* 06, ನಾಗಮಂಗಲ 84.
35. *ಇ.ಸಿ.* 03, ನಂಜನಗೂಡು 158.
36. *ಇ.ಸಿ.* 07, ಮಳ್ಳವಳ್ಳಿ 3.
37. ಪ್ರಭಾಕರ್‌ರಾವ್ ಕೆ. – ಪೂರ್ವೋಕ್ತ, 2002, ಪು.ಸಂ.25-34.

38. ಅದೇ
39. ಅದೇ
40. ಅದೇ
41. ARIEP – 1904, 28, SII, IX, No.216.
42. ARIEP – 1903-04, 1904, 59, No.58.
43. ARIEP – 1913-14, No.194.
44. *ಇ.ಸಿ.* 03, ಗುಂಡ್ಲುಪೇಟೆ 58.
45. *ಇ.ಸಿ.* 10, ಅರಸೀಕೆರೆ 299.
46. *ಇ.ಸಿ.* 08, ಹಾಸನ 64.
47. *ಇ.ಸಿ.* 09, ಹೊಳೇನರಸೀಪುರ 42.
48. *ಇ.ಸಿ.* 09, ಬೇಲೂರು 67.

## ಅಧ್ಯಾಯ–ಎಂಟು

# ಕೆರೆಂಯ ನಿರ್ವಹಣೆಯ ಆರ್ಥಿಕ ಸಂಗತಿಗಳು

(ಕೆರೆಯ ಆದಾಯ, ಖರ್ಚು, ವೆಚ್ಚಗಳು, ಕಂದಾಯ ಇತ್ಯಾದಿ)

ಕೆರೆಯನ್ನು ಕಟ್ಟಿದ ಮೇಲೆ ಅದರ ನಿರ್ವಹಣೆ ಮತ್ತು ಮೇಲುಸ್ತುವಾರಿ ಅತ್ಯಂತ ಪ್ರಮುಖವಾಗುತ್ತದೆ ಎಂಬುದನ್ನು ಈಗಾಗಲೇ ಮೇಲಿನ ಅಧ್ಯಾಯನದಲ್ಲಿ ಗಮನಿಸಲಾಗಿದೆ. ಆದರೆ ಕೆರೆಯ ನಿರ್ವಹಣೆಗಾಗಿ ಕೆಲವೊಮ್ಮೆ ದಾನಿಗಳೇ ಹಣವನ್ನು ನೀಡಿರುವುದು, ದಾನವನ್ನು ನೀಡಿರುವುದು ಕಂಡುಬರುವುದಾದರು ಎಲ್ಲಾ ಸಮಯದಲ್ಲಿಯು ನಿರ್ವಹಣೆ ಸುಲಭ ಸಾಧ್ಯವಿಲ್ಲ. ಆದ್ದರಿಂದ ಕೆರೆಯನ್ನು ಕಟ್ಟಿದಾಗಲೇ ಫಲಾನುಭವಿಗಳಿಂದ ಕೆರೆಯ ಅಚ್ಚುಕಟ್ಟು ಪ್ರದೇಶದಲ್ಲಿ ಕಂದಾಯಗಳನ್ನು ವಿಧಿಸುವುದನ್ನು ನಾವು ಕಾಣಬಹುದಾಗಿದೆ. ಕೆರೆಯು ಆದಾಯವನ್ನು ತರುವುದು ಹಾಗೆಯೇ ಖರ್ಚನ್ನು ಸಹ ಉಂಟುಮಾಡುತ್ತದೆ. ಈಗಾಗಲೇ ನಾವು ಗಮನಿಸಿದಂತೆ ಕೆರೆಯ ವೈಶಿಷ್ಟತೆ ಅದರ ಅಚ್ಚುಕಟ್ಟು ಪ್ರದೇಶ ಇವುಗಳ ಅನುಗುಣವಾಗಿ ಆದಾಯ ಮತ್ತು ಖರ್ಚುಗಳು ಅದನ್ನು ಅವಲಂಭಿಸಿರುತ್ತದೆ. ಈಗಾಗಿ ಕೆರೆಯನ್ನು ನಿರ್ವಹಣೆ ಮಾಡಲು ಈಗಾಗಲೇ ತಿಳಿದುಬಂದಂತೆ ಅತ್ಯವಶ್ಯಕ ಎಂದರೆ ನಮ್ಮಲ್ಲಿ ಒಬ್ಬ ಮೇಲ್ವಿಚಾರಕರು, ಬಂಡಿಗಾರರು, ಮೇಸ್ತ್ರಿ, ಮೀನುಗಾರರು, ಮರಗೆಲಸ ಮಾಡುವವರು, ಕಲ್ಲುಗಳನ್ನು ಒಡೆಯುವವರು, ಇವರೆಲ್ಲರು ಮುಖ್ಯರಾಗುತ್ತಾರೆ. ಇವುಗಳ ಜೊತೆಗೆ ಬಂಡಿಗಾಗಿ ಹೂಡುವ ಎತ್ತುಗಳ ನಿರ್ವಹಣೆಯ ಅದರಲ್ಲಿ ಸೇರಿಕೊಂಡಿರುತ್ತದೆ. ಹಾಗೆ ಗಾಡಿಯ ಕೀಲುಗಳಿಗೆ ಹಾಕುವ ಎಣ್ಣೆಯು ಸಹ ಸೇರಿಕೊಂಡಿರುತ್ತದೆ ಈ ಎಲ್ಲಾ ದೃಷ್ಟಿಯಿಂದ ನೋಡಿದಾಗ ಇವೆಲ್ಲದ್ದಕ್ಕೂ ಸಹ ನಿರ್ವಹಣೆ ಮಾಡಲೂ ಹಣದ ಅವಶ್ಯಕತೆಯೂ ಕಂಡುಬರುತ್ತದೆ.

ಈ ರೀತಿ ನಿರ್ವಹಣೆಗಾಗಿ ವ್ಯಯ ಮಾಡಲು ಹಣವನ್ನು ಖರ್ಚು ಎಂದು ಕರೆಯುತ್ತೇವೆ. ಇದನ್ನು ಕೆರೆಯ ಅಚ್ಚುಕಟ್ಟು ಪ್ರದೇಶದಿಂದ ಬರುವ ಭೂಮಿಯ ಮೇಲಿನ

ತೆರಿಗೆಯನ್ನು ನಾವು ಆದಾಯ ಎಂದು ಕರೆಯಬಹುದು. ಇದನ್ನು ಕಂದಾಯದ ರೂಪದಲ್ಲಿ ವಸೂಲಿ ಮಾಡಲಾಗುತ್ತಿತ್ತು.

ಕೆರೆಯ ಮೊದಲ ಭೂಮಿಯಿಂದ ಹಿಡಿದು ಕೆರೆಯಿಂದ ನೀರನ್ನು ಪಡೆದುಕೊಳ್ಳುವ ಕೊನೆಯ ಭೂಮಿಯವರೆಗೂ ವಿವಿಧ ರೀತಿಯ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು. ಅದರಲ್ಲಿ ಕೆರೆಸುಂಕ, ಪನ್ನಾಯ, ಪರ್ಜುಂಕ, ಬಣ್ಣದಗೆರೆ, ಬಿತ್ತುವಾಟ, ಬೀಜವರಿ, ಮುಂತಾದ ಕಂದಾಯವನ್ನು ಇತರ ಸುಂಕಗಳೊಡನೆ ವಿಧಿಸಲಾಗುತ್ತಿತ್ತು. ಸಿದ್ದಯ್ಯ, ಅಸ್ತೀಣ ಸಿದ್ದಯ್ಯ, ಬಾಡಿಗೆ ದೆರೆ, ವಧುವರದೆರೆ ಮುಂತಾದ ಕಂದಾಯಗಳಿದ್ದರೆ ಕೆರೆಗೆ ವಿಶೇಷವಾದ ತೆರಿಗೆಯಿತ್ತು. ಉದಾಹರಣೆಗೆ ಕುಲೋತ್ತುಂಗ ಚಟ್ಟಿನ ಸಿಂಧುವಳ್ಳಿಯ ಶಾಸನದಲ್ಲಿ ಬಿತ್ತುವಟ್ಟ ಅರುವಣ ಮುಂತಾದ ತೆರಿಗೆಗಳನ್ನು ವಿಧಿಸಲಾಗಿದೆ.

ವಿಜಯನಗರದ ಮಹಾ ಸಾಮ್ರಾಟ ಕೃಷ್ಣದೇವರಾಯರ ಮೇರು ಕೃತಿ ಅಮುಕ್ತಮೌಲ್ಯದಲ್ಲಿ ಕೆರೆಗಳನ್ನು ಕಾಲುವೆಗಳನ್ನು ರಚಿಸಿ ಕೃಷಿಕರಿಗೆ ತೆರಿಗೆ ಹಾಕಿದರೆ ರಾಜ್ಯದ ಸಂಪತ್ತು ಹೆಚ್ಚುತ್ತವೆ ಎಂದು ಹೇಳುತ್ತಾನೆ.

ಮೊದಲಿಗೆ ಕೆರೆಯನ್ನು ಕಟ್ಟಿಸುವ ಮುಖ್ಯವಾದ ಉದ್ದೇಶವೆಂದರೆ ಗ್ರಾಮದ ಸಂಪತ್ತು ತನ್ಮೂಲಕ ರಾಜ್ಯದ ಆರ್ಥಿಕತೆಯನ್ನು ಹೆಚ್ಚಿಸುವುದೇ ಆಗಿದೆ. ಏಕೆಂದರೆ ಬೆದ್ದಲು ಭೂಮಿ ಅಂದರೆ ಕೃಷಿಗೆ ಯೋಗ್ಯವಾದ ಭೂಮಿಯಾಗಿದ್ದರೂ ಸಹ ನೀರಾವರಿಯ ಸೌಲಭ್ಯವಿಲ್ಲದೆ ಒಣಗಿದ್ದ ಕೃಷಿ ಭೂಮಿಗಳನ್ನು ನೀರಾವರಿಗಳಿಗೆ ಬಳಸಿದರೆ ಆ ಪ್ರದೇಶದ ಜನಸಾಮಾನ್ಯರ ಬದುಕು ಅಸನವಾಗುತ್ತದೆ, ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯಬಹುದು. ತನ್ಮೂಲಕ ರಾಷ್ಟ್ರದ ಸಂಪತ್ತನ್ನು ಮತ್ತು ಆರ್ಥಿಕತೆಯನ್ನು ಹೆಚ್ಚಿಸಲುಬಹುದು ಎಂಬುದು ಪ್ರಾಯೋಜನ ನಂಬಿಕೆಯಾಗಿತ್ತು. ಪೌರಾಣಿಕವಾಗಿ ಶಾಸ್ತ್ರಗಳ ಮತ್ತು ಧರ್ಮಗಳ ಆಧಾರದಲ್ಲಿ ಸ್ವರ್ಗ ಮೋಕ್ಷ ಎಂಬ ವಿಚಾರಗಳು ಸತ್ವವಾಗಿದ್ದರೂ ಸಹ ಅದು ಅದೃಷ್ಟದ ಫಲಗಳಾಗಿದ್ದವು. ಆದ್ದರಿಂದ ಅದೃಷ್ಟವಾದ ಫಲ ಎಂದರೆ ಕಣ್ಣಿಗೆ ಕಾಣುವ ಪ್ರಮುಖ ವಿಚಾರವೆಂದರೆ ಅದು ಆರ್ಥಿಕತೆಯಲ್ಲಿನ ಹೆಚ್ಚಳ. ಕೆರೆಯನ್ನು ಕಟ್ಟುವ ವೆಚ್ಚವನ್ನು ಮತ್ತು ಕೆರೆಯ ನಿರ್ವಹಣೆಗಾಗಿ ವ್ಯಯಿಸುವ ಖರ್ಚನ್ನು

ಲೆಕ್ಕಮಾಡಿ ಅದರ ಆಧಾರದ ಮೇಲೆ ಕಂದಾಯವನ್ನು ವಿಧಿಸಲಾಗಿರುವುದು ಎಲ್ಲರಿಗೂ ತಿಳಿದ ವಿಷಯ.

ಕೆರೆಯ ಖರ್ಚಿಗೆ ಕಾರಣವಾದ ಅಂಶಗಳು ಯಾವುದೆಂದರೆ ಅಗೆಯುವುದು, ಕಲ್ಲು ಒಡೆಯುವುದು, ಮೇಸ್ತ್ರಿ, ಕಮ್ಮಾರನ ಖರ್ಚು, ಬಂಡಿಯ ಖರ್ಚು, ಬಂಡಿಕಾರರು, ಎತ್ತುಗಳ ನಿರ್ವಹಣೆ, ಕೂಲಿ ಆಳುಗಳ ನಿರ್ವಹಣೆ, ಇವರೆಲ್ಲರ ಖರ್ಚಿನ ಮೂಲಕ ಕೆರೆಗೆ ವ್ಯಯಿಸಿದ ಮೊತ್ತವನ್ನು ನಿರ್ಧರಿಸಲಾಗುತ್ತದೆ. ಕೆಲವೊಮ್ಮೆ ಕೆರೆ ಕಟ್ಟಿಸುವವನು ತನ್ನದೆ ಖರ್ಚಿನಲ್ಲಿ ಕಟ್ಟಿ ದಾನ ಮಾಡುತ್ತಿದ್ದರು. ಅದು ವೈಯಕ್ತಿಕವಾಗಿ ಧರ್ಮದ ನೆಲೆಗಳಲ್ಲಿ ಕಟ್ಟಲಾಗುತ್ತದೆ ಕೆರೆಗಳಾಗುತ್ತಿದೆ. ಉದಾ: ಶಾಸನದ ಪ್ರಕಾರ ವಿಷ್ಣುವರ್ಧನ ಮಹಾರಾಜನ ಕಾಲದಲ್ಲಿ ಮಹಾದೇವ ಪಂಡಿತ ಮತ್ತು ರುದ್ರಶಿನ ಪಂಡಿತರು ನಿರಗುಂದ ನಾಡಿನ ನವಿಲೆಯಲ್ಲಿ ಒಂದು ದೇವಾಲಯ ಮತ್ತು ಕೆರೆಯನ್ನು 60 ಹೊನ್ನುಗಳನ್ನು ಖರ್ಚುಮಾಡಿ ಕಟ್ಟಿಸಿದರು. ಈ ರೀತಿ ಖರ್ಚುಮಾಡಿದ ಹಣವನ್ನು ಅವರೇನು ಕಂದಾಯದ ಮೂಲಕ ಮರಳಿ ವಸೂಲು ಮಾಡಲಿಲ್ಲ. ಕಾರಣವೇನೆಂದರೆ ವೈಯಕ್ತಿಕ ದಾನಿಗಳು ಕಟ್ಟಿಸಿದ ಕೆರೆಯಾಗಿತ್ತು. ಅವರು ದೇಶದ ಹಿತಕ್ಕಾಗಿ ಅದನ್ನು ಮಾಡುತ್ತಿದ್ದರು. ಆದರೆ ಸಾಮ್ರಾಜ್ಯದ ದೃಷ್ಟಿಯಿಂದ ರಾಜ್ಯಗಳು ಕೆರೆಗಳನ್ನು ಕಟ್ಟಿಸಿದರೆ ಕೆರೆಯ ಕಟ್ಟಿಸುವುದಕ್ಕಿಂತ ಮುಂಚೆ ಇದ್ದ ಕಂದಾಯವನ್ನು ಅವು ಪರಿಷ್ಕರಿಸುತ್ತಿದ್ದರು. ಉದಾ: ದಂಡನಾಯಕನೊಬ್ಬನು ಕಟ್ಟಿಸಿದ ಕೆರೆಗಳನ್ನು ನಾವು ನೋಡಬಹುದು.

ವೀರನರಸಿಂಹ ದೇವರ ಆಡಳಿತ ಕಾಲಕ್ಕೆ ಬೆಳ್ಳೂರು ಮಹಾಜನರು ಮತ್ತು ಶ್ರೀರಂಗಪಟ್ಟಣದ ಜನರಿಗೆ ಒಂದು ಒಪ್ಪಂದವಾಯಿತು. ಅದಕ್ಕೆ 4 ಗ್ರಾಮದ ಜನಗಳು ಸಾಕ್ಷಿಯಾಗಿದ್ದರು. ಉದ್ಧವ ಬಣ್ಣಿನಾಥಪುರ ಅಥವಾ ಬಾಳುಗ ದಡಿಗೆ, ಅರಣಿ ಮತ್ತು ಚಾಕ್ಕೈನಹಳ್ಳಿ ಇದರ ಪ್ರಕಾರ ಪೆರುಮಾಳ ದಂಡನಾಯಕನು ಬಹಳ ಹಣ ಖರ್ಚುಮಾಡಿ ದೊಡ್ಡದಾದ ಅಲ್ಲಾಳ ಸಮುದ್ರವನ್ನು ಕಟ್ಟಿಸಿದನು. ಅದು ಯಾವಾಗಲೂ ನೀರಿನಿಂದ ತುಂಬಿರುವ ಕೆರೆ ಅದರ ಕೆಳಗೆ ಕೋಡಿಗಳ ಮುಂದೆ ಬೆದ್ದಲು ಇದ್ದ ಪ್ರದೇಶ ಗದ್ದೆಯಾಯಿತು.

ಹೊಸ ಕೆರೆಗಳ ಕಾಮಗಾರಿಯ ಸಂದರ್ಭದಲ್ಲಿ ತೆರಿಗೆಯನ್ನು 5 ವರ್ಷಗಳ ಕಾಲ ಮನ್ನ ಮಾಡತಕ್ಕದ್ದು ಎಂದು ಸಹ ತಿಳಿಯಬಹುದು.

೮ನೇ ಶತಮಾನಕ್ಕೆ ಸಂಬಂಧಿಸಿದ ಗಂಗರಾಜ 1ನೇ ಮಾಧವನ ನಂದಿ ಶಾಸನದಲ್ಲಿ ಪೂನೂರು ಕೆರೆ ಕೆಳಗೆ 10 ಖಂಡುಗ ಭೂಮಿ ದಾನ ಎತ್ತಿದದು ದಾಖಲಾಗಿದೆ. ಭೂಧಾನ ಪಡೆದಂತ ಉತ್ಪನ್ನದ 1/6 ಭಾಗ ಸುಂಕವಾಗಿ ತೆತ್ತು (ಆರು ತೊಂಡಿ) ಕೃಷಿ ಮಾಡಬೇಕಾಗಿತ್ತು.

ಸಾಮಾನ್ಯವಾಗಿ ಎಲ್ಲಾ ಭೂಮಿಯ ಮೇಲೆ ರಾಜಪ್ರಭುತ್ವ ಜನರ ಮೇಲೆ ತೆರಿಗೆಯನ್ನು ಏರುತ್ತಿದ್ದರು. ಆ ತೆರಿಗೆಗಳು ಅಥವಾ ಕಂದಾಯಗಳು ಸಾಮಾನ್ಯ ಬೇಸಾಯಗಾರರಿಗೆ ಯಾವುದೇ ರೀತಿಯಲ್ಲಿ ತೊಂದರೆಯನ್ನು ಕೊಡಬಾರದು ಎಂಬುದು ಅರ್ಥಶಾಸ್ತ್ರ ಮತ್ತು ಧಾರ್ಮಿಕ ಕಾವ್ಯಗಳಾದಂತಹ ಮಹಾಭಾರತದಲ್ಲಿ ಸ್ಪಷ್ಟವಾಗಿ ಹೇಳಿದೆ. ಸಾಮಾನ್ಯವಾಗಿ ಭೂಮಿಯ ಮೇಲೆ ಅನೇಕ ತೆರಿಗೆಗಳನ್ನು ವಿಧಿಸಲಾಗಿತ್ತು. ಅವುಗಳೆಂದರೆ ಸೇಸೆ, ಸಿದ್ದಾಯ, ಮಳಬ್ರಯ, ಹೊಂಬಳಿ, ಮಲ್ಲಿಗೆ, ಸೊಲ್ಲಿಗೆ, ತೀರಿಪತ್ರ, ವೃತ್ರೋತ್ಥಾರಿತ ತಟಕ ಸೀಸ, ಆನೆಸೇಸೆ, ಪಟ್ಟಬಂದ, ಪಟ್ಟಬಂದೋತ್ಸವ, ಮುಂತಾದ ತೆರಿಗೆಗಳನ್ನು ಉಲ್ಲೇಖಿಸಲಾಗಿದೆ.

ಈ ರೀತಿ ಕಂದಾಯಗಳಿದ್ದರು ನಮ್ಮ ಅಧ್ಯಾಯನದಲ್ಲಿ ಇತರೆ ಕಂದಾಯ ಬರುವುದಿಲ್ಲ. ಈ ಎಲ್ಲಾ ಕಂದಾಯಗಳು ರಾಜ್ಯವನ್ನು ನಡೆಸುವುದಕ್ಕಾಗಿ ಕೂಡಿಕೊಂಡಿವೆ ಹೊರತು ಕೆರೆಗಾಗಿ ಮಾಡಿದಂತಹದಲ್ಲ. ಕೆರೆಗಾಗಿ ಮಾಡಿದ ವಿಶೇಷ ತೆರಿಗೆ ಎಂದರೆ ಬಿತ್ತುವಟ್ಟಿ ಅಥವಾ ಬಿತ್ತುವಾಟ.

ಬಿತ್ತುವಟ್ಟಿ ಎಂದರೆ ಕೆರೆಯ ನಿರ್ವಹಣೆಗಾಗಿ ಮತ್ತು ದುರಸ್ತಿಗಾಗಿ ಅದನ್ನು ನಿರ್ಮಾಣ ಮತ್ತು ಸಂರಕ್ಷಣೆಯ ಕೆಲಸಕ್ಕಾಗಿ ಕೆರೆಯನ್ನು ನಿರ್ಮಾಣ ಮಾಡಿದ ವ್ಯಕ್ತಿಗೆ ಅಥವಾ ವ್ಯಕ್ತಿಗಳಿಗೆ ಭೂಮಿಯನ್ನು ದಾನ ಮಾಡುವುದಕ್ಕೆ ಬಿತ್ತವಟ್ಟ ಎಂದು ಕರೆಯುತ್ತದೆ. (ಸಾಮಾನ್ಯವಾಗಿ ಮೇಲೆ ಹೇಳಿದ ಶಾಸನದ ಪ್ರದೇಶವು ಗದ್ದಾಯದ ನಂತರ ಗದ್ದಗೆ

ಸುಂಕಗಳನ್ನು ಆದರೆ ನಾವು ಈ ಉಹಾಹರಣೆಗಳನ್ನು ನೀಡಿದರೂ ಸಹ) ಕಂದಾಯ ಹೆಚ್ಚು ಅಥವಾ ಕಡಿಮೆ ಮಾಡುವುದನ್ನು ಸರ್ಕಾರ ನಿಗದಿಪಡಿಸಿತ್ತು ವಿನಹ ವೈಯಕ್ತಿಕ ವ್ಯಕ್ತಿಗಳಾಗಲಿ ಸರ್ಕಾರವೇ ಆಗಲಿ ಕಟ್ಟಿಸಿದ ಕೆರೆಯಲ್ಲಿಯು ಸಹ ಕಂದಾಯವನ್ನು ನಿಗಧಿ ಪಡಿಸುವ ಹಕ್ಕು ಸರ್ಕಾರಕ್ಕೆ ಇತ್ತು ಎನ್ನುವುದರಲ್ಲಿ ನಮಗೆ ಪ್ರಮುಖ ಸಾಕ್ಷಿಗಳು ಸಿಗುತ್ತದೆ ಅಂದರೆ ಭೂಮಿಯ ಮೇಲಿನ ಎಲ್ಲಾ ಅಧಿಕಾರವು ಸ್ವಯಂ ದತ್ತವಾಗಿ ರಾಜನಿಗೆ ಸಲ್ಲುತ್ತಿತ್ತು. ಆಲ, ಪಕ್ಷಣ, ನಿಧಿ, ನಿಕ್ಷೇಪ, ಅಕ್ಷಣಿ, ಅಗಾಲುನಿ ಎಂಬ ಎಲ್ಲಾ ವಿಷಯಗಳಲ್ಲೂ ರಾಜನಿಗೆ ಪರಮಾಧಿಕಾರ ಇತ್ತು ಎಂದು ಶಾಸನಗಳಿಂದ ತಿಳಿದುಬರುತ್ತದೆ.

(ಅರ್ಥಶಾಸ್ತ್ರದಲ್ಲಿ ಕಂದಾಯವಿತ್ತು ಸಂಬಂಧವಿದ್ದಂತೆ ಈ ವಿತರಣೆಯು ಸಿಗುತ್ತದೆ.) ಪ್ರಾಚೀನ ಕಾಲದಲ್ಲಿ ಎಲ್ಲಾ ಭೂಮಿಗಳ ಮೇಲೆ ನಿಗದಿಪಡಿಸಲಾದ ಕಂದಾಯವನ್ನು ವಿಧಿಸಲಾಗುತ್ತಿತ್ತು. 1/6 ಭಾಗ 1/10 ಭಾಗ ಹೇಗೆ ಭೂಮಿಯ ಫಲವತ್ತತೆಯ ಆಧಾರದ ಮೇಲೆ ಕಂದಾಯವನ್ನು ನಿಗದಿ ಪಡಿಸಲಾಗುತ್ತಿತ್ತು. ಆದರೆ ಈ ಭೂಮಿಗಳಿಗೆ ಕೆರೆಯ ನೀರನ್ನು ಬಳಸಿಕೊಂಡಂತಹ ಭೂಮಿಗಳ ರೀತಿ ಅದರ ಉತ್ಪನ್ನದ 1/3 ಅಥವಾ 1/4 ಭಾಗ ತೆರೆಬೇಕಾಗಿತ್ತು.

ನೀರಾವರಿ ಏನೇ ಇರಲಿ ನೈಸರ್ಗಿಕ ನದಿ ತಟಾಕ ಕೆರೆ ಹಾಗೂ ಬಾವಿಗಳಿಂದ ನೀರನ್ನು ಬಳಸುವುದಕ್ಕೆ ಅಧಿಕ ತೆರಿಗೆ ವಿಧಿಸುವ ಅಧಿಕಾರವು ರಾಜ್ಯಕ್ಕೆ ಇತ್ತು ಎಂದು ಊಹಿಸಬಹುದು. ಅಂದರೆ ಭೂಮಿಯ ಮೇಲಿನ ಅಥವಾ ಭೂಮಿಯ ಒಳಗಿನ ಎಲ್ಲಾ ಜಲ ಮೂಲಗಳ ಮೇಲೆಯೂ ಪ್ರಭುತ್ವಕ್ಕೆ ಇದ್ದ ಪರಮಾಧಿಕಾರವನ್ನು ಅರ್ಥಶಾಸ್ತ್ರ ತಿಳಿಸುತ್ತದೆ. ಹಾಗೆ ಇಂತಹ ನೀರಿನ ಬಳಕೆಯ ಪ್ರಮಾಣದ ಮೇಲೆ ಪ್ರಭುತ್ವವು ತೆರಿಗೆಯನ್ನು ವಿಧಿಸುವ ಪರಿಪೂರ್ಣ ಹಕ್ಕನ್ನು ಹೊಂದಿತ್ತು. ಇಷ್ಟೆಲ್ಲಾ ಪ್ರಭುತ್ವಕ್ಕೆ ಪರಮಾಧಿಕಾರವಿದ್ದರು ಅಂಥ ಹಕ್ಕನ್ನು ಜಾರಿ ಮಾಡುವುದು ಬಲತ್ಕಾರದಿಂದ ಆಗಬಾರದು. ಹಾಗೆ ಅಂತ ತೆರಿಗೆ ಕೃಷಿಕನಿಗೆ ಅಥವಾ ಬೇಸಾಯಗಾರನಿಗೆ ತೊಂದರೆ ಉಂಟುಮಾಡದಂತೆ ವಿಧಿಸಬೇಕು ಎಂಬುದನ್ನು ತಿಳಿಯಬಹುದು.

ವಾಯು ಶಕ್ತಿಯಿಂದ ಅಥವಾ ಎತ್ತುಗಳ ನೆರವಿನಿಂದ ಇಲ್ಲಿನ ಕೆರೆಗಳ ಕೆಳಗೆ ಭೂಮಿ ವಿಧಾನ ಹೂತೋಟಗಳಲ್ಲಿ ಬೆಳೆಯಲಾದ ಬೆಳೆಗಳಲ್ಲಿ ಬೇಸಾಯಗಾರನಿಗೆ ತೊಂದರೆ ಆಗದಷ್ಟು ಪ್ರಮಾಣದ ಉತ್ಪನ್ನಗಳು ಪ್ರಭುತ್ವಕ್ಕೆ ಕೊಡಬಹುದು.

ಅಥವಾ ಮತ್ತೊಂದು ಅಭಿಪ್ರಾಯದ ಪ್ರಕಾರ ಕೆರೆಯ ಸಂರಕ್ಷಣೆಗಾಗಿ ಹುಟ್ಟುವಳಿಯ ಒಂದು ಭಾಗ ನೀಡುವುದು ಎಂಬ ಅಭಿಪ್ರಾಯವು ಸಹ ಇದೆ. ಸಾಮಾನ್ಯವಾಗಿ ಕೆರೆಯ ಮುಂಭಾಗದ ಪ್ರಥಮ ವರದಿಯಲ್ಲಿ ಈ ಬಿತ್ತುವಟ್ಟವನ್ನು ಕೊಡಲಾಗುತ್ತಿತ್ತು. ಏಕೆಂದರೆ ಪ್ರತಿಯೊಂದು ಕೆರೆಗೂ ಕಟ್ಟಿದ ನಂತರ ಅದರ ನಿರ್ವಹಣೆ ಅತ್ಯಂತ ಪ್ರಮುಖ ವಿಷಯವಾಗಿತ್ತು. ಆದ್ದರಿಂದ ಬಿತ್ತುವಟ್ಟವನ್ನು ನಾವು ಕೆರೆಯ ನಿರ್ವಹಣೆಯಲ್ಲಿ ಅತ್ಯಂತ ಪ್ರಧಾನ ತೆರಿಗೆಯನ್ನಾಗಿ ನಾವು ಕಾಣುತ್ತೇವೆ. ಸಾಮಾನ್ಯ ಬೆದ್ದಲು ಪ್ರದೇಶವಾದ ಭೂಮಿಯು ಕೃಷಿಗೆ ಯೋಗ್ಯವಾಗಿದ್ದರೂ ಉತ್ಪನ್ನಗಳಿಲ್ಲದೆ ಇದ್ದ ಭೂಮಿಯು ಕೆರೆಯ ನಿರ್ಮಾಣದ ನಂತರ ಹಸೂರೀಕರಣವಾಗುವುದಲ್ಲದೆ ತನ್ಮೂಲಕ ರಾಷ್ಟ್ರದ ಸಂಪತ್ತನ್ನು ಹೆಚ್ಚಿಸುವಲ್ಲಿ ಅನನ್ಯ ಪಾತ್ರವನ್ನು ವಹಿಸುತ್ತದೆ. ಆದ್ದರಿಂದ ಬಹುತೇಕ ಶಾಸನಗಳಲ್ಲಿ ನಾವು ಬಿತ್ತುವಟ್ಟದ ಉಲ್ಲೇಖಗಳನ್ನು ಕಾಣುತ್ತೇವೆ.

ಕೆರೆಯ ಸುಂಕ ವಿಧಿಸುವ ಪದ್ಧತಿಯು ಮಧ್ಯಯುಗದಲ್ಲಿ ಕಂಡುಬರುತ್ತದೆ ನದಿ ಸುಂಕ, ಹೊನ್ನಯ್ಯ, ಪರ್ಜುಂಕ, ಬಣ್ಣದದೆರೆ, ವೀಳ್ಯದೆರೆ ಮೇಲಿನ ಹಾಗೆ ದಂಡದ ಬಾಬ್ತುಗಳಲ್ಲಿ ಭಾಗಕ್ಕೆ ಕೆಲವೊಮ್ಮೆ ಪೂರ್ಣಭಾಗ ಕೆರೆಯ ನಿರ್ವಹಣೆಗೆ ನೀಡಬೇಕಾಗುತ್ತದೆ.[1]

ಕೆರೆಯ ಮೀನುಗಾರಿಕೆಯಿಂದ ಬರುವ ಆದಾಯ ಹಾಗೆಯೇ ಕೆರೆಯ ರಸ್ತೆ, ಮೊದಲಾದವುಗಳ ದುರಸ್ತಿಗಾಗಿ ಮಧ್ಯಯುಗದಲ್ಲಿ ರಾಜ್ಯವು ಪ್ರಜೆಗಳಿಂದ ಬದ್ಧ (ಮರಬಟ್ಟಿ) ಎಂಬ ಕಡ್ಡಾಯ ಸೇವೆ ಪಡೆಯುತ್ತಿದೆ.

ಬಿತ್ತುವಟ್ಟಿಯ ಬಗ್ಗೆ ಶಾಸನಗಳಲ್ಲಿ ಈ ಕೆಳಗಿನಂತೆ ಕಾಣಬಹುದು. ಬಿತ್ತುವಾಟದ ಬಗ್ಗೆ ಸುತ್ತಲಿನಲ್ಲಿ ದೊರೆತಿರುವ ಶಾಸನವು ಈ ರೀತಿ ತಿಳಿಸುತ್ತದೆ. ಈ ಶಾಸನವು

ರಾಜೇಂದ್ರ ವರ್ಮನ ಕಾಲಕ್ಕೆ ಸೇರಿದ್ದು, ಕ್ರಿ.ಶ. 1132ರಲ್ಲಿ ದಾನವನ್ನು ನೀಡಿದ್ದಾಗಿ ಉಲ್ಲೇಖಿಸಲಾಗಿದೆ. ಕೆರೆಯ ನಿರ್ವಹಣೆಗಾಗಿ ಬಿತ್ತುವಟ್ಟಿ ಭೂಮಿಯನ್ನು ದಾನವಾಗಿ ನೀಡಿದನೆಂದು ಉಲ್ಲೇಖಿಸುತ್ತದೆ. ಅಲ್ಲಾದೆ ಈ ಶಾಸನದ ವಿಶೇಷತೆ ಎಂದರೆ ಕೆರೆ ನಿರ್ವಹಣೆಗೆ ಬೇಕಾದಂತಹ ಹಣ ಅಥವಾ ಧನ ಎಂದರೆ ದುಡ್ಡು ದಶವಟ್ಟಿಗೆ, ಅರವೆಗತ್ತಿ ಎಂಬುದನ್ನು ಉಲ್ಲೇಖಿಸಲಾಗಿದೆ. ಆದರೆ ಅರವೆಗಳ ಎಂದರೆ ಯಾವ ರೀತಿಯ ತೆರಿಗೆ ಎಂದು ತಿಳಿದುಬಂದಿಲ್ಲ.[2]

ಹಾಗೆಯೇ ಇನ್ನೊಂದು ಶಾಸನವು ಕಾರ್ಯ ಎಂಬ ಊರಿನಲ್ಲಿ ದೊರೆತಿದ್ದು, ಈ ಶಾಸನವು ಸತ್ಯವಾಕ್ಯ ವರಮಾನ ಇಯ ಕಾಲದಲ್ಲಿ ಅಂದರೆ ಕ್ರಿ.ಶ. 968ರಲ್ಲಿ ಹೊರಡಿಸಿದಂತಹದ್ದಾಗಿದ್ದು, ಈ ಶಾಸನದಲ್ಲಿ 4 ಖಂಡುಗ ಬೆಳೆಯುವ ಭೂಮಿಯನ್ನು ದೇವಿಗೆರೆ ಮತ್ತು ಪೆರಿಯ ಕೆರೆಗಳ ನಿರ್ವಹಣೆಗಾಗಿ ಬಿತ್ತುವಟ್ಟಕ್ಕಾಗಿ ನೀಡಲಾಯಿತು ಎಂದು ತಿಳಿಸುತ್ತದೆ. ಅಲ್ಲದೆ ಈ ಕೆರೆಯನ್ನು ನಾಗವರ್ಮ ಎಂಬುವವನು ಕಟ್ಟಿಸಿದನೆಂದು ಸಹ ತಿಳಿಸುತ್ತದೆ.[3]

10ನೇ ಶತಮಾನಕ್ಕೆ ಸೇರಿದಂತಹ ಶಾಸನವೊಂದು ಬೆಳತ್ತೂರಿನಲ್ಲಿ ದೊರೆತಿದ್ದು ಈ ಶಾಸನವು ಸಹ ಬಿತ್ತುವಟ್ಟಿಯ ಬಗ್ಗೆ ಪ್ರಸ್ತಾಪಿಸಲಾಗಿದೆ. ಇದರಲ್ಲಿ ಭೂತುಗ ಕೊಂಗಣಿ ಸಹ ಬಿತ್ತುವಟ್ಟಿಯ ಬಗ್ಗೆ ಪ್ರಸ್ತಾಪಿಸಲಾಗಿದೆ. ಇದರಲ್ಲಿ ಭೂತುಗ ಕೊಂಗಣಿ ಎಂಬುವವನಿಂದ ಕಟ್ಟಲ್ಪಟ್ಟಂತಹ ತೆರೆಗೆ 10 ಖಂಡುಗ ಭೂಮಿಯನ್ನು ತೆರಿಗೆ ಬಿತ್ತುವಟ್ಟವಾಗಿ ನೀಡಲುಗಿರುವುದನ್ನು ಉಲ್ಲೇಖಿಸಲಾಗಿದೆ.[4]

ಬಸವನಪುರ ಎಂಬಲ್ಲಿ ದೊರೆತಿರುವ ಗಂಗರ ಕಾಲದ ಶಾಸನವೊಂದರಲ್ಲಿ ಸತ್ವದಿಂದ ಪೆರ್ಮೊನಡಿ ಎರೆಯಪ್ಪರಸರ ಕಾಲದಲ್ಲಿ ಆಳ್ವಿಕೆ ನಡೆಸುತ್ತಿದ್ದಾಗ ಗೋವಿಂದ ಎಂಬುವನು ಕೆಲವು ಬಿತ್ತುವಾಟವನ್ನು ಕೆರೆಯ ನಿರ್ವಹಣೆಗಾಗಿ ನೀಡಿದನೆಂದು ತಿಳಿಸುತ್ತದೆ. ಈ ಬಿತ್ತುವಾಟ ಭೂಮಿಯನ್ನು ಕೆರೆಯನ್ನು ಕಟ್ಟಿಸಿದಂತಹ ಉತ್ತಮ ಗಾವುಂಡನಿಗೆ ನೀಡಲಾಯಿತು. ಅದು 6 ಖಂಡುಗ ಪತ್ತುಂಡಿ ಅಂದರೆ 1/10 ಭಾಗ

ಉತ್ತಮ ಗೌಡನಿಗೆ ಕೊಡುಗೆ ಎಂದು ಉಳಿದುದ್ದನ್ನು ಬಿತ್ತುವಟ್ಟಕ್ಕಾಗಿ ಎಂದು ಉಲ್ಲೇಖಿಸಲಾಗಿದೆ.[5]

12ನೇ ಶತಮಾನಕ್ಕೆ ಸಂಬಂಧಿಸಿದ ಕುಟಿಕೆರೆ ಎಂಬ ಗ್ರಾಮದಲ್ಲಿ ದೊರೆತಿರುವ ಶಾಸನದಲ್ಲಿ ಬಿತ್ತುವಟ್ಟಿಯ ಬಗ್ಗೆ ಉಲ್ಲೇಖಿಸಲಾಗಿದೆ. ಆದರೆ ಹೆಚ್ಚು ವಿಷಯಗಳು ಈ ಶಾಸನದಲ್ಲಿ ತಿಳಿದು ಬಂದಿಲ್ಲ.[6]

1180ರಲ್ಲಿ ರಚನೆಯಾದಂತಹ ಶಾಸನವೊಂದು ಚೆನ್ನರಾಯ ಪಟ್ಟಣದಲ್ಲಿ ದೊರೆತಿದ್ದು ಈ ಶಾಸನದಲ್ಲೂ ಸಹ ಬಿತ್ತುವಟ್ಟಿಯ ಬಗ್ಗೆ ಉಲ್ಲೇಖಿಸಲಾಗಿದೆ. ಈ ಶಾಸನವು ಶಾಂತಿ ಸಮುದ್ರದ ಕೆರೆಯ ನಿರ್ವಹಣೆಗಾಗಿ ಬಿತ್ತುವಟ್ಟಿ ಒಂದು ಖಂಡುಗ 5 ಕೊಳಗ ಭೂಮಿಯನ್ನು ಊರ ಜನರು ದಾನ ಮಾಡಿದ ವಿಷಯವನ್ನು ಮಾದೇಗೌಡನಿಗೆ ಈ ಬಿತ್ತುವಟ್ಟವನ್ನು ನೀಡಿದ್ದಾಗಿ ಈ ಶಾಸನವು ತಿಳಿಸುತ್ತದೆ.[7]

ಗಂಗರ ರಾಜನಾದ ಮಾರಸಿಂಹನ ಕಾಲಕ್ಕೆ ಸೇರಿದ ಶಾಸನವೊಂದು ಇವನ ಮಂತ್ರಿಯಾದ ಮೊಬಲಯ್ಯ ಅರಾಣಿಯೂರ ಸೆರೆಗಳಿಗೆ ಬಿತ್ತುವಟ್ಟವನ್ನು ಬಿಟ್ಟರು. ಈ ಶಾಸನವು ಕ್ರಿ.ಶ. 972 ಸೆಪ್ಟೆಂಬರ್ 25 ರಂದು ಹಾಕಿಸಿದ ಶಾಸನವಾಗಿದೆ.[8]

ಒಳಗುಂದ ಗ್ರಾಮದಲ್ಲಿ 9, 10ನೇ ಶತಮಾನಕ್ಕೆ ಸಂಬಂಧಿಸಿದ ಶಾಸನವೊಂದು ದೊರೆತಿದ್ದು ಅದರಲ್ಲಿ ಬಯಳಂ ಬೇರಿಯ ಚೆಲ್ಲಂದ ಎಂಬುವವರು ಬಿತ್ತುವಟ್ಟಕ್ಕಾಗಿ ಗದ್ದೆಯನ್ನು ನೀಡಿದರು ಎಂದು ಉಲ್ಲೇಖಿಸಲಾಗಿದೆ.[9]

ಹಳೆ ಬೂದನೂರನಲ್ಲಿ ದೊರೆತಿರುವ ಶಾಸನವೊಂದು 10–11ನೇ ಶತಮಾನಕ್ಕೆ ಸೇರಿದುದಾಗಿದೆ. ಶಾಸನದಲ್ಲಿ ಸೋದರರ ಭಟ್ಟಾರಕನಿಗೆ ದಾನ ನೀಡಿದನು. ಅದನ್ನು ಕಟ್ಟಿಸಿದ ಚಾಮಯ್ಯ ಮತ್ತು ಜಯಮ್ಮ ಇವರು ಗಾವುಂಡರು ಬೂದನೂರು ಭೂಮಿಯನ್ನು ಬಿತ್ತುವಟ್ಟಕ್ಕಾಗಿ ದಾನ ನೀಡಿದರ ಬಗ್ಗೆ ಉಲ್ಲೇಖವಿದೆ.[10]

10ನೇ ಶತಮಾನಕ್ಕೆ ಸಂಬಂಧಿಸಿದ ಮಳವಳ್ಳಿ ಶಾಸನದಲ್ಲಿ ಅಸನಯ್ಯ ದುಗ್ಗಯ್ಯ, ನೊಳಂಬರು ಬಿತ್ತುವಟ್ಟಕ್ಕಾಗಿ ಭೂಮಿಯನ್ನು ದಾನವಾಗಿ ನೀಡಿರುವುದಾಗಿ ಈ ಶಾಸನವು ಉಲ್ಲೇಖಿಸಿರುತ್ತದೆ.[11]

ಕ್ರಿ.ಶ. 1139ರಲ್ಲಿ ರಚಿಸಿದಂತಹ ಶಾಸನವೊಂದು ಈ ಶಾಸನವು ಓಟೂರು ಎಂಬಲ್ಲಿ ದೊರೆತಿದ್ದು ಈ ಶಾಸನದಲ್ಲಿ ರಾಜಗಾವುಂಡರು. ಸಮಸ್ತಾ ಪ್ರಜೆಗಳೆಲ್ಲರು ಸೇರಿ ಬಿತ್ತುವಟ್ಟವನ್ನು ಕೆರೆಗೆ ಬಿಟ್ಟ ಉಲ್ಲೇಖವಿದೆ. ಈ ಶಾಸನದಲ್ಲಿ ತಿಳಿಯಬರುವುದೆಂದರೆ ಗಾವುಂಡರು ಊರಿನ ಸಮಸ್ತಾ ಪ್ರಜೆಗಳೆಲ್ಲರು ಅಂದರೆ ಗ್ರಾಮ ಸಮುದಾಯಗಳು ಒಟ್ಟಾಗಿ ಸೇರಿ ಕೆರೆಗೆ ಬಿತ್ತುವಟ್ಟನ್ನು ನೀಡಿರುವುದನ್ನು ತಿಳಿಸುತ್ತದೆ.[12]

ಶಿವಮೊಗ್ಗ ಜಿಲ್ಲೆಗೆ ಸಂಬಂಧಿಸಿದ ಸೊರಬ ತಾಲೂಕಿನಲ್ಲಿ ಕ್ರಿ.ಶ 1130ರಲ್ಲಿ ರಚಿತವಾಗಿರುವ ದಾನ ಶಾಸನ ದೊರೆತಿದೆ. ಕೆರೆಯ ನೀರಾವರಿ ಚೌಕಟ್ಟಿನ ಬೆಳವಣಿಗೆಯ ಹಂತದಲ್ಲಿ ಹಲವು ಬಗೆಯ ಕಾರ್ಯ ಕ್ರಮಗಳನ್ನು ಕೈಗೊಳ್ಳಲಾಯಿತು. ನಿರ್ಮಾಣ ಕಾರ್ಯದಲ್ಲಿ ತೊಡಗಿಸಿಕೊಂಡಂತಹ ವ್ಯಕ್ತಿಗಳಿಗೆ ಕುಟುಂಬಗಳು ಹಲವು ರೀತಿಯ ಪ್ರೋತ್ಸಾಹಕ ರಿಯಾಯಿತಿ ಸೌಲಭ್ಯಗಳನ್ನು ಪಡೆದರು. ಇಂತಹ ವಿಷಯಕ್ಕೆ ಈ ಶಾಸನವು ಸಂಬಂಧಿಸಿದ್ದಾಗಿದ್ದು ಸೊರಬ ತಾಲೂಕಿನ ರಾಜುಗೌಡ ಎಂಬುವವನು. ಕೆರೆಗೆ 10 ಕೊಳಗ ಭೂಮಿಯನ್ನು ಬಿತ್ತುವಟ್ಟಿ ನೀಡಿದನು. ರಾಜುಗೌಡ ಮತ್ತು ಸಂಕಗೌಡ ಶ್ರೇಯಸ್ಸಿಗಾಗಿ ಬಾಗಿಯಬ್ಬೆಯು ಕೆರೆಯ ಕೆಳಗಿನ ಪ್ರದೇಶವನ್ನು ದಾನವಾಗಿ ನೀಡಿದಳೆಂಬ ಈ ಶಾಸನವು ಉಲ್ಲೇಖಿಸುತ್ತದೆ.[13]

ಶಿವಮೊಗ್ಗ ತಾಲ್ಲೂಕಿನಲ್ಲಿ ದೊರೆತಿರುವ ಇನ್ನೊಂದು ಶಾಸನವು ಬೆಳೆಗಾಲ ತಾಲೂಕಿನಲ್ಲಿ ದೊರೆತಿದ್ದು ಇದು ಕ್ರಿ.ಶ. 1186 ರಲ್ಲಿ ರಚನೆಯಾಗಿದ್ದು ಕೇದನಾಥ್ ಮಂಟಪಗಳನ್ನು ಒಪ್ಪದಂತೆ ನಿಗಧಿತ ಕಾಲಾವಧಿಯಲ್ಲಿ ನಿರ್ಮಿಸಿಕೊಟ್ಟ ಬಿಸಿ ದೋಜ, ಚಾವೋಜ ಮತ್ತು ಸಿಂಗೋಜರಿಗೆ ರಾಜಗುರು 150 ರಣಗದ್ದೆಯನ್ನು ತಿರುಚಿಗಾವಿಯಲ್ಲಿ ನೀಡಿದ್ದನ್ನು ದಾಖಲಿಸಿದೆ.[14]

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿಗೆ ಸೇರಿದಂತಹ ಒಳಗುಂದದ ಪ್ರದೇಶದಲ್ಲಿ 9ನೇ ಶತಮಾನದ ಶಾಸನವೊಂದು ದೊರೆತಿದ್ದು, ಈ ಶಾಸನದಲ್ಲಿ ಬಯಲಯ್ಯ ಕಿರಿಯ ಬೆಳಗುಂದದ ಕೆರೆಯ ನಿರ್ವಹಣೆಗೆ ಆ ಕೆರೆಯ ಅಚ್ಚುಕಟ್ಟು ಭೂಮಿಯನ್ನು 'ಬಿಟ್ಟುವಟ್ಟು' ವಾಗಿ ನೀಡಿರುವುದೆಂದು ದಾಖಲಿಸಲಾಗಿದೆ. ಇದೇ ಶಾಸನದಲ್ಲಿ ತಾಲೂಕಿನ ಬೀಚೇನ ಹಳ್ಳಿಯ ದುದ್ದದ ಸೇವೆಗಾಗಿ 3 ಬಂಡಿಗಳನ್ನು (?) ಒದಗಿಸಲು ರಾಮಚಂದ್ರ ಹೆಚ್ಚಾರರು, ನಂಜಪೆರುವ ಮತ್ತು ತುರುದೇವ ಎಂಬುವವರು ನೀಡಿರುವುದನ್ನು ಪ್ರಸ್ತಾಪಿಸುತ್ತಿದೆ.[15]

ಮುಳುಬಾಗಿಲು ತಾಲೂಕಿನ ಏಣೆಗಾನಹಳ್ಳಿಯಲ್ಲಿ ದೊರೆತಿರುವ ಒಂದು ಶಾಸನದಲ್ಲಿ ನಾಗವೀರರು ಮತ್ತು ದೇವಾಲಯದ ಆರ್ಚಾಕರು ಮಂಗರಸನಿಗೆ ನೀಡಿದ ಕಟ್ಟಿ – ಕೊಡುಗೆ ಶಾಸನ ಇದಾಗಿದ್ದು ಇದು ಕಟ್ಟು ಕೊಡುಗೆ ಶಾಸನವಾಗಿದೆ ಅಂದರೆ ಕೆರೆಯನ್ನು ಕಟ್ಟಿದಂತಹ ವ್ಯಕ್ತಿಗಳಿಗೆ ಕೊಡುಗೆಗಳ ಅಥವಾ ರಿಯಾಯಿತಿಗಳನ್ನು ನೀಡುತ್ತಿದ್ದಂತಹ ವಿಷಯವನ್ನು ಪ್ರಸ್ತಾಪಿಸುವಂತಹ ಶಾಸನವಾಗಿದ್ದು ಇದರಲ್ಲಿ ಈ ರೀತಿ ಉಲ್ಲೇಖಿಸಲಾಗಿದೆ. ನೀನು ಕೆರೆ ನಿರ್ಮಿಸಿದ್ದಕ್ಕಾಗಿ ಮಂಗ ಸಮುದ್ರದ ಅಚ್ಚುಕಟ್ಟಿನ 2/10 ಭಾಗವನ್ನು ಕಟ್ಟು ಕೊಡುಗೆಯಾಗಿ ಮತ್ತು $^{2}/_{10}$ ಭಾಗವನ್ನು ತೆರಿಗೆ ಮುಕ್ತವಾಗಿ ಸದಾ ಕಾಲವೂ ಅನುಭವಿಸಲು ನೀಡಲಾಗಿದೆ. ಎಂದು ತಿಳಿದು ಬರುತ್ತದೆ. ಈ ಶಾಸನವು ವಿಚಿತ್ರವೆನಿಸುವಂತಿದೆ ಕಾರಣ ಅರಸರು ಕೆರೆಯನ್ನು ಕಟ್ಟಿಸಿ ಅದನ್ನು ಅನುಭವಿಸಲು ಅಂದರೆ ಅದರ ಉಪಯೋಗವನ್ನು ಪಡೆಯಲು ಜನರಿಗೆ ಹಳ್ಳಿಗಳ ಮುಖಂಡರಿಗೆ ಆರ್ಚಕರಿಗೆ ನೀಡುತ್ತಿದ್ದಂತಹ ಅನೇಕ ಉದಾಹರಣೆಗಳನ್ನು ನಾವು ಕಾಣುತ್ತೇವೆ. ಆದರೆ ಇಲ್ಲಿ ಸಾಮಾನ್ಯ ಜನರು ಮತ್ತು ಅರ್ಚಕರು ಸೇರಿ ಕೆರೆಯದಕ್ಕಾಗಿ ಮಂಗರಸನಿಗೆ ಕೆರೆ ಕಟ್ಟು ಕೊಡುಗೆಯನ್ನು ನೀಡಿರುವುದು ಕಂಡುಬರುತ್ತದೆ.[16]

ಸೀಯಣ್ಣನೆಂಬುವನು ದೊಡ್ಡ ಕೆರೆಯನ್ನು ನಿರ್ಮಿಸಿದ್ದುಕ್ಕಾಗಿ ಪೆರಿಯ ನಾಡಿನ ನಿವಾಸಿಗಳು ಆತನಿಗೆ 6 ಖಂಡುಗ ಗದ್ದೆಯನ್ನು ಕಟ್ಟು ಕೊಡುಗೆಯಾಗಿ ನೀಡಿದರು. ಅಂದರೆ ಒಂದು ಊರಿಗೆ ಬಿಟ್ಟ ವ್ಯಕ್ತಿಯು ಒಂದು ಕೆರೆಯನ್ನು ರಚಿಸಿ ಕೊಟ್ಟಿದ್ದಕ್ಕಾಗಿ

ಊರಿನ ಜನತೆ ಅದಕ್ಕೆ ಪ್ರತ್ಯುಪಕರವಾಗಿ ಆತನಿಗೆ 6 ಖಂಡುಗ ಭೂಮಿಯನ್ನು ಬಿತ್ತುವಟ್ಟಿ ನೀಡಿದನ್ನು ತಿಳಿಸುತ್ತದೆ.

ಎಕ್ಯಲಸೆಟ್ಟಿ ಎಕ್ಕಸಮುದ್ರವನ್ನು ಕಟ್ಟಿಸಿದಕ್ಕಾಗಿ 40 ಕಂಬ ಜಮೀನನ್ನು ಈತ ಕೆರೆ ಕೊಡುಗೆಯಾಗಿ ಪಡೆದಿದ್ದ ನೆಂಬುದನ್ನು ತಿಳಿಸುತ್ತದೆ.[17]

ಹೊಸಪೇಟೆ ತಾಲೂಕಿನ ಪುಲಯೂರು ನಾಡಿನ ಅರಿಕಿರ್ಯೆ. ಕೆರೆಯನ್ನು ದುರಸ್ತಿಗೊಳಿಸುವುದಕ್ಕಾಗಿ ಆ ಊರ ನಿಯಮಗಳು ಮತ್ತು ಸಿಂಗೆಯ ದಂಡನಾಯಕರು ಅವನಿಗೆ ಭೂಮಿಯನ್ನು ನೀಡಿದರು ಎಂಬ ಉಲ್ಲೇಖ ಈ ಶಾಸನದಲ್ಲಿ ತಿಳಿಸುತ್ತದೆ.[18]

ಹಾಗೆಯೇ ಬೇಲೂರಿನಲ್ಲಿ ದೊರೆತಿರುವ ಶಾಸನವೊಂದರ ಪ್ರಕಾರ 1 ವೀರಯ್ಯ ದಂಡನಾಯಕ ನೀರಾವರಿ ಸೌಲಭ್ಯವನ್ನು ಒದಗಿಸಲು ರುದ್ರ ಸಮುದ್ರ, ಗಂಗಸಮುದ್ರ, ಅಚ್ಯುತಸಮುದ್ರ ಮತ್ತು ವೀರಸಮುದ್ರ ಕೆರೆಗಳನ್ನು ನಿರ್ಮಿಸಿ ಅಂತಹ ಕೆರೆ ಕಟ್ಟಿಸಿದವರಿಗೆ 12 ವರ್ಷಗಳ ಕಾಲ ತೆರಿಗೆ ಮಾನ್ಯ ಮಾಡಿದನೆಂದು ಜೊತೆಗೆ 10 ಸಲಗ ಭತ್ತದ ಭೂಮಿ ಮಾನ್ಯ ಮಾಡಿದನೆಂದು ಈ ಶಾಸನವು ಸ್ಪಷ್ಟವಾಗಿ ಉಲ್ಲೇಖಿಸುತ್ತದೆ.[19]

ಈ ಮೇಲೆ ತಿಳಿಸಿದ ಹಲವು ಶಾಸನಗಳ ಉದಾಹರಣೆಗಳಿಂದ ಕೆರೆ ನಿರ್ಮಾತೃಗಳ ಉದ್ದೇಶವು ಆರ್ಥಿಕ ಪ್ರತಿಫಲಾಪೇಕ್ಷೆಯನ್ನು ಪಡೆಯುವುದನ್ನು ತಿಳಿಸಿದರೂ ಸಹ ಕೆರೆಯನ್ನು ಕಟ್ಟಿಸುವಂತಹ ಅದನ್ನು ನಿರ್ವಹಣೆ ಮಾಡುವಂತಹ ಹಾಗೂ ದುರಸ್ತಿ ಕಾರ್ಯ ಕೈಗೊಳ್ಳುವ ಪ್ರತಿಯೊಬ್ಬರಿಗೂ ಭೂದತ್ತಿ ಅಥವಾ ಬಿತ್ತುವಟ್ಟಿ ದೊರೆಯುತ್ತಿತ್ತು ಎಂದು ಹೇಳಲು ಸಾಧ್ಯವಿಲ್ಲ. ಏನೆ ಆದರೂ ಕೆರೆ ಸಂಬಂಧಿಸಿದ ಕಾರ್ಯದಲ್ಲಿ ತೊಡಗಿಸಿಕೊಂಡವರಿಗೆ ದಾನ ದತ್ತಿಗಳನ್ನು ನೀಡಿ ಪ್ರೋತ್ಸಾಹಿಸುವ ಇಂತಹ ಶ್ಲಾಘನೀಯ ಕಾರ್ಯಗಳು ಇದ್ದವು ಎಂಬುದನ್ನು ಈ ಶಾಸನಗಳು ಖಚಿತ ಪಡಿಸುತ್ತವೆ.

ಬಿತ್ತುವಟ್ಟಿದ ಪ್ರಾಮುಖ್ಯತೆಯನ್ನು ಈ ಮೊದಲೆ ನಾವು ಶಾಸನಗಳ ಮೂಲಕ ತಿಳಿದಿದ್ದರು. ಬಿತ್ತುವಟ್ಟಿದ ಭೂಮಿಯನ್ನು ಯಾವ ರೀತಿ ಗುರುತಿಸಲಾಗುತ್ತಿತ್ತು. ಕೆರೆಯ ನಿರ್ವಹಣೆಗೆ ಅದರ ಸುತ್ತಲಿನ ಅಚ್ಚುಕಟ್ಟು ಪ್ರದೇಶ ಅಂದರೆ ಮೊದಲ 3 ಏರಿಗಳನ್ನು

ಬಿತ್ತುವಟ್ಟಿವಾಗಿ ನೀಡಲಾಗುತ್ತಿತ್ತು. ಈ ಏರಿಗಳಲ್ಲಿ ಮೊದಲನೇ ಏರಿಯ ಭಾಗವು ಭತ್ತ ದಾನ್ಯಗಳ ಇತರೆ ಬೆಳೆಗಳನ್ನು ಬೆಳೆಯಲು ಈ ಪ್ರದೇಶವನ್ನು ಬಿಡಲಾಗುತ್ತಿತ್ತು.

ನಂತರದ ಏರಿಯ ಪ್ರದೇಶ ಅಂದರೆ 2ನೇ ಏರಿಯ ಭಾಗವು ತೋಟ, ತುಡಿಕೆಗಳ ಬೆಳೆಯನ್ನು ಈ ಪ್ರದೇಶವನ್ನು ಬಳಸುತ್ತಿದ್ದರು. ಇದರ ನಂತರದ ಪ್ರದೇಶವೇ 3ನೇ ಏರಿಯ ಭಾಗವೆ ಬೆದ್ದಲು ಭೂಮಿ ಇದು ಅತ್ಯಂತ ಕಡಿಮೆ ಗುಣ ಮಟ್ಟದಾಗಿದ್ದು ಇದರಲ್ಲಿ ಅತಿ ಕಡಿಮೆ ಫಸಲನ್ನು ಬೆಳೆಯಲಾಗುತ್ತಿತ್ತು.

ಅಂದರೆ ಮೇಲೆ ಈ ವಿಷಯವನ್ನು ಪ್ರಸ್ತಾಪಿಸಿದ ಕಾರಣವೆಂದರೆ ಬಿತ್ತುವಾಟದ ಪ್ರದೇಶ ಅಂದರೆ ಕೆರೆಯ ನಿರ್ಮಾಣಕಾರರಿಗೆ ನೀಡುವಂತಹ ಭೂಮಿಯು ಅತ್ಯಂತ ಫಲವತ್ತಾಗಿದ್ದು ಭೂಮಿಯನ್ನು ಕೊಡಬೇಕು ಇಲ್ಲದಿದ್ದರೆ. ಬಂಜಲು ಅಥವಾ ಬೆದ್ದಲು ಭೂಮಿಯನ್ನು ನೀಡಿದರೆ ಅದು ಸತ್ವಹೀನವಾದಂತೆ ಇದರಿಂದ ಬಿತ್ತುವಟ್ಟಿ ಎಂಬುದ ಅತ್ಯಂತ ಪ್ರಮುಖವಾದುದಾಗಿತ್ತು.

## ಇತರೆ ಕೆರೆಗಳು

ಆರ್ಥಿಕ ವ್ಯವಸ್ಥೆಯನ್ನು ನೋಡುವುದಾದರೆ ನಮಗೆ ಕಂಡುಬರುವ ಪ್ರಮುಖ ಸಂಗತಿ ಎಂದರೆ 'ತೆರಿಗೆ' ಅಂದರೆ ಒಂದು ದೇಶದ ಆರ್ಥಿಕಾಭಿವೃದ್ಧಿಯಲ್ಲಿ ದೇಶದ ವರಮಾನಕ್ಕೆ ಅತಿ ಮುಖ್ಯ ಕೊಡುಗೆ ತೆರಿಗೆ ಕಂದಾಯ ದೇಶದ ಆರ್ಥಿಕ ವ್ಯವಸ್ಥೆಯ ಮೂಲ ಭಾಗವಾಗಿರುವ ಈ ತೆರಿಗೆಯನ್ನು 2 ವಿಭಾಗಗಳಾಗಿ ವಿಭಾಗ ಮಾಡಲಾಗುತ್ತಿತ್ತು. ಅದರಲ್ಲಿ ಪ್ರತ್ಯಕ್ಷ ತೆರಿಗೆ ಮತ್ತೊಂದು ಪರೋಕ್ಷ ತೆರಿಗೆ ಹೀಗೆ 2 ರೀತಿಯ ತೆರಿಗೆಗಳನ್ನು ಈಗಿನ ಅವ್ಯವಸ್ಥೆಯಲ್ಲಿ ನಾವು ಹೇಗೆ ಕಾಣುತ್ತಿದ್ದವೆಯೋ ಹಾಗೆಯೇ ಹಿಂದಿನ ಕಾಲದಲ್ಲಿಯು ತೆರಿಗೆ ನೇರ ತೆರಿಗೆ ಹಾಗೂ ಇತರೆ ತೆರಿಗೆಗಳ ಮತ್ತು ವಿಶೇಷ ತೆರಿಗೆಗಳನ್ನು ಸರ್ಕಾರಕ್ಕೆ ಸಲ್ಲಿಸಲಬೇಕಾಗಿತ್ತು. ನಮಗೆ ಕೆರೆ ನಿರ್ಮಾಣ ನಿರ್ವಹಣೆ ಉಸ್ತುವಾರಿ ಹಾಗೂ ದುರಸ್ಥಿ ಕಾರ್ಯಗಳಿಗಾಗಿ ಅದರ ಪ್ರಯೋಜನ ಪಡೆದುಕೊಳ್ಳುವಂತಹ ಭೂಮಿ, ಅದರ ಒಡೆಯ ಹಾಗೂ ಕೆರೆಯ ನೀರನ್ನು ಬಳಸುತ್ತಿದ್ದ

ಗ್ರಾಮದ ಜನತೆಯ ಮೇಲೆ ಈ ಅನೇಕ ನೇರ ತೆರಿಗೆಗಳನ್ನು ವಿಧಿಸುತ್ತಿದ್ದರೋ ಹಾಗೆಯೇ ಅನೇಕ ರೀತಿಯ ಇತರೆ ತೆರಿಗೆಗಳನ್ನು ವಿಧಿಸುತ್ತಿದ್ದರು. ಇತರೆ ತೆರಿಗೆಗಳಲ್ಲಿ ನಾವು ಮುಖ್ಯವಾಗಿ ಗಮನಿಸಬಹುದಾವುದೆಂದರೆ ದಸವಂದ, ಕೆರೆಖಂಡಿ ಮೀನುಗಾರಿಕೆ ಮೇಲಿನ ತೆರಿಗೆ, ಏರಿ ವಾರಿಯಂ, ಏರಿ ಆಯ (ತುಳು) ಚೆರುವ ಕುಂಚಲು (ತೆಲುಗು) ನೀರ–ಬಿರುಡ, ಕೆರೆ–ಬಂಡಿ ಇತ್ಯಾದಿ. ಈ ತೆರಿಗೆಗಳು ರಾಜ ಭಂಡಾರಕ್ಕೆ ಸಲ್ಲುತ್ತಿದ್ದವು. ಇವುಗಳನ್ನು ವಿನಾಯ್ತಿಗೊಳಿಸುವ ಹಕ್ಕು ಮತ್ತು ಅಧಿಕಾರವು ರಾಜನಿಗೆ ಮಾತ್ರವೇ ಇರುತ್ತಿದ್ದವು. ಈ ತೆರಿಗೆಗಳನ್ನು ವಿನಾಯ್ತಿ ಮಾಡಿ ರಾಜಭಂಡಾರದ ಬದಲಿಗೆ ಕೆರೆಯ ರಕ್ಷಣೆಗೆ ಮತ್ತು ಇತರೆ ಕೆಲಸಗಳಿಗೆ ಬಳಸುತ್ತಿದ್ದರು.

## ದಸವಂದ

ದಸವಂದ ಎಂದರೆ ಸಾಮಾನ್ಯ ಕಂದಾಯದ ಹತ್ತನೆಯ ಒಂದರಷ್ಟು $^{1}/_{10}$ ಕಂದಾಯಕ್ಕೆ ಭೂಮಿಯನ್ನು ನೀಡುವುದನ್ನು ದಸವಂದ ಎಂಬ ಕರೆಯುತ್ತಿದ್ದರು. ಈ ದಸನಂದ ಮತ್ತು ಕಟ್ಟುಕೊಡುಗೆಯಲ್ಲಿ ಸ್ವಲ್ಪ ವ್ಯತ್ಯಾಸವಿರುವುದು ಕಂಡುಬರುತ್ತದೆ. ಕೆರೆಯನ್ನು ಕಟ್ಟಿಸಿದವನಿಗೆ ನೀಡಿದ ಮಾನ್ಯವು ಕೆರೆ ಕಟ್ಟು ಮಾನ್ಯ ಅಥವಾ ಕೊಡುಗೆಯು ಆಗಿರುತ್ತದೆ.

ದಸವಂದ ಪದದ ನಿಷ್ಪತ್ತಿ ಹಣಕ್ಕೆ ದಸವಂದ ಎಂದು ಮನುವಿನ ಧರ್ಮಶಾಸ್ತ್ರ ತಿಳಿಸುತ್ತದೆ. ಎಂಬ ಅಭಿಪ್ರಾಯವನ್ನು ವ್ಯಕ್ತಿಪಡಿಸಿದ್ದಾರೆ.[20] ಹಾಗೆಯೇ ಅರ್ಥಶಾಸ್ತ್ರವನ್ನು ರಚಿಸಿದಂತಹ ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ದಸವಂದ ಎಂದರೆ ಹತ್ತನೆಯ ಒಂದು ಭಾಗವೆಂತಲೂ, ಆ ಭಾಗದಷ್ಟು ಕೃಷಿ ಉತ್ಪನ್ನವನ್ನು ಜಮೀನ್ದಾರ ಮತ್ತು ಒಕ್ಕಲಿಗ ಹಂಚಿಕೊಳ್ಳಬೇಕು ಎಂದು ತಿಳಿಸುತ್ತಾನೆ. ಇನ್ನು ಕೆಲವು ಶಾಸನಗಳು ಮತ್ತು ಉಲ್ಲೇಖಗಳಿಂದ ದಸವಂದ ಎಂದರೆ 1:10 ಅಂಶ ಎಂದು ದೃಢಪಡಿಸುತ್ತದೆ.[21]

ದಸವಂದ ಎಂಬ ಪದವು ದಶನಂದ ಅಥವಾ ದಸಬಂದ ಎಂಬ ಪದಗಳ ಪರ್ಯಾಯಗಳೇ ಆಗಿದೆ. ಇವುಗಳು ಪ್ರಾಚೀನ ಭಾರತದಲ್ಲಿಯೂ ಬಳಕೆಯಲ್ಲಿಟ್ಟ ಪದಗಳಾಗಿದ್ದು ವಿಜಯನಗರ ಕಾಲದವರೆಗೂ ಬಳಕೆಯಾಗಿ ಬಂದಿರುವುದು ಗಮನಾರ್ಹ ವಿಷಯ. ದಕ್ಷಿಣ ಭಾರತದಲ್ಲಿ ವಿಜಯನಗರ ಕಾಲದ ಶಾಸನಗಳು ದಸವಂದ ಎಂಬಹ ಪದವನ್ನು ಬಳಸಿರುವುದು ಕೆರೆ ಅಥವಾ ನೀರಾವರಿ ಪದ್ದತಿಯ ಸಂದರ್ಭದಲ್ಲಿಯೇ ಎಂಬುದು ಶಾಸನಗಳ ಅಧ್ಯಾಯನದಿಂದ ತಿಳದುಬರುತ್ತದೆ.

## ಕೆರೆ – ಬಂಡಿ ತೆರಿಗೆ

ಕೆರೆಗಳ ನಿರ್ಮಾಣವಾದಮೇಲು ಅದರ ರಕ್ಷಣೆ ಮೇಲ್ವಿಚಾರಕ ದುರಸ್ಥಿಕಾರ್ಯಗಳಗೆ ಅನೇಕ ವ್ಯಕ್ತಿಗಳು ಮತ್ತು ಸಾಮಗ್ರಿಗಳು ಬೇಕಾಗಿದ್ದರು. ಅವುಗಳಲ್ಲಿ ಎತ್ತಿನ ಬಂಡಿಗಳು ಇದ್ದವೆಂಬುದು ಗಮನಿಸತಕ್ಕ ವಿಷಯ ಇವುಗಳು ಕೆರೆಯ ಕೆಲಸಗಳಗಾಗಿಯೇ ಮೀಸಲಟ್ಟು ಉಪಯೋಗಿಸುತ್ತಿದ್ದ ಕಾರಣದಿಂದ ಇವುಗಳನ್ನು ಕೆರೆ ಬಂಡಿಗಳೆಂದು ಶಾಸನದಲ್ಲಿ ಉಲ್ಲೇಖಗೊಂಡಿದೆ. ಮಳೆಗಾಲದ ದಿನಗಳಲ್ಲಿ ಹರಿದು ಬರುವಂತಹ ನೀರು ಅಧಿಕಾಂಶವಾಗಿ ಮಣ್ಣನ್ನು ಹೊಂದಿರುತ್ತದೆ. ಈ ಮಣ್ಣು ತೂಬಿನ ಕಾಲುವೆಗಳಲ್ಲಿ ಸೇರಿಕೊಂಡು ತೂಬುಗಳ ರಂಧ್ರವನ್ನು ಮುಚ್ಚಿಬಿಡುತ್ತವೆ. ಆದ್ದರಿಂದ ಕಾಲದಿಂದ ಕಾಲಕ್ಕೆ ಆ ಮಣ್ಣನ್ನು ತೆಗೆದು ನಾಲೆಯನ್ನು ಶುಭ್ರಗೊಳಸಿ ಸುಸ್ಥಿತಿಗೆ ತರುವ ಕೆಲಸದಲ್ಲಿಯೂ ಮತ್ತು ಕೆರೆಯ ತಳದಲ್ಲಿ ಸಂಗ್ರಹವಾಗಿರುವ ಹೂಳನ್ನು ತೆಗೆದು ಏರಿಗೆ ಸಾಗಿಸಿ ಏರಿಯನ್ನು ಬಲಪಡಿಸುತ್ತಿದ್ದರು. ಈ ಕಾರ್ಯಗಳಗೆ ಎತ್ತಿನ ಗಾಡಿಗಳನ್ನು ಬಳಸಿ ಮತ್ತು ಅದಕ್ಕೊಂದು ಮಾನ್ಯವನ್ನು ನೀಡಲಾಗುತ್ತಿತ್ತು. ಇದಕ್ಕೆ ಕೆರೆ ಬಂಡಿ ಮಾನ್ಯವೆಂದು ಹೆಸರು. ಈ ಮಾನ್ಯದಲ್ಲಿ ಕೆರೆಬಂಡಿ ಮಾನ್ಯವು ಎತ್ತಿನ ಗಾಡಿಯ ಎತ್ತುಗಳು, ಕೆಲವೊಮ್ಮೆ, ಎಮ್ಮೆಗಳು ಮತ್ತು ಬಂಡಿಯನ್ನು ನಡೆಸುವವರ ಜೀವನಕ್ಕೆ ಸಾಕಾಗುವಷ್ಟು ಹಣವನ್ನು ಭೂಮಿಯನ್ನು ನೀಡಿ ಈ ಕಾರ್ಯವು ಸುಗಮವಾಗಿ ನಡೆಯುವಂತೆ ನೋಡಿಕೊಳ್ಳುತ್ತಿದ್ದರು. ಈ ಮಾನ್ಯವು ಕೆರೆಯ ಹೂಳುತ್ತೆವ ಸಾಮಗ್ರಿಗಳು ಬಂಡಿಯ ಎಣ್ಣೆ, ಮುಂತಾದ ಅವಶ್ಯ ವಸ್ತುಗಳನ್ನು ಒಳಗೊಂಡಿದ್ದವು ಎಂಬುದನ್ನು ಗಮನಾರ್ಹ ವಿಷಯ.

ಒಂದು ಕೆರೆಯನ್ನು ಸುಸ್ಥಿತಿಯಲ್ಲಿಡಲು ಎಷ್ಟು ಬಂಡಿಗಳು ಉಪಯೋಗಿಸಲ್ಪಡುತ್ತಿದ್ದವು. ಎಂಬುದು ಖಚಿತವಾಗಿ ತಿಳಿದುಬರುವುದಿಲ್ಲ. ಪ್ರಾಯಶಃ ಒಂದು ಕೆರೆಯಿಂದ ಮತ್ತೊಂದು ಕೆರೆಗೆ ವ್ಯತ್ಯಾಸಗಳು ಇಟ್ಟಿರಬಹುದು ಎಂದಷ್ಟು ಹೇಳಲು ಸಾಧ್ಯ.[22]

ಕೆರೆ ಬಂಡಿಯ ಹಣವನ್ನು ಗ್ರಾಮಸ್ಥರಿಂದ ಸಂಗ್ರಹಿಸದ ಕೆರೆಯ ರಕ್ಷಣೆ ಕೆಲಸಗಳವೆ ಬಳಸುತ್ತಿದ್ದರು ಎಂದು ತಿಳಿಯಬಹುದು.[23]

## ತಿಪ್ಪೆಸುಂಕ

ಕೆಲವು ತೆರಿಗೆಗಳೊಂದಿಗೆ ತಿಪ್ಪೆ ಸುಂಕವನ್ನು ಸಹ ಕೆರೆ ಬಂಡಿಯ ಉಪಯೋಗಕ್ಕೆ ಮಿಸಲಾಗಿಡಲಾಗಿತ್ತು. ಎಂದು ಬಡದ ಒಂದು ಶಾಸನವು ತಿಳಿಸುವುದು ಕುತೂಹಲಕಾರಿಯಾದ ಸಂಗತಿ.[24]

## ಮೀನುಗಾರಿಕೆಯು ಮೇಲಿನ ತೆರಿಗೆ

ಕೆರೆಗಳನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳುವಲ್ಲಿ ಸಣ್ಣ ದೋಣಿಗಳನ್ನು ಹೊಂದಿದಂತೆ ಮೀನುಗಾರರು ಕೆರೆಯಲ್ಲಿ ಮೀನನ್ನು ಹಿಡಿದು ತಮ್ಮ ಚಟುವಟಿಕೆಗಳನ್ನು ನಡೆಸುತ್ತಿದ್ದರು. ಹಿಡಿದ ಮೇಲು ಮೀನುಗಳ ಮೇಲೆ ತೆಪ್ಪದ ದೋಣಿಗಳ ಮೇಲು ಸುಂಕಕವನ್ನು ವಿಧಿಸಲಾಗುತ್ತಿದ್ದು ಇವುಗಳನ್ನು ಕೆರೆಯ ನಿರ್ವಹಣೆ ಮಾಡಲು ಬಳಸುತ್ತಿದ್ದರು. ಅಲ್ಲದೆ ಇವರುಗಳು ಕೆರೆಗಳಲ್ಲಿ ಇದ್ದ ಹೂಳು, ಜೊಂಡು ಮತ್ತು ಇತರ ಕಲ್ಮಶಗಳನ್ನು ನೀರಿನಿಂದ ದೋಣಿಗಳ ಮೂಲಕ ದಡಕ್ಕೆ ಸಾಗಿಸುವ ಕಾರ್ಯನಿರ್ವಹಿಸಿದ್ದರೆಂದು ಕೆಲ ಶಾಸನಗಳಿಂದ ತಿಳಿದುಬರುತ್ತದೆ. ಈ ಅಂಬಿಗರು ಮಿತ್ರವರಂತೆ ದೊಡ್ಡ ಪ್ರಮಾಣದಲ್ಲಿ ಅಲ್ಲದಿದ್ದರೂ ತಮ್ಮ ಯಥಶಕ್ತಿಯಷ್ಟು ಕೆಲಸಗಳನ್ನು ಮಾಡಿರುವುದನ್ನು ವಿಜಯನಗರದ ಶಾಸನಾಧಾರಗಳಿಂದ ತಿಳಿಯಬಹುದು.

ಮೇಲೆ ತಿಳಿಸಿದ ಇತರೆ ತೆರಿಗೆಗಳ ಜೊತೆಗೆ ವಿಜಯ ನಗರ ಕಾಲದಲ್ಲಿ ನೀರು–ಕುಳಿ[25] ಚೆರುವು–ಕುಂಚಲು[26] ಮೇರ, ಕಾಲುವೆಯ ನೀರ–ಬರುಡ[27] ವಿಭೂತಿ ಕಾಣಿಕೆ, ಜೋಡಿ, ಬಿರುಡ, ಸಲುವರಿ ಮುಂತಾದ ತೆರಿಗೆಗಳನ್ನು ವಿಧಿಸುವುದು.

"ಹೀಗೆ ಮೇಲೆ ತಿಳಿಸಿದಂತಹ ಅನೇಕ ರೀತಿಯ ತೆರಿಗೆಗಳಿಂದ ಕೆರೆಯ ನಿರ್ಮಾಣ ಕೆರೆಯ ನಿರ್ವಹಣೆ ಕೆರೆಯ ದುರಸ್ಥಿ ಕಾರ್ಯಗಳಿಗೆ ಈ ತೆರಿಗೆ ವಸೂಲಿಯಿಂದ ಹಣದಲ್ಲಿ ಬಳಸಲಾಗುತ್ತಿತ್ತು. ಹಾಗೆಯೇ ರಾಜ್ಯಕ್ಕೆ ಆದಾಯವು ಕೂಡ ಆಗಿ ವರಮಾನವನ್ನು ಅನೇಕ ದೊಡ್ಡ ದೊಡ್ಡ ಕೆರೆಗಳು ತಂದುಕೊಡುತ್ತಿದ್ದನು. ಹೀಗೆ ತೆರಿಗೆಯನ್ನು ಜನರ ಮೇಲೆ ಅಧಿಕ ಹೊರೆಯಾಗದಂತೆ ವಸೂಲಿ ಮಾಡಿ ಕೆರೆಯನ್ನು ಅನೇಕ ವರ್ಷಗಳ ಕಾಲ ಸುಸ್ಥಿರ ಸ್ಥಿತಿಯಲ್ಲಿ ಇದ್ದುದನ್ನು ನಾವು ಇಂದಿಗೂ ಕಾಣಬಹುದಾಗಿದೆ.

## ಮೀನುಗಾರಿಕೆ

ಮಾನವ ಭೂಮಿಯ ಮೇಲೆ ಉಗಮವಾದಗ ಆಹಾರ ಸಂಗ್ರಹಣೆಗಾಗಿ ಚಡಪಡಿಸುತ್ತಿದ್ದ, ಗೆಡ್ಡೆ ಗೆಣಸುಗಳನ್ನು ಸೇವಿಸಲು ಪ್ರಾರಂಭಿಸಿದ. ಆದಿಮಾನವ ನಂತರದಲ್ಲಿ ಪ್ರಾಣಿಗಳನ್ನು ಭೇಟಿಯಾಡುವುದನ್ನು ಕಲಿತು ತನ್ನ ಹಸಿವನ್ನು ನಿಗಿಸಿಕೊಳ್ಳುತ್ತಿದ್ದನ್ನು. ಈ ಪ್ರಾಣಿಗಳ ಭೇಟೆಯ ನವೀನ ವಿಧಾನ ಹಾಗೂ ತಾಂತ್ರಿಕ ಆವಿಷ್ಕರಗಳಿಂದ ಭೇಟೆಯನ್ನು ರೂಢಿಸಿಕೊಂಡ ಅವುಗಳ ಪೈಕಿ ಮೀನುಗಾರಿಕೆ ಪ್ರಮುಖವಾದದ್ದು. ಇವುಗಳಲ್ಲಿ ಎರಡು ವಿಧಾನವನ್ನು ಗುರುತಿಸಬಹುದು 1) ಪ್ರಕೃತಿ ದತ್ತವಾಗಿ ನೀರಿನಲ್ಲಿ ಅಂದರೆ ನದಿ, ಹಳ್ಳ, ಕೊಳ್ಳದಲ್ಲಿ ಮೀನು ಭೇಟೆ ಮಾಡಿ ಸಂಗ್ರಹಿಸುವುದು ಮತ್ತೊಂದು ಕೃತಕವಾಗಿ ಮೊಟ್ಟೆ ತಂದು ಅದರಿಂದ ಮರಿ ಮಾಡಿಸಿ ಮೀನನ್ನು ಮಾಡಿ ಅದನ್ನು ಉಪಯೋಗಿಸುವುದು. ಆದರೆ ಹಿಂದೆ ಪ್ರಾಕೃತಿಕ ಭೇಟೆಯೆ ಹೆಚ್ಚು ಪ್ರಚಲಿತದಲ್ಲಿತ್ತು. ಇಂದಿನ ಜಾಗತೀಕರಣ ಪ್ರಕೀಯೆಯಲ್ಲಿ ಮೀನುಗಾರಿಕೆ ಲಾಭದಾಯಕ ವಾಣಿಜೋದ್ಯಮವಾಗಿ ಬೆಳೆದಿದೆ.

ಪ್ರಾಚೀನ ಕಾಲದಿಂದಲೂ ಈ ಮೀನುಗಾರಿಕೆಗೆ ವಿವಿಧ ಹಂತಗಳಲ್ಲಿ ಉತ್ತೇಜನವೂ ಸಿಕ್ಕಿದೆ. ಚಾರಿತ್ರಿಕವಾಗಿ ಗಮನಿಸಿದ್ದರೆ ಮತ್ಸ್ಯ ದೇಶವಿತ್ತು ಇಂದಿನ ಜಯಪುರ ಪ್ರದೇಶವೇ ಪ್ರಾಚೀನ 'ಮತ್ಸ್ಯದೇಶ'[28] ಶೂರನ ದೇಶದ ಪಶ್ಚಿಮಕ್ಕಿದ್ದು ಮಹಾಭಾರತದ ವಿರಾಟನು ಇಲ್ಲಿ ರಾಜ್ಯಭಾರ ಮಾಡುತ್ತಿದ್ದ ಎಂಬ ಕಥೆಯ ಪ್ರಕಾರ 'ಅದ್ರಿಕೆ' ಎಂಬ ಅಪ್ಸರ ಬ್ರಹ್ಮನ ಶಾಪದಿಂದ ಮೀನಾಗಿ ಉಪರಿಚರದ ವೀರ್ಯವನ್ನು ನುಂಗಿ

ಮತ್ಸ್ಯ ರಾಜನೆಂಬ ಮಗನನ್ನು, ಮತ್ಸ್ಯಗಂಧಯೆಂಬ ಮಗಳನ್ನು ಪಡೆದು ಶಾಪವಿಮೋಚನೆ ಹೊಂದಿದಳು.[29] ಈ ಮತ್ಸ್ಯಗಂಧಾಳ ಮೊದಲ ಹೆಸರೇ ಸತ್ಯವತಿ ಇದಲ್ಲದೆ, ಮತ್ಸ್ಯಾವತಾರವು ಹತ್ತು ಅವತಾರಗಳಲ್ಲಿ ಒಂದು ರಾಕ್ಷಸನಿಂದ ಸೋಮ ವೇದಗಳನ್ನು ಅಪಹರಿಸಲು ವಿಷ್ಣುವು ಮತ್ಸ್ಯಾವತಾರ ಹೊಂದಿ ಆ ರಾಕ್ಷಸನನ್ನು ಕೊಂದು ವೇದಗಳನ್ನುದ್ಧರಿಸಿದನು.

ಮೀನಿನ ಬಗೆಯ ಮತ್ತೊಂದು ಪುರಾಣ ಹೀಗಿದೆ : ದೈವಸ್ಥಿತ ಮನುವು ತಪಸ್ಸನ್ನು ಮಾಡುತ್ತಿರುವಾಗ ಒಂದು ಮೀನು, ದಿನ ದಿನವೂ ಬೆಳೆಯುತ್ತಾ ಬರಲು ಆತನು ಅದನ್ನು ಕಮಂಡಲದಲ್ಲಿಟ್ಟುಕೊಂಡನು ಮೀನು ದಿನ ದಿನವೂ ಬೆಳೆಯುತ್ತಾ ಬರಲು ಆತನು ಅದನ್ನು ಕಮಂಡಲುವಿನಿಂದ ತೆಗೆದು ಬಾವಿಯಲ್ಲಿ ಹಾಕಿದನು. ಮುಂದೆ ದೊಡ್ಡಗಾತ್ರದಲ್ಲಿ ಬೆಳೆದಾಗ ಗಂಗಾನದಿಯಲ್ಲಿ ಬಿಡಲಾಯಿತ್ತು. ಕ್ರಮೇಣ ನದಿಯಲ್ಲಿ ಸಂಚಾರಕ್ಕೆ ಅಡಚಣೆಯಾದಾಗ ಆ ಮೀನನ್ನು ಸಮುದ್ರಕ್ಕೆ ಬಿಡಲಾಯಿತು. ಮುಂದೆ ಆ ಮೀನಿನೊಡನೆ ಸಂಬಂಧವಾಗಿ ಕಥೆಗೆ ನಾನಾ ತಿರುವುಗಳು ಹುಟ್ಟಿಕೊಳ್ಳುತ್ತವೆ. ಹೀಗೆ ಆದಿಕಾಲದಿಂದಲೂ ಆದಿಪುರಷರು ಮತ್ಸ್ಯಪುರಾಣ ಕಾವ್ಯಗಳ ಕಥಾನಾಯಕರು, ಬುಡಕಟ್ಟುಗಳು ದೇಶಿಯ ಲಕ್ಷಣಗಳನ್ನು ಹೊಂದಿದ್ದಾರೆ. ವೃತ್ತಿ ಮತ್ತು ಜಾತಿಗೊಬ್ಬ ಅರಾಧನಾ ವೀರನ ಪಡೆದಿದ್ದಾರೆ. ಉದಾ : ಏಕಲವ್ಯ, ಗುಃಆ, ಧರ್ಮವ್ಯಾಧ ಇತ್ಯಾದಿ.

ಮೀನುಗಾರಿಕೆಯ ಚರಿತ್ರೆ ಹುಡುಕುವುದು ತುಂಬಾ ಕಠಿಣ. ಮಾನವನ ಅಗಾಧ ಅನ್ವೇಷಣೆಯಲ್ಲಿ ಕಂಡುಕೊಂಡು ವಿಧಾನವೆಂದು ಹೇಳಿದರು. ಜಾತಿ ಸಮುದಾಯಗಳಿಗೆ ವೃತ್ತಿಯಾಗಿ ನೆಲೆಯೂರಿದ ಬಗ್ಗೆ ವಿಸ್ಮಯಕಾರಿಯಾದುದು.

ನಂತರದ ಕಾಲದಲ್ಲಿ ಚಾರಿತ್ರಿಕವಾಗಿ ಮೌರ್ಯ, ಶಾತವಾಹನ, ಗುಪ್ತ, ಗಂಗಾ, ಕದಂಬ, ಚಾಲುಕ್ಯ, ರಾಷ್ಟ್ರಕೂಟ ಮತ್ತು ಹೊಯ್ಸಳರ ಅವಧಿಯಲ್ಲಿದ್ದ ಕುರುಹುಗಳನ್ನು ಗುರುತಿಸಬೇಕಾದ ಕಾಲ ಘಟ್ಟಗಳಲ್ಲಿನ ಮೀನುಗಾರಿಕೆ ಬಗ್ಗೆ ಪುರಷತ್ವದ ಆಕಾರಗಳು ಇದರ ಮೇಲೆ ಬೆಳಕು ಚೆಲ್ಲುತ್ತದೆ. ಅಲ್ಲದೆ ಮಹಾಭಾರತದಲ್ಲಿನ ಕರ್ಣನ ಷಡ್ಯಂತ್ರವನ್ನು ಕೃಷ್ಣ ತಿಳಿಸಿದಾಗ ರಾಧೆಯನೆಂಬ ಮಿಂಗುಲಿಗನ ಆಶ್ರಯದಲ್ಲಿದ್ದ ಸಂಗತಿ ತಿಳಿದುಬರುತ್ತದೆ.

ಕರ್ಣ ಮತ್ತು ದುರ್ಯೋಧನರಿಬ್ಬರು ಬೇಟೆಗೆ ಹೋಗಿದಾಗ ಸತ್ಯಂತಪರೆಂಬ ದಿವ್ಯ ಋಷಿಗಳು ಭೇಟಿ ಮಾಡುತ್ತಾರೆ. ಆ ಋಷಿಯ ಮೊದಲು ಕರ್ಣನನ್ನು ಸತ್ಕಾರಿಸಿದಾಗ ಕೌರವನಿಗೆ ಕೋಪ ಉಕ್ಕಿಬಂತು ಆ ಸನ್ನಿವೇಶವನ್ನು ಪಂಪ ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಮನೋಜ್ಞವಾಗಿ ಚಿತ್ರಿಸುತ್ತಾ "ಅನಿದೆ ನಿಮಿದೆಕೆ ದಯೆಗೈಯ್ದಿರೊ ಈ ಮಿಂಗುಲಿ ಗಂಗೆ" ಎಂಬುದು ಗಮನಾರ್ಹ ಮಿಂಗುಲಿಗನಿಗೆ ನೀಚಾರ್ಥ ಮತ್ತು ಕಳಂದ ಸ್ಥಾನಮಾನವಿತ್ತೆಂದು ತಿಳಿಯಬೇಕು.

ಆದರೆ ಮೀನುಗಾರಿಕೆಯ ಬಗ್ಗೆ ನಮಗೆ ಹೆಚ್ಚು ಶಾಸನಗಳು ನಮಗೆ ಲಭ್ಯವಿಲ್ಲ. ಆದರೆ ಸಿಕ್ಕಿರುವ ಕೆಲವು ಶಾಸನಗಳ ಮೂಲಕ ನಾವು ಮೀನುಗಾರಿಕೆಯನ್ನು ಗಮನಿಸಬಹುದು.

ವಿಜಯನಗರ ಕಾಲದ ಮೀನುಗಾರಿಕೆಯ ಬಗ್ಗೆ ನಮಗೆ ಕೆಲವು ವಿಷಯಗಳು ತಿಳಿದುಬಂದಿದೆ. ಅದರ ಪ್ರಕಾರ ಹಂಪಿಯ ಪರಿಸರ ವಾಸ್ತುಶಿಲ್ಪಾ, ತೋಟ, ರಕ್ಷಣೆಗೋಡೆ, ದೇವಾಲಯ ಪ್ರಾಕಾರಗಳಲ್ಲಿ ಮೀನಿನ ಶಿಲ್ಪಗಳನ್ನು ಕೆತ್ತಲಾಗಿದೆ. ಇದರ ಉದ್ದೇಶ ಔಚಿತ್ಯ ಎಂಬುದು ಸಹ ನಿಗೂಢವಾಗಿದೆ.[30]

ಶಾಸನ ಸಂಖ್ಯೆ 96 ರಲ್ಲಿ ತಿಳಿಸಿರುವಂತೆ ಚುಂಚನ ಕಟ್ಟೆಯಲ್ಲಿ ದೊರೆತಿರುವ ಶಾಸನವೊಂದರಲ್ಲಿ ದನುಕೊಟ ಬಳಿಯ ಕಲ್ಲು ಕೆರೆ ಎಂಬಲ್ಲಿ ಮೀನುಗಾರಿಕೆಗೆ ಸಂಬಂಧಿಸಿದಂತೆ ಉಲ್ಲೇಖಿಸಲಾಗಿದೆ.

ಆಧುನಿಕ ಕಾಲದಲ್ಲಿ ಮೀನುಗಾರಿಕೆಯು ಒಂದು ಬೃಹತ್ ಉದ್ದಿಮೆಯಾಗಿ ಬೆಳೆದಿದ್ದು, ಒಳನಾಡು ಮೀನುಗಾರಿಕೆ, ಸಾಗರಮೀನುಗಾರಿಕೆಗಳು ಹೆಚ್ಚು ಆರ್ಥಿಕ ಲಾಭವನ್ನು ತಂದುಕೊಡುತ್ತಿದ್ದು, ಅನೇಕ ಸಾವಿರಾರು ಜನರಿಗೆ ಉದ್ಯೋಗವನ್ನು ನೀಡಿದಲ್ಲದೆ. ರಾಷ್ಟ್ರೀಯ ವರಮಾನದತ್ತ ಅತಿ ಹೆಚ್ಚು ವರಮಾನವನ್ನು ತಂದುಕೊಡುತ್ತಿದೆ. ಆದರೆ ಹಿಂದಿನ ಕಾಲದಲ್ಲಿ ಕೇವಲ ಆಹಾರದ ಉದ್ದೇಶಕ್ಕಾಗಿ ಮಾತ್ರ ಮೀನುಗಾರಿಕೆಯನ್ನು ಮಾಡುತ್ತಿದ್ದರು. ತಮಗೆ ಎಷ್ಟು ಬೇಕೋ ಅಷ್ಟು ಮೀನನ್ನು ಹಿಡಿಯುತ್ತಿದ್ದರು. ಇದರಿಂದ ಪರಿಸರದ ಸಮಾತೋಲನವು ಹದಗೆಡುತ್ತಿರಲಿಲ್ಲ. ಆಧುನಿಕ ಪ್ರಪಂಚದಲ್ಲಿ

ಮತ್ಸ್ಯೋದ್ಯಮವು ಅತಿ ಹೆಚ್ಚು ಲಾಭದಾಯಕ ಉದ್ಯಮವಾಗಿದೆ. ಇದರಿಂದ ಅವಶ್ಯಕತೆಗಿಂತ ಹೆಚ್ಚು ಮೀನನ್ನು ಹಿಡಿದು ಬಳಸುತ್ತಿದ್ದಾರೆ. ಹೀಗಾಗಿ ಪರಿಸರದಲ್ಲಿ ಆಹಾರದ ಸರಪಳಿಯಲ್ಲಿ ಬದಲಾವಣೆ ಕಂಡುಬರುತ್ತಿದ್ದರು. ಪರಿಸರದ ಅಸಮಾತೋಲನಕ್ಕೆ ಕಾರಣವಾಗುತ್ತಿದೆ.

"ಇದನ್ನು ಗಮನಿಸಿದರೆ ಇಂದಿನ ಕಾಲಕ್ಕಿಂತ ನಮ್ಮ ಪೂರ್ವಜರ ಕಾಲದಲ್ಲಿ ಮೀನುಗಾರಿಕೆಯೂ ಈಗಿನ ಕಾಲದಂತೆ ಹಿಂದೆ ಎಷ್ಟು ಅಗತ್ಯವೂ ಅಷ್ಟನ್ನು ಮಾತ್ರ ಮೀನನ್ನು ಉಪಯೋಗಿಸುತ್ತಿದ್ದರೆ ಪರಿಸರ ಸಮಾತೋಲನವನ್ನು ಕಾಯ್ದುಕೊಳ್ಳುವಲ್ಲಿ ಹಾಗೂ ಜೀವ ವೈವಿಧ್ಯತೆ ನಾಶಹೊಂದದಂತೆ ಪರಿಸರದತ್ತ ಪೂರಕವಾಗಿ ನಡೆದುಕೊಳ್ಳುತ್ತಿದ್ದು, ನಮ್ಮ ಇಂದಿನ ಪೀಳಗೆಗೆ ಒಂದು ಪಾಠವಿದ್ದಂತೆ. ಅದನ್ನು ನಾವು ಇಂದಿಗೆ ಪರಿಸರ ಜೊತೆ ಜೊತೆಗೆ ಮಾನವ ಉಳಿವು – ಅಳಿವು ನಿರ್ಧರಿಸಿದೆ.

## ಪರಾಮರ್ಶನಗಳು


1. ದೀಕ್ಷೀತ್ ಜಿ.ಎಸ್ ಮತ್ತು ಇತರರು – *ಕರ್ನಾಟಕದಲ್ಲಿ ಕೆರೆಯ ನೀರಾವರಿ*, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2000, ಪು.ಸಂ.30
2. *ಇ.ಸಿ.* 03, ನಂಜನಗೂಡು, ಶಾ.ಸಂ.215, ಸುತ್ತೂರು.
3. *ಇ.ಸಿ.* 03, ನಂಜನಗೂಡು, ಶಾ.ಸಂ.218, ಕಾರ್ಯ.
4. *ಇ.ಸಿ.* 03, ಹೆಚ್.ಡಿ.ಕೋಟೆ, ಶಾ.ಸಂ.107, ಹಳೆ ಬೆಳತ್ತೂರು.
5. *ಇ.ಸಿ.* 03, ನಂಜನಗೂಡು, ಶಾ.ಸಂ.77, ಸುತ್ತೂರು.
6. *ಇ.ಸಿ.* 03, ನಂಜನಗೂಡು, ಶಾ.ಸಂ.215, ಸುತ್ತೂರು.
7. *ಇ.ಸಿ.* 07, ಮಂಡ್ಯ, ಶಾ.ಸಂ.215, ಹಳೆ ಬೂದನೂರು.
8. *ಇ.ಸಿ.* 09, ಚನ್ನರಾಯಪಟ್ಟಣ, ಶಾ.ಸಂ.19.
9. *ಇ.ಸಿ.* 03, ಅರಣಿ, ಶಾ.ಸಂ.99.
10. *ಇ.ಸಿ.* 03, ಹೆಚ್.ಡಿ.ಕೋಟೆ, ಶಾ.ಸಂ.44.
11. *ಇ.ಸಿ.* 07, ಮಳವಳ್ಳಿ, ಶಾ.ಸಂ.17.

12. *ಇ.ಸಿ.* 10, ಅರಸೀಕೆರೆ, ಶಾ.ಸಂ.74.
13. *ಇ.ಸಿ.* 08, ಶಿವಮೊಗ್ಗ, ಶಾ.ಸಂ.74, ಸೊರಬ.
14. *ಇ.ಸಿ.* 08, ಸೊರಬ, ಶಾ.ಸಂ.74.
15. *ಇ.ಸಿ.* 06, ನಾಗಮಂಗಲ, ಶಾ.ಸಂ.117.
16. ಎಂ.ಎ.ಆರ್ 1919, ಪು.ಸಂ. 81–82.
17. ಎಂ.ಎ.ಆರ್ 1928, ಪು.ಸಂ. 19.
18. *ಇ.ಸಿ.* 09, ಹೊಸಪೇಟೆ, ಶಾ.ಸಂ.139.
19. *ಇ.ಸಿ.* 09, ಬೇಲೂರು, ಶಾ.ಸಂ.175.
20. ಕೊಟ್ರಯ್ಯ ಸಿ.ಟಿ.ಎಂ – *ಇರಿಗೇಷನ್ ಸಿಸ್ಟಂ ಅಂಡರ್ ವಿಜನಗರ ಎಂಪೈರ್*, ಪುರಾತತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು, 1995, ಪು.ಸಂ.149.
21. ಪ್ರದೀಪ್ ರಂಜನ್ ದಾಸ್ – *ಎಕನಾಮಿಕ್ ಹಿಸ್ಟರಿ ಆಫ್ ಡೆಕ್ಕನ್*, ದೆಹಲಿ, 1998, ಪು.ಸಂ.125.
22. ಕೊಟ್ರಯ್ಯ ಸಿ.ಟಿ.ಎಂ – ಪೂರ್ವೋಕ್ತ, 1995, ಪು.ಸಂ.153–155.
23. *ಇ.ಸಿ.* ಹಳೆಯ ಆವೃತ್ತಿ, ಸಂ–XII, ಚಿಕ್ಕನಾಯಕನಹಳ್ಳಿ, 5 ಮತ್ತು 44.
24. *ಇ.ಸಿ.* ಹಳೆಯ ಆವೃತ್ತಿ, ಸಂ–XII, ಚಿಕ್ಕನಾಯಕನಹಳ್ಳಿ, 142.
25. *ARIEP* – 1934–35 ಸಂ.54, 1941–42, ಸಂ.75.
26. ಕೊಟ್ರಯ್ಯ ಸಿ.ಟಿ.ಎಂ – ಪೂರ್ವೋಕ್ತ, 1995, ಪು.ಸಂ.151.
27. SII – ಸಂ.9, ಭಾಗ–2, ಪು.ಸಂ.493.
28. ಬೆನಗೆರೆ ರಾಮರಾವ್ ಪ್ಯಾನಂ ಸುಂದರಶಾಸ್ತ್ರಿ, – *ಪುರಾಣನಾಮ ಚೂಡಮಣಿ*, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2010, ಪು.ಸಂ.445–46.
29. ಅದೇ ಪು.ಸಂ.446.

30. ಹಾಸನ ಜಿಲ್ಲೆಯ ಗೆಜೆಟಿಯರ್, ಗೆಜೆಟಿಯರ್ ಇಲಾಖೆ, ಬೆಂಗಳೂರು, ಪು.ಸಂ.199–203.
31. *ಇ.ಸಿ.* 05, ಕೆ.ಆರ್.ನಗರ, ಶಾ.ಸಂ.96.

## ಅಧ್ಯಾಯ – 9

# ಉಪಸಂಹಾರ

ಉಪಸಂಹಾರ ಎಂಬ ಈ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಪರಿಮಿತಿಯಲ್ಲಿ ನಾವು ಕಂಡುಕೊಂಡ ಸಮಗ್ರ ಹೊಸ ವಿಷಯಗಳ ಫಲಿತವಾಗಿದೆ. ಈ ಅಧ್ಯಾಯನದ ಪ್ರಮುಖ ವಿಶೇಷತೆ ಎಂದರೆ ಇಲ್ಲಿಯವರೆಗೂ ಕೆರೆ ಮತ್ತು ಗದ್ದೆ ಕಾಲುವೆಗಳ ನೀರಾವರಿಯ ಬಗ್ಗೆ ಅನೇಕ ಲೇಖನಗಳು ಮತ್ತು ಲೇಖನ ಸಂಗ್ರಹಗಳು ಬಂದಿವೆಯಾದರೂ, ಸಮಗ್ರವಾದ ಅಧ್ಯಯನವು ಆಗಿರಲಿಲ್ಲ. ಈ ನಿಟ್ಟಿನಲ್ಲಿ ಅಧ್ಯಯನವು ಸರಿಯಾದ ರೀತಿಯ ಮಾರ್ಗದಲ್ಲಿದೆ ಎಂದು ತಿಳಿಯಬಹುದು. ಆದ್ದರಿಂದ ದಕ್ಷಿಣ, ಕರ್ನಾಟಕದ ಕೆರೆ, ಕಟ್ಟೆಗಳ ಸಮಗ್ರ ಚಿತ್ರಣವನ್ನು ನೀಡುವ ಪ್ರಯತ್ನವನ್ನೂ ಮಾಡುವಲ್ಲಿ ಸಫಲವಾಗಿದೆ ಎಂದು ಹೇಳಬಹುದು.

ಪ್ರಸ್ತುತ ಅಧ್ಯಯನವು ಒಂಭತ್ತು ಅಧ್ಯಾಯನಗಳನ್ನು ಒಳಗೊಂಡು ಸವಿವಿಸ್ತಾರವಾದ ವಿವರಣೆಯನ್ನು ನೀಡಿರುತ್ತೇನೆ.

**ಒಂದನೇ ಅಧ್ಯಾಯವು** ಪ್ರಸ್ತುತ ಅಧ್ಯಾನದ ಪೀಠಿಕೆಯಾಗಿದ್ದು, ದಕ್ಷಿಣ ಕರ್ನಾಟಕದಲ್ಲಿ ಕೆರೆಕಟ್ಟೆಗಳ ನಿರ್ಮಾಣ ಮತ್ತು ನಿರ್ವಹಣೆ, ಪೀಠಿಕೆ ಎಂಬ ಶೀರ್ಷಿಕೆಯನ್ನು ಹೊಂದಿದೆ. ಈ ಅಧ್ಯಾಯದಲ್ಲಿ ಅಧ್ಯಯನದ ಭೌಗೋಳಿಕ ವ್ಯಾಪ್ತಿ ಕಾಲಮಿತಿಯನ್ನು ನಿಗದಿಪಡಿಸಿಕೊಂಡು ಅನಂತರ ಅಧ್ಯಯನದ ವ್ಯಾಪ್ತಿ ಒಳಗೊಂಡಿದೆ. ಅಲ್ಲದೆ ಈವರೆಗೂ ನಡೆದಿರುವ ಅಧ್ಯಾಯಗಳ ಸಮೀಕ್ಷೆ, ಅಧ್ಯಯನ ಉದ್ದೇಶ, ಅಧ್ಯಯನ ಮಹತ್ವ ಮತ್ತು  ಸ್ವರೂಪ ತಿಳಿಸಿರುತ್ತೇನೆ.

**ಎರಡನೇ ಅಧ್ಯಾಯನದಲ್ಲಿ** ಭೌಗೋಳಿಕ ಪ್ರದೇಶದ ವಿವರಣೆಯನ್ನು ವಿಶ್ಲೇಷಿಸಲಾಗಿದೆ. ಒಂದು ಕೆರೆ ನಿರ್ಮಾಣಕ್ಕೆ ಪೂರಕವಾದ ಅಂಶಗಳಲ್ಲಿ ಅದರ ಭೌಗೋಳಿಕ ಲಕ್ಷಣ ಒಳಗೊಂಡಿದೆ. ಅಲ್ಲದೆ ಆ ಪ್ರದೇಶದ ಹವಮಾನ, ವಾಯುಗುಣ, ನದಿ, ಬೆಟ್ಟ, ಬಯಲು ಕಣಿವೆ, ಅರಣ್ಯ ಪ್ರದೇಶದ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ.

ಭಾರತದ ದಕ್ಷಿಣ ಭಾಗದಲ್ಲಿನ ಅದರಲ್ಲೂ ನಮ್ಮ ಕರ್ನಾಟಕದ ದಕ್ಷಿಣ ಭಾಗವು ಪರ್ಯಾಯ ಪ್ರಸ್ಥಭೂಮಿಯಾಗಿದೆ. ಈ ಭಾಗದ ಪಶ್ಚಿಮದಲ್ಲಿ ಪಶ್ಚಿಮಘಟ್ಟಗಳನ್ನು ಒಳಗೊಂಡಿದೆ. ಅಲ್ಲದೆ ಅರಬ್ಬಿ ಸಮುದ್ರದವರೆಗೂ ವಿಸ್ತರಿರುವುದನ್ನು ಇಲ್ಲಿ ವಿವರಿಸಲಾಗಿದೆ. ಇದು ದಕ್ಷಿಣ ಒಳನಾಡಿನ ಹವಾಗುಣ, ವಾಯುಗುಣದ ಮೇಲೆ ಹೇಗೆ ಪ್ರಭಾವವನ್ನು ಬೀರಿವೆ. ಅಲ್ಲದೇ ಕಾವೇರಿ ಅದರ ಉಪನದಿಗಳು, ಶರಾವತಿ, ನೇತ್ರಾವತಿ, ಅದರ ಅನೇಕ ನದಿಗಳು ಹರಿಯುತ್ತಿದ್ದರೂ ಸಹ ಕೆರೆಯ ನಿರ್ಮಾಣ ಪ್ರಮುಖ ಪಾತ್ರವಹಿಸಿದೆ ಎಂಬುದನ್ನು ಗಮನಿಸಬಹುದು. ಪಶ್ಚಿಮ ಘಟ್ಟಗಳಲ್ಲಿ ಕಂಡುಬರುವಂತಹ ಅರಣ್ಯಸಂಪತ್ತು, ಮಳೆಯನ್ನು ನಿರ್ಧರಿಸುವಲ್ಲಿ ಹೇಗೆ ಪ್ರಮುಖ ಪಾತ್ರವಹಿಸುತ್ತದೆ ಎಂಬುದನ್ನು ಎರಡನೆ ಅಧ್ಯಾಯದಲ್ಲಿ ವಿವರಿಸಲಾಗಿದೆ. ಅಲ್ಲದೆ ದಕ್ಷಿಣ ಕರ್ನಾಟಕವು ಹೊಂದಿರುವ ಬಯಲು ಪ್ರದೇಶಗಳು ಕೆರೆಗಳ ನಿರ್ಮಾಣಕ್ಕೆ ಹೇಗೆ ಪೂರಕವಾಗಿದೆ ಎಂಬುದನ್ನು ಪ್ರಸ್ತುತ ಅಧ್ಯಾಯದಲ್ಲಿ ಹೇಳಲಾಗಿದೆ. ನನ್ನ ಸಂಶೋಧನಾ ವಿಷಯದ ಮೇಲೆ ಯಾವ ರೀತಿ ಭೌಗೋಳಿಕ ಲಕ್ಷಣಗಳು ಯಾವ ಪ್ರಭಾವ ಬೀರಿದೆ ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಅಧ್ಯಾಯ ಮೂರರಲ್ಲಿ** ರಾಜಕೀಯ ಇತಿಹಾಸದ ಬಗ್ಗೆ ಚರ್ಚಿಸಲಾಗಿದೆ. ಅಂದರೆ ದಕ್ಷಿಣ ಕರ್ನಾಟಕದಲ್ಲಿ ಆಳಿದಂತಹ ರಾಜಮನೆತನಗಳು ಅದರಲ್ಲಿಯೂ ಕದಂಬರು, ಗಂಗರು, ಚಾಲುಕ್ಯರು, ಹೊಯ್ಸಳರು, ವಿಜಯನಗರ ಸಾಮ್ರಾಜ್ಯದ ಅರಸರು ಆಯಾ ಸಾಮ್ರಾಜ್ಯಗಳ ಕಾಲದಲ್ಲಿ ಕೆರೆ, ಕಟ್ಟೆಗಳು ಇವುಗಳ ನಿರ್ಮಾಣಕ್ಕೆ ದಕ್ಷಿಣ ಕರ್ನಾಟಕವನ್ನಾಳಿದ ಮನೆತನಗಳ ಆಡಳಿತ ಹೇಗೆ ಪೂರಕವಾಯಿತ್ತೆಂದು ಹೇಳಲಾಗಿದೆ.

ಇಲ್ಲಿ ನಾವು ಗಮನಿಸಬಹುದಾದ ವಿಷಯವೇನೆಂದರೆ ನಮ್ಮ ದೇಶದ ಉತ್ತರ ಭಾರತದಲ್ಲಿ ಆಳ್ವಿಕೆ ಮಾಡಿದ ಮೌರ್ಯ ಚಕ್ರವರ್ತಿಯಾದ ಅಶೋಕನ ಕಾಲದಲ್ಲಿಯೇ ಸುದರ್ಶನ ಸರೋವರದ ನಿರ್ಮಾಣಕಾರ್ಯ, ಅದರ ದುರಸ್ಥಿಗೆ ಸಂಬಂಧಿಸಿದ ಮಾಹಿತಿಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿ ನೋಡಿದಾಗ  ಆಗಿನ ಕಾಲದಲ್ಲಿ ಕೆರೆ ನಿರ್ಮಾಣದಂತಹ ಕಾರ್ಯಗಳಿಗೆ ರಾಜಮನೆತನಗಳು ನೀಡುತಿದ್ದ ಪ್ರೋತ್ಸಾಹ ಎಂತಹದು

ಎಂಬುದನ್ನು ತಿಳಿಯಬಹುದಾಗಿದೆ. ನಮ್ಮ ಕರ್ನಾಟಕವನ್ನು ಆಳಿದ ಕದಂಬರ ಆಳ್ವಿಕೆಯಲ್ಲಿ ಕೆರೆಗಳ ನಿರ್ಮಾಣ ಕಾರ್ಯಗಳಿಗೆ ಅವರು ಪ್ರೋತ್ಸಾಹವನ್ನು ನೀಡಿದರು. ಹಾಗೆಯೇ ಚಾಳುಕ್ಯರ ಕಾಲದಲ್ಲಿ ಮತ್ತು ಹೊಯ್ಸಳರ ಕಾಲದಲ್ಲಿ ಕೆರೆ ನಿರ್ಮಾಣಕಾರ್ಯಕ್ಕೆ ತೊಡಗಿಸಿಕೊಂಡುದುದನ್ನು ಇಲ್ಲಿ ನಾವು ಸ್ಮರಿಸಬಹುದಾಗಿದೆ.

ಅಲ್ಲದೆ ಹೊಯ್ಸಳರು ಮತ್ತು ವಿಜಯನಗರ ಕಾಲದ ಕೆರೆ ನಿರ್ಮಾಣದ ವ್ಯವಸ್ಥೆಗೆ ಸಂಬಂಧಿಸಿದಂತೆ ಅಪಾರವಾದ ಶಾಸನಗಳನ್ನು ಇದರಲ್ಲಿ ಸವಿವರವಾಗಿ ತಿಳಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ರಾಜಮನೆತನಗಳ ರಾಜಕೀಯ ಚರಿತ್ರೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ನೀಡಲಾಗಿದೆ. ಇದು ಇವರ ಕಾಲದ ಕೆರೆಕಟ್ಟೆಗಳ ನಿರ್ಮಾಣದ ಇತಿಹಾಸವನ್ನರಿಯಲು ಸಹಾಯಕವಾಗಿದೆ ಎಂದರೆ ತಪ್ಪಾಗಲಾರದು. ಇವರ ಕಾಲದಲ್ಲಿನ ಕೆರೆಗಳ ನಿರ್ಮಾಣ, ನಿರ್ವಹಣೆಗೆ ಕೆರೆಗಳಿಂದಾಗುವಂತಹ ಪ್ರಯೋಜನ ಪಡೆದುಕೊಳ್ಳುತ್ತಿದ್ದ ಪ್ರಜೆಗಳಿಂದಲೇ ಸುಂಕ ಅಥವಾ ಕಂದಾಯ ರೂಪದಲ್ಲಿ ವಸೂಲಿ ಮಾಡಿ ಕೆರೆಯ ಖರ್ಚು, ವೆಚ್ಚಗಳನ್ನು ಸರಿದೂಗಿಸಲು ಅವರು ವಹಿಸಿದ ಪಾತ್ರವೇನೆಂಬ ವಿಚಾರವನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಆದಾಯ, ಖರ್ಚು, ವೆಚ್ಚಗಳಿಗೆ ಸಂಬಂಧಿಸಿದ ಸಂಪೂರ್ಣ ವಿವರಣೆಯನ್ನು ಮುಂದಿನ ಅಧ್ಯಾಯಗಳಲ್ಲಿ ತಿಳಿಸಲಾಗಿದೆ. ಕೆರೆಗಳ ನಿರ್ಮಾಣದ ಉದ್ದೇಶ ಅದರಿಂದ ನಿರ್ಮಾತೃವಿಗೆ ದೊರೆಯುತ್ತೀದ್ದ ಫಲಗಳನ್ನು ಗಮನಿಸಿ ಅವರು ಹೇಗೆ ನಿರ್ಮಾಣ ಕಾರ್ಯದಲ್ಲಿ ತಮ್ಮ ಜೀವನವನ್ನು ತೊಡಗಿಸಿದ್ದರು ಎಂಬುದನ್ನು ತಿಳಿಸಲಾಗಿದೆ. ಕೆರೆಯ ನಿರ್ಮಾಣ ಕಾರ್ಯಕ್ಕೆ ರಾಜಮಹಾರಾಜರುಗಳು ಹೇಗೆ ಸಹಕಾರ ಪ್ರೋತ್ಸಾಹ ನೀಡಿದ್ದರು ಎಂಬುದನ್ನು ಈ ಅಧ್ಯಾಯದಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ.

**ನಾಲ್ಕನೇ ಅಧ್ಯಾಯವು** ಪ್ರಾಗ್‌ಇತಿಹಾಸ ಮತ್ತು ಇತಿಹಾಸ ಕಾಲದಲ್ಲಿ ಕೆರೆಗಳ ನಿರ್ಮಾಣ ಎಂಬ ಶೀರ್ಷಿಕೆಯನ್ನು ಹೊಂದಿದೆ. ಈ ಅಧ್ಯಾಯನ ಕೆರೆಗಳ ನಿರ್ಮಾಣ ಪ್ರಾರಂಭವಾದ ಬೃಹತ್ ಶಿಲಾಯುಗದ ಕಾಲದಿಂದ ಆರಂಭವಾಗಿದೆ. ಕರ್ನಾಟಕದಲ್ಲಿ ಇತಿಹಾಸ ಯುಗ ಪ್ರಾರಂಭವಾದ ಕಾಲದಿಂದ ವಿಜಯನಗರ ಸಾಮ್ರಾಜ್ಯದ ಪತನದವರೆಗೆ ಈ ಪ್ರದೇಶವನ್ನು ಆಳಿದ ರಾಜಮನೆತನಗಳ ಅನುಕ್ರಮಣಿಕೆಯಲ್ಲಿ ಆಯಾ ಕಾಲದಲ್ಲಿ

ನಡೆದ ಕೆರೆ ನಿರ್ಮಾಣದ ವಿವರಗಳನ್ನು ಉಪಲಬ್ಧವಾದ ಶಾಸನಗಳ ಆಧಾರಗಳ ಸಹಾಯದಿಂದ ಅಂತಹ ವಿವರಗಳನ್ನು ಕಾಲಾನುಕ್ರಮವಾಗಿ ಅಡಕ ಮಾಡಲಾಗಿದೆ, ಹಿಂದಿನ ರಾಜಮನೆತನಗಳು ಕೆರೆ ನಿರ್ಮಾಣಕ್ಕೆ ನೀಡಿದ್ದ ಮಹತ್ವವನ್ನು ವಿವರವಾಗಿ ದಾಖಲಿಸಿ ಆ ಕಾಲಘಟ್ಟದಲ್ಲಿ ನಡೆದ ಕೆರೆ ನಿರ್ಮಾಣ, ನಿರ್ವಹಣೆಯ ಪಕ್ಷಿನೋಟವನ್ನು ಪ್ರಸ್ತುತ ಅಧ್ಯಾಯನವು ಹೊಂದಿದೆ. ಈ ಅಧ್ಯಯನವು ರಾಜಮನೆತನಗಳು ರಾಜಕೀಯವಾಗಿ ಅನುಭವಿಸಿದ ಏಳು ಬೀಳುಗಳು ಅಂದಿನಕಾಲದ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಲಯದ ಮೇಲೆ ಬೀರಿದ ಪ್ರಭಾವವನ್ನು ಪ್ರತಿಬಿಂಬಿಸುತ್ತದೆ. ಅಲ್ಲದೆ ರಾಜಧಾನಿಗಳ ಸುತ್ತ ಮುತ್ತಲಿನ ಪ್ರದೇಶಗಳು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳ ಬಹುಪಾಲನ್ನು ಪಡೆದಿರುವುದು ಈ ಅಧ್ಯಯನದಿಂದ ಖಚಿತವಾಗುತ್ತದೆ.

**ಐದನೇ ಅಧ್ಯಾಯದಲ್ಲಿ** ಕೆರೆಯ ನಿರ್ಮಾಣ, ಜನರನಂಬಿಕೆಗಳು, ಉದ್ದೇಶಗಳು, ವ್ಯಕ್ತಿ ಸಮೂಹ ಹಾಗೂ ಸಮಾಜ ಫಲಗಳೂ ಎಂಬಿತ್ಯಾದಿಯ ವಿಷಯಗಳನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಈ ಮಹತ್ತರವಾದ ವಿಷಯಗಳ ಮೇಲೆ ಆಕರಗಳು ಹೇಗೆ ಬೆಳಕು ಚೆಲ್ಲುತ್ತವೆ ಎಂಬುದನ್ನು ಕಾಣಬಹುದು. ಒಂದು ಕೆರೆಯ ನಿರ್ಮಾಣ ಸಕಲ ಪ್ರಾಣಿ, ಸಸ್ಯಸಂಕುಲ, ಸಕಲ ಜೀವಸಂಕುಲಗಳು ವಾಯು, ಭೂಮಿ, ನೀರುಗಳನ್ನು ಅವಲಂಭಿಸಿರುವುದರ ಹಿನ್ನೆಲೆಯಲ್ಲಿ ಮಹತ್ತರವಾದ ಪಾತ್ರವಹಿಸುತ್ತವೆ. ಹಾಗಾಗಿ ಕೆರೆಯ ನಿರ್ಮಾಣವು ಮಹತ್ತರ ಕಾರ್ಯವೆನಿಸುತ್ತದೆ.

ಜಗತ್ತಿನ ಯಾವ ನಾಗರೀಕತೆಗಳ ಉಗಮದ ಬಗ್ಗೆ ಹಿನ್ನೆಲೆಯಲ್ಲಿ ಅಭ್ಯಸಿಸಿದರೂ ಸಹ ಅವು ನೀರಿನ ನೆಲೆಯಲ್ಲಿ ಜನ್ಮತಾಳಿವೆ ಎಂಬುದು ತಿಳಿದ ವಿಷಯ. ಹಾಗೆಯೇ ಒಂದು ಗ್ರಾಮ ಮತ್ತು ಊರು ಉದಯಿಸಲು, ನೀರಿನ ಆಸರೆ ಅಗತ್ಯ. ಹಾಗಾಗಿ ಅಂದಿನ ಮಾವನು ಇದನ್ನು ಅರಿತಿದ್ದ ಅದಕ್ಕೆ ಕಾರಣ ಹೆಚ್ಚಿನ ಆದ್ಯತೆಯನ್ನು ಕೆರೆಯ ನಿರ್ಮಾಣ ಮಾಡುವ ಮುಖಾಂತರ ಮೊದಲು ಅವನು ಕೆರೆ ನಿರ್ಮಾಣದ ಕಾರ್ಯವನ್ನು ಕೈಗೊಳ್ಳುತ್ತಿದ್ದನು.

ನೀರಿದ್ದರೆ ಮಾತ್ರ ಜೀವ ಮತ್ತು ನೆಲೆ. ಇದರಿಂದ ನಾಗರೀಕತೆ, ಜೀವ ವೈವಿಧ್ಯತೆ ಎಂಬ ವಿಷಯ ಈ ಅಧ್ಯಯನದಿಂದ ತಿಳಿದುಬರುತ್ತದೆ. ಹಾಗೆಯೇ ಈ ಅಧ್ಯಯನವು ಕೆರೆಯ ಬಗ್ಗೆ ಇದ್ದ ಜನರ ನಂಬಿಕೆಗಳನ್ನು ಅಂದಿನ ಕಾಲಕ್ಕೆ ಸಂಬಂಧಿಸಿದಂತೆ ತೆರೆದಿಡುತ್ತವೆ. ಇದು ಬಹು ಪ್ರಮುಖವಾಗಿ ಗಮನಹರಿಸಬೇಕಾದ ಅಧ್ಯಯನದ ಅಂಶವಾಗಿದೆ. ಆಧುನಿಕ ಕಾಲದ ನಂಬಿಕೆಗಳಿಗೂ ಪ್ರಾಚೀನ ಕಾಲದ ನಂಬಿಕೆಗಳಿಗೂ ಇದು ಹೋಲಿಕೆ ನೀಡುವುದಲ್ಲದೆ, ಅದಕ್ಕೆ ಉದಾಹರಣೆಯನ್ನೂ ಸಹ ನೀಡುವಲ್ಲಿ ಯಶಸ್ವಿಯಾಗಿದೆ. ಅಂದರೆ ಪ್ರಾಚೀನ ಕಾಲದ ಜನರು ಸಾಮಾನ್ಯವಾಗಿ ಬಹು ವಿಧವಾದ, ಬಹು ಉಪಯೋಗಕಾರಿಯಾದ ಕೆಲಸಕಾರ್ಯಗಳನ್ನು ನಂಬಿಕೆಗಳನ್ನಾಗಿ ಮಾಡಿಕೊಂಡಿದ್ದರೆಂದು ತಿಳಿಯಬಹುದಾಗಿದೆ.

ಹಿಂದಿನ ಜನರು ಕೆರೆಯ ನಿರ್ಮಾಣವನ್ನು ದೇವ ಕಾರ್ಯವೆಂದು ಭಾವಿಸಿದ್ದು ಹಾಗೂ ಅದರಿಂದ ಹತ್ತಾರು ಜನರಿಗೆ ಉಪಯೋಗವಾಗುವುದರಿಂದ ಪುಣ್ಯ ದೊರೆಯುವುದೆಂಬುದನ್ನು ನಂಬಿದ್ದರು. ಹಾಗೆಯೇ ಕೆರೆಯ ನಿರ್ಮಾಣದ ಬಗ್ಗೆ ನಮ್ಮ ಪುರಾಣ ಗ್ರಂಥಗಳಲ್ಲೂ ಕೆರೆಗಳ ನಿರ್ಮಾಣದ ಕಾರ್ಯ, ಅದರ ನಿರ್ಮಾಣದ ನಂತರ ಅದನ್ನು ಕಟ್ಟಿಸುವವರಿಗೆ ಸಿಗುವ ಫಲ, ಅದನ್ನು ಕಾಪಾಡುವವರಿಗೆ ದೊರೆಯುವು ಪುಣ್ಯ ಹಾಗೂ ಅದಕ್ಕೆ ಕೆಡಕನ್ನುಂಟು ಮಾಡುವವರಿಗೆ ಯಾವ ರೀತಿಯ ಶಾಪ ಸಿಗುತ್ತದೆ ಎಂಬುದನ್ನು ಶಾಸನಗಳು ದಾಖಲಿಸಿವೆ. ಇವುಗಳನ್ನು ತಿಳಿದಾಗ ನಮ್ಮ ನಂಬಿಕೆಗಳು ಇನ್ನಷ್ಟು ಇಮ್ಮಡಿಸಿದುದರ ಬಗ್ಗೆ ಸ್ಪಷ್ಟವಾದ ಮಾಹಿತಿ ದೊರೆಯುತ್ತದೆ.

ಮಹಾಭಾರತದಂತಹ ಶ್ರೇಷ್ಠ ಕಾವ್ಯ ಹಾಗೂ ಹಲವಾರು ಶಾಸನಗಳು ಕೆರೆಯ ನಿರ್ಮಾಣದ ಕಾರ್ಯದ ಬಗ್ಗೆ ಹಾಗೂ ಅದರಿಂದ ಉಂಟಾಗುವ ಅಥವಾ ಲಭಿಸುವಂತಹ ಪುಣ್ಯದ ಬಗ್ಗೆ ವಿವರಣೆ ನೀಡಿರುವುದರಿಂದ ಈ ಕಾರ್ಯ ಮತ್ತು ಅದರ ಅಧ್ಯಯನ ವಿಶೇಷತೆಯನ್ನು ಪಡೆದುಕೊಂಡಿದೆ ಎಂದು ಹೇಳಬಹುದು.

ಕೆಲವರು, ಅನೇಕ ಹರಕೆಗಳನ್ನು ಹೊತ್ತುಕೊಳ್ಳುವುದರ ಮೂಲಕ, ಕೆರೆಕಟ್ಟೆ, ಕಾಲುವೆ, ಬಾವಿ, ಕೊಳ, ಹೀಗೆ ಹಲವಾರು ರೀತಿಯ ಸಾರ್ವಜನಿಕ ಉಪಯುಕ್ತವಾದ

ನಿರ್ಮಾಣದ ಕೆಲಸ ಮಾಡಿದರೆ ಅವನು ಅಶ್ವಮೇಧಯಾಗವನ್ನು ಮಾಡಿದ ಫಲ ದೊರೆಯುವುದೆಂಬ ನಂಬಿಕೆ ಜನರಲ್ಲಿ ಇದ್ದಿತು. ಕೆರೆಯ ನಿರ್ಮಾಣದ ಕಾರ್ಯದಲ್ಲಿ ಆ ನಂಬಿಕೆ ಎಷ್ಟರಮಟ್ಟಿಗೆ ಇತ್ತೆಂದರೆ ಪ್ರಾಚೀನ ಕಾಲದ ಜನರು ಮಕ್ಕಳಾಗದಿದ್ದಾಗ ಮಕ್ಕಳಾದರೆ ಕೆರೆ ನಿರ್ಮಿಸುತೇನೆ ಎಂದು ಹರಕೆ ಹೊತ್ತು ಅದು ನೆರವೇರಿದರೆ ಊರಿಗೊಂದು ಕೆರೆ ನಿರ್ಮಿಸುತ್ತಿದ್ದರು ಕಾಯಿಲೆಗಳಿಂದ ನರಳುವವರೂ ಸಹ ಕೆರೆ ನಿರ್ಮಾಣದಿಂದ ಸಕಲ ದೋಷಗಳನ್ನು ದೂರಮಾಡಿಕೊಳ್ಳಲು ಪ್ರಯತ್ನಿಸುದ್ದಿದರು. ಕೆರೆ ನಿರ್ಮಾಣ ಕಾರ್ಯದಲ್ಲಿ ಪ್ರಾಚೀನರು ಅಪಾರವಾದ ನಂಬಿಕೆಉಳ್ಳವರಗಿದ್ದರೆಂದು ಈ ಅಧ್ಯಾಯನವು ಸವಿಸ್ತಾರವಾಗಿ ತಿಳಿಸುತ್ತದೆ.

ಹೀಗೆ ಪುಣ್ಯಕಾರ್ಯವೆಂದು ನಂಬಿ ನಿರ್ಮಿಸಲ್ಪಟ್ಟ ಕೆರೆಗಳ ಸಂಖ್ಯೆ ಸಾವಿರಾರು ಅವುಗಳನ್ನು ಶಾಸನಗಳೂ ನಮೂದಿರುಸಿರುವುದು ಶ್ಲಾಘನೀಯವಾದ ಸಂಗತಿಯಾದುದಾಗಿದೆ. ಹಾಗೆಯೇ ಈ ಅಧ್ಯಾಯವು ಕೆರೆಯ ನಿರ್ಮಾಣದ ಉದ್ದೇಶಗಳನ್ನೂ ಸಹ ಸ್ಪಷ್ಟವಾಗಿ ವಿವರಿಸಲು ಪ್ರಯತ್ನಿಸಲಾಗಿದೆ. ಇದರಲ್ಲಿ ನಾವು ಗಮನಿಸಿದಂತೆ ಅದರ ಉದ್ದೇಶವು ತಿಳಿದುಬರುತ್ತದೆ. ಕೆರೆಯ ನಿರ್ಮಾಣವು, ಪುಣ್ಯಪ್ರಾಪ್ತಿಗಾಗಿ, ಪಿತೃಗಳಿಗೆ ಶಾಶ್ವತ ಮೋಕ್ಷದಾಯಕವಾಗಿ, ಕೀರ್ತಿಸಂಪಾದನೆಗಾಗಿ, ಲೋಕಹಿತಕ್ಕಾಗಿ, ದಾನಗಳ ಅಂಗವಾಗಿ ಸಂಸ್ಕಾರಗಳ ಅಂಗವಾಗಿ, ಅಂದರೆ ವ್ಯಕ್ತಿಯ ಮರಣೋತ್ತರ ಸಂಸ್ಕಾರಗಳ ಪೂರಕವಾಗಿ ಸಾಮಾಜಿಕ ಉದ್ದೇಶಗಳಿಗಾಗಿ, ಆರ್ಥಿಕ ಸದ್ವಿನಿಯೋಗಕ್ಕಾಗಿ, ಅಧಿಕಾರ ಪ್ರಾಪ್ತಕ್ಕಾಗಿ, ಹಾಗೂ ಕಾಮ್ಯಗಳಸಿದ್ಧಿಗಾಗಿ ಕೆರೆಗಳು ನಿರ್ಮಾಣವಾದಂತೆ ಕಂಡುಬರುತ್ತದೆ. ರಾಜರು, ರಾಣಿಯರು, ಅಧಿಕಾರಿಗಳು, ದಂಡನಾಯಕರುಗಳು, ಹಾಗೂ ಶ್ರೀಮಂತ ಅಧಿಕಾರಿಗಳು ಮತ್ತು ಸಮಾಜದ ಇನ್ನಿತರರು ತಮ್ಮ ಅಧಿಕಾರ ಅವಧಿಯಲ್ಲಿ ಮಹತ್ವದ್ದನ್ನು ಸಾಧಿಸಿದ್ದಾಗ ಅಂದರೆ ಅವರ ಪಟ್ಟಾಭಿಷೇಕ ವಿಜಯ ಮಹೋತ್ಸವ ಇತ್ಯಾದಿಗಳನ್ನು ಆಚರಿಸಲು ಕೆರೆಗಳನ್ನು ನಿರ್ಮಾಣ ಮಾಡಿದ್ದಾರೆಂದರೆ ತಪ್ಪಾಗಲಾರದು.

**ಆರನೇ ಅಧ್ಯಾಯದಲ್ಲಿ** ಕೆರೆಗಳು ಮಳೆಯ ನೀರಿನ ಮುಖ್ಯ ಸಂಗ್ರಹಕಗಳೆಂದು ಹಾಗೂ ಸುತ್ತಮುತ್ತಲಿನ ಭೂ ಪ್ರದೇಶಗಳ ವ್ಯವಸಾಯದ ಉದ್ದೇಶವನ್ನಿಟ್ಟುಕೊಂಡು ನಿರ್ಮಾಣವಾಗುತ್ತಿದ್ದವು. ಈ ಬಗೆಯ ಹಲವಾರು ಮಾಹಿತಿಗಳನ್ನು ಸಂಗ್ರಹಿಸಿ ಈ ಅಧ್ಯಾಯನದಲ್ಲಿ ವಿವರಾತ್ಮಕವಾಗಿ ವಿವರಣೆಯನ್ನು ನೀಡಿದ್ದೇನೆ.

ಈ ಅಧ್ಯಯನವು ವ್ಯಕ್ತಿ ಸಮೂಹದ ಸಮಾಜ ಫಲಗಳು, ಇವುಗಳ ಬಗ್ಗೆಯು ಗಮನಹರಿಸಿದೆ. ಕೇವಲ ಕೆರೆಯು ನಿರ್ದಿಷ್ಟ ಅಥವಾ ಸಾಮಾನ್ಯ ಉದ್ದೇಶಗಳನ್ನಿಟ್ಟುಕೊಂಡರೆ ಸಾಲದು ಅದರಿಂದ ವ್ಯಕ್ತಿ ಹಾಗೂ ಸಮಾಜವು ಹೇಗೆ ಅನುಕೂಲತೆ ಪಡೆದು ಕೊಂಡಿದೆ ಎಂಬುದನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಕೆರೆಯ ನಿರ್ಮಾಣದ ನಂತರ ಅದರ ಫಲಾನುಭವಿಗಳೂ ಯಾರು ಎಂಬ ಪ್ರಶ್ನೆಗೆ ಸ್ಪಷ್ಟ ಉತ್ತರ ಪ್ರಸ್ತುತ ಅಧ್ಯಾಯದಲ್ಲಿದೆ. ಕೆರೆ ನಿರ್ಮಾಣವು ಮೂಲತಃ ಸಾರ್ವಜನಿಕ ಸೇವಾ ಮನೋಭಾವವನ್ನು ಪ್ರಮುಖ ಉದ್ದೇಶವಾಗಿ ಹೊಂದಿರುತ್ತಿತ್ತು. ಹಾಗಾಗಿ ಸುತ್ತಮುತ್ತಲಿನ ಭೂ ಭಾಗದ ರೈತರು ಕಡಿಮೆ ಪ್ರಮಾಣದ ತೆರಿಗೆ ವಿನಿಯೋಗಿಸಿ ಕೆರೆಯಿಂದ ತನ್ನ ಜಮೀನಿಗೆ ನೀರು ಹಾಯಿಸಿಕೊಂಡು ಬೆಳೆ ಬೆಳೆಯಬಹುದಾಗಿತ್ತು. ಆ ಬೆಳೆಯನ್ನು ಯಾರು ಬೆಳೆಯುತ್ತಿದ್ದರೋ ಅವರೆಲ್ಲಾ ಫಲಾನುಭವಿಗಳೆಂದೇ ಗುರುತಿಸುವುದನ್ನು ಕಾಣಬಹುದು.

ಕೇವಲ ಮನುಷ್ಯನಲ್ಲದೆ ಗಿಡ–ಮರ ಮೃಗ, ಪಕ್ಷಿ ಮತ್ತು ಪ್ರಾಣಿಗಳು ಸಹ ಕೆರೆಯ ಫಲಾನುಭವಿಗಳಾಗಿದ್ದವು. ಕೇವಲ ಇದು ನೀರಿನ ಸೆಲೆಯಾಗಿರದೆ ಮತ್ಸ್ಯೋದ್ಯಮದ ಕೇಂದ್ರವೂ ಆಗಿದ್ದಿತ್ತು. ಅಂದಿನ ಜನರು ಇದರಲ್ಲಿ ಮೀನು ಸಾಕುವ ಮತ್ತು ಅದನ್ನು ಸಹ ತಮ್ಮ ದೈನಂದಿನ ಜೀವನದಲ್ಲಿ ಬಳಸಿಕೊಳ್ಳುತ್ತಿದ್ದರೆನ್ನುವಾಗ ಅವರೂ ಸಹ ಫಲಾನುಭವಿಗಳ ಪಟ್ಟಿಗೆ ಸೇರುತ್ತಾರೆ. ಹೀಗೆ ಹಲವಾರು ವಿಷಯಗಳು ಈ ಅಧ್ಯಾಯದಲ್ಲಿ ಎಳೆಎಳೆಯಾಗಿ ತೆರೆದುಕೊಳ್ಳುವುದನ್ನು ಕಾಣಬಹುದು. ಈ ಅಧ್ಯಾಯವು ಸಮಗ್ರವಾಗಿ, ನಿರ್ಮಾಣ, ನಿರ್ವಹಣೆಯ ನಂಬಿಕೆಗಳು, ಅಂಗಗಳು, ಅವುಗಳ ನಿರ್ವಹಣೆಯ ಕ್ರಮಗಳು

ಇತ್ಯಾದಿಗಳನ್ನು ವಿವರವಾಗಿ ದಾಖಲಿಸಿ ತನ್ನ ಉದ್ದೇಶಿತ ಗಮ್ಯವನ್ನು ಕಂಡುಕೊಳ್ಳುವಲ್ಲಿ ಸಫಲವಾಗಿದೆ.

ಈ ಅಧ್ಯಾಯವು ಕೆರೆಯ ನಿರ್ಮಾಣ ಪ್ರಾರಂಭದಲ್ಲಿ ನೆರವೇರಿಸುವ ಕ್ರಮಗಳು, ಕೆರೆಗಳ ದುರಸ್ತಿ ಹಾಗೂ ಸಂರಕ್ಷಣೆ, ನಿರ್ಮಾಣ ಮತ್ತು ನಿರ್ವಹಣೆಗೆ ಒದಗುವ ದಾನ-ದತ್ತಿಗಳು, ಕೆರೆಯ ನಿರ್ಮಾಣದ ಷರತ್ತುಗಳು, ಮುನ್ನೆಚ್ಚರಿಕಾ ಕ್ರಮಗಳು, ನಿಯಮಗಳು, ಷರತ್ತುಗಳು ಮುಂತಾದ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ. ಈ ನಿಟ್ಟಿನಲ್ಲಿ ನೋಡಿದರೆ ಇದೊಂದು ಮಹತ್ತರವಾದ ಘಟಕವೆಂದು ಹೇಳಬಹುದು.

ಈ ಅಧ್ಯಾಯದಲ್ಲಿ ಕೆರೆಯ ನಿರ್ಮಾಣವನ್ನು ಹೇಗೆ ಆರಂಭಿಸಬೇಕು, ಏಕೆ ಆರಂಭಿಸಬೇಕು ಎಂಬ ಅಂಶವನ್ನು ಸ್ಪಷ್ಟವಾಗಿ ಸಾದರಪಡಿಸಲಾಗಿದೆ. ಕೆರೆಯ ನಿರ್ಮಾಣಕ್ಕೆ ನಿಯಮಿತವಾದ ಜಾಗವನ್ನು ಗೊತ್ತುಮಾಡಿ ಅದರ ವಿಸ್ತೀರ್ಣತೆಯನ್ನು ಮೊದಲೇ ಯೋಚಿಸಿ ಹಾಗೂ ಅದರ ಉಪಯೋಗಗಳನ್ನು ಪಟ್ಟಿಮಾಡಿಕೊಳ್ಳಬೇಕು. ನಿರ್ಮಾಣದಿಂದ ಹೆಚ್ಚು ಅನುಕೂಲಗಳು ಕಂಡುಬಂದಲ್ಲಿ ಮಾತ್ರ ಕೆರೆಯ ನಿರ್ಮಾಣ ಕಾರ್ಯ ಆರಂಭಿಸಬೇಕು ಎಂದು ತಿಳಿಸುತ್ತದೆ. ಹಾಗೆಯೇ ಕೆರೆಯ ನಿರ್ಮಾಣಕ್ಕೆ ಒಂದು ನಿಯಮ ಬದ್ಧವಾದ ಯೋಜನೆ ಅಥವಾ ನೀಲನಕಾಶೆ ತಯಾರಾಗಬೇಕಾದ ಅವಶ್ಯಕತೆ ಇದೆ. ಹಾಗಾಗಿ ಅಧ್ಯಾಯವು ಈ ಎಲ್ಲಾ ವಿಷಯಗಳನ್ನು ಸವಿಸ್ತಾರವಾಗಿ ಹೊಂದಿದೆ ಎನ್ನಬಹುದು.

ಕೆರೆಗಳ ನಿರ್ಮಾಣವಾದರೇ ಸಾಲದು ನಂತರ ಅದರ ಖರ್ಚು ವೆಚ್ಚಗಳು ದುರಸ್ತಿ ಕಾರ್ಯಗಳೂ ಸಹ ಮೇಲ್ವಿಚಾರಿಸಲ್ಪಡಬೇಕು. ಅಂದರೆ ಭವಿಷ್ಯದಲ್ಲಿ ಪ್ರಕೃತಿ ವಿಕೋಪಗಳಿಂದ ಅಥವಾ ನೈಸರ್ಗಿಕವಾಗಿಯೇ ಆಗಲಿ ಕೆರೆಗಳಿಗೆ ಸಂಭವಿಸಬಹುದಾದ ಹಾನಿ, ಒದಗಬಹುದಾದ ಆಪತ್ತು-ವಿಪತ್ತುಗಳ ಕಾಲದಲ್ಲಿ ಪುನರ್ ನಿರ್ಮಾಣಕ್ಕೆ ತಕ್ಕ ವ್ಯವಸ್ಥೆ ಮಾಡಿರುವುದನ್ನು ದಾಖಲಿಸಿದೆ. ಕೆರೆಯ ದುರಸ್ತಿ ಹಾಗೂ ಸಂರಕ್ಷಣೆಯ ಬಗ್ಗೆ ಶಾಸನಗಳಲ್ಲಿ ಹಲವಾರು ಉಲ್ಲೇಖಗಳಿವೆ. ಹತ್ತು ಹಲವು ಶಾಸನಗಳು ಕೆರೆಯ ದುರಸ್ತಿ

ಕಾರ್ಯದ ಬಗ್ಗೆ ಮಾಹಿತಿ ನೀಡಿರುವುದನ್ನು ಹಾಗೂ ಅದು ಹೇಗೆ ನಡೆಯಬೇಕೆಂಬ ಎಲ್ಲಾ ಅಂಶಗಳೂ ಸಹ ಈ ಅಧ್ಯಾಯದಲ್ಲಿ ಅಡಕಮಾಡಲಾಗಿದೆ.

ಈ ಅಧ್ಯಾಯವು ಕೆರೆಗೆ ಹರಿದು ಬರುತ್ತಿದ್ದ ದಾನದತ್ತಿಗಳ ಬಗ್ಗೆ ಸ್ಪಷ್ಟ ಮಾಹಿತಿ ನೀಡುವಲ್ಲಿ ಯಶಸ್ವಿಯಾಗಿದೆ. ದಾನ-ದತ್ತಿಯ ಅರ್ಥ ಅವುಗಳ ನಡುವಿನ ವ್ಯತ್ಯಾಸ ಹಾಗೂ ಇವುಗಳಿಂದ ಕೆರೆಯ ನಿರ್ಮಾಣ ಅಥವಾ ದುರಸ್ಥಿ ಕಾರ್ಯ ಹೇಗೆ ನೆರವೇರುತ್ತಿತ್ತೆಂಬ ಬಗ್ಗೆ ಸ್ಪಷ್ಟಮಾಹಿತಿ ಅಧ್ಯಾಯನದಲ್ಲಿ ಮೂಡಿಬಂದಿದೆ.

ಹಲವಾರು ಶಾಸನಗಳೂ ಕೂಡ ದಾನದತ್ತಿಗಳ ಬಗ್ಗೆ ಮಾಹಿತಿ ನೀಡುತ್ತವೆ. ಉದಾಹರಣೆಗೆ ಮಂಡ್ಯ ಜಿಲ್ಲೆಯ (ನಂ 161 (14) ಬೇಲೂರಿನ ಕ್ರಿ.ಶ ೨೨7ರ ಶಾಸನವು ನಾಳಯ್ಯ ಎಂಬುವವರು ಕೆರೆ ತೋಡಿಸಿ, ತೋಟವನ್ನು ಇರಿಸುವುದಕ್ಕಾಗಿ ಊರನ್ನೇ ದಾನ ಮಾಡಿರುವುದನ್ನು ತಿಳಿಸುತ್ತದೆ. ಪ್ರಾಚೀನ ಕಾಲದ ಜನರು ಒಂದು ಗ್ರಾಮಕ್ಕೆ ಹಾಗೂ ಕೆರೆಯ ನಿರ್ಮಾಣಕ್ಕೆ ಯಾವುದೇ ಉಚಿತ ಕಾರ್ಯವನ್ನು ಮಾಡಲು ತಯಾರಾಗಿದ್ದರೆಂದು ನಾವು ಈ ಮೂಲಕ ತಿಳಿಯಬಹುದು.

ಮೊದಲೇ ತಿಳಿಸಿದಂತೆ ಕೆರೆಯ ನಿರ್ಮಾಣಕ್ಕೆ ಮೊದಲು ಹೇಗೆ ನಿರ್ಮಿಸಬೇಕೆಂದು ಪೂರ್ವ ನಿಯೋಜಿತವಾಗಿ ನಿರ್ಮಾಣ ಕಾರ್ಯವನ್ನು ಯೋಜಿಸಿಕೊಳ್ಳಬೇಕು. ಆಗ ಸಂಭವಿಸಬಹುದಾದ ಎಲ್ಲಾ ದುರಂತಗಳನ್ನು ಪಟ್ಟಿಮಾಡಿ ಭವಿಷ್ಯತ್ತನ್ನು ಯೋಚಿಸಿ ಕೆರೆಯ ನಿರ್ಮಾಣವೂ ಹೀಗೆಯೇ ಇರಬೇಕೆಂದು ನಿಯಮಿಸಿ ಅದಕ್ಕೆ ಕೆಲವೊಂದು ಷರತ್ತುಗಳನ್ನು ಹಾಕಲಾಗಿರುವುದನ್ನು ಅವು ಯಾವುವು ಎಂಬುದನ್ನು ಕೂಲಂಕುಷವಾಗಿ ನೋಡಬಹುದಾಗಿದೆ. ಅಷ್ಟೇ ಅಲ್ಲದೆ ಈ ಅಧ್ಯಾಯನವು ಮುನ್ನೆಚ್ಚರಿಕಾ ಕ್ರಮಗಳನ್ನು ಸ್ಪಷ್ಟಪಡಿಸಿದೆ.

**ಅಧ್ಯಾಯ ಏಳರಲ್ಲಿ** ಕೆರೆ, ನಾಲೆಗಳ, ಉಸ್ತುವಾರಿ ನಿಯಮ ಎಂಬುದಾಗಿದ್ದು, ಇದು ನಿಯಮಗಳು ನೀತಿ ಷರತ್ತುಗಳು ಫಲಾನುಭವಿಗಳು ಹೂಳೆತ್ತುವುದು ನಾಲೆಗಳ ತೂಬುಗಳ ಮೇಲ್ವಿಚಾರಣೆ, ಮೇಲ್ವಿಚಾರಕ ವರ್ಗ, ದುರಸ್ತಿ ಕಾರ್ಯ, ಸಂಭಾವಿತ

ಹಾನಿಕಾರಕ ಹಾಗೂ ಪಾಪ ಮೊದಲಾದ ವಿಷಯ ಅಥವಾ ಉಪಘಟಕಗಳನ್ನೊಳಗೊಂಡಿದೆ.

ಈ ಅಧ್ಯಾಯವನ್ನು ಅಭ್ಯಸಿಸುವಾಗ ನಮಗೆ ಹಲವಾರು ಸಂಗತಿಗಳು ಸ್ಪಷ್ಟವಾಗುತ್ತವೆ ಮತ್ತು ನಿರ್ವಹಣೆಯ ನಿರ್ದೇಶನಗಳು ದೊರೆಯುತ್ತವೆ.

ಮೊದಲನೆಯದಾಗಿ ಕೆರೆ, ನಾಲೆಗಳ ನಿರ್ಮಾಣದಲ್ಲಿ ಅನುಸರಿಸಬೇಕಾದ ನಿಯಮಗಳು, ನೀತಿ ಷರತ್ತುಗಳು ಕಂಡುಬರುತ್ತವೆ. ಇಲ್ಲಿ ನೀತಿ ಎಂದರೇನು, ನಿಯಮ ಎಂದರೇನು, ಅವುಗಳ ನಡುವಿನ ವ್ಯತ್ಯಾಸವೇನು, ಅವುಗಳ ಸಾಮ್ಯಗಳೇನು ಎಂಬುದನ್ನು ತಿಳಿಸಿದೆ. ಹೀಗೆ ಏಳನೇ ಅಧ್ಯಾಯವು ದಾನ-ದತ್ತಿ ನೀಡಿದ ಹಾಗೂ ಅದರ ಉಲ್ಲೇಖನಗಳಿರುವ ಹಲವಾರು ಸಂಗತಿಗಳನ್ನು, ದಾನ-ದತ್ತಿಗಳ ಅಂಶದ ಮೇಲೆ ತೆರೆದಿಡುತ್ತದೆ.

ಹೀಗೆ ಅವುಗಳಲ್ಲಿ ಹಲವಾರು ರೀತಿಗಳಿವೆ. ಉದಾಹರಣೆಗೆ ಕೆರೆಗಳಲ್ಲಿ ಸಂಗ್ರಹವಾದ ನೀರು ಅದರ ಬಳಕೆಗಾಗಿ ಹೊರಡಿಸಲಾದ ನಿರ್ದಿಷ್ಟ ನಿಯಮಗಳು ಈ ರೀತಿಯವು.

**ಉದಾಹರಣೆಗೆ** :

- ❖ ಹೊಸದಾಗಿ ಕೆರೆಕಟ್ಟುವಂತಹವರು ತಮ್ಮ ಊರ/ಹಳ್ಳಿಯ ಹಳ್ಳದ ಬಳಿಯಿರುವ ತಮ್ಮ ಭೂಮಿಗಳನ್ನು ಉಪಯೋಗಿಸಿಕೊಳ್ಳಬೇಕು.
- ❖ ಕೆರೆಯ ಎತ್ತರವನ್ನು ಹೆಚ್ಚಿಸುವಾಗ ಅದರ ಹಿನ್ನೀರಿನಿಂದ ಮುಳುಗುವ ಭೂಮಿಯವರು ಹಾಗೆ ಮಾಡಬಾರದೆಂದು ತಡೆಯಲಾಗದು. ಇಂಥ ಸಮಸ್ಯೆ ಬಂದಲ್ಲಿ ಅದನ್ನು ಹೇಗೆ ಬಗೆಹರಿಸಿಕೊಳ್ಳಬೇಕೆಂದು ಉದಾಹರಣೆ ಸಹಿತ ಶಾಸನದಲ್ಲಿ ಉಲ್ಲೇಖಿಸಿರುವುದನ್ನು ಈ ಅಧ್ಯಾಯದಲ್ಲಿ ಉಲ್ಲೇಖಿಸಲಾಗಿದೆ.

ಹಾಗಾಗಿ ಈ ಅಧ್ಯಾಯದಲ್ಲಿ ನೀತಿ ಷರತ್ತುಗಳನ್ನು ಅಳವಡಿಸಿಕೊಂಡು ಸ್ಪಷ್ಟವಾದ ಮಾಹಿತಿಯನ್ನು ನೀಡಿದೆ ಎಂದು ತಿಳಿಯುತ್ತದೆ.

ಅಲ್ಲದೇ ಅಧ್ಯಾಯವು ಕೆರೆಯ ಫಲಾನುಭವಿಗಳ ಬಗ್ಗೆ ಮಾಹಿತಿ ನೀಡುತ್ತದೆ. ಫಲಾನುಭವಿಗಳೆಂದಾಗ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಕೆರೆಯಿಂದ ದೊರೆಯುವ ಫಲವನ್ನು ಹೊಂದಿದವರಾದರೆ ಅವರನ್ನು ಫಲಾನುಭವಿಗಳು ಎಂದು ಕರೆಯುವರು.

ಹಾಗೆಯೇ ಈ ಅಧ್ಯಾಯವು ಹೂಳೆತ್ತುವುದು ಅಂದರೆ ವರ್ಷದ ಕೆಲವು ತಿಂಗಳುಗಳು ಬೇಸಿಗೆಯಾಗಿದ್ದು ಇಂತಹ ಸಮಯದಲ್ಲಿ ಕೆರೆ ಮಳೆಯಿಲ್ಲದ ಕಾರಣ ಕೆರೆ ಬರಿದಾಗುತ್ತದೆ. ಆಗ ಕೆರೆಯ ತಳಭಾಗದಲ್ಲಿರುವ ಹೂಳನ್ನು ಅಂದರೆ ಮಣ್ಣನ್ನು ತೆಗೆದು ಅದನ್ನು ಗೊಬ್ಬರವಾಗಿ ತೋಟಗಳಿಗೂ ಉಪಯೋಗಿಸಿ ಕೆರೆಯನ್ನು ಸುಸ್ಥಿತಿಯಲ್ಲಿಡುವ ವಿಧನವನ್ನು ಕಾಣಬಹುದು. ಈ ಅಧ್ಯಾಯವು ಹೂಳೆತ್ತುವ ಕಾರ್ಯ ಹಾಗೂ ನಿರ್ವಹಣೆಯ ಬಗ್ಗೆ ಕಂಡುಬಂದಿರುವ ಶಾಸನಗಳ ವಿವರಣೆ ಒಳಗೊಂಡಿದೆ.

ಮಳೆಗಾಲದಲ್ಲಿ ನೀರಿನ ಹರಿವು ನೀರ್ಗಾಲುವೆಯಲ್ಲಿ ಬಾರಿ ಪ್ರಮಾಣದ ಮಣ್ಣನ್ನು ಹೊತ್ತು ತರುತ್ತದೆ. ಇದು ನೀರಿನೊಂದಿಗೆ ತೂಬಿನ ಮೂಲಕ ಕಾಲುವೆಗಳಿಗೆ ಸಾಗಿ ಹೋಗುತ್ತದೆ. ಪ್ರವಾಹದ ಬಿರುಸು ಇಳಿದಂತೆ ಹೂಳು ನೀರಿನಿಂದ ಬೇರ್ಪಟ್ಟು ಕಾಲುವೆಯ ಅಡಿಯಲ್ಲಿ ಪದರುಗಟ್ಟುತ್ತದೆ. ಮುಂದಿನ ಮಳೆಗಾಲ ಎದುರಾಗುವುದಕ್ಕಿಂತ ಮುಂಚೆಯೇ ಈ ಹೂಳನ್ನು ತೆಗೆದುಹಾಕಬೇಕು ಎಂದು ಶಾಸನಗಳು ಉಲ್ಲೇಖಿಸಿರುವುದು ಈ ಅಧ್ಯಾಯದಲ್ಲಿ ಕಾಣಬರುತ್ತದೆ.

ಹಾಗೆಯೇ ಈ ಅಧ್ಯಾಯನವು ತೂಬುಗಳ ಮೇಲ್ವಿಚಾರಣೆಗಳ ಬಗ್ಗೆ ಉತ್ತಮವಾದ ಮಾಹಿತಿ ನೀಡುತ್ತದೆ. ಒಂದೊಂದು ಕೆರೆಗೂ ಒಂದು ಅಥವಾ ಎರಡು ತೂಬುಗಳು ಇರುತ್ತಿದ್ದವು. ಕೆಲವೊಮ್ಮೆ ಮೂರು ಇದ್ದದ್ದು ಉಂಟು. ಅವುಗಳಿಂದ ನೀರನ್ನು ಜಮೀನಿಗೆ ಬಿಡಲಾಗುತ್ತಿತ್ತು. ತೂಬು ಇರುತ್ತಿದ್ದು, ಸಾಮಾನ್ಯವಾಗಿ ಕೆರೆಯ ಅಂಗಳದಲ್ಲಿ. ತೂಬುಗಳ ನಿರ್ಮಾಣ ಕಾರ್ಯ ಹೇಗೆ ನಡೆಯಬೇಕು, ಅದರ ಅನುಕೂಲತೆಗಳೇನು,

ಅನಾನುಕೂಲತೆಗಳೇನು ಎಂದು ತಿಳಿದುಬರುತ್ತದೆ. ಹೀಗಾಗಿ ತೂಬುಗಳ ಬಗ್ಗೆ ಸ್ಪಷ್ಟವಾದ ಮಾಹಿತಿಯನ್ನು ಈ ಅಧ್ಯಾಯದಲ್ಲಿ ನಾವು ನೋಡಬಹುದಾಗಿದೆ.

ಹಾಗೆಯೇ ಈ ಅಧ್ಯಾಯದಲ್ಲಿಯೂ ಸಹ ಕೆರೆಗಳ ದುರಸ್ತಿ ಹಾಗೂ ಮೇಲ್ವಿಚಾರಣೆಯ ಬಗ್ಗೆ ಉತ್ತಮ ಮಾಹಿತಿ ಕಂಡುಬರುತ್ತದೆ. ಅದನ್ನು ಈ ಕೆಳಗಿನಂತೆ ಸಾರಾಂಶ ರೂಪದಲ್ಲಿ ಹೇಳಬಹುದು.

- ಹರಿಹರನ ಶಾಸನವು ತಿಳಿಸುವಂತೆ ಹರಿಹರ ಕ್ಷೇತ್ರದ ಮಹಾಜನರಿಗೂ ಹರಿಹರ ದೇವಾಲಯದ ಮಹಾಜನರಿಗೂ ಆಗಿದ್ದ ಒಪ್ಪಂದ.
- ಹೊಯ್ಸಳರ ಕಾಲದಲ್ಲಿ 102 ಹಿರೇಗಡಗಲ್ಲಿ ಎಂಬಲ್ಲಿ ದೇವಸ್ಥಾನದ ಮುಂದೆ ನಿಲ್ಲಿಸಿರುವ ಶಾಸನದಿಂದ ಕೊಳಗಲ್ಲು ಗ್ರಾಮ ಕ್ರಿ.ಶ. 967 ರಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ಬರೆದ ಶಾಸನ.
- ಕಲ್ಯಾಣಿ ಚಾಲುಕ್ಯರ ಮೋರಿಗೇರಿ ಗ್ರಾಮದಲ್ಲಿ 1ನೇ ಸೋಮೇಶ್ವರನು ನಿರ್ಮಿಸಿದ ಶಾಸನ
- ಅಂಬಲಿ ಎಂಬ ಗ್ರಾಮದಲ್ಲಿ ಕಲ್ಲೇಶ್ವರ ದೇವಸ್ಥಾನದ ಎದುರಿಗೆ ನಿಲ್ಲಿಸಿದ ಕಲ್ಲಿನಮೇಲೆ ಕಲ್ಯಾಣಿ ಚಾಲುಕ್ಯ ತ್ರಿಭುವನಮಲ್ಲ ಕ್ರಿ. ಶ. 1106ರಲ್ಲಿ ಬರೆಸಲಾದ ಶಾಸನ.

ಈ ಮೇಲೆ ಹೇಳಿದ ಶಾಸನಗಳು ಒದಗಿಸುವ ಪೂರ್ಣ ವಿವರಗಳನ್ನು ಅಧ್ಯಾಯವು ಒಳಗೊಂಡಿದೆ.

ಅಷ್ಟೇ ಅಲ್ಲದೆ ಕೆರೆಗೆ ದೊರೆಯುತ್ತಿದ್ದ ಸಂಭಾವನೆಯ ಬಗ್ಗೆ ಮಾಹಿತಿ ನೀಡಿದೆ. ಕೆರೆಯನ್ನು ನಾಶಗೊಳಿಸಿದವರಿಗೆ ಶಿಕ್ಷೆಯ ವಿಧಗಳನ್ನು ನಮೂದಿಸಿದೆ. ಅಲ್ಲದೆ ಅವರಿಗೆ ಆ ಕೃತ್ಯದಿಂದ ಒದಗುವ ಪಾಪದ ಬಗ್ಗೆ ಮಾಹಿತಿ ಇದೆ.

ಕೆರೆಯ ನಿರ್ಮಾಣ ಕಾರ್ಯವು ಎಷ್ಟು ಪುಣ್ಯವೊ ನಾಶವೂ ಸಹ ಅಷ್ಟೇ ಪಾಪಕಾರಿಯಾಗಿದೆ ಎಂದು ಹಲವಾರು ಶಾಸನಗಳು ಘೋಷಿಸಿವೆ. ಇದು ಕೆರೆಯ ಸಂರಕ್ಷಣೆಯಲ್ಲಿ ಮಹತ್ವದ ಪಾತ್ರ ವಹಿಸಿತ್ತೆಂದು ಇಂದಿಗೂ ತಿಳಿದುಬರುತ್ತದೆ.

ಹೀಗೆ ಬೆಳೆದು ಬಂದ ಕೆರೆಗಳು ತಮ್ಮ ಉದ್ದೇಶಗಳಲ್ಲಿ ಮೊದಲಿಗೆ ಕುಡಿಯುವ ನೀರಿಗಾಗಿ ನಂತರ ದೇವಾಲಯಗಳ ಪೂಜೆಗಾಗಿ ಉಪಯೋಗವಾಗುತ್ತಿತ್ತು. ಆನಂತರ ಮುಂದಿನ ದಿನಗಳಲ್ಲಿ ಕೃಷಿಯತ್ತ ಹೆಚ್ಚು ಗಮನವನ್ನು ಹರಿಸಿದರೆಂದು ಈ ಅಧ್ಯಾಯದಲ್ಲಿ ಹಂತ–ಹಂತವಾಗಿ ಗಮನಿಸಬಹುದಾಗಿದೆ. ಕೃಷಿ ಚಟುವಟಿಕೆಗಳು ಹೆಚ್ಚುತ್ತಿದ್ದಂತೆಯೇ ಕೃಷಿಯ ಪ್ರಬೇಧಗಳು ಅಂದರೆ ಗದ್ದೆ, ಪೆದ್ದಲು, ತೋಟ ತುಡಿಕೆ, ಕಾಡಆಡಂಬರ ನೀರಾಡಂಬರ, ಹೀಗೆ ಬಗೆ ಬಗೆಯ ಕೃಷಿ ಚಟುವಟಿಕೆಗಳು ಭೂಮಿಯ ಆಧಾರದ ಮೇಲೆ ಹೇಗೆ ರೂಪುಗೊಂಡವು ಎಂಬುದನ್ನು ದಾಖಲಿಸುತ್ತವೆ. ಹೀಗೆ ರೂಪುಗೊಂಡಾಗ ಸಹಜವಾಗಿಯೇ ಗದ್ದೆ, ಪ್ರದೇಶವು ಹೆಚ್ಚು ಫಲವತ್ತತೆಯಿಂದ ಕೂಡಿದ್ದು, ಆರ್ಥಿಕ ಸಮೃದ್ಧಿಯ ಸಂಕೇತವಾಗಿತ್ತು. ಕೆರೆಯ ಕಡಿಮೆ ನೀರನ್ನು ಉಪಯೋಗಿಸಿಕೊಂಡು ಬೆಳೆಯುವ ಪ್ರದೇಶವಾಗಿತ್ತು. ಹೀಗಾಗಿ ಗದ್ದೆ ಮತ್ತು ಬೆದ್ದಲು ಎರಡಕ್ಕೂ ಒಂದೇ ನಿಯಮವನ್ನು ಅನ್ವಯಿಸಲು ಸಾಧ್ಯವಿಲ್ಲ. ತೋಟದಲ್ಲಿ ನಾವು ಎರಡು ವಿಧವನ್ನಾಗಿ ವಿಂಗಡಿಸಬಹುದು.

ಆರ್ಥಿಕ ಕಾರಣಗಳಿಗಾಗಿ ತೆಂಗು–ಕಂಗು, ಬಾಳೆ, ಅಡಿಕೆ ಮುಂತಾದ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಖಾಸಗೀ ತೋಟ ಮತ್ತು ದೇವರಿಗೆ ಬಿಟ್ಟ ಅಥವಾ ನಂದನವನ ಅಥವಾ ಹೂದೋಟ ಮುಂತಾದವುಗಳನ್ನು ಕಾಣಬಹುದು. ಇಲ್ಲಿಯೂ ಸಹ ತೆರಿಗೆಯನ್ನು ಏಕ ರೀತಿಯಲ್ಲಿ ವಿಧಿಸಲು ಸಾಧ್ಯವಿಲ್ಲ ಹಾಗಾದರೆ ಅನಿವಾರ್ಯವಾಗಿ ಗದ್ದೆ ಬೆದ್ದಲು, ತುಡಿಕೆ, ತೋಟ ಎಲ್ಲಾ ರೀತಿಯ ವ್ಯತ್ಯಾಸಗಳಿಗೂ ಆ ಪ್ರದೇಶಗಳಿಗೆ ಬೇರೆಯದೇ ರೀತಿಯಾದ ತೆರಿಗೆಯನ್ನು ವಿಧಿಸಬೇಕಾಗುತ್ತದೆ. ಇದನ್ನೇ ನಾವು ಶಾಸನಗಳಲ್ಲಿ ಪೂರ್ಣ ಪ್ರಮಾಣದಲ್ಲಿ ಕಾಣುತ್ತೇವೆ. ಅದನ್ನೇ ಈ ಅಧ್ಯಾಯದಲ್ಲಿ ಕಾಣಬಹುದಾಗಿದೆ.

**ಅಧ್ಯಾಯ ಎಂಟರಲ್ಲಿ** ಕೆರೆಯ ನಿರ್ಮಾಣದ ಖರ್ಚು, ವೆಚ್ಚಗಳು, ನಿರ್ವಹಣೆ ಮೇಲುಸ್ತುವಾರಿ ಮತ್ತು ಸಂರಕ್ಷಣೆ ನಿರ್ಮಾಣದ ಮಹತ್ವವನ್ನು ಕಾಣಬಹುದು. ಆದರೆ ಕೆರೆಯ ನಿರ್ವಹಣೆಗಾಗಿ ಕೆಲವೊಮ್ಮೆ ದಾನಿಗಳೇ ಹಣವನ್ನು ನೀಡಿರುವುದು. ದಾನವನ್ನು ಕೊಟ್ಟಿರುವುದು ಕಂಡುಬರುವುದು. ಎಲ್ಲಾ ಸಮಯದಲ್ಲಿಯೂ ನಿರ್ವಹಣೆ ಸುಲಭ ಸಾಧ್ಯವಿಲ್ಲ. ಆದ್ದರಿಂದ ಕೆರೆಯನ್ನು ಕಟ್ಟಿದಾಗಲೇ ಫಲಾನುಭವಿಗಳಿಂದ ಕೆರೆಯ ಅಚ್ಚುಕಟ್ಟು ಪ್ರದೇಶದಲ್ಲಿ ಈ ಉದ್ದೇಶಕ್ಕಾಗಿ ಕಂದಾಯಗಳನ್ನು ವಿಧಿಸುವುದನ್ನು ನಾವು ಕಾಣಬಹುದಾಗಿದೆ. ಕೆರೆಯು ಹೇಗೆ ಆದಾಯವನ್ನು ತರುವುದೋ ಹಾಗೆಯೇ ಖರ್ಚನ್ನು ಸಹ ಉಂಟುಮಾಡುತ್ತದೆ. ಈಗಾಗಲೇ ನಾವು ಗಮನಿಸಿದಂತೆ ಕೆರೆಯ ವೈಶಿಷ್ಟತೆ ಅದರ ಅಚ್ಚುಕಟ್ಟು ಪ್ರದೇಶ. ಅದಕ್ಕೆ ಅನುಗುಣವಾಗಿ ಆದಾಯ ಮತ್ತು ಖರ್ಚುಗಳು ಅವಲಂಭಿತವಾಗಿರುತ್ತವೆ. ಹೀಗಾಗಿ ಕೆರೆಯನ್ನು ನಿರ್ವಹಣೆ ಮಾಡಲು ನಮಗೆ ತಿಳಿದುಬಂದಂತೆ ಒಬ್ಬ ಮೇಲ್ವಿಚಾರಕ, ಬಂಡಿಗಾರರು, ಮೇಸ್ತ್ರಿ, ಮೀನುಗಾರರು, ಮರಗೆಲಸ ಮಾಡುವವರು, ಕಲ್ಲುಗಳನ್ನು ಒಡೆಯುವವರು, ಇವರೆಲ್ಲರು ಮುಖ್ಯರಾಗಿರುತ್ತಾರೆ. ಇವುಗಳ ಜೊತೆಗೆ ಬಂಡಿಗಾಗಿ ಹೂಡುವ ಎತ್ತುಗಳ ನಿರ್ವಹಣೆಯು ಅದರಲ್ಲಿ ಸೇರಿಕೊಂಡಿರುತ್ತದೆ. ಹಾಗೆ ಗಾಡಿಯ ಕೀಲುಗಳಿಗೆ ಹಾಕುವ ಎಣ್ಣೆಯು ಸಹ ಸೇರಿಕೊಂಡಿರುತ್ತದೆ. ಈ ಎಲ್ಲಾ ದೃಷ್ಟಿಯಿಂದ ನೋಡಿದಾಗ ಇದೆಲ್ಲದಕ್ಕೂ ಸಹ ನಿರ್ವಹಣೆ ಮಾಡಲೂ ಹಣದ ಅವಶ್ಯಕತೆ ಇರುತ್ತದೆ.

ಈ ರೀತಿ ನಿರ್ವಹಣೆಗಾಗಿ ವ್ಯಯ ಮಾಡುವ ಹಣವನ್ನು ಖರ್ಚು ಎಂದು ಕರೆಯುತ್ತೇವೆ. ಇದನ್ನು ಕೆರೆಯ ಅಚ್ಚುಕಟ್ಟು ಪ್ರದೇಶದಿಂದ ಬರುವ ಭೂಮಿಯ ಮೇಲಿನ ತೆರಿಗೆಯಿಂದ ಸಂಗ್ರಹಿಸಿ ನಿರ್ವಹಿಸಬೇಕು. ಇದನ್ನು ಕಂದಾಯದ ರೂಪದಲ್ಲಿ ವಸೂಲಿ ಮಾಡಲಾಗುತ್ತಿತ್ತು.

ಕೆರೆಯ ಮೊದಲ ಏರಿಯಿಂದ ಹಿಡಿದು ಕೆರೆಯಿಂದ ನೀರನ್ನು ಪಡೆದುಕೊಳ್ಳುವ ಕೊನೆಯ ಭೂಮಿಯವರೆಗೂ ವಿವಿಧ ರೀತಿಯ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು. ಅದರಲ್ಲಿ ಕೆರೆಸುಂಕ, ಪನ್ನಾಯ, ಪರ್ಜುಂಕ, ಬಣ್ಣದಗೆರೆ, ಬಿತ್ತುವಟ್ಟ, ಬೀಜವರಿ ಮುಂತಾದ

ಕಂದಾಯವನ್ನು ಇತರ ಸುಂಕಗಳೊಡನೆ ವಿಧಿಸಲಾಗುತ್ತಿತ್ತು. ಸಿದ್ಧಾಯ, ಆಸ್ತೀನ ಬಾಡಿಗೆ ದರ, ಮುಂತಾದವು ಕಂದಾಯದ ಬಗೆಗಳಾಗಿದ್ದವು.

ವಿಜಯನಗರದ ಮಹಾಸಾಮ್ರಾಟ ಕೃಷ್ಣದೇವರಾಯನ ಮೇರು ಕೃತಿಯಾದ ಅಮುಕ್ತಮಾಲ್ಯದಲ್ಲಿ ಕೆರೆಗಳನ್ನು, ಕಾಲುವೆಗಳನ್ನು ರಚಿಸಿ ಕೃಷಿಕರಿಗೆ ತೆರಿಗೆ ಹಾಕಿ ರಾಜ್ಯದ ಸಂಪತ್ತು ಹೆಚ್ಚಿಸಬೇಕೆಂದು ಹೇಳುತ್ತಾನೆ.

ಮತ್ತೆ ಇತರ ತೆರಿಗೆಗಳಲ್ಲಿ ನೋಡುವುದಾದರೆ ಪ್ರತ್ಯೇಕ ಮತ್ತು ಪರೋಕ್ಷ ತೆರಿಗೆಗಳನ್ನು ಈಗಿನ ವ್ಯವಸ್ಥೆಯಲ್ಲಿ ಕಾಣುತ್ತಿದ್ದೇವೆ. ಹಿಂದಿನ ಕಾಲದಲ್ಲಿಯೂ ನೇರ ತೆರಿಗೆ ಹಾಗೂ ವಿಶೇಷ ತೆರಿಗೆಗಳನ್ನು ಸರ್ಕಾರಕ್ಕೆ ಸಲ್ಲಿಸಬೇಕಾಗಿತ್ತು. ಕೆರೆಯ ನೀರನ್ನು ಬಳಸುತ್ತಿದ್ದ ಗ್ರಾಮದ ಜನತೆಯ ಮೇಲೆ ಅನೇಕ ತೆರಿಗೆಯನ್ನು ವಿಧಿಸುತ್ತಿದ್ದರು. ಇತರೆ ತೆರಿಗೆಗಳಲ್ಲಿ ದಸವಂದ, ಕೆರೆಬಂಡಿ, ಮೀನುಗಾರಿಕೆಯ ಮೇಲಿನ ತೆರಿಗೆ, ಏರಿವಾರಿಯಂ ಇತ್ಯಾದಿ ತೆರಿಗೆಯನ್ನು ರಾಜಭಂಡಾರಕ್ಕೆ ಸಲ್ಲಿಸುತ್ತಿದ್ದರು. ಎಂಬ ವಿಷಯವನ್ನು ಈ ಅಧ್ಯಾಯದಲ್ಲಿ ತಿಳಿಯಬಹುದು.

ದಸವಂದ ಎಂದರೆ ಆದಾಯದ $^{1}/_{10}$ ರಷ್ಟು ಭೂಮಿಯನ್ನು ಕಂದಾಯವಾಗಿ ನೀಡುವುದನ್ನು ದಸವಂದ ಎನ್ನುತ್ತಿದ್ದರು. ಈ ದಸವಂದದ ನಿಷ್ಪತ್ತಿ ಜಮೀನ್ದಾರ ಮತ್ತು ಒಕ್ಕಲಿಗರು ಹಂಚಿಕೊಳ್ಳುತ್ತಿದ್ದ ವಿಷಯವನ್ನು ಮನುವಿನ ಧರ್ಮಶಾಸ್ತ್ರದಲ್ಲಿ ತಿಳಿಯಬಹುದಾಗಿದೆ.

ಕೆರೆ ನಿರ್ಮಾಣವಾದ ಮೇಲೆ ಅದರ ಮೇಲ್ವಿಚಾರಕ ದುರಸ್ಥಿ ಕಾರ್ಯಗಳಿಗೆ ಅನೇಕ ವ್ಯಕ್ತಿ ಸಾಮಾಗ್ರಿಗಳು ಬೇಕಾಗಿದ್ದರು. ಮಳೆಗಾಲದ ದಿನಗಳಲ್ಲಿ ಹರಿದು ಬರುವಂತಹ ನೀರು ಮಣ್ಣನ್ನು ಹೊತ್ತು ತರುತ್ತಿತ್ತು. ಅದು ತೂಬಿನಲ್ಲಿ ಸೇರಿ ರಂಧ್ರವನ್ನು ಮುಚ್ಚುತ್ತಿತ್ತು. ಅದನ್ನು ಕಾಲದಿಂದ ಕಾಲಕ್ಕೆ ತೆಗೆಯಲು ನಾಲೆಯನ್ನು ಶುಭ್ರಗೊಳಿಸಿ ಸುಸ್ಥಿತಿಗೆ ತರುವ ಕೆಲಸ ಸಾಮಾನ್ಯ ವ್ಯಕ್ತಿಗಳದ್ದಾಗಿತ್ತು. ಈ ಕಾರ್ಯಗಳಿಗೆ ಎತ್ತಿನ ಬಂಡಿಯನ್ನು ಬಳಸುತ್ತಿದ್ದರು ಎಂಬ ವಿಷಯವನ್ನು ಈ ಅಧ್ಯಾಯದಲ್ಲಿ ಕಾಣಬಹುದು.

ಮೀನುಗಾರಿಕೆಯ ಮೇಲಿನ ತೆರಿಗೆಯನ್ನು ಕೆರೆಯಲ್ಲಿ ಮೀನು ಹಿಡಿದು ಜೀವನ ಸಾಗಿಸುವುದು ಮತ್ತು ದೋಣಿಗಳ ಮೇಲೆ ವಿಧಿಸುತ್ತಿದ್ದ ಸುಂಕವನ್ನು ಈ ಅಧ್ಯಾಯದಲ್ಲಿ ತಿಳಿಯಲಾಗಿದೆ.

ಈ ಮೇಲಿನ ಪುಟಗಳಲ್ಲಿ ಪ್ರತಿಯೊಂದು ಅಧ್ಯಾಯದ ವಿಷಯಗಳು ಹೇಗೆ ಸಂಶೋಧನಾ ವಿಷಯಕ್ಕೆ ಪೂರಕವಾಗಿದೆ ಎಂಬುದನ್ನು ಮತ್ತು ಆಯಾ ವಿಷಯಗಳು ಅಂದರೆ ಭೌಗೋಳಿಕ ಲಕ್ಷಣಗಳು ಮಳೆಯ ಹಂಚಿಕೆ, ಆ ಪ್ರದೇಶದ ಇಳಿಜಾರು, ಜಲಾನಯನ ಪ್ರದೇಶಗಳು ಮುಂತಾದವು ಜನ ಜೀವನಕ್ಕಾಗಿ ಮತ್ತು ವ್ಯವಸಾಯಕ್ಕೆ ನೀರಾವರಿ ಚಟುವಟಿಕೆಗಳು ಅವಶ್ಯಕತೆಯನ್ನು ಹೇಗೆ ಕಡ್ಡಾಯವನ್ನಾಗಿಸುತ್ತವೆ ಎಂದು ಅರಿತುಕೊಂಡ ನಂತರ ಕೆರೆಗಳ ರಚನೆ ಹೇಗೆ ಉಂಟಾಯಿತು, ಯಾವ ಕಾಲದಲ್ಲಿ ಪ್ರಾರಂಭವಾಯಿತು ಮತ್ತು ಅವು ಮುಂದಿನ ಶತಮಾನಗಳವರೆಗೆ ಹೇಗೆ ಮಾರ್ಗದರ್ಶಿ ರಚನೆಗಳಾದವು ಎಂಬುದನ್ನು ಈ ಅಧ್ಯಯನ ಬಿಂಬಿಸುವಲ್ಲಿ ಸಫಲವಾಗಿದೆ. ಪ್ರಾಗೈತಿಹಾಸಿಕ ಮತ್ತು ಇತಿಹಾಸಕಾಲದ ಸಂಕ್ಷಿಪ್ತ ಇತಿಹಾಸದ ಹಿನ್ನೋಟದೊಂದಿಗೆ ಪ್ರಾರಂಭವಾಗುವ ಕೆರೆ ನಿರ್ಮಾಣದ ಕಥನವು ಪ್ರಾಗ್ಇತಿಹಾಸ ಕಾಲದಿಂದ ವಿಜಯನಗರ ಸಾಮ್ರಾಜ್ಯದ ಪತನದವರೆಗೆ ನಡೆದು ಬಂದ ಸುದೀರ್ಘ ಇತಿಹಾಸವನ್ನು ಪಕ್ಷಿನೋಟದ ರೂಪದಲ್ಲಿ ಭೌಗೋಳಿಕ ಪ್ಯಾಪ್ತಿಯಲ್ಲಿ ನಮ್ಮ ಮುಂದೆ ಇಡುತ್ತದೆ. ಇದಲ್ಲದೆ ಕೆರೆಗಳ ನಿರ್ಮಾಣವು ಐತಿಹಾಸಿಕ ಯುಗದಲ್ಲಿ ಹಲವಾರು ಬಗೆಯ ಕಾರಣಗಳಿಗಾಗಿ ನಿರ್ಮಾಣಗೊಂಡವಲ್ಲದೇ, ನಿರ್ಮಾಣ ಪ್ರಕ್ರಿಯೆಯು ತಂತ್ರಜ್ಞಾನ ಮತ್ತು ಕೌಶಲ್ಯದ ಜೊತೆಗೆ ವಾಸ್ತು, ವಸ್ತುವಿನ್ಯಾಸ, ಜಲತಂತ್ರಜ್ಞಾನ, ಏರಿ, ತೂಬು, ನಾಲೆಗಳ ನಿರ್ಮಾಣ ಇವೆಲ್ಲವು ಇಂದಿನ ತಾಂತ್ರಿಕ ಶಿಕ್ಷಣದ ಅಡಿಪಡಿಯಲ್ಲಿ ನಿರ್ಧರಿಸಬಹುದಾದ ಮಹತ್ವದ ಸಾಧನೆಗಳು.

ಪ್ರತಿಯೊಂದು ರಚನೆಯು ಒಂದೊಂದು ಮಹತ್ ಸಾಧನೆ, ಶಾಸನಗಳು ಕೆಲವೊಂದು ಸಮಾಜವನ್ನು ಕೆರೆಯ ನಿರ್ಮಾಣದಲ್ಲಿ ತೊಡಗಿಕೊಂಡಿತ್ತೆಂದು ದಾಖಲಿಸಿದೆ. ಉದಾಹರಣೆಗೆ ಉಪ್ಪಾರರನ್ನು ಈ ದಿಸೆಯಲ್ಲಿ ಹೆಸರಿಸಬಹುದು. ಉಪ್ಪಾರರು ಮಣ್ಣಿನ

ಗುಣಲಕ್ಷಣಗಳನ್ನು ಅರಿತವರಾಗಿದ್ದರಿಂದ ಕೆರೆ ನಿರ್ಮಾಣ ಕಾಲದಲ್ಲಿ ಜಮೀನನ್ನು ಸಮೀಕ್ಷಿಸಿ ಏರಿಯನ್ನು ನಿರ್ಮಿಸುವಾಗ ಅಚ್ಚುಕಟ್ಟು ಪ್ರದೇಶವನ್ನು ನಿರ್ಧರಿಸುವಾಗ ಕೆರೆಯು ಬಹು ಉಪಯೋಗಿವಾಗಿ ಫಲವತ್ತೆಯ ಪ್ರದೇಶವನ್ನು ನೀರಾವರಿಗೆ ಇಡುಮಾಡ ಬೇಕಾಗಿದ್ದರಿಂದ ಇಂದಿನ ತಂತ್ರಜ್ಞಾನದ ಕೃಷಿ ವಿಜ್ಞಾನಿಗಳ ರೀತಿ ಮತ್ತು ಯಾವ ಮಣ್ಣು ಏರಿಯನ್ನು ಸುಭದ್ರವಾಗಿ ಹಿಡಿದುಕೊಳ್ಳುವುದೆಂಬುದನ್ನು ನಿರ್ದೇಶಿಸುತ್ತಿದ್ದರೆಂದು ಶಾಸನಗಳ ಅಧ್ಯಯನಗಳು ತಿಳಿಸುತ್ತವೆ.

ಇವರಲ್ಲದೆ ಹಲವಾರು ತಂತ್ರಜ್ಞರಾದ, ಕಲ್ಲುಕುಟಿಕರು, ವಡ್ಡರು ಗಾರೆ ಕೆಲಸಗಾರರು ನೀರುಗಂಟಿಗಳು, ಸೇನಾಭೋವರು (ಕರಣಿಕ) ಮುಂತಾದ ಹಲವು ಆಡಳಿತವರ್ಗ ನಿರ್ಮಾಣ ಪ್ರಕ್ರಿಯೆಯಲ್ಲಿ ತೊಡಿಗಿಕೊಂಡಿದ್ದರು. ಈ ಎಲ್ಲಾ ನಿರ್ಮಾಣ ಕಾರ್ಯಗಳು ಅತಿಹೆಚ್ಚು ವೆಚ್ಚದಾಯಕವಾಗಿದ್ದವು. ಈ ವೆಚ್ಚವನ್ನು ಭರಿಸಲು ಧಾನ ದತ್ತಿಗಳನ್ನು ಪಡೆಯಲಾಗುತ್ತಿತ್ತು. ಕೆಲವೊಮ್ಮೆ ವ್ಯಕ್ತಿಗಳು ತಮ್ಮ ಜೀವಿತಾವಧಿಯ ಎಲ್ಲಾ ಸಂಪತ್ತನ್ನು ವಿನಿಯೋಗಿಸಿ ಪ್ರಜೆಗಳ ಒಳಿತಿಗಾಗಿ ಕೆರೆಗಳನ್ನು ನಿರ್ಮಿಸುತ್ತಿದ್ದರು. ಇದಲ್ಲದೆ ರಾಜರು, ರಾಣಿಯರು, ರಾಜಕುಮಾರರು, ರಾಜಕುಮಾರಿಯರು, ದಂಡನಾಯಕರುಗಳು, ಸ್ಥಾನಿಕ ಆಡಳಿತಾಧಿಕಾರಿಗಳು, ವ್ಯಾಪಾರಿಗಳು, ವ್ಯಾಪಾರಿ ಸಂಘಗಳು, ಸ್ತ್ರೀಯರು, ಒಂದು ವರ್ಗದ ಸಮುದಾಯ, (ಅಕ್ಕಸಾಲಿಗರು, ಅಗಸರು ಇತ್ಯಾದಿ) ಕುಶಲ ಕರ್ಮಿಗಳು ಮುಂತಾದವರುಗಳು ಕೆರೆಯ ನಿರ್ಮಾಣದಲ್ಲಿ ತೊಡಗಿದ್ದನ್ನು ದಾಖಲಿಸುತ್ತದೆ.

ನಿರ್ಮಾಣ ಮತ್ತು ನಿರ್ವಹಣೆಗೆ ಬಂದ ದಾನ-ದತ್ತಿಗಳನ್ನು ಅತ್ಯಂತ ಜಾಣ್ಮೆಯಿಂದ ಪುನರ್ ವಿನಯೋಗಿಸಿ, ಉಳಿಸಿ, ಬೆಳಸಿ, ಕೆರೆಯನ್ನು ಅತ್ಯಂತ ವಿಚಕ್ಷಣೆಯಿಂದ ನಮ್ಮ ಪೂರ್ವಿಕರು ಕಾಪಾಡಿಕೊಂಡು ಬಂದುದರ ಫಲವಾಗಿ ಇಂದಿಗೂ ನಮ್ಮ ಈ ಅಧ್ಯಾಯನದ ವ್ಯಾಪ್ತಿಯ ಭೌಗೋಳಿಕ ಪ್ರದೇಶದಲ್ಲಿ ಬಿ.ಎಲ್.ರೈಸ್‌ರವರು ಹೇಳುವಂತೆ 30 ಸಾವಿರಕ್ಕೂ ಅಧಿಕ ಕೆರೆಗಳು ಇದ್ದವು. ಅಲ್ಲದೆ ಇಂದಿಗೂ ಈ ಕೆರೆಗಳ ಬಹುತೇಕ ಕೆರೆಗಳು ಈ ಪ್ರದೇಶದ ಜನರ ಜೀವನಾಡಿಯಾಗಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಪರಂಪರೆಯ ಉತ್ತರಗಾಮಿಗಳಾಗಿ ಉಳಿದು ಬಂದಿರುವುದು ತಮ್ಮ

ಪೂರ್ವಜರ ದೂರದರ್ಶಿತನದ ನಿರ್ಮಾಣ ಮತ್ತು ನಿರ್ವಹಣೆಯ ಫಲಗಳಿಂದಾಗಿ. ಇವುಗಳೆಲ್ಲವನ್ನು ಈ ಅಧ್ಯಾಯನವು ತನ್ನ ಇತಿಮಿತಿಯ ವ್ಯಾಪ್ತಿಯಲ್ಲಿ ಸಾಕಷ್ಟು ವಿವರವಾಗಿ ಕಟ್ಟಿಕೊಟ್ಟಿರುವುದನ್ನು ಕಾಣಬಹುದಾಗಿದೆ.

# ಪರಾಮರ್ಶನ ಗ್ರಂಥಗಳ ಪಟ್ಟಿ

Reports and Gazetteers

1. ರೈಸ್ ಬಿ.ಎಲ್, – *ಮೈಸೂರು ಗೆಜೆಟಿಯರ್,* ಸಂಪುಟಗಳು–02, ಲಂಡನ್, 1897.
2. ಹಯವದನರಾವ್ – *ಮೈಸೂರು ಗೆಜೆಟಿಯರ್,* ವ್ಯಾಲೂಮ್ಸ್–05, ಬೆಂಗಳೂರು, 1940.
3. ಹಯವದನರಾವ್ – ಮೈಸೂರು ಗೆಜೆಟಿಯರ್, ವ್ಯಾಲೂಮ್ಸ್–05, ಬೆಂಗಳೂರು, 2012ರ ಪುನರ್ ಮುದ್ರಣ.
4. ಸೂರ್ಯನಾಥ್ ಯೂ ಕಾಮತ್ – ಕರ್ನಾಟಕ ಗೆಜೆಟಿಯರ್, ಸಂಪುಟಗಳು –02, ಬೆಂಗಳೂರು.
5. *ಎ ಹ್ಯಾಂಡ್ ಬುಕ್ ಆಫ್ ಕರ್ನಾಟಕ,* ಗೆಜೆಟಿಯರ್ ಇಲಾಖೆ, ಬೆಂಗಳೂರು, 2012.

**ಶಾಸನ ಗ್ರಂಥಗಳು**

1 *ಆ್ಯನ್ಯೂವಲ್ ರಿಪೋರ್ಟ್ಸ್ ಆಫ್ ಸೌತ್ ಇಂಡಿಯನ್ ಇಸ್ಕ್ರಿಪಶನ್ಸ್,* (AIRSIEp) 1900ರ ನಂತರ.

2 *ಆ್ಯನ್ಯೂವಲ್ ರಿಪೋರ್ಟ್ಸ್ ಆಫ್ ಇಂಡಿಯನ್ ಇಸ್ಕ್ರಿಪಶನ್ಸ್,* (AIRIEp) 1900ರ ನಂತರ.

3 *ಎಪಿಗ್ರಾಫಿಯಾ ಕರ್ನಾಟಿಕ,* ಸಂಪಾದಕರು ಬಿ.ಎಲ್.ರೈಸ್, ಸಂಪುಟ – 01 ರಿಂದ 12, ಮೈಸೂರು, ICHR ಪ್ರಕಟಸಿರುವ ವಿದ್ಯುನ್ಮಾನ ಅವತರಣಿಕೆ.

4 ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟಗಳು – 1 ರಿಂದ 13, ಮೈಸೂರು.

5 *ಸೌತ್ ಇಂಡಿಯನ್ ಇಸ್ಕ್ರಿಪಶನ್ಸ್,* ಸಂಪುಟಗಳು – 1 ರಿಂದ 9, ಭಾರತೀಯ ಶಾಸನಶಾಸ್ತ್ರ ವಿಭಾಗ, ಭಾರತೀಯ ಪುರಾತತ್ವ ಇಲಾಖೆ, ದೆಹಲಿ.

## ಪುಸ್ತಕಗಳು


1. ಬೆನಗಲ್ ರಾಮರಾವ್ ಪ್ಯಾನಂ ಸುಂದರಶಾಸ್ತ್ರಿ, – *ಪುರಾಣನಾಮ ಚೂಡಮಣಿ,* ಮೈಸೂರು, 2010.
2. ಚಿದಾನಂದಮೂರ್ತಿ ಎಂ, – *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,* ಮೈಸೂರು, 1968.
3. ದೇಸಾಯಿ ಪಿ.ಬಿ ಮತ್ತು ಇತರರು, – *ಹಿಸ್ಟರಿ ಆಫ್ ಕರ್ನಾಟಕ,* ಧಾರವಾಡ, 1970.
4. ದೇವರಾಜು ಡಿ.ವಿ. (ಸಂ), ಶೇಷಚಂದ್ರಿಕಾ, ಎಂ. ಶೇಷಾದ್ರಿಯವರ ಸಂಪೂರ್ಣ ಲೇಖನಗಳ ಸಂಗ್ರಹ, ಮೈಸೂರು.
5. ಧವಳೀಕರ ಎಂ.ಕೆ. – *ಸೆಟಲ್‌ಮೆಂಟ್ ಆರ್ಕಿಯಾಲಜಿ ಆಫ್ ಇನಾಂಗಾಂ* – ಪುರಾತತ್ವ ನಂ.8, ಪು.ಸಂ.47, ಭಾರತೀಯ ಸರ್ವೇಕ್ಷಣ ಇಲಾಖೆ, ನವದೆಹಲಿ, 1978.
6. ದೀಕ್ಷಿತ್ ಜಿ.ಎಸ್, ಮತ್ತು ಇತರರು – *ಕರ್ನಾಟಕದಲ್ಲಿ ಕೆರೆಯ ನೀರಾವರಿ,* ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2000.
7. ದೀಕ್ಷಿತ್ ಜಿ.ಎಸ್. ಮತ್ತು ಇತರರು – *ಟ್ಯಾಂಕ್ ಇರಿಗೇಷನ್ ಇನ್ ಕರ್ನಾಟಕ,* ಬೆಂಗಳೂರು, 1993.
8. ದಿವಾಕರ ಆರ್.ಆರ್, – *ಕರ್ನಾಟಕ ಥ್ರೂ ದಿ ಏಜಸ್,* ಬೆಂಗಳೂರು, 1968.
9. ಗೋಪಾಲ್ ಬಿ.ಆರ್, – *ಕರ್ನಾಟಕದಲ್ಲಿ ರಾಮಾನುಜರು,* ಮೈಸೂರು.
10. ಹಾ.ಮ ನಾಯಕ – *ಕನ್ನಡ ವಿಶ್ವಕೋಶ,* ಸಂ–04, ಪು.ಸಂ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, 1970.
11. ಕರ್ನಾಟಕ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1978,
12. ಹರಿಹರ ಶ್ರೀನಿವಾಸರಾವ್ – ಚಾವುಂಡರಾಯನ ಲೋಕೋಪಕಾರದಲ್ಲಿ ಜಲವಿಜ್ಞಾನ, ತಂತ್ರಜ್ಞಾನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2010.

13. ಕೊಟ್ರಯ್ಯ ಸಿ.ಟಿ.ಎಂ, – ಇರಿಗೇಷನ್ *ಸಿಸ್ಟಮ್ಸ್ ಅಂಡರ್ ವಿಜಯನಗರ ಎಂಪೈರ್,* ಡೈರೆಕ್ಟರ್ ಆಫ್ ಆರ್ಕಿಯೋಲಜಿ ಮತ್ತು ಮ್ಯೂಸಿಯಮ್, ಮೈಸೂರು, 1995.

14. ಕೃಷ್ಣನ್ ಎಂ.ಎಸ್ : *ಜಿಯೋಲಜಿ ಆಫ್ ಇಂಡಿಯಾ ಅಂಡ್ ಬರ್ಮಾ,* ಹಿಗ್ಗಿಮ್ ಬಾತಮ್ಸ್, ಮದ್ರಾಸ್, 1960.

15. ಕೃಷ್ಣರಾವ್ ಎಂ.ವಿ ಮತ್ತು ಕೇಶವಭಟ್ಟ, ಕರ್ನಾಟಕದ ಪರಂಪರೆ, ಬೆಂಗಳೂರು, 1970.

16. ಪಿ.ಮಲ್ಲಪ್ಪ – *ಕರ್ನಾಟಕದ ಭೂಗೋಳಶಾಸ್ತ್ರ* – ಲಕ್ಷ್ಮಿ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, 34 ಸಿ, ಹೂಟಗಳ್ಳಿ, ಇಂಡಸ್ಟ್ರಿಯಲ್ ಏರಿಯಾ, ಮೈಸೂರು, 1998.

17. ನಾಗರಾಜ ಟಿ.ವಿ. – *ಮೈಸೂರು ಸಂಸ್ಥಾನದಲ್ಲಿ ಕೆರೆಯ ನೀರಾವರಿ, (ಕೋಲಾರ ಜಿಲ್ಲೆಯ ಒಂದು ಅಧ್ಯಯನ 1800–1956),* ಬೆಂಗಳೂರು, 2008.

18. ನೀಲಕಂಠಶಾಸ್ತ್ರಿ ಕೆ. ಎ, – ದಿ ಚೋಳಸ್, ಮದರಾಸು, 1984.

19. ಪಾಟೀಲ್ ಸಿ.ಎಸ್ ಮತ್ತು ವಿನೋದ ಪಾಟೀಲ್ – *ಹಂಪಿ ಶಾಸನಗಳು,* ಮೈಸೂರು, 1996.

20. ಪಾಟೀಲ್ ಸಿ.ಎಸ್ ಮತ್ತು ವಿನೋದ ಪಾಟೀಲ್ – *ಬಳ್ಳಾರಿ ಜಿಲ್ಲೆ ಶಾಸನಗಳು,* ಮೈಸೂರು, 1997.

21. ರಾಜರಾಮ್ ಹೆಗಡೆ – ಸಂ. ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

22. ರಂಗನಾಥ, ಭಾರತದ ಭೂಗೋಳಶಾಸ್ತ್ರ, ವಿದ್ಯಾನಿಧಿ ಪ್ರಕಾಶನ, ಗದಗ, 2005.

23. ಷೇಕ್ ಅಲಿ ಬಿ. (ಸಂ) – ಕರ್ನಾಟಕದ ಚರಿತ್ರೆ, ಸಂಪುಟಗಳು–5, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1984.

24. ಷೇಕ್ ಅಲಿ ಬಿ, – ಹಿಸ್ಟರಿ ಆಫ್ ದಿ ವೆಸ್ಟರ್ನ್ ಗಂಗಾಸ್, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1976.

25. ಶಿವತಾರಕ್ ಕೆ.ಬಿ, – *ಕರ್ನಾಟಕದ ಪುರಾತತ್ವ ನೆಲೆಗಳು,* ಕನ್ನಡ ವಿಶ್ವವಿದ್ಯಾನಿಲಯ ಹಂಪಿ, 2000.

26. ಸಿಂಗ್ ಆರ್.ಎನ್ : ಎ ರಿಜನಲ್ ಜೀಯೋಗ್ರಫಿ, ವಾರಣಾಸಿ, 1989.

27. ಸುಬ್ಬಯ್ಯ ಕೆ.ಕೆ, – ಆರ್ಕಿಯೋಲಜಿ ಆಫ್ ಕೂರ್ಗ್, ಗೀತಾ ಬುಕ್ ಹೌಸ್, ಮೈಸೂರು.

28. ವಾಸುದೇವನ್ ಸಿ.ಎಸ್, – *ಹಂಪಿ ಪರಿಸರದ ಕೆರೆಗಳು,* ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2001.

29. ವಸುಂಧರಾ ಫಿಲಿಯೋಜಾಲ, – *ದಿ ವಿಜಯನಗರ ಎಂಪೈರ್,* ದೆಹಲಿ, 1998.

30. *ವಿಜಯನಗರ ಪ್ರೋಗ್ರೇಸ್ ಆಫ್ ರಿಸರ್ಚ್* 1984–87, ಪುರಾತತ್ವ ಇಲಾಖೆ, ಮೈಸೂರು, 1988.

31. ವಾಡಿಯ ಡಿ.ಎನ್ – ಜಿಯೋಗ್ರಫಿ ಆಫ್ ಇಂಡಿಯಾ, ಡೆಲ್ಲಿ, 1983.

## ಲೇಖನಗಳು


1. ಚಂದ್ರಶೇಖರ ಹೆಚ್. – *ಗ್ರೌಂಡ್ ವಾಟರ್ ರಿಸೋರ್ಸಸ್ ಆಫ್ ಕರ್ನಾಟಕ ಇನ್ ಅವಲೋಕನ,* ಸಂಪಾದಕರು – ಹೆಚ್.ಎಸ್.ಕೆ, ಬೆಂಗಳೂರು, 1985.
2. ದೀಕ್ಷೀತ್ ಜಿ.ಎಸ್, – ಕೆರೆಗಳ ಬಗ್ಗೆ ಐತಿಹಾಸಿಕ ಸಂಶೋಧನೆ ಅವಶ್ಯಕತೆ, *ಇತಿಹಾಸ ದರ್ಶನ,* ಸಂ–07, 1992.
3. ದೀಕ್ಷೀತ್ ಜಿ.ಎಸ್ – *ಕೆರೆಗಳ ಚಾರಿತ್ರಿಕ ಅಂಶಗಳು, ಕೆರೆ ನೀರಾವರಿ ನಿರ್ವಹಣೆ, ಚಾರಿತ್ರಿಕ ಅಧ್ಯಯನ,* ಸಂ–ಡಾ.ರಾಜರಾಮ್ ಹೆಗಡೆ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, 2002.
4. ಜಗದೀಶ್ ಅಗಣಿ ಬಾಗಿಲವಾರ್ – ಮಧ್ಯಕಾಲೀನ ಕೆರೆಗಳ ತಾಂತ್ರಿಕ ಮತ್ತು ಮಿತಿಗಳು, *ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮ ಹೆಗಡೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.
5. ಕೃಷ್ಣಮೂರ್ತಿ ಟಿ.ವಿ.– ರಾಷ್ಟ್ರಕೂಟ ಅಕಾಲ ವರ್ಷ ಮುಮ್ಮಡಿ ಕೃಷ್ಣನ ಕುಣಿಗಲ್‌ಕೆರೆ ಶಾಸನ, *ಇತಿಹಾಸ ದರ್ಶನ,* ಸಂ–19, ಬೆಂಗಳೂರು, 2004.
6. ಕೃಷ್ಣಮೂರ್ತಿ ಪಿ.ವಿ, – ಬೆಂಗಳೂರು ಜಿಲ್ಲಾ ಪರಿಸರ ಶಾಸನೋಕ್ತ ಕೆರೆಗಳ *ಇತಿಹಾಸ ದರ್ಶನ,* 21, ಬೆಂಗಳೂರು, 2006.
7. ಕೃಷ್ಣಮೂರ್ತಿ ಪಿ.ವಿ, – ಬೆಂಗಳೂರು ಜಿಲ್ಲಾ ಪರಿಸರದ, ಶಾಸನೋಕ್ತ ಕೆರೆಗಳು, ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪ್ರಾಚ್ಯವಸ್ತು ಇಲಾಖೆ, ಮೈಸೂರು, 2013.
8. ಕೃಷ್ಣಮೂರ್ತಿ ಎಂ.ಎಸ್, – ತಲಕಾಡಿನ ಉತ್ಖನನದ ಸಂಕ್ಷಿಪ್ತ ವರದಿ, *ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಸಂ.ಆರ್.ಗೋಪಾಲ್, ಮೈಸೂರು 2010.
9. ಕೃಷ್ಣಮೂರ್ತಿ ಎಂ.ಎಸ್, –ಕರ್ನಾಟಕದಲ್ಲಿ ಪುರಾತತ್ವ ಅಧ್ಯಯನಗಳು, *ಇತಿಹಾಸ ದರ್ಪಣ,* ಸಂ–12, ರಾಜೇಶ್ ಮತ್ತು ಅರುಣಿ (ಸಂ), ಬೆಂಗಳೂರು, 2012.
10. ಲಿಂಗರಾಜ್ ವೈ – ಜಿಯೋಲಾಜಿಕಲ್ ಹಿಸ್ಟರಿ ಆಫ್ ಕರ್ನಾಟಕ *ಅವಲೋಕನ,* ಸಂಪಾದಕರು – ಹೆಚ್.ಎಸ್.ಕೆ, ಬೆಂಗಳೂರು, 1985.

11. ಮಾ ಸಕಲೇಶ – ಕೆರೆ ನಿರ್ಮಾತೃಗಳು, *ಕೆರೆ ನೀರಾವರಿ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮ್‌ಹೆಗಡೆ, ಪ್ರಾಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

12. ಮೋಹನ್ ಎಸ್.ಕೆ – ಹಳೆಯ ಕೆರೆಗಳ ಕಟ್ಟದಲ್ಲಿನ ತಾಂತ್ರಿಕ ವಿಶಿಷ್ಟತೆ, *ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮಹೆಗಡೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, 2002.

13. ಮಂಜುನಾಥ್ ಎಂ.ಜಿ, – ವಿಜಯನಗರದ ಅರಸರ ಕಾಲದ ಮಳೆಕೂಯ್ಲು, ತಂತ್ರಜ್ಞಾನ, ಅಪೂರ್ವ ನಿದರ್ಶನ, *ವಿಜಯನಗರ ಅಧ್ಯಯನ,* ಸಂ–12, ಸಂ–ಡಾ.ಆರ್.ಗೋಪಾಲ್, ಬಿ.ಎಂ.ಚಿಕ್ಕಮಾರೇಗೌಡ, ಟಿ.ಎಸ್.ಗಂಗಾಧರ, ಮೈಸೂರು, 2006.

14. ನಾಗರಾಜ ಟಿ.ವಿ. – ಕದಂಬರ ನೀರಾವರಿ ಚೌಕಟ್ಟು, *ಇತಿಹಾಸ ದರ್ಶನ,* ಸಂ–25, 2010, ಬೆಂಗಳೂರು.

15. ನಾಗರಾಜು ಟಿ.ವಿ, – ಬೆಂಗಳೂರಿನ ಕೆರೆಗಳು, ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಸಂ–ಡಾ.ಆರ್.ಗೋಪಾಲ್, ಮೈಸೂರು, 2011.

16. ನಾಗರಾಜು ಟಿ.ವಿ, - ಶಾಸನಗಳ ಹಿನ್ನೆಲೆಯಲ್ಲಿ ನೀರಾವರಿ, *ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಡಾ.ಆರ್.ಗೋಪಾಲ್ (ಸಂ), ಮೈಸೂರು, 2004.

17. ನಾಗರಾಜು ಟಿ.ವಿ, - ಶಿವಮೊಗ್ಗ ಜಿಲ್ಲೆಯ ನೀರಾವರಿ ಒಂದು ಚಾರಿತ್ರಿಕ ಪರಿಶೀಲನೆ, *ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಡಾ.ಆರ್.ಗೋಪಾಲ್ (ಸಂ), ಮೈಸೂರು, 2008.

18. ನಾಗರಾಜು ಟಿ.ವಿ, – ಮಂಡ್ಯ ಜಿಲ್ಲೆಯ ಪ್ರಾಚೀನ ನೀರಾವರಿ ಚೌಕಟ್ಟು ಒಂದು ಪರಿಶೀಲನೆ, *ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು, ಸಂ–ಡಾ.ಆರ್.ಗೋಪಾಲ್, 2008.

19. ನಾಗರಾಜು ಟಿ.ವಿ, – ಮೈಸೂರು ಜಿಲ್ಲೆಯ ಪ್ರಾಚೀನ ನೀರಾವರಿ ಒಂದು ಸಮೀಕ್ಷೆ, *ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಮೈಸೂರು, ಸಂ–ಡಾ.ಆರ್.ಗೋಪಾಲ್, 2010.

20. ನಾಗರಾಜು ಟಿ.ವಿ, – ಚಿಕ್ಕಮಗಳೂರು ಜಿಲ್ಲೆಯ ನೀರಾವರಿ ವ್ಯವಸ್ಥೆ ಒಂದು ಚಾರಿತ್ರಿಕ ವಿಶ್ಲೇಷಣೆ, *ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಸಂ–ಡಾ.ಆರ್.ಗೋಪಾಲ್, ಮೈಸೂರು, 2008.

21. ನಾಗರಾಜು ಟಿ.ವಿ, – ಹಾಸನ ಜಿಲ್ಲೆಯ ನೀರಾವರಿ ವ್ಯವಸ್ಥೆ ಒಂದು ಅಧ್ಯಯನ, *ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ, ಸಂ–ಡಾ.ಆರ್.ಗೋಪಾಲ್, ಮೈಸೂರು, 2010.

22. ಪ್ರಭಾಕರ್‌ರಾವ್ ಕೆ. – ಮಧ್ಯಕಾಲಿನ ಕರ್ನಾಟಕದಲ್ಲಿ ಕೆರೆಗಳ ನಿರ್ವಹಣೆ, *ಕೆರೆ ನೀರಾವರಿ, ನಿರ್ವಹಣೆ ಚಾರಿತ್ರಿಕ ಅಧ್ಯಯನ,* ರಾಜರಾಮ್ ಹೆಗಡೆ (ಸಂ), ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

23. ಪ್ರಧಾನ ಗುರುದತ್ : ಕರ್ನಾಟಕದ ಭೂಗೋಳ *ಅವಲೋಕನ,* ಎಚ್.ಎಸ್.ಕೆ, (ಸಂ) ಬೆಂಗಳೂರು, 1985.

24. ರಘುನಾಥಭಟ್ಟ ಹೆಚ್.ಆರ್, – ಪ್ರಾಚೀನ ಕರ್ನಾಟಕದ ಕೆರೆಗಳ ಒಂದು ಟಿಪ್ಪಣಿ, ಶಾತವಾಹನ–ಆದಿಕದಂಬ ಶಾಸನಗಳಲ್ಲಿ ಉಲ್ಲೇಖಿತ, ಕೆರೆ–ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ ಸಂ–ರಾಜರಾಮ್ ಹೆಗಡೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

25. ರಾಜರಾಮ್ ಹೆಗಡೆ – ಸಂ. ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

26. ರಾಜಶೇಖರಪ್ಪ, ಬಿ.– ಚಿತ್ರದುರ್ಗ ಪ್ರದೇಶದ ಕೆರೆಗಳ ನಿರ್ವಹಣೆಯ ಐತಿಹಾಸಿಕ ಅವಲೋಕನ, *ಕೆರೆಗಳ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ,* ಸಂ–ರಾಜರಾಮ್ ಹೆಗಡೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

27. ಶ್ರೀನಿವಾಸ ರಿತ್ತಿ – ಗಂಗರ ರಾಜಕೀಯ ಇತಿಹಾಸ, *ಅವಲೋಕನ*, ಬೆಂಗಳೂರು. 1985.

28. ಸ್ವಾಮಿ ಲ.ನ, – ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಕಂಡಂತೆ ಪ್ರಾಚೀನ ಶಿಕ್ಷಣ, *ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ*, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ, ಮೈಸೂರು, 2007..

29. ಸ್ವಾಮಿ ಲ.ನ, – ಮೈಸೂರು ಜಿಲ್ಲೆಯ ಪ್ರಾಚೀನ ಶಿಕ್ಷಣ ಕೇಂದ್ರಗಳ ರಚನೆ, ಉದ್ದೇಶ ಮತ್ತು ಮಹತ್ವ, *ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ*, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ, ಮೈಸೂರು, 2010.

30. ಸ್ವಾಮಿ ಲ.ನ, – ಕೆರೆಕಟ್ಟೆಗಳು, *ನಾಗಮಂಗಲ*, ಸಂ–ಡಾ.ಸಿ.ಮಹದೇವ, ಸ್ಥಳೀಯ ಚರಿತ್ರೆ ಮತ್ತು ಪುರಾತತ್ವಮಾಲೆ, 2011.

31. ಸ್ವಾಮಿ ಲ.ನ, – ಕೆರೆಕಟ್ಟೆಗಳು, *ತೊಣ್ಣೂರು*, ಸಂ–ಡಾ.ಸಿ.ಮಹದೇವ, ಸ್ಥಳೀಯ ಚರಿತ್ರೆ ಮತ್ತು ಪುರಾತತ್ವಮಾಲೆ, 2009.

32. ಉಷಾರಾಣಿ ಎಚ್.ಎಸ್.– ಹೊಯ್ಸಳರ ಕಾಲದ ಕೆರೆ ನೀರಾವರಿ, ಒಂದು ವಿಶ್ಲೇಷಣೆ, *ಇತಿಹಾಸ ದರ್ಶನ*, ಸಂ–07, 1992.

## English Books


1. Appadorai - *Economics Conditions in Southern India* (1000-1500 AD) Vol-2, University of Madras, Madras, 1936.
2. Gururaja Rao B.K. - *The megalithic Culture in South India,* Prasharanga, University of Mysore, Mysore, 1972.
3. Gururajachar S. – *Some Aspects of Socio-Economic Conditions in Karnataka,* Mysore University, Mysore, 1975.
4. Kottraiah C.T.M. – *Irrigation System under Vijayanagara Empire*, Directorate of Archaeology and Museums, Mysore, 1995.
5. Kuppuswamy G.R.– *Economic Conditions in Karnataka* (AD 973, AD. 1336) Karnataka University, Dharwar, 1975.
6. Mirashi, V.V, *History in inscriptions of the Satavahanas and the Western Kshatrapas*, Maharastra State Board for literature and culture, Bombay, 1981.
7. Murthy MLK: *Pre-And Protohistoric Andhara Pradesh Up to – 500 BC*. Dravidian University Kuppum. 2003.
8. Om Prakash Prasad – *Decay and Revival of Urban Centers in Medieval South India (AD 600 – 1200),* Commonwealth Publisher, New Delhi, 1989.
9. Pradeep Ranjan Das – *Economic History of Deccan,* Dehli, 1998.

## English Papers

1. Kuppuswamy G.R. - History of Tank Irrigation in Karnataka (upto-AD-1336) *QJMS.* LXXXIII. NO.3 July-Sept-1992.
2. Sheshadri, M, - A report on excavation at T.Narasipura in *Sheshachandrika,* Dept. Archaeology and Museum, Mysore, 1995.
3. Sheshadri, M, - Report on excavation at Jadigenahalli, Mysore in *Sheshachandrika*, Dept. Archaeology and Museum, Mysore, 1995.

# ಭೂಪಟಗಳು

**ಅಧ್ಯಾಯ** : 1

ಭೂಪಟ–1, ಕರ್ನಾಟಕದ ಆಡಳಿತಾತ್ಮಕ ವಿಭಾಗಗಳ ಭೂಪಟ

ಭೂಪಟ–2, ಪ್ರಸ್ತುತ ಅಧ್ಯಯನದ ಭೌಗೋಳಿಕ ವ್ಯಾಪ್ತಿ

**ಅಧ್ಯಾಯ : 2**

ಭೂಪಟ – 3 ಕರ್ನಾಟಕದ ಎಲ್ಲೆಗಳು ಮತ್ತು ಆಡಳಿತದ ವಿಭಾಗಗಳು

ಭೂಪಟ – 4 ಕರ್ನಾಟಕದ ಭೌಗೋಳಿಕ ಲಕ್ಷಣಗಳು

ಭೂಪಟ – 5 ಕರ್ನಾಟಕದ ನದಿಗಳು

ಭೂಪಟ – 6 ಕರ್ನಾಟಕದ ಮೇಲ್ಮೈಲಕ್ಷಣದ ಇಳಿಜಾರನ್ನು ಸೂಚಿಸುವ ಭೂಪಟ

# ಛಾಯಾಚಿತ್ರಗಳು

1. ಕದಂಬರ ಮಯೂರಶರ್ಮನಿಂದ ಪುನರ್ ನಿರ್ಮಾಣಗೊಂಡ ಚಂದ್ರವಳ್ಳಿಯ ಕೆರೆ
2. ಕದಂಬರ ಮಯೂರಶರ್ಮನಿಂದ ಪುನರ್ ನಿರ್ಮಾಣಗೊಂಡ ಚಂದ್ರವಳ್ಳಿಯ ಕೆರೆ
3. ಕದಂಬರ ಮಯೂರಶರ್ಮನಿಂದ ಪುನರ್ ನಿರ್ಮಾಣಗೊಂಡ ಚಂದ್ರವಳ್ಳಿಯ ಕೆರೆ
4. ರಾಷ್ಟ್ರಕೂಟ ಕೃಷ್ಣನಿಂದ ಪುನರ್ ನಿರ್ಮಾಣಗೊಂಡ ಕುಣಿಗಲ್ ಕೆರೆ
5. ರಾಷ್ಟ್ರಕೂಟ ಕೃಷ್ಣನಿಂದ ಪುನರ್ ನಿರ್ಮಾಣಗೊಂಡ ಕುಣಿಗಲ್ ಕೆರೆ
6. ಚೋಳರ ಕಾಲದಲ್ಲಿ ನಿರ್ಮಾಣಗೊಂಡ ತೊಂಡನೂರಿನ ಕೆರೆಯ ಏರಿ
7. ತೊಂಡನೂರಿನ ಎರಡು ಗುಡ್ಡಗಳ ನಡುವೆ ಮಳೆಗಾಲದ ನೀರ್ಗಾಲುವೆಗೆ ಕಟ್ಟಿದ ಏರಿ
8. ಚೋಳರ ಕಾಲದಲ್ಲಿ ನಿರ್ಮಾಣಗೊಂಡ ತೊಂಡನೂರಿನ ಕೆರೆ
9. ಚೋಳರಿಂದ ನಿರ್ಮಾಣಗೊಂಡ ಮೈಸೂರಿನ ದೊಡ್ಡಕೆರೆ ಮತ್ತು ಕೆರೆಯ ತೂಬು
10. ಚೋಳರಿಂದ ನಿರ್ಮಾಣಗೊಂಡ ಮೈಸೂರಿನ ದೊಡ್ಡಕೆರೆ ಮತ್ತು ಕೆರೆಯ ತೂಬು
11. ಮೈಸೂರಿನ ದೊಡ್ಡಕೆರೆಯ ತೂಬು
12. ಹೊಯ್ಸಳ ವಿಷ್ಣುವರ್ಧನ ನಿರ್ಮಿಸಿದ ಹಳೇಬೀಡಿನ ಕೆರೆ

13. ಹೊಯ್ಸಳ ವಿಷ್ಣುವರ್ಧನ ನಿರ್ಮಿಸಿದ ಹಳೇಬೀಡಿನ ಕೆರೆಯ ಏರಿ
14. ಹೊಯ್ಸಳ ವಿಷ್ಣುವರ್ಧನ ನಿರ್ಮಿಸಿದ ಹಳೇಬೀಡಿನ ಕೆರೆಯ ತೂಬು
15. ಹೊಯ್ಸಳ ವಿಷ್ಣುವರ್ಧನ ನಿರ್ಮಿಸಿದ ಹಳೇಬೀಡಿನ ಕೆರೆಯ ಕೋಡಿ
16. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಅರಸೀಕೆರೆಯ ತಟಾಕ
17. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಅರಸೀಕೆರೆಯ ತಟಾಕ
18. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಅರಸೀಕೆರೆಯ ಹೊರ ತೂಬು
19. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಮೊಸಳೆಯ ಕೆರೆಯಂಗಳ
20. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಮೊಸಳೆಯ ಕೆರೆಯ ತೂಬು
21. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ನಾಗಮಂಗಲದ ಹಿರಿಯಕೆರೆ
22. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ನಾಗಮಂಗಲದ ಸೂಳೆಕೆರೆ
23. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ನಾಗಮಂಗಲದ ಅಮ್ಮನ ಕೆರೆ
24. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ನಾಗಮಂಗಲದ ಚಕ್ರತೀರ್ಥ
25. ವಿಜಯನಗರ ಕಾಲದಲ್ಲಿ ನಾಗಮಂಗಲದ ಹಂಪೆಯರಸನ ಕೊಳ
26. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ಮೇಲುಕೋಟೆಯ ಪುಷ್ಕರಣಿ
27. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ಮೇಲುಕೋಟೆಯ ಪುಷ್ಕರಣಿ
28. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ಮೇಲುಕೋಟೆಯ ಚೆಲುವನಾರಾಯಣನ ಬಳಕೆಗೆ ಸೀಮಿತವಾದ ಕೊಳ
29. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ಮೇಲುಕೋಟೆಯ ಸಾಮಾನ್ಯ ಜನರ ಬಳಕೆಗೆ ಸೀಮಿತವಾದ ಕೊಳ



1. ಕದಂಬರ ಮಯೂರಶರ್ಮನಿಂದ ಪುನರ್ ನಿರ್ಮಾಣಗೊಂಡ ಚಂದ್ರವಳ್ಳಿಯ ಕೆರೆ (ಗಮನಿಸಿ ಪು.157)



2. ಕದಂಬರ ಮಯೂರಶರ್ಮನಿಂದ ಪುನರ್ ನಿರ್ಮಾಣಗೊಂಡ ಚಂದ್ರವಳ್ಳಿಯ ಕೆರೆ (ಗಮನಿಸಿ ಪು.157)



೩. ಕದಂಬರ ಮಯೂರಶರ್ಮನಿಂದ ಪುನರ್ ನಿರ್ಮಾಣಗೊಂಡ ಚಂದ್ರವಳ್ಳಿಯ ಕೆರೆ (ಗಮನಿಸಿ ಪು.157)



4. ರಾಷ್ಟ್ರಕೂಟ ಕೃಷ್ಣನಿಂದ ಪುನರ್ ನಿರ್ಮಾಣಗೊಂಡ ಕುಣಿಗಲ್ ಕೆರೆ (ಗಮನಿಸಿ ಪು.162)



5. ರಾಷ್ಟ್ರಕೂಟ ಕೃಷ್ಣನಿಂದ ಪುನರ್ ನಿರ್ಮಾಣಗೊಂಡ ಕುಣಿಗಲ್ ಕೆರೆ (ಗಮನಿಸಿ ಪು.162)



6. ಚೋಳರ ಕಾಲದಲ್ಲಿ ನಿರ್ಮಾಣಗೊಂಡ ತೊಂಡನೂರಿನ ಕೆರೆಯ ಏರಿ (ಗಮನಿಸಿ ಪು.168)



7. ತೊಂಡನೂರಿನ ಎರಡು ಗುಡ್ಡಗಳ ನಡುವೆ ಮಳೆಗಾಲದ ನೀರ್ಗ್ಗಾಲುವೆಗೆ ಕಟ್ಟಿದ ಏರಿ (ಗಮನಿಸಿ ಪು.168)



8. ಚೋಳರ ಕಾಲದಲ್ಲಿ ನಿರ್ಮಾಣಗೊಂಡ ತೊಂಡನೂರಿನ ಕೆರೆ (ಗಮನಿಸಿ ಪು.168)




೯. ಚೋಳರಿಂದ ನಿರ್ಮಾಣಗೊಂಡ ಮೈಸೂರಿನ ದೊಡ್ಡಕೆರೆ ಮತ್ತು ಕೆರೆಯ ತೂಬು (ಗಮನಿಸಿ ಪು.168)



10 ಚೋಳರಿಂದ ನಿರ್ಮಾಣಗೊಂಡ ಮೈಸೂರಿನ ದೊಡ್ಡಕೆರೆ ಮತ್ತು ಕೆರೆಯ ತೂಬು (ಗಮನಿಸಿ ಪು.168)



11. ಮೈಸೂರಿನ ದೊಡ್ಡಕೆರೆಯ ತೂಬು (ಗಮನಿಸಿ ಪು.168)



12. ಹೊಯ್ಸಳ ವಿಷ್ಣುವರ್ಧನ ನಿರ್ಮಿಸಿದ ಹಳೇಬೀಡಿನ ಕೆರೆ (ಗಮನಿಸಿ ಪು.177)



13. ಹೊಯ್ಸಳ ವಿಷ್ಣುವರ್ಧನ ನಿರ್ಮಿಸಿದ ಹಳೇಬೀಡಿನ ಕೆರೆಯ ಏರಿ (ಗಮನಿಸಿ ಪು.177)



14. ಹೊಯ್ಸಳ ವಿಷ್ಣುವರ್ಧನ ನಿರ್ಮಿಸಿದ ಹಳೇಬೀಡಿನ ಕೆರೆಯ ತೂಬು (ಗಮನಿಸಿ ಪು.177)



15. ಹೊಯ್ಸಳ ವಿಷ್ಣುವರ್ಧನ ನಿರ್ಮಿಸಿದ ಹಳೇಬೀಡಿನ ಕೆರೆಯ ಕೋಡಿ (ಗಮನಿಸಿ ಪು.177)



16. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಅರಸೀಕೆರೆಯ ತಟಾಕ (ಗಮನಿಸಿ ಪು.177)



17. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಅರಸೀಕೆರೆಯ ತಟಾಕ (ಗಮನಿಸಿ ಪು.177)



18. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಅರಸೀಕೆರೆಯ ಹೊರ ತೂಬು (ಗಮನಿಸಿ ಪು.177)



19. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಮೊಸಳೆಯ ಕೆರೆಯಂಗಳ (ಗಮನಿಸಿ ಪು.177)



೨೦. ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಮೊಸಳೆಯ ಕೆರೆಯ ತೂಬು (ಗಮನಿಸಿ ಪು.177)



21. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ನಾಗಮಂಗಲದ ಹಿರಿಯಕೆರೆ (ಗಮನಿಸಿ ಪು.184)



22. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ನಾಗಮಂಗಲದ ಸೂಳೆಕೆರೆ (ಗಮನಿಸಿ ಪು.184)



23. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ನಾಗಮಂಗಲದ ಅಮ್ಮನ ಕೆರೆ (ಗಮನಿಸಿ ಪು.184)



24. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ನಾಗಮಂಗಲದ ಚಕ್ರತೀರ್ಥ (ಗಮನಿಸಿ ಪು.184)



25.ವಿಜಯನಗರ ಕಾಲದಲ್ಲಿ ನಾಗಮಂಗಲದ ಹಂಪೆಯರಸನ ಕೊಳ (ಗಮನಿಸಿ ಪು.184)



26. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ಮೇಲುಕೋಟೆಯ ಪುಷ್ಕರಣಿ (ಗಮನಿಸಿ ಪು.184)



27. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ಮೇಲುಕೋಟೆಯ ಪುಷ್ಕರಣಿ (ಗಮನಿಸಿ ಪು.184)



28. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ಮೇಲುಕೋಟೆಯ ಚೆಲುವನಾರಾಯಣನ ಬಳಕೆಗೆ ಸೀಮಿತವಾದ ಕೊಳ (ಗಮನಿಸಿ ಪು.184)



29. ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡ ಮೇಲುಕೋಟೆಯ ಸಾಮಾನ್ಯ ಜನರ ಬಳಕೆಗೆ ಸೀಮಿತವಾದ ಕೊಳ (ಗಮನಿಸಿ ಪು.184)